ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ತತ್ತ್ವೋದ್ಯೋತ

## ಕನ್ನಡ ಅನುವಾದ

ಭಾಗ 1



ಅನುವಾದ
ಡಾ॥ ಕಾಂತೇಶಾಚಾರ್ಯ ಕದರಮಂಡಲಗಿ

ವಿಶ್ವಮಧ್ವಮಹಾಪರಿಷತ್, ಶ್ರೀಉತ್ತರಾದಿಮಠ, ಬೆಂಗಳೂರು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ತತ್ತ್ವೋದ್ದ್ಯೋತ

ಶ್ರೀಮಜ್ಜಯತೀರ್ಥವಿರಚಿತಟೀಕಾಸಹಿತ

## ಕನ್ನಡ ಅನುವಾದ

**ಭಾಗ - 1**

... ಅನುವಾದ ...

ಡಾ || ಕಾಂತೇಶಾಚಾರ್ಯ ಕದರಮಂಡಲಗಿ

... ಪ್ರಕಾಶನ ...

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಉತ್ತರಾದಿಮಠ

ವಿಶ್ವಮಧ್ವಮಹಾಪರಿಷತ್

ಬಸವನಗುಡಿ ಬೆಂಗಳೂರು - 4

ಶ್ರೀಮನ್ ಮಧ್ವಾಚಾರ್ಯ ವಿರಚಿತ ತತ್ತ್ವೋದ್ಯೋತ

ಶ್ರೀಮಜ್ಜಯತೀರ್ಥವಿರಚಿತ ಟೀಕಾಸಹಿತ


| | |
|---|---|
| Kannada Anuvada by | **Dr. Kantheshachar Kadaramandalagi** |
| Published by | **Vishva Madhwa Maha Parishat** Research Center, Phone : 080 26603692 |

| Edition | Year | Copies | Total |
|---|---|---|---|
| First | 2019 | 1,000 | 1,000 |

| | |
|---|---|
| No.of Pages | xl+368=408 |
| © | Reserved |
| Price. | **Rs. 250** |
| Type Setting | V.M.M.P Research wing |
| Cover Design by | Sheshagiri K M |

**Copies can be had from**

**Vishva Madhwa Maha Parishat**
Research Center, #11, 2nd Floor,
Uttaradi Math Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

Printed by : **VAGARTHA,**
149, 8th Cross, N.R.Colony, Bangalore-4 Ph.22427677.



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಸಂಸ್ಥಾಪಕರಾದ

**ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ**

ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ ಪೋಷಕರಾದ

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ**

ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀ ದಿಗ್ವಿಜಯರಾಮೋ ವಿಜಯತೇ ॥
ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯತ್ವಾದ್ಯನೇಕ ಗುಣಗಣಾಲಂಕೃತ,
ಶ್ರೀಮನ್ಮೂಲಸೀತಾಸಮೇತಶ್ರೀಮನ್ಮೂಲರಾಮ ಶ್ರೀದಿಗ್ವಿಜಯರಾಮವೇದವ್ಯಾಸದೇವರ
ದಿವ್ಯಪಾದಪದ್ಮಾರಾಧಕರಾದ, ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ ಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ ೧೦೦೮ ಶ್ರೀ ಸತ್ಯಾಭಿಜ್ಞತೀರ್ಥಕರಕಮಲಸಂಜಾತರಾದ
ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ವರಕುಮಾರರಾದ

# ಶ್ರೀಮತ್ ಸತ್ಯಾತ್ಮತೀರ್ಥಶ್ರೀಪಾದಂಗಳವರ

# ''ಅನುಗ್ರಹಸಂದೇಶ''

**ವಾದಾದಯಃ ಪ್ರಕರಣಸ್ಫುಲಿಂಗಾಸ್ತನವೋಽಪ್ಯಲಮ್ ।**
**ವಿಪಕ್ಷಕಕ್ಷಂ ಕ್ಷಿಣ್ವಂತಿ ಮಾರುತೇನ ತ್ವಯೇರಿತಾಃ ॥ ಸುಮಧ್ವ ೧೫-೮೧**

ಎಂಬ ನಾರಾಯಣ ಪಂಡಿತಾಚಾರ್ಯರ ಉಕ್ತಿಯಂತೆ ವಾದ ಎಂದರೆ ತತ್ತ್ವೋದ್ಯೋತ ಇವೇ ಮೊದಲಾದ ಪ್ರಕರಣ ಗ್ರಂಥಗಳು ಗಾತ್ರದಲ್ಲಿ ಚಿಕ್ಕದಾದರೂ ಪ್ರತಿವಾದಿಗಳ ಪೂರ್ವಪಕ್ಷವೆಂಬ ಅರಣ್ಯವನ್ನು ಸುಡುವುದರಲ್ಲಿ ಕಿಡಿಗಳಂತೆ ಕಾರ್ಯವನ್ನು ಮಾಡುತ್ತವೆ.

ಶ್ರೀಮದಾಚಾರ್ಯರು ತತ್ತ್ವೋದ್ಯೋತ ಗ್ರಂಥದಲ್ಲಿ ಮುಕ್ತ-ಪರಮಾತ್ಮರ ಭೇದವನ್ನು ಹಾಗೂ ಜಗತ್‌ಸತ್ಯತ್ವವನ್ನು ಪ್ರಮಾಣಗಳಿಂದ ಸಮರ್ಥನೆ ಮಾಡಿಕೊಟ್ಟು ಸಾಧಕರಿಗೆ ಪರಮಾನುಗ್ರಹ ಮಾಡಿದ್ದಾರೆ. ಇಂತಹ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ತತ್ತ್ವೋದ್ಯೋತವೆಂಬ ಗ್ರಂಥಕ್ಕೆ ಶ್ರೀಮಜ್ಜಯತೀರ್ಥರ ಟೀಕೆ ಅತ್ಯದ್ಭುತವಾದದ್ದು. ಟೀಕೆಯ ಸಹಾಯವಿಲ್ಲದೇ ಮೂಲದ ನೈಜಭಾವವನ್ನು ತಿಳಿಯಲು ಸಾಧ್ಯವಿಲ್ಲ. ಅಂತಹ ಟೀಕೆಗೆ ಅನೇಕ ಮಹನೀಯರು ಟಿಪ್ಪಣಿಗಳನ್ನು ರಚನೆ ಮಾಡಿ ಜಿಜ್ಞಾಸುಗಳಿಗೆ ಮಹದುಪಕಾರವನ್ನು ಮಾಡಿದ್ದಾರೆ.

ಶ್ರೀವೇದೇಶತೀರ್ಥರು, ಶ್ರೀವಿಜಯೀಂದ್ರತೀರ್ಥರು, ಶ್ರೀರಾಘವೇಂದ್ರ ಸ್ವಾಮಿಗಳವರು, ಶ್ರೀಪಾಂಡುರಂಗೀ ಕೇಶವಾಚಾರ್ಯರು ಹಾಗೂ ಹುಲಗಿ ಶ್ರಿಯಃಪತ್ಯಾಚಾರ್ಯರು ಇನ್ನೂ ಅನೇಕರು ರಚಿಸಿದ ಟಿಪ್ಪಣಿಗಳ ಅಧ್ಯಯನವನ್ನು ಮಾಡಿದರೆ, ಟೀಕೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಹುದು.

ಆ ದೃಷ್ಟಿಯಲ್ಲಿ ನಮ್ಮ ಪ್ರಿಯಶಿಷ್ಯರಾದ ಪಂ. ಕಾಂತೇಶಾಚಾರ್ಯ ಕದರಮಂಡಲಗಿ ಇವರು ಎಲ್ಲ ಟಿಪ್ಪಣಿಗಳನ್ನು ಚೆನ್ನಾಗಿ ಅವಲೋಕನ ಮಾಡಿ, ವಿಶೇಷವಾಗಿ ಶ್ರೀವೇದೇಶತೀರ್ಥರ, ಶ್ರೀವಿಜಯೀಂದ್ರತೀರ್ಥರ, ಶ್ರೀರಾಘವೇಂದ್ರ-ಸ್ವಾಮಿಗಳವರ, ಶ್ರೀಜನಾರ್ದನಭಟ್ಟರ, ಶ್ರೀಗೋವಿಂದಭಟ್ಟರ ಟಿಪ್ಪಣಿಗಳನ್ನು ಚೆನ್ನಾಗಿ ಅವಲಂಬನೆ ಮಾಡಿ, ಸಮಗ್ರವಾದ ತತ್ತ್ವೋದ್ಯೋತದ ಟೀಕೆಗೆ ಸರಳವಾದ, ಸುಂದರವಾದ, ವಿಶೇಷವಿಷಯಗಳಿಂದ ಕೂಡಿದ, ಕನ್ನಡದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದು ಪ್ರಕೃತ ನಮ್ಮ ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಟಗೊಳ್ಳುತ್ತಿರುವುದು ನಮಗೆ ತುಂಬಾ ಸಂತೋಷದ ಸಂಗತಿಯಾಗಿದೆ.

ಈಗಾಗಲೇ ವಾದಾವಲೀ, ಮಾಯಾವಾದಖಂಡನ, ಉಪಾಧಿಖಂಡನ, ಪ್ರಪಂಚಮಿಥ್ಯಾತ್ವಾನುಮಾನಖಂಡನ ಇತ್ಯಾದಿ ಗ್ರಂಥಗಳಿಗೆ ಇವರು ರಚಿಸಿರುವ ಕನ್ನಡದ ವ್ಯಾಖ್ಯಾನವು ಲೋಕಪ್ರಿಯವಾಗಿದೆ ಎನ್ನುವುದು ನಮಗೆ ಅತ್ಯಂತ ಅಭಿಮಾನದ ಸಂಗತಿ.

ಅದಲ್ಲದೇ 'ಶ್ರೀಸುಧಾ' ಮಾಸಪತ್ರಿಕೆಯ ಸಂಪಾದನೆ ಹಾಗೂ ವೃತ್ತಪತ್ರಿಕೆಗಳಲ್ಲಿ ನಮ್ಮ ಅನುಗ್ರಹಸಂದೇಶಗಳನ್ನು ಸಂಗ್ರಹಿಸಿ ಪ್ರಕಟಣೆಗೊಳಿಸುವ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಅದಲ್ಲದೇ ಪಾಠ-ಪ್ರವಚನಗಳ ಮೂಲಕ ಸುಜನರಲ್ಲಿ ಜಾಗೃತಿ ಮೂಡಿಸುತ್ತಿದ್ದಾರೆ. ೩೦ ಕ್ಕೂ ಹೆಚ್ಚು ಗ್ರಂಥಗಳು ಇವರಿಂದ ಹೊರಬಂದಿವೆ.

ಹೀಗೆ ನಿರಂತರವಾಗಿ ಜ್ಞಾನಪ್ರಸಾರ, ಸಂಶೋಧನೆ ಹಾಗೂ ಎಲ್ಲ ಶಾಸ್ತ್ರ ಗ್ರಂಥಗಳ ಕನ್ನಡೀಕರಣ ಇವರಿಂದ ಇತೋಪ್ಯತಿಶಯವಾಗಿ ಆಗಲೆಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮನ್ ಮೂಲಸೀತಾಸಮೇತ ಶ್ರೀಮನ್ ಮೂಲರಾಮ ದಿಗ್ವಿಜಯರಾಮ ವಂಶರಾಮ ಪ್ರಸನ್ನವಿಠ್ಠಲ ಶ್ರೀವೇದವ್ಯಾಸ-ದೇವರಲ್ಲಿ ಪ್ರಾರ್ಥನೆ ಮಾಡುತ್ತೇವೆ.

ಇತಿ ಶ್ರೀನಾರಾಯಣಸ್ಮರಣೆಗಳು

**ಐನಾಪೂರ**

೧೯.೧೦.೨೦೧೯

ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು ಉತ್ತರಾದಿಮಠ



## ಆಶೀರ್ವಚನ

ಶ್ರೀಯುತ ವೆಂಕಟರಾವ್ ಶೇಡಂಬಿ ಇವರು ತಮ್ಮ ತೀರ್ಥರೂಪರಾದ ದಿವಂಗತ ಶ್ರೀ ಭೀಮರಾವ್ ಶೇಡಂಬಿ ಅವರ ಜನ್ಮಶತಮಾನೋತ್ಸವದ ಸ್ಮರಣಾರ್ಥವಾಗಿ, ಅವರಿಗೆ ಉತ್ತಮಲೋಕ ಹಾಗೂ ಸದ್ವೈಷ್ಣವಜನ್ಮದ ಪ್ರಾಪ್ತಿಯನ್ನು ಬಯಸುತ್ತಾ ಹರಿಗುರುಪ್ರೀತ್ಯರ್ಥವಾಗಿ, ಈ ಕೃತಿಯ ಪ್ರಕಾಶನದ ಸೇವೆಯನ್ನು ಮಾಡಿದ್ದಾರೆ. ಭಗವಂತ ಅವರ ಮನೋಕಾಮನೆಯನ್ನು ಈಡೇರಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಯುತ ವೆಂಕಟರಾವ್ ಶೇಡಂಬಿ ಹಾಗೂ ಅವರ ಪರಿವಾರಕ್ಕೆ ಜನ್ಮಜನ್ಮಾಂತರಗಳಲ್ಲಿಯೂ ಶ್ರೀಮದಾಚಾರ್ಯರ ಶಾಸ್ತ್ರವನ್ನು ಓದುವ ಸೌಭಾಗ್ಯವನ್ನು ಭಗವಂತ ನೀಡಲಿ ಎಂಬುದಾಗಿ ಅಸ್ಮದುಪಾಸ್ಯ ಶ್ರೀಮೂಲರಾಮದಿಗ್ವಿಜಯರಾಮ ವೇದವ್ಯಾಸ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ



# ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ, ಪ್ರಾಚೀನ ಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ **ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ** ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''**ವಿಶ್ವ ಮಧ್ವ ಮಹಾಪರಿಷತ್**''

ಸಂಸ್ಥೆಯ ಉದ್ದೇಶದಂತೆಯೇ ವಿಸ್ತೃತ ಗ್ರಂಥಾಲಯದ ಯೋಜನೆ ನಡೆಯುತ್ತಿದ್ದು, ಪ್ರಾಚೀನ ತಾಳೆಗರಿ ಗ್ರಂಥಗಳ, ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣಾ ಕಾರ್ಯಗಳು ಪ್ರಗತಿಯಲ್ಲಿವೆ. ಮತ್ತು ಗ್ರಂಥಗಳ ಪ್ರಕಾಶನಕಾರ್ಯವೂ ಹೆಚ್ಚು ಕ್ರಿಯಾಶೀಲವಾಗಿದ್ದು, ಈಗಾಗಲೇ ಸಂಸ್ಕೃತ-ಕನ್ನಡ-ತೆಲುಗು-ಹಿಂದಿ-ಮರಾಠಿ- ತಮಿಳು-ಆಂಗ್ಲ ಭಾಷೆಗಳಲ್ಲಿ ಅನೇಕ ಪುಸ್ತಕಗಳು ಪ್ರಕಾಶನಗೊಂಡಿವೆ.

ಈಗಾಗಲೇ ಶ್ರೀಪಾದಂಗಳವರ ೩೦ಕ್ಕೂ ಹೆಚ್ಚು ಉಪನ್ಯಾಸಗಳ ಕೃತಿಗಳನ್ನು ಪ್ರಕಾಶನಮಾಡಿ ಜನತೆಯಲ್ಲಿ ಧರ್ಮಜಾಗೃತಿ ಮೂಡಿಸಲಾಗಿದೆ.

ಪ್ರಕೃತ ನಿತ್ಯ ಅಧ್ಯಯನ ಮಾಡುವ ಜಿಜ್ಞಾಸುಗಳಿಗೆ ಅತ್ಯಂತ ಉಪಯುಕ್ತವಾಗುವಂತೆ ''**ತತ್ತ್ವೋದ್ಯೋತ**' ಕೃತಿಯ ಕನ್ನಡ ಅನುವಾದವನ್ನು ಮಾಡಿಸಿ ಪ್ರಕಾಶಿಸಲಾಗುತ್ತಿದೆ.

ಈ ಕೃತಿಗೆ ವಿಶೇಷ ರೀತಿಯಿಂದ ಕನ್ನಡ ಅನುವಾದ ಮಾಡಿಕೊಟ್ಟ **ಪಂ. ಕಾಂತೇಶಾಚಾರ್ಯರಿಗೆ** ಅನೇಕ ವಂದನೆಗಳು.

**ಪ್ರಧಾನ ಕಾರ್ಯದರ್ಶಿಗಳು**

**ವಿಶ್ವಮಧ್ವಮಹಾಪರಿಷತ್ ಬೆಂಗಳೂರು 4**

# ಇಣಕುನೋಟ

ಶ್ರೀಮದಾಚಾರ್ಯರು ರಚಿಸಿದ ತತ್ತ್ವೋದ್ಯೋತ ಗ್ರಂಥವು ಪ್ರಕರಣ-ಗ್ರಂಥಗಳಲ್ಲಿ ಒಂದಾದ ಅದ್ಭುತಗ್ರಂಥ.

**''ಗ್ರಂಥೋ ಹಿ ವಾದಪ್ರಕ್ರಿಯಯಾ ಪ್ರವರ್ತತೇ ''**

ಎಂಬ ಮಾತಿನಂತೆ ಸಾಮಾನ್ಯವಾಗಿ ಯಾವುದೇ ಗ್ರಂಥವಾದರೂ ವಾದರೂಪದಲ್ಲಿ ರಚಿಸಲ್ಪಟ್ಟಿರುತ್ತದೆ. ಯಾವುದಾದರೂ ಒಂದು ವಿಷಯವನ್ನು ಮುಖ್ಯವಾಗಿ ಇಟ್ಟುಕೊಂಡು, ಅದರ ವಿಷಯದಲ್ಲಿ ಪರವಾದಿಗಳು ಮಾಡುವ ಆಕ್ಷೇಪಗಳನ್ನು ತೆಗೆದುಕೊಂಡು ಅವುಗಳಿಗೆ ಸಮರ್ಪಕ ಉತ್ತರ ನೀಡಿ, (ಪರರ ವಾದಗಳನ್ನು ನಿರಾಕರಿಸಿ,) ಸಿದ್ಧಾಂತವನ್ನು ಸಮರ್ಥಿಸುತ್ತಾರೆ ಗ್ರಂಥಕಾರರು.

ಈ ತತ್ತ್ವೋದ್ಯೋತ ಗ್ರಂಥದ ವೈಶಿಷ್ಟ್ಯವೆಂದರೆ, ಪರವಾದಿಗಳು ಮಾಡುವ ಆಕ್ಷೇಪಗಳನ್ನು ತೆಗೆದುಕೊಂಡು ಅವುಗಳಿಗೆ ಉತ್ತರ ನೀಡುವ ರೀತಿಯಲ್ಲಿ ರಚಿಸಿದ ಗ್ರಂಥವಲ್ಲ ಇದು. ಕಿಂತು ಪರವಾದಿಗಳೊಂದಿಗೆ ಪ್ರತ್ಯಕ್ಷವಾದ ಮಾಡಿ, ದಿಗ್ವಿಜಯ ಸಾಧಿಸಿ, ನಡೆದ ವಾದಕಥಾವನ್ನು ಗ್ರಂಥರೂಪದಲ್ಲಿ ಬರೆದಿಟ್ಟ ಐತಿಹಾಸಿಕಕೃತಿ.

## ತತ್ತ್ವೋದ್ಯೋತ ಹೊರಬಂದ ಇತಿಹಾಸ

ಶ್ರೀನಾರಾಯಣಪಂಡಿತಾಚಾರ್ಯರು ತಮ್ಮ ಸುಮಧ್ವವಿಜಯ ಮಹಾ-ಕಾವ್ಯದಲ್ಲಿ ಆಚಾರ್ಯರ ಈ ತತ್ತ್ವೋದ್ಯೋತ ಗ್ರಂಥದ ರಚನೆಯ ಬಗ್ಗೆ ಉಲ್ಲೇಖಿಸಿ, ಆ ಇತಿಹಾಸವನ್ನು ಪರಿಚಯಿಸಿದ್ದಾರೆ.

ಪುಂಡರೀಕಪುರಿ ಎಂಬ ಪರಪಂಥೀಯ ದೊಡ್ಡ ಪಂಡಿತರು. ಅವರು ಮಧ್ವಾಚಾರ್ಯರೊಡನೆ ವಾದ ಮಾಡಿ ಪರಾಜಿತರಾದರು. ಅದನ್ನು ಕಂಡು ಪದ್ಮತೀರ್ಥನೆಂಬ ವಾದಿಯು ಶ್ರೀಮಧ್ವಾಚಾರ್ಯರ ಗ್ರಂಥರಚನೆ, ವಾದಿದಿಗ್ವಿಜಯ, ಅಪಾರಕೀರ್ತಿ, ಜನಮನ್ನಣೆ, ಶಿಷ್ಯಸಂಪತ್ತು ಇವುಗಳನ್ನೆಲ್ಲ ಕಂಡು ಅಸೂಯೆಯುಳ್ಳವನಾಗಿ ವಿಷ್ಣುಮಂಗಲದಲ್ಲಿ ಆಚಾರ್ಯರ ಗ್ರಂಥಗಳನ್ನು ಅಪಹರಿಸುತ್ತಾನೆ.

**ವಿಷ್ಣೋರ್ಭೂಯಃ ಶೋಭಯದ್ಭಿಃ ಪದಾಂತಂ**
**ಪಾರಂಪರ್ಯೇಣೇಯುರ್ಮಾಣ್ಯೈರವಾರ್ಯೈಃ ।**
**ಗೋವ್ರಾತೈಸ್ತಂ ದಾರಯಿತ್ವಾ ನ್ಯಗೃಹ್ಣಾತ್**
**ಕಂಜಾಖ್ಯಾನಂ ಸಿಂಧುಪಂ ಮಧ್ವಪಾರ್ಥಃ ।। ಸು.ವಿ. ೧೨-೪೬**

ವಿಷಯ ತಿಳಿದು ಆಚಾರ್ಯರು ರಜತಪೀಠಪುರದಿಂದ ಏಕವಾಟವೆಂಬ ಗ್ರಾಮಕ್ಕೆ ಬಂದು ಅಲ್ಲಿ ಆ ಪದ್ಮತೀರ್ಥನನ್ನು ವಾದಕ್ಕೆ ಕರೆಯುತ್ತಾರೆ. ''ಪ್ರಾಶ್ನಿಕರು ಬರಲಿ, ಅವರ ಮುಂದೆ ವಾದ ನಡೆಯಲಿ'' ಎನ್ನುತ್ತಾನೆ ಪದ್ಮತೀರ್ಥ. ಅಲ್ಲಿ ಪ್ರಾಶ್ನಿಕರು ಸೇರಿದಮೇಲೆ ಅವನ ಜೊತೆ ವಾದ ಮಾಡುತ್ತಾರೆ. ವಾದದಲ್ಲಿ ಅವನನ್ನು ಸೋಲಿಸುತ್ತಾರೆ. ಆಗ ಅಲ್ಲಿ ನಡೆದ ವಾದಕಥೆಯೇ ''ತತ್ತ್ವೋದ್ಯೋತ'' ಗ್ರಂಥವಾಗಿ ಹೊರಬಂದಿತು ಎಂಬ ಇತಿಹಾಸವನ್ನು ಸ್ವತಃ ನಾರಾಯಣಪಂಡಿತಾಚಾರ್ಯರೇ ತಮ್ಮ ಸುಮಧ್ವವಿಜಯವ್ಯಾಖ್ಯಾನ ಭಾವಪ್ರಕಾಶಿಕಾದಲ್ಲಿ ತಿಳಿಸುತ್ತಾರೆ -

**ಮಿಲಿತೇಷ್ವಥ ಸಭ್ಯೇಷು ಪ್ರಾಶ್ನಿಕೇಷ್ವಭವತ್ ಕಥಾ ।**
**ತತ್ರ ಮಾಧ್ವ ಉಪನ್ಯಾಸೋ ಗ್ರಂಥೋ ವಾದಾಹ್ವಯೋಽಭವತ್ ।।**

ಇಲ್ಲಿ ವಾದ ಎಂದರೆ ತತ್ತ್ವೋದ್ಯೋತ ಎಂಬ ಗ್ರಂಥ ಎಂಬುದನ್ನು ವಿಶ್ವಪತಿತೀರ್ಥರು ಹಾಗೂ ಛಲಾರೀ ಶೇಷಾಚಾರ್ಯರು ತಮ್ಮ ಸುಮಧ್ವವಿಜಯ ವ್ಯಾಖ್ಯಾನಗಳಲ್ಲಿ (''ವಾದಾದಯಃ ಪ್ರಕರಣ..'' ೧೫-೮೧ ಎಂಬ ಸುಮಧ್ವ-ವಿಜಯಶ್ಲೋಕವನ್ನು ವ್ಯಾಖ್ಯಾನಿಸುವಾಗ) ಸ್ಪಷ್ಟಪಡಿಸುತ್ತಾರೆ -

**'ವಾದಃ ವಾದಾಖ್ಯಂ ತತ್ತ್ವೋದ್ಯೋತಂ ಪ್ರಕರಣಮ್' । ವಿಶ್ವಪತಿತೀರ್ಥವ್ಯಾಖ್ಯಾ**
**'ವಾದಃ ತತ್ತ್ವೋದ್ಯೋತಃ' । ಛಲಾರೀವ್ಯಾಖ್ಯಾ**

ಹೀಗೆ ಆಚಾರ್ಯರು ಸಭಿಕರ ಸಮಕ್ಷಮದಲ್ಲಿ ಪದ್ಮತೀರ್ಥಾದಿ ಪರವಾದಿಗಳೊಂದಿಗೆ ಪ್ರತ್ಯಕ್ಷ ವಾದ ಮಾಡಿ, ವಾದದಲ್ಲಿ ಅವರನ್ನು ಸೋಲಿಸಿ, ಅಲ್ಲಿ ನಡೆದ ವಾದಕಥೆಯನ್ನೇ ಸಂಗ್ರಹಿಸಿ 'ತತ್ತ್ವೋದ್ಯೋತ' ಗ್ರಂಥವನ್ನು ರಚಿಸಿ ನೀಡಿದ್ದಾರೆ. ಹೀಗಾಗಿ ಇದೊಂದು ಐತಿಹಾಸಿಕಕೃತಿ ಎನ್ನುವುದು ವಿಶೇಷ.

## ಬಹೂಪಯುಕ್ತ ಪ್ರಮಾಣಗ್ರಂಥ

ಈ ರೀತಿ ವಾದಕಥಾರೂಪವಾದ ಗ್ರಂಥವಾದ್ದರಿಂದ ವ್ಯುತ್ಪತ್ತಿ ಪಡೆಯಲಿಚ್ಛಿಸುವ ವಿದ್ಯಾರ್ಥಿಗಳು, ವಾಕ್ಯಾರ್ಥಚಾತುರ್ಯ ಪಡೆಯಲಿಚ್ಛಿಸುವ ವಿದ್ವಾಂಸರು, ಹೆಚ್ಚು ಹೆಚ್ಚು ಶೋಧ ಮಾಡಲಿಚ್ಛಿಸುವ ಸಂಶೋಧಕರು, ಜಿಜ್ಞಾಸುಗಳು ಎಲ್ಲರಿಗೂ ಬಹೂಪಯುಕ್ತ ಗ್ರಂಥವಾಗಿದೆ.

ಇದು ಬಹಳ ವಿಸ್ತಾರವಾದ ಗ್ರಂಥ. ಪ್ರತಿಯೊಂದು ವಿಚಾರವನ್ನೂ ಬಹಳ ಕೂಲಂಕುಷವಾಗಿ ವಿಚಾರ ಮಾಡುವ ಉತ್ತಮ ಪ್ರಮಾಣಗ್ರಂಥ.

**''ನಿತ್ಯಾತಾದೃಶಚಿಚ್ಚೇತ್ಯಯಂತೇಷ್ಟೋ ನೋ ರಮಾಪತಿಃ।''**

ಎಂಬುದಾಗಿ ಆಚಾರ್ಯರು ತಮ್ಮ ಮಂಗಳಾಚರಣೆಯಲ್ಲಿ ಭಗವಂತನನ್ನು ಸ್ತುತಿಸುತ್ತಾ, ಉಪೋದ್ಘಾತರೂಪದಲ್ಲಿ ಭಗವಂತನ ಮುಕ್ತನಿಯಾಮಕತ್ವವನ್ನು ಪ್ರಸ್ತುತಪಡಿಸುತ್ತಾರೆ. ಆಗ -

''ನಿಯಮ್ಯನಿಯಾಮಕಭಾವ ಇರಬೇಕಾದರೆ ಭೇದ ಇರಬೇಕು. ಪ್ರಕೃತ ಸಂಸಾರದಶಾದಲ್ಲಿ ಜೀವ-ಬ್ರಹ್ಮರಲ್ಲಿ ಭೇದವಿರಬಹುದಾದರೂ ಜೀವನು ಮುಕ್ತನಾದಮೇಲೆ ಮೋಕ್ಷದಲ್ಲಿ ಭೇದವಿರುವುದಿಲ್ಲ. ಹೀಗಾಗಿ ಭೇದವೇ ಇಲ್ಲವೆಂದಮೇಲೆ ಭಗವಂತನಿಗೆ ಮುಕ್ತನಿಯಾಮಕತ್ವ ಹೇಳುವುದು ಸರಿಯಲ್ಲ''

ಎಂದು ಅಭೇದವಾದಿಗಳು ಆಕ್ಷೇಪವ್ಯಕ್ತಪಡಿಸುತ್ತಾರೆ. ಅದಕ್ಕಾಗಿ ಆಚಾರ್ಯರು ''ವಿಮತೋ ಭಿನ್ನೋ ಮುಕ್ತತ್ವಾತ್ ನಿಗಡಮುಕ್ತವತ್'' ಎಂಬ ಅನುಮಾನದ ಮೂಲಕ ಮುಕ್ತನಿಗೆ ಭೇದವನ್ನು ಸಾಧಿಸಿ, ಭಗವಂತನ ಮುಕ್ತನಿಯಾಮಕತ್ವವನ್ನುಸಮರ್ಥಿಸುತ್ತಾರೆ. ಆ ಪ್ರಸಂಗದಲ್ಲಿಅನಿರ್ವಚನೀಯ-ವಸ್ತುವಿನ ನಿರಾಕರಣೆ ಮಾಡುತ್ತಾರೆ. ಪ್ರಾಸಂಗಿಕವಾಗಿ ಮಿಥ್ಯಾತ್ವಸಾಧಕ ದೃಶ್ಯತ್ವಾದಿ ಅನುಮಾನಗಳನ್ನು ವಿಸ್ತಾರವಾಗಿ ನಿರಾಕರಿಸಿ, ಜಗತ್ತಿನ ಸತ್ಯತ್ವವನ್ನು ಸಮರ್ಥಿಸುತ್ತಾರೆ. ಜೊತೆಗೆ ಜೀವ-ಬ್ರಹ್ಮರ ಐಕ್ಯವನ್ನು ನಿರಾಕರಿಸಿ, ಜೀವ-ಬ್ರಹ್ಮರ ಭೇದವನ್ನು ಸಮರ್ಥಿಸುತ್ತಾರೆ.

ಇದು ಸುದೀರ್ಘವಾದ ಚರ್ಚೆ. ಜಿಜ್ಞಾಸುಗಳಿಗೆ ಅನುಕೂಲವಾಗಲೆಂದು ಆ ಎಲ್ಲ ವಿಸ್ತೃತವಿಚಾರಗಳನ್ನು ಬಹಳ ಸಂಕ್ಷೇಪವಾಗಿ ಸಂಗ್ರಹಿಸಿ, ಮುಖ್ಯಾಂಶಗಳ ರೂಪದಲ್ಲಿ ಇಲ್ಲಿ ನೀಡುತ್ತೇನೆ.

## ತತ್ತ್ವೋದ್ಯೋತ ಸಾರಸಂಗ್ರಹ

ಶ್ರೀಮದಾಚಾರ್ಯರು ತತ್ತ್ವೋದ್ಯೋತ ಗ್ರಂಥದ ಪ್ರಾರಂಭದಲ್ಲಿ ಶಿಷ್ಯಶಿಕ್ಷಣಕ್ಕಾಗಿ ಮಂಗಳಾಚರಣೆ ಮಾಡುತ್ತಾ-

''ನಿತ್ಯಾತಾದೃಶಚಿಚ್ಚೇತ್ಯಯಂತಾ ರಮಾಪತಿಃ ನಃ ಇಷ್ಟಃ'' ಎಂಬುದಾಗಿ ಭಗವಂತನನ್ನು ಸ್ತುತಿಸುತ್ತಾರೆ. ಚೇತನ-ಅಚೇತನಾತ್ಮಕವಾದ ಸಮಸ್ತಜಗತ್ತನ್ನು ನಿಯಮಿಸುವವನು ಭಗವಂತ ಎಂದು ಕೊಂಡಾಡುತ್ತಾರೆ.

**ಅಭೇದವಾದಿಗಳ ಆಕ್ಷೇಪ**

ಇಲ್ಲಿ ಪರವಾದಿಗಳು ಆಕ್ಷೇಪ ಮಾಡುತ್ತಾರೆ -

**ಭವತು ಚೇತ್ಯಂ ಪರಮೇಶ್ವರನಿಯತಮ್ । ಚೇತನಶ್ಚ ಸಂಸಾರೀ । ಮುಕ್ತಸ್ತು ನ ಕೇನಾಪಿ ನಿಯತಃ । ನಿಯಮ್ಯನಿಯಾಮಕಭಾವಸ್ಯ ಭೇದವ್ಯಾಪ್ತತ್ವಾತ್ । ನ ಚ ಮುಕ್ತಸ್ಯ ಕುತೋಽಪಿ ಭೇದೋಽಸ್ತಿ । ಪ್ರಮಾಣಾಭಾವಾತ್ ।**

ಚೇತನ-ಅಚೇತನಗಳಲ್ಲಿ ಅಚೇತನವು ಪರಮಾತ್ಮನಿಂದ ನಿಯಮ್ಯ ಆಗಲಿ. ಚೇತನರಲ್ಲಿಯೂ ಸಹ ಸಂಸಾರದಶಾದಲ್ಲಿ ಜೀವ-ಬ್ರಹ್ಮರಲ್ಲಿ ಭೇದ ಇರುವ ಕಾರಣ ಸಂಸಾರಿಗಳಾದ ಚೇತನರು ಪರಮಾತ್ಮನಿಂದ ನಿಯಮ್ಯರಾಗಲಿ. ಆದರೆ ಮೋಕ್ಷದಲ್ಲಿ ಜೀವ-ಬ್ರಹ್ಮಭೇದ ಇರುವುದಿಲ್ಲವಾದ್ದರಿಂದ ಮುಕ್ತರಾದ ಚೇತನರು ಪರಮಾತ್ಮನಿಂದ ನಿಯಮ್ಯರಾಗಲು ಸಾಧ್ಯವಿಲ್ಲ. ಆದ್ದರಿಂದ ಚೇತನ-ಅಚೇತನಾತ್ಮಕ ಸಮಸ್ತಜಗತ್ತಿಗೆ ಭಗವಂತ ನಿಯಾಮಕ ಎಂದು ಹೇಳಿದ್ದು ಸರಿಯಲ್ಲ.

ಇದು ಅಭೇದವಾದಿಗಳ ಆಕ್ಷೇಪ.

**ಮುಕ್ತಭೇದಸಾಧನೆ**

ಅದಕ್ಕಾಗಿ ಆಚಾರ್ಯರು ಭಗವಂತನಿಗೆ ಮುಕ್ತನಿಯಾಮಕತ್ವವನ್ನು ಸಮರ್ಥಿಸುವುದಕ್ಕಾಗಿ, ಅದಕ್ಕೆ ಅಂಗವಾಗಿ ಮುಕ್ತಚೇತನನಿಗೆ ಭೇದವನ್ನು ಸಾಧಿಸುತ್ತಾರೆ-

**ವಿಮತೋ ಭಿನ್ನೋ ಮುಕ್ತತ್ವಾತ್, ಯದಿತ್ಥಂ ತತ್ತಥಾ, ಯಥಾ ಸಂಪ್ರತಿಪನ್ನಃ ।**

ನಿಗಡಮುಕ್ತನಾದವನು (ಜೈಲಿನಿಂದ ಬಿಡುಗಡೆಯಾದ ವ್ಯಕ್ತಿಯು) ಮುಕ್ತ-ನಾದ್ದರಿಂದ ಭಿನ್ನನಾಗಿರುವಂತೆ, ಸಂಸಾರಮುಕ್ತನಾದವನೂ ಮುಕ್ತನಾದ್ದರಿಂದ ಭಿನ್ನನಾಗಿದ್ದಾನೆ (ಭೇದ ಉಳ್ಳವನಾಗಿದ್ದಾನೆ) ಎಂದು.

## ಅನಿರ್ವಚನೀಯವಸ್ತುನಿರಾಕರಣೆ

ಇಲ್ಲಿ ಭೇದವು ಸಾಧ್ಯವಾಗಿದೆ. ''ಅನಿರ್ವಚನೀಯಭೇದವನ್ನು ಸಾಧ್ಯ ಮಾಡುತ್ತೀರೋ ? ಪಾರಮಾರ್ಥಿಕಭೇದವನ್ನು ಸಾಧ್ಯ ಮಾಡುತ್ತೀರೋ ?'' ಎಂಬುದಾಗಿ ಪ್ರಶ್ನೆ ಮಾಡಿ, ಎರಡೂ ಪಕ್ಷಗಳಲ್ಲಿಯೂ ದೋಷವನ್ನು ಹೇಳಿ ಅನುಮಾನವನ್ನು ನಿರಾಕರಿಸಲು ಪರರು ಯತ್ನಿಸಿದಾಗ, ಆಚಾರ್ಯರು ಹೇಳುತ್ತಾರೆ -

**ನ ಚ ಭೇದೇ ವಿಕಲ್ಪೋ ಯುಜ್ಯತೇ ।**

ಇಲ್ಲಿ ವಿಕಲ್ಪ ಎಂದರೆ ಸಂಶಯಮೂಲಕವಾದ ಪ್ರಶ್ನೆ ಎಂದರ್ಥ. ಅನಿರ್ವಚನೀಯಭೇದವೋ ? ಪಾರಮಾರ್ಥಿಕಭೇದವೋ ? ಎಂಬ ಪ್ರಶ್ನೆಯೇ ಮೊದಲು ಕೂಡುವುದಿಲ್ಲ. ಹೌದು ಪ್ರಶ್ನೆ ಏಕೆ ಕೂಡುವುದಿಲ್ಲ ? ಎಂದರೆ, ಅದಕ್ಕೆ ಮೂಲವಾದ ಸಂಶಯ ಕೂಡುವುದಿಲ್ಲವಾದ್ದರಿಂದ ಪ್ರಶ್ನೆ ಕೂಡುವುದಿಲ್ಲ ಎಂದು ಉತ್ತರ. ಸರಿ, ಸಂಶಯ ಏಕೆ ಕೂಡುವುದಿಲ್ಲ? ಎಂದರೆ -

ಯಾವುದೇ ಒಂದು ಸಂಶಯ ಕೂಡಬೇಕಾದರೆ ಎರಡು ಕೋಟಿಗಳು ಪ್ರಸಿದ್ಧವಿರಲೇಬೇಕು. ಪ್ರಕೃತ ಅನಿರ್ವಚನೀಯಭೇದವೋ ? ಪಾರಮಾರ್ಥಿಕ-ಭೇದವೋ ? ಎಂದು ಸಂಶಯ ಕೂಡಬೇಕಾದರೆ ಅನಿರ್ವಚನೀಯತ್ವ-ಪಾರಮಾರ್ಥಿಕತ್ವ ಎಂಬ ಎರಡು ಕೋಟಿಗಳು ಪ್ರಸಿದ್ಧವಿರಬೇಕು. ಆದರೆ -

**ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವ ।**
**ಶಶವಿಷಾಣಂ ಗೋವಿಷಾಣಂ ವೋಚ್ಯತೇ ಇತಿವತ್ ॥**

ಜಗತ್ತಿನಲ್ಲಿ ಗೋವಿಷಾಣ ಪ್ರಸಿದ್ಧವಾಗಿದ್ದರೂ ಶಶವಿಷಾಣ ಅಪ್ರಸಿದ್ಧವಾದ್ದರಿಂದ, ವಿಷಾಣವನ್ನು ನೋಡಿದಾಗ 'ಶಶವಿಷಾಣವೋ ? ಗೋವಿಷಾಣವೋ ?' ಎಂಬ ಸಂಶಯ ಹೇಗೆ ಬರುವುದಿಲ್ಲವೋ, ಅದರಂತೆ ಪಾರಮಾರ್ಥಿಕತ್ವ ಕೋಟಿ ಪ್ರಸಿದ್ಧವಾಗಿದ್ದರೂ (ಅನಿರ್ವನೀಯವಸ್ತುವೇ ಅಪ್ರಸಿದ್ಧವಾದ್ದರಿಂದ)

ಅನಿರ್ವಚನೀಯತ್ವಕೋಟಿ ಅಪ್ರಸಿದ್ಧವಾದ ಕಾರಣ 'ಅನಿರ್ವಚನೀಯ-ಭೇದವೋ ? ಪಾರಮಾರ್ಥಿಕಭೇದವೋ ?' ಎಂಬ ಸಂಶಯವೇ ಕೂಡುವುದಿಲ್ಲ.

ಹೌದು, ಅನಿರ್ವಚನೀಯತ್ವಕೋಟಿ (ಅನಿರ್ವಚನೀಯವಸ್ತು) ಅಪ್ರಸಿದ್ಧ ಯಾಕೆ ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರು ಹೇಳಿದರು -

**ನ ಚಾನಿರ್ವಚನೀಯೇ ಕಿಂಚಿನ್ಮಾನಮ್ ।**

ಅನಿರ್ವಚನೀಯವಸ್ತು ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ.

## ಅನಿರ್ವಚನೀಯವಿಷಯದಲ್ಲಿ ಪ್ರತ್ಯಕ್ಷನಿರಾಕರಣೆ

ಪ್ರಮಾಣ ಇಲ್ಲ ಏಕೆ ? ಭ್ರಾಂತಿಕಾಲದಲ್ಲಿ ಬರುವ ''ರಜತಂ ಮಿಥ್ಯಾ'' ಎಂಬ ಅನುಭವವೇ ಪ್ರತ್ಯಕ್ಷಪ್ರಮಾಣವಾಗಿದೆ ಎಂದು ಪರರು ಶಂಕಿಸಿದರೆ, ಅದಕ್ಕೆ ಆಚಾರ್ಯರು ಹೇಳಿದರು -

**ಮಿಥ್ಯಾಶಬ್ದೋಽನಿರ್ವಚನೀಯಂ ವದತೀತ್ಯತ್ರ ಚ ।**

ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ಎಂಬ ಅರ್ಥ ಯಾವ ವ್ಯಾಕರಣ-ಅಭಿಧಾನಾದಿಗಳಲ್ಲಿಯೂ ಇಲ್ಲವಾದ್ದರಿಂದ ಭ್ರಾಂತಿಕಾಲೀನ ಅನುಭವವು ರಜತಕ್ಕೆ ಮಿಥ್ಯಾತ್ವವನ್ನು ಹೇಳುತ್ತಿದೆಯೇ ಹೊರತು ಅನಿರ್ವಚನೀಯತ್ವವನ್ನು ಹೇಳುತ್ತಿಲ್ಲ. ಹಾಗಾಗಿ ಅನಿರ್ವಚನೀಯವಿಷಯದಲ್ಲಿ ''ರಜತಂ ಮಿಥ್ಯಾ'' ಎಂಬ ಅನುಭವವು ಪ್ರತ್ಯಕ್ಷಪ್ರಮಾಣವಾಗುವುದಿಲ್ಲ.

## ಅನಿರ್ವಚನೀಯವಿಷಯದಲ್ಲಿ ಅನುಮಾನನಿರಾಕರಣೆ

ಅನಿರ್ವಚನೀಯವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗದಿದ್ದರೂ ಸಹ - ''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್ ।'' ಎಂಬ ಅನುಮಾನವು ಪ್ರಮಾಣವಾಗುತ್ತದೆ ಎಂದು ಪರರು ಶಂಕಿಸಿದರೆ, ಅದನ್ನು ಆಚಾರ್ಯರು ನಿರಾಕರಿಸುತ್ತಾರೆ -

**ಅನುಮಾನಸ್ಯ ಚಾಪ್ರಸಿದ್ಧವಿಶೇಷಣಃ ಪಕ್ಷಃ ॥**

ಅನುಮಾನದಲ್ಲಿ ಅನಿರ್ವಚನೀಯತ್ವವನ್ನು ಸಾಧ್ಯ ಮಾಡಿದ್ದೀರಿ. ಆದರೆ ಅನುಮಾನ ಪ್ರವೃತ್ತವಾಗುವುದಕ್ಕಿಂತ ಮುಂಚೆ ಅನಿರ್ವಚನೀಯವಸ್ತು

ಎಲ್ಲಿಯೂ ಪ್ರಸಿದ್ಧವಾಗಿಲ್ಲವಾದ್ದರಿಂದ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ. ಆದ್ದರಿಂದ ಈ ಅನುಮಾನವೂ ಅನಿರ್ವಚನೀಯವಸ್ತುವಿಗೆ ಸಾಧಕವಾಗುವುದಿಲ್ಲ ಎಂದು ಭಾವ.

## ಅನಿರ್ವಚನೀಯವಿಷಯದಲ್ಲಿ ಆಗಮನಿರಾಕರಣೆ

ಹಾಗಾದರೆ ಅನಿರ್ವಚನೀಯವಸ್ತುವಿಷಯದಲ್ಲಿ ಆಗಮವು ಪ್ರಮಾಣವಾಗಬಹುದಲ್ಲ? ಎಂದರೆ, ಆಗಮವು 'ಇದು ಸದಸದ್ವಿಲಕ್ಷಣವಾಗಿದೆ' ಎಂಬುದಾಗಿ ನಿರವಕಾಶವಾಗಿ ಅನಿರ್ವಚನೀಯವಸ್ತುಪ್ರತಿಪಾದಕವಾಗಿದೆಯೋ ? ಅಥವಾ 'ಇದು ಅನಿರ್ವಚನೀಯವಾಗಿದೆ' ಎಂಬುದಾಗಿ ಸಾವಕಾಶವಾಗಿ ಅನಿರ್ವಚನೀಯವಸ್ತುಪ್ರತಿಪಾದಕವಾಗಿದೆಯೋ ?

ಮೊದಲನೇ ನಿರವಕಾಶ ಆಗಮಪಕ್ಷಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

**ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ ।**

ಯಾವ ಆಗಮವೂ ಸಹ 'ಇದು ಸದಸದ್ವಿಲಕ್ಷಣವಾಗಿದೆ' ಎಂಬುದಾಗಿ ನಿರವಕಾಶವಾಗಿ ಅನಿರ್ವಚನೀಯವಸ್ತುಪ್ರತಿಪಾದಕವಾಗಿಲ್ಲ. ಅಂತಹ ನಿರವಕಾಶವಾಗಿ ಅನಿರ್ವಚನೀಯವಸ್ತುಪ್ರತಿಪಾದಕವಾದ ಯಾವ ಆಗಮವೂ ಉಪಲಬ್ಧವಾಗಿಲ್ಲ ಎಂದು ಭಾವ.

ನಿರವಕಾಶವಾಗಿ ಅನಿರ್ವಚನೀಯವಸ್ತುಪ್ರತಿಪಾದಕವಾದ ಆಗಮವು ಯಾವುದೂ ಇಲ್ಲ ಎಂದು ಏಕೆ ಹೇಳುತ್ತೀರಿ ?

**''ನಾಸದಾಸೀತ್ ನೋ ಸದಾಸೀತ್ ತದಾನೀಂ ನಾಸೀದ್ರಜೋ ನೋ ವ್ಯೋಮಾಪರೋ ಯತ್'' ''ತಮ ಆಸೀತ್''**

ಎಂಬ ಆಗಮವು ಅನಿರ್ವಚನೀಯವಸ್ತುಪ್ರತಿಪಾದಕವಾಗಿದೆ. ಏಕೆಂದರೆ ಸತ್ ಇರಲಿಲ್ಲ, ಅಸತ್ ಇರಲಿಲ್ಲ ಎಂಬುದಾಗಿ ಮಹಾಪ್ರಲಯಕಾಲದಲ್ಲಿ ಸತ್- ಅಸತ್ ಪದಾರ್ಥಗಳನ್ನು ನಿಷೇಧಿಸಿ, ಅವಿದ್ಯಾ ಇತ್ತು ಎಂದು ಅವಿದ್ಯಾ ಅವಸ್ಥಾನವನ್ನು ತಿಳಿಸುತ್ತಿದೆ ಆಗಮ. ಆದ್ದರಿಂದ ಈ ಆಗಮವು ಅನಿರ್ವಚನೀಯವಸ್ತುಪ್ರತಿಪಾದಕವಾಗಿದೆಯಲ್ಲವೇ ?

ಈ ವಿಧವಾದ ಶಂಕೆ ಸರಿಯಲ್ಲ. ಏಕೆಂದರೆ ಈ ಆಗಮವು 'ಪ್ರಲಯಕಾಲದಲ್ಲಿ ಸತ್-ಅಸತ್‌ಗಳು ಇರಲಿಲ್ಲ. ಅವಿದ್ಯಾ ಇತ್ತು' ಎಂದಷ್ಟೇ ಹೇಳುತ್ತದೆ. ಹೊರತು ಅವಿದ್ಯೆ ಸದಸದ್ವಿಲಕ್ಷಣವಾಗಿದೆ ಎಂದೇನೂ ಹೇಳುತ್ತಿಲ್ಲ.

ಹೌದು, ಸತ್-ಅಸತ್‌ಗಳು ಇಲ್ಲದ ಸಮಯದಲ್ಲಿ ಅವಿದ್ಯಾ ಇದೆ ಎಂದರೆ ಇರುವ ಆ ಅವಿದ್ಯಾ ಸದಸದ್ವಿಲಕ್ಷಣವೇ ಆಗಬೇಕಲ್ಲ ?

ಸತ್ಯವೇ. ಆದರೆ ''ಯಶ್ಚ ಅರ್ಥಾದರ್ಥಃ ನ ಸ ಚೋದನಾರ್ಥಃ'' ಎಂದು ಹೇಳಿದಂತೆ 'ಪ್ರಲಯಕಾಲದಲ್ಲಿ ಸತ್-ಅಸತ್‌ಗಳು ಇರಲಿಲ್ಲ. ಅವಿದ್ಯೆ ಇತ್ತು' ಎಂದಷ್ಟೇ ಈ ಆಗಮದಿಂದ ಸಿದ್ಧವಾಗುವುದು. ಅವಿದ್ಯೆಗೆ ಸದಸದ್ವಿಲಕ್ಷಣತ್ವವು ಈ ಆಗಮದಿಂದ ಸಿದ್ಧವಾಗುವುದಿಲ್ಲ. ಹಾಗಾಗಿ ಅವಿದ್ಯೆ ಸದಸದ್ವಿಲಕ್ಷಣವಾಗಿದೆ ಎಂಬ ವಿಷಯದಲ್ಲಿ ಈ ಆಗಮವು ಪ್ರಮಾಣವಾಗುವುದಿಲ್ಲ ಎಂದು ಭಾವ.

## ಅನಿರ್ವಚನೀಯವಿಷಯದಲ್ಲಿ ಪರಿಶೇಷಪ್ರಮಾಣನಿರಾಕರಣೆ

ಹಾಗಾದರೆ ಅವಿದ್ಯೆಗೆ ಸದಸದ್ವಿಲಕ್ಷಣತ್ವವು ಈ ಆಗಮದಿಂದ ಸಿದ್ಧವಾಗದೇ ಇದ್ದರೂ ಪರಿಶೇಷದಿಂದ ಸಿದ್ಧವಾಗುತ್ತದೆ. ಅರ್ಥಾತ್ ಸತ್-ಅಸತ್‌ಗಳು ಇಲ್ಲದ ಸಮಯದಲ್ಲಿ ಅವಿದ್ಯಾ ಇತ್ತು ಎಂದರೆ ಆ ಅವಿದ್ಯಾ ಸದಸದ್ವಿಲಕ್ಷಣವಾಗಿದೆ ಎಂದು ಪರಿಶೇಷದಿಂದ ಸಿದ್ಧವಾಗುತ್ತದೆಯಲ್ಲವೇ ? ಎಂದರೆ, ಈ ವಿಧವಾದ ಶಂಕೆಯೂ ಸರಿಯಲ್ಲ. ಕಾರಣ -

**ಪಾರಿಶೇಷ್ಯೇಣ ಅನಿರ್ವಚನೀಯತ್ವಾಂಗೀಕಾರೇ 'ಆನೀದವಾತಂ ಸ್ವಧಯಾ ತದೇಕಮ್' ಇತಿ ತದಾನೀಂ ಪರಿಶಿಷ್ಟತ್ವಾತ್ ಬ್ರಹ್ಮಣ ಏವಾನಿರ್ವಚನೀಯತ್ವಂ ಸ್ಯಾತ್ ।**

ಸತ್-ಅಸತ್‌ಗಳು ಇಲ್ಲದ ಸಮಯದಲ್ಲಿ ಅವಿದ್ಯಾ ಇತ್ತು ಎಂದು ಆಗಮವು ಹೇಗೆ ತಿಳಿಸುತ್ತಿದೆಯೋ ಹಾಗೆ -

**'ಆನೀದವಾತಂ ಸ್ವಧಯಾ ತದೇಕಮ್'**

ಸತ್-ಅಸತ್‌ಗಳು ಇಲ್ಲದ ಆ ಮಹಾಪ್ರಲಯಕಾಲದಲ್ಲಿ ಬ್ರಹ್ಮನು ಇದ್ದ ಎಂಬುದಾಗಿಯೂ ಆಗಮವು ತಿಳಿಸುತ್ತಿರುವುದರಿಂದ, ಪರಿಶೇಷದಿಂದ ಅವಿದ್ಯೆಗೆ ಸದಸದ್ವಿಲಕ್ಷಣತ್ವವನ್ನು ಹೇಳುವುದಾದರೆ ಅದೇ ಪರಿಶೇಷದಿಂದ ಬ್ರಹ್ಮನಿಗೂ

ಸದಸದ್ವಿಲಕ್ಷಣತ್ವವು ಹೇಳಬೇಕಾದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಪರಿಶೇಷದಿಂದಲೂ ಸದಸದ್ವಿಲಕ್ಷಣವಸ್ತು ಸಿದ್ಧವಾಗುವುದಿಲ್ಲ.

## 'ನಾಸದಾಸೀತ್' ಶ್ರುತ್ಯರ್ಥನಿರೂಪಣೆ

ಹೌದು, 'ನಾಸದಾಸೀತ್ ನೋ ಸದಾಸೀತ್' 'ತಮ ಆಸೀತ್' 'ಆನೀದವಾತಂ ಸ್ವಧಯಾ ತದೇಕಮ್' ಇತ್ಯಾದಿ ವಾಕ್ಯಗಳಿಂದ ಯಾವ ಅರ್ಥ ಪ್ರತೀತವಾಗುತ್ತಿದೆ (ಬ್ರಹ್ಮ-ಅವಿದ್ಯೆಗಳಿಗೆ ಪ್ರಸಿದ್ಧ ಸದಸದ್ವೈಲಕ್ಷಣ್ಯ = ಅನಿರ್ವಚನೀಯತ್ವ ಎಂಬ ಯಾವ ಅರ್ಥ ಪ್ರತೀತವಾಗುತ್ತಿದೆ) ಆ ಅರ್ಥ ಅನುಪಪನ್ನ ಎಂದಾದರೆ, ಹಾಗಾದರೆ ಬ್ರಹ್ಮ-ಅವಿದ್ಯೆಗಳಿಗೆ ಹೇಳಲ್ಪಡುತ್ತಿರುವ ಸದಸದ್ವೈಲಕ್ಷಣ್ಯ ಎನ್ನುವುದಕ್ಕೆ (ಬ್ರಹ್ಮ-ಅವಿದ್ಯೆಗಳಿಗೆ ಸದಸದ್ವೈಲಕ್ಷಣ್ಯವನ್ನು ಪ್ರತಿಪಾದಿಸುವ ಈ ವಾಕ್ಯಗಳಿಗೆ) ಏನು ಅರ್ಥ ?

ಈ ರೀತಿ ಶಂಕೆ ಬಂದರೆ, 'ನಾಸದಾಸೀತ್' ಎಂಬ ಶ್ರುತಿಗೆ ಏನು ಅರ್ಥ ಹೇಳಬೇಕು ಎನ್ನುವುದನ್ನು ಮತ್ತೊಂದು ಶ್ರುತಿಯಿಂದಲೇ ಆಚಾರ್ಯರು ತೋರಿಸಿಕೊಡುತ್ತಾರೆ -

**ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ ।**
**ಮೂರ್ತಾಮೂರ್ತೇತರದ್ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ಇತಿ ಪೈಂಗಿಶ್ರುತಿಃ ।**

ಮೂರ್ತಪದಾರ್ಥಗಳು ಸತ್ ಎಂದು ಕರೆಸಿಕೊಳ್ಳಲ್ಪಡುತ್ತವೆ. (ಸತ್ ಎಂದರೆ ಮೂರ್ತಪದಾರ್ಥಗಳು ಎಂದರ್ಥ.) ಅಮೂರ್ತಪದಾರ್ಥಗಳು ಅಸತ್ ಎಂದು ಕರೆಸಿಕೊಳ್ಳಲ್ಪಡುತ್ತವೆ. (ಅಸತ್ ಎಂದರೆ ಅಮೂರ್ತಪದಾರ್ಥಗಳು ಎಂದರ್ಥ.) ಈ ಮೂರ್ತ-ಅಮೂರ್ತ ಪದಾರ್ಥಗಳಿಂದ ಭಿನ್ನನಾದ ಬ್ರಹ್ಮನು 'ಸತ್ ಅಲ್ಲ' 'ಅಸತ್ ಅಲ್ಲ' (ಸದಸದ್ವಿಲಕ್ಷಣ) ಎಂಬುದಾಗಿ ಕರೆಸಿಕೊಳ್ಳುತ್ತಾನೆ ಎಂಬುದಾಗಿ ಪೈಂಗಿಶ್ರುತಿ ತಿಳಿಸುತ್ತಿದೆ.

ಪೈಂಗಿಶ್ರುತಿಯಲ್ಲಿ ಬ್ರಹ್ಮ ಎಂದು ಹೇಳಿರುವುದು ಉಪಲಕ್ಷಣವಾಗಿದೆ. ಅಂದರೆ ಬ್ರಹ್ಮನನ್ನು ತೆಗೆದುಕೊಳ್ಳುವುದರ ಜೊತೆಗೆ ಉಪಲಕ್ಷಣಯಾ ಪ್ರಕೃತಿ ಎಂಬ ಹೆಸರುಳ್ಳ ಅವಿದ್ಯೆಯನ್ನೂ ತೆಗೆದುಕೊಳ್ಳಬೇಕು.

ಹಾಗಾದರೆ -

**'ನಾಸದಾಸೀತ್ ನೋ ಸದಾಸೀತ್' 'ತಮ ಆಸೀತ್' 'ಆನೀದವಾತಂ ಸ್ವಧಯಾ ತದೇಕಮ್'**

ಇತ್ಯಾದಿ ವಾಕ್ಯಗಳು 'ಅವಿದ್ಯೆ ಸದಸದ್ವಿಲಕ್ಷಣವಾಗಿದೆ' 'ಬ್ರಹ್ಮನು ಸದಸದ್ವಿಲಕ್ಷಣನಾಗಿದ್ದಾನೆ' ಎಂದು ಹೇಳಿದರೆ 'ಅವಿದ್ಯೆಯು ಮೂರ್ತ-ಅಮೂರ್ತಪದಾರ್ಥವಿಲಕ್ಷಣವಾಗಿದೆ' 'ಬ್ರಹ್ಮನು ಮೂರ್ತ-ಅಮೂರ್ತ-ಪದಾರ್ಥವಿಲಕ್ಷಣನಾಗಿದ್ದಾನೆ' ಎಂಬುದಾಗಿ ಆ ವಾಕ್ಯಗಳ ಅರ್ಥವನ್ನು ತಿಳಿದುಕೊಳ್ಳಬೇಕು ಎಂದು ಭಾವ.

## ಅನಿರ್ವಚನೀಯವಿಷಯದಲ್ಲಿ ಪುರಾಣವಚನನಿರಾಕರಣೆ

ಶ್ರುತಿಪುರಾಣಾದಿಗಳಲ್ಲಿ ಬ್ರಹ್ಮ ಹಾಗೂ ಚೇತನಾಚೇತನಾತ್ಮಕಜಗತ್ತು ಅನಿರ್ವಚನೀಯವಾಗಿವೆ, ಅಚಿಂತ್ಯವಾಗಿವೆ, ಅತರ್ಕ್ಯವಾಗಿವೆ, ಅಜ್ಞೇಯ-ವಾಗಿವೆ ಎಂದು ಹೇಳುವ ವಚನಗಳು ಕಾಣುತ್ತವೆ. ಜಗತ್ತಿನ ಜೊತೆಗೆ ಬ್ರಹ್ಮನೂ ಅಲ್ಲಿ ಸೇರಿರುವ ಕಾರಣ ಪ್ರಸಿದ್ಧ ಸದಸದ್ವಿಲಕ್ಷಣತ್ವ-ಚಿಂತಾಅವಿಷಯತ್ವ ಇತ್ಯಾದಿ ಅರ್ಥಗಳನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಅವುಗಳಿಗೆ ಏನು ಅರ್ಥ ಮಾಡಬೇಕು ?

ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಅದ್ಭುತತ್ವಾತ್ ಅನಿರ್ವಾಚ್ಯಂ ಬ್ರಹ್ಮ ಚಿಚ್ಚೇತ್ಯಮೇವ ಚ ।**
**ಅಚಿಂತ್ಯಂ ತತ ಏವೈತತ್ ಅತರ್ಕ್ಯಾಜ್ಞೇಯಮೇವ ಚ ॥**

ಬ್ರಹ್ಮ ಹಾಗೂ ಜಗತ್ತು ಅದ್ಭುತವಾಗಿರುವ ಕಾರಣ, ಬಹಳ ಆಶ್ಚರ್ಯಕರ-ವಾಗಿರುವ ಕಾರಣ, ಶಬ್ದಗಳಿಂದ ಅದನ್ನು ನಿರ್ವಚನ ಮಾಡಲು ಬರುವುದಿಲ್ಲ-ವಾದ್ದರಿಂದ 'ಅನಿರ್ವಚನೀಯ' 'ಅಚಿಂತ್ಯ' 'ಅತರ್ಕ್ಯ' 'ಅಜ್ಞೇಯ' ಎಂಬುದಾಗಿ ಶ್ರುತಿಪುರಾಣಾದಿಗಳಲ್ಲಿ ಕರೆಸಿಕೊಳ್ಳಲ್ಪಡುತ್ತವೆ.

## ಋತ-ಅನೃತ ಶಬ್ದಗಳ ಅರ್ಥ

ಹೌದು, ನೀವು ಹೇಳುವ ಪ್ರಕಾರ ಬ್ರಹ್ಮನಂತೆ ಜಗತ್ತೂ ಸತ್ಯವಾಗಿದ್ದಾದರೆ, 'ತದೇವರ್ತಮ್' 'ಬ್ರಹ್ಮ ಒಬ್ಬನೇ ಋತ (ಸತ್ಯ)' ಎಂಬುದಾಗಿ ವಾಕ್ಯ

ಇದೆಯಲ್ಲ ? ಜೊತೆಗೆ 'ಜಗತ್ತು ಅನೃತ (ಅಸತ್ಯ)' ಎಂದು ಹೇಳುವ 'ಅನೃತೇನ ಹಿ ಪ್ರತ್ಯೂಢಾಃ' ಎಂಬ ವಾಕ್ಯವೂ ಇದೆಯಲ್ಲ ? ಅವುಗಳಿಗೆ ಏನು ಅರ್ಥ ?

ಆಚಾರ್ಯರು ಅವುಗಳಿಗೆ ಬಹಳ ಸುಂದರವಾದ ಅರ್ಥವನ್ನು ತಿಳಿಸುತ್ತಾರೆ-

**ಋ ಗತಾವಿತಿ ಧಾತೋಸ್ತು ಪೂರ್ವಾವಗತವತ್ ಸದಾ ।**
**ಸ್ಥಿತೇಃ ಬ್ರಹ್ಮರ್ತಮಿತ್ಯುಕ್ತಮ್ ......**

'ಋ ಗತೌ' ಎಂದು ಧಾತುವಿರುವುದರಿಂದ (ಧಾತುವಿನ ಅರ್ಥವಿರುವುದರಿಂದ) ಬ್ರಹ್ಮನು ಪೂರ್ವಾವಗತವತ್ ಸದಾ ಸ್ಥಿತನಾದ ಕಾರಣ (ಪರಿಣಾಮರಹಿತನಾದ ಕಾರಣ) 'ತದೇವರ್ತಂ' ಎಂಬ ಶ್ರುತಿಯಲ್ಲಿ ಋತ ಎಂದು ಕರೆಯಲ್ಪಡುತ್ತಾನೆ. ಪ್ರಕೃತಿ ಹಾಗೂ ಪ್ರಕೃತಿಕಾರ್ಯವಾದ ಜಗತ್ತು ಪರಿಣಾಮ ಉಳ್ಳದ್ದಾದ್ದರಿಂದ 'ಅನೃತೇನ ಹಿ ಪ್ರತ್ಯೂಢಾಃ' ಎಂಬ ಶ್ರುತಿಯಲ್ಲಿ ಅನೃತ ಎಂದು ಕರೆಯಲ್ಪಡುತ್ತಿದೆ.

### ಸತ್-ಅಸತ್ ಶಬ್ದಗಳ ಅರ್ಥ

ಇನ್ನು ಕೆಲವೆಡೆ ಬ್ರಹ್ಮನನ್ನು ಸತ್ ಎಂದು ಕರೆದರೆ, ಜಗತ್ತನ್ನು ಅಸತ್ ಎಂದು ಕರೆಯಲಾಗಿದೆ. ಅದಕ್ಕೆ ಅರ್ಥವೇನು ?

ಆಚಾರ್ಯರು ತಿಳಿಸುತ್ತಾರೆ - **ಅಸತ್ ತದಶುಭತ್ವತಃ ।**

ಜಗತ್ತು ಸಂಸಾರರೂಪವಾದ್ದರಿಂದ ಅಶುಭವಾಗಿದೆ. ಅಶುಭವಾದ್ದರಿಂದ ಅಸತ್ ಎನಿಸಿಕೊಳ್ಳುತ್ತದೆ. ಅದರಂತೆಯೇ '**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**' ಎಂಬ ವಚನದಂತೆ ಬ್ರಹ್ಮನು ಪರಮಾನಂದ(ಶುಭ) ರೂಪನಾದ್ದರಿಂದ ಸತ್ ಎನಿಸಿಕೊಳ್ಳುತ್ತಾನೆ. '**ಸದಾನಂದಸ್ವರೂಪತ್ವಾತ್ ಶುಭತ್ವಾತ್ ಬ್ರಹ್ಮ ಸತ್ ಸ್ಮೃತಮ್ ।**' ಇತ್ಯಾದಿ ಪ್ರಮಾಣಗಳು ಈ ವಿಚಾರವನ್ನು ದೃಢಪಡಿಸುತ್ತವೆ.

### ಸತ್ಯ-ಅಸತ್ಯ ಶಬ್ದಗಳ ಅರ್ಥ

ಇನ್ನು ಕೆಲವೆಡೆ ಜಗತ್ತನ್ನು ಅಸತ್ಯ ಎಂದು, ಬ್ರಹ್ಮನನ್ನು ಸತ್ಯ ಎಂದು ಕರೆಯಲಾಗಿದೆ. ಅದರ ಅರ್ಥವನ್ನು ಆಚಾರ್ಯರು ಸ್ಪಷ್ಟಪಡಿಸುತ್ತಿದ್ದಾರೆ -

**ಅಸತಾಂ ಬುದ್ಧಿಗಮ್ಯತ್ವಾತ್ ಅಸತ್ಯಮಿತಿ ಚೋಚ್ಯತೇ ।**

ಜಗತ್ತು ಅಸಜ್ಜನರಿಂದ ತಿಳಿಯಲ್ಪಡುತ್ತದೆ = ಅಸಜ್ಜನರ ಬುದ್ಧಿಗಮ್ಯವಾಗಿದೆ ಎಂಬ ಕಾರಣಕ್ಕೆ ಜಗತ್ತು ಅಸತ್ಯ ಎಂದು ಕರೆಸಿಕೊಳ್ಳುತ್ತದೆ. ಅದರಂತೆಯೇ ಬ್ರಹ್ಮನು ಸಜ್ಜನರಿಂದ ತಿಳಿಯಲ್ಪಡುತ್ತಾನೆ = ಸಜ್ಜನರ ಬುದ್ಧಿಗಮ್ಯನಾಗಿದ್ದಾನೆ ಎಂಬ ಕಾರಣಕ್ಕೆ ಬ್ರಹ್ಮನು ಸತ್ಯ ಎಂದು ಕರೆಸಿಕೊಳ್ಳುತ್ತಾನೆ.

ಹೌದು, ಜಗತ್ತನ್ನು ಅನೃತ ಅಸತ್ ಅಸತ್ಯ ಎಂಬುದಾಗಿ ಕರೆದಾಗ ಅಲ್ಲಿ ಮಿಥ್ಯಾ ಎಂಬ ಅರ್ಥವನ್ನೇ ಯಾಕೆ ಮಾಡಬಾರದು ? ಎಂದು ಕೇಳಿದರೆ,

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**

ಇತ್ಯಾದಿಸ್ಮೃತಿಗಳು ಹಾಗೂ

**'ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಮ್'**

ಇತ್ಯಾದಿ ಶ್ರುತಿಗಳು ಬ್ರಹ್ಮನಂತೆ ಜಗತ್ತೂ ಸತ್ಯವಾಗಿದೆ ಎಂದು ಸ್ಪಷ್ಟವಾಗಿ ಪ್ರತಿಪಾದಿಸುತ್ತಿರುವುದರಿಂದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಲು ಬರುವುದಿಲ್ಲ. ಹಾಗಾಗಿ ಆ ಎಲ್ಲ ವಾಕ್ಯಗಳಿಗೆ ಅರ್ಥಾಂತರಪರತ್ವವನ್ನು ಹೇಳುವುದು ಅನಿವಾರ್ಯ ಎನ್ನುತ್ತಾರೆ ಆಚಾರ್ಯರು.

## ಅನಿರ್ವಚನೀಯವಿಷಯದಲ್ಲಿ ಅರ್ಥಾಪತ್ತಿನಿರಾಕರಣೆ

ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷ-ಅನುಮಾನ-ಆಗಮಗಳು ಪ್ರಮಾಣವಾಗದಿದ್ದರೂ ಅರ್ಥಾಪತ್ತಿ ಪ್ರಮಾಣವಾಗುತ್ತದೆ. ಅರ್ಥಾತ್ ಅರ್ಥಾಪತ್ತಿಯಿಂದ ಅನಿರ್ವಚನೀಯವಸ್ತು ಸಿದ್ಧವಾಗುತ್ತದೆ. ಹೇಗೆಂದರೆ - ''**ಸಚ್ಚೇನ್ನ ಬಾಧ್ಯೇತ**'' ಯಾವುದು ಸತ್ ಆಗಿರುತ್ತದೆ ಅದಕ್ಕೆ ಬಾಧ ಬರುವುದಿಲ್ಲ. ಉದಾ - ಬ್ರಹ್ಮ. ಬ್ರಹ್ಮ ಸತ್ ಆದ್ದರಿಂದ ಬ್ರಹ್ಮನಿಗೆ ಬಾಧ ಬರುವುದಿಲ್ಲ, ಬ್ರಹ್ಮನು ಅಬಾಧ್ಯನಾಗಿದ್ದಾನೆ. ಪ್ರಕೃತ ಜಗತ್ತು ಬ್ರಹ್ಮನಂತೆ ಸತ್ ಆಗಿದ್ದರೆ ಜಗತ್ತಿಗೆ ಬಾಧ ಬರಬಾರದಿತ್ತು. ಆದರೆ ''ನೇಹ ನಾನಾಽಸ್ತಿ ಕಿಂಚನ'' ಇತ್ಯಾದಿಶ್ರುತಿಗಳಿಂದ ಜಗತ್ತಿಗೆ ಬಾಧ ಬರುವುದರಿಂದ ಜಗತ್ತು ಸತ್ ಅಲ್ಲ. ಅರ್ಥಾತ್ ಸದ್ವಿಲಕ್ಷಣವಾಗಿದೆ. ಅದರಂತೆ - ''**ಅಸಚ್ಚೇನ್ನ ಪ್ರತೀಯೇತ** ''

ಯಾವುದು ಅಸತ್ ಆಗಿರುತ್ತದೆ ಅದಕ್ಕೆ ಪ್ರತೀತಿ ಕೂಡುವುದಿಲ್ಲ. ಉದಾ -

ನರವಿಷಾಣ. ನರವಿಷಾಣ ಅಸತ್ ಆದ್ದರಿಂದ ಅದಕ್ಕೆ ಪ್ರತೀತಿ ಇಲ್ಲ. ಪ್ರಕೃತ ಜಗತ್ತು ನರವಿಷಾಣದಂತೆ ಅಸತ್ ಆಗಿದ್ದರೆ ಜಗತ್ತಿನ ಪ್ರತೀತಿ ಬರಬಾರದಿತ್ತು. ಆದರೆ 'ಘಟಃ' 'ಪಟಃ' ಇತ್ಯಾದಿಯಾಗಿ ಜಗತ್ತು ಪ್ರತೀತವಾಗುತ್ತಿರುವುದರಿಂದ ಜಗತ್ತು ನರವಿಷಾಣದಂತೆ ಅಸತ್ ಅಲ್ಲ. ಅರ್ಥಾತ್ ಅಸದ್ವಿಲಕ್ಷಣವಾಗಿದೆ.

ಹೀಗೆ ಬಾಧ-ಪ್ರತೀತಿ ಉಭಯಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದಸದ್ವಿಲಕ್ಷಣತ್ವವು ಅರ್ಥಾಪತ್ತಿಯಿಂದ ಸಿದ್ಧವಾಗುತ್ತದೆ ಎಂದು ಪರರು ಅಭಿಪ್ರಾಯಪಡುತ್ತಾರೆ.

ಆಚಾರ್ಯರು ಅದನ್ನು ನಿರಾಕರಿಸುತ್ತಾರೆ -

**ನ ಚಾರ್ಥಾಪತ್ತ್ಯಾ ಅನಿರ್ವಚನೀಯತ್ವಸಿದ್ಧಿಃ ।**

ಜಗತ್ತಿಗೆ ಬಾಧ ಬರುತ್ತದೆಯಾದ್ದರಿಂದ ಜಗತ್ತು ಸತ್ ಅಲ್ಲ, ಸದ್ವಿಲಕ್ಷಣ ಎಂದು ಸಾಧಿಸುವುದಾದರೆ, 'ಅನ್ಯಥಾವಿಜ್ಞಾತಸ್ಯ ಸಮ್ಯಗ್ವಿಜ್ಞಾನಗೋಚರತ್ವ' ರೂಪವಾದ ಬಾಧವು ಬ್ರಹ್ಮನಿಗೂ ಬರುವುದರಿಂದ (ಬ್ರಹ್ಮನು ಜ್ಞಾನಚಿಕೀರ್ಷಾ-ಕೃತಿಗಳುಳ್ಳವನೆಂದು ಮೊದಲು ತಪ್ಪಾಗಿ ತಿಳಿದಿರುತ್ತೇವೆ. ಅನಂತರ ವೇದಾಂತ-ವಾಕ್ಯಗಳಿಂದ ನಿರ್ಗುಣನಾಗಿದ್ದಾನೆಂದು ಸರಿಯಾಗಿ ತಿಳಿದುಕೊಳ್ಳುತ್ತೇವೆ-ಯಾದ್ದರಿಂದ) ಬ್ರಹ್ಮನಿಗೂ ಸದ್ವೈಲಕ್ಷಣ್ಯ ಹೇಳಬೇಕಾದ ಅತಿಪ್ರಸಂಗ ಬರುತ್ತದೆ. ಆ ಕಾರಣ 'ಸಚ್ಚೇನ್ನ ಬಾಧ್ಯೇತ' ಎಂಬುದಾಗಿ ವ್ಯಾಪ್ತಿ ಹೇಳಲು ಬರುವುದಿಲ್ಲ.

ಮತ್ತು ನರವಿಷಾಣಾದಿಪದಶ್ರವಣದಿಂದ ಅಸತ್ ಆದ ನರವಿಷಾಣಾದಿಗಳ ಪ್ರತೀತಿಯೂ ಬರುವುದರಿಂದ 'ಅಸಚ್ಚೇನ್ನ ಪ್ರತೀಯೇತ' ಎಂಬುದಾಗಿ ವ್ಯಾಪ್ತಿ ಹೇಳಲೂ ಬರುವುದಿಲ್ಲ.

**ಅಸತ್‌ಗೆ ಅಪರೋಕ್ಷಪ್ರತೀತಿವಿಷಯತ್ವಸಮರ್ಥನೆ**

ಅಸತ್‌ಗೆ ಪರೋಕ್ಷಪ್ರತೀತಿ ಒಪ್ಪಬಹುದಾದರೂ ಅಪರೋಕ್ಷಪ್ರತೀತಿ ಒಪ್ಪಲು ಸಾಧ್ಯವಿಲ್ಲ ಎಂಬ ಆಕ್ಷೇಪವೂ ಸರಿಯಲ್ಲ. ವಸ್ತುತಃ ಪ್ರಾತಿಭಾಸಿಕವಾದ ಶುಕ್ತಿರಜತದಲ್ಲಿ ಪ್ರಾತಿಭಾಸಿಕವೈಲಕ್ಷಣ್ಯ ಏನು ಭ್ರಾಂತಿಕಾಲದಲ್ಲಿ ತೋರುತ್ತದೆ ಅದು ಅಸತ್. ಅಸತ್‌ಗೆ ಅಪರೋಕ್ಷಪ್ರತೀತಿ ಒಪ್ಪದಿದ್ದರೆ, ಪ್ರಾತಿಭಾಸಿಕವೈಲಕ್ಷಣ್ಯ-ವಿಷಯಕಾಪರೋಕ್ಷಪ್ರತೀತಿಯೂ ಉಪಪನ್ನವಾಗದೇ ಹೋಗಬೇಕಾಗುತ್ತದೆ.

ಆದ್ದರಿಂದ ಅಸತ್‌ಗೆ ಪರೋಕ್ಷಪ್ರತೀತಿ-ಅಪರೋಕ್ಷಪ್ರತೀತಿ ಎರಡನ್ನೂ ಒಪ್ಪಲೇಬೇಕು. ಹಾಗಾಗಿ 'ಸಚ್ಚೇನ್ನ ಬಾಧ್ಯೇತ' 'ಅಸಚ್ಚೇನ್ನ ಪ್ರತೀಯೇತ' ಎಂಬ ವ್ಯಾಪ್ತಿಗಳೇ ಇಲ್ಲವಾದ್ದರಿಂದ ಬಾಧ-ಪ್ರತೀತಿ ಉಭಯಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದಸದ್ವಿಲಕ್ಷಣತ್ವವನ್ನು ಹೇಳಲು ಬರುವುದಿಲ್ಲ. ಆದ್ದರಿಂದ ಅನಿರ್ವಚನೀಯವಸ್ತುವಿಷಯದಲ್ಲಿ ಅರ್ಥಾಪತ್ತಿಯೂ ಪ್ರಮಾಣವಾಗುವುದಿಲ್ಲ.

ಅಂದಮೇಲೆ (ಅಪ್ರಾಮಾಣಿಕವಾದ್ದರಿಂದ ಅನಿರ್ವಚನೀಯವಸ್ತುವೇ ಅಪ್ರಸಿದ್ಧವಾದ್ದರಿಂದ, ಅನಿರ್ವಚನೀಯತ್ವಕೋಟಿಯೇ ಇಲ್ಲದ ಕಾರಣ) ಅನಿರ್ವಚನೀಯವಾದ ಭೇದ ಸಾಧ್ಯವೋ ? ಪಾರಮಾರ್ಥಿಕವಾದ ಭೇದ ಸಾಧ್ಯವೋ ? ಎಂಬ ನಿಮ್ಮ ಪ್ರಶ್ನೆಯೇ ಕೂಡುವುದಿಲ್ಲ ಎಂದು ಆಚಾರ್ಯರು ಉಪಪಾದಿಸಿ ಉಪಸಂಹರಿಸುತ್ತಾರೆ.

## ಮುಕ್ತತ್ವ ಹೇತುವಿನ ಬಗ್ಗೆ ಪರರ ಆಕ್ಷೇಪ

ಆದರೂ ಸಹ 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬ ಈ ಅನುಮಾನದಿಂದ ಮುಕ್ತಿಯಲ್ಲಿ ಭೇದವು ಸಿದ್ಧಿಸುವುದಿಲ್ಲ. ಯಾಕೆಂದರೆ - ಈ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ.

ಅದು ಹೇಗೆಂದರೆ :- ಪರಬ್ರಹ್ಮನು ಒಬ್ಬನೇ ಪಾರಮಾರ್ಥಿಕಸತ್ ಆಗಿದ್ದಾನೆ. ಇಂತಹ ಪರಬ್ರಹ್ಮನಿಗೆ ಅನಾದಿಯಾದ ಭಾವರೂಪವಾದ ಅವಿದ್ಯೆಯು ಆವರಕವಾಗಿದೆ. ಬ್ರಹ್ಮನೇ ಅವಿದ್ಯಾಪ್ರತಿಬಿಂಬಿತನಾದಾಗ ಅಜ್ಞಾನಿಗಳಿಂದ ಜೀವ ಎಂಬುದಾಗಿ ಕರೆಯಲ್ಪಡುತ್ತಾನೆ (ವ್ಯವಹರಿಸಲ್ಪಡುತ್ತಾನೆ), ಮಾಯಾಪ್ರತಿಬಿಂಬಿತನಾದಾಗ ಈಶ್ವರ ಎಂಬುದಾಗಿ ಕರೆಯಲ್ಪಡುತ್ತಾನೆ (ವ್ಯವಹರಿಸಲ್ಪಡುತ್ತಾನೆ). ಬ್ರಹ್ಮನಿಂದ ಭಿನ್ನವಾಗಿ ಜೀವ-ಈಶ್ವರ ಇಲ್ಲ ಎಂದು ಭಾವ. ಇನ್ನು ಉಳಿದ ಜಡಪ್ರಪಂಚವಾದರೂ ಸ್ವರೂಪದಿಂದಲೇ ಅವಿದ್ಯೋಪಾದಾನಕವಾಗಿದೆ, ಬ್ರಹ್ಮವಿವರ್ತವಾಗಿದೆ=ಬ್ರಹ್ಮನಲ್ಲಿ ಆರೋಪಿತವಾಗಿದೆ. ಶುಕ್ತಿಯಲ್ಲಿ ರಜತವು ಆರೋಪಿತವಾದಂತೆ (ಶುಕ್ತಿಯಿಂದ ಭಿನ್ನವಾಗಿ ರಜತವು ಹೇಗೆ ಇಲ್ಲವೋ ಅದರಂತೆ) ಬ್ರಹ್ಮನಲ್ಲಿ ಜಡಪ್ರಪಂಚವು ಆರೋಪಿತವಾಗಿದೆ (ಬ್ರಹ್ಮನಿಂದ ಭಿನ್ನವಾಗಿ ಜಡಪ್ರಪಂಚವು ಇಲ್ಲ) ಎಂದು ಭಾವ.

ಈ ವಿಷಯದಲ್ಲಿ (ಜಡಪ್ರಪಂಚವು ಬ್ರಹ್ಮನಲ್ಲಿ ಆರೋಪಿತವಾಗಿದೆ, ಮಿಥ್ಯೆಯಾಗಿದೆ ಎಂಬ ವಿಷಯದಲ್ಲಿ) '**ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್**' ಎಂಬ ಅನುಮಾನ ಹಾಗೂ "**ವಾಚಾರಂಭಣಂ ವಿಕಾರೋ ನಾಮಧೇಯಮ್**" ಇತ್ಯಾದಿ ಶ್ರುತಿಗಳು ಪ್ರಮಾಣವಾಗಿವೆ.

ಬ್ರಹ್ಮನಿಂದ ಭಿನ್ನರಾಗಿ ಜೀವ-ಈಶ್ವರರಿಲ್ಲ (ಜೀವ-ಈಶ್ವರರು ಬ್ರಹ್ಮನಿಂದ ಅಭಿನ್ನರಾಗಿದ್ದಾರೆ) ಎಂಬ ವಿಷಯದಲ್ಲಿ "**ವಿಮತಾಃ ಆತ್ಮಾನಃ, ಪರಮಾತ್ಮನಃ ತತ್ವತಃ ನ ಭಿದ್ಯಂತೇ, ಆತ್ಮತ್ವಾತ್, ಪರಮಾತ್ಮವತ್ ।**" ಎಂಬ ಅನುಮಾನ ಹಾಗೂ "**ನಾನ್ಯೋಽತೋಽಸ್ತಿ ದ್ರಷ್ಟಾ**" ಇತ್ಯಾದಿ ಶ್ರುತಿಗಳು ಪ್ರಮಾಣವಾಗಿವೆ.

ಬ್ರಹ್ಮಸ್ವರೂಪಕ್ಕೆ ಆವರಕವಾದ ಅದೇ ಅವಿದ್ಯೆಯೇ ಸಂಸಾರಕ್ಕೆ ಉಪಾದಾನ-ಕಾರಣವಾಗಿದೆ. '**ತರತಿ ಶೋಕಮಾತ್ಮವಿತ್**' ಇತ್ಯಾದಿ ಶ್ರುತಿಗಳು ಹೇಳುವಂತೆ ಆತ್ಮಜ್ಞಾನದಿಂದ ಸಂಸಾರಕ್ಕೆ ಉಪಾದಾನಕಾರಣವಾದ ಅವಿದ್ಯೆಯು ನಾಶ-ವಾಗುತ್ತದೆ. ಉಪಾದಾನಕಾರಣ ನಾಶವಾದರೆ ಕಾರ್ಯವು ಸ್ವಯಂ ನಷ್ಟವಾಗುವುದರಿಂದ, ಆತ್ಮಜ್ಞಾನದಿಂದ ಅವಿದ್ಯಾ ನಾಶವಾದರೆ ಅವಿದ್ಯೋ-ಪಾದಾನಕವಾದ ಸಂಸಾರವು ಸ್ವಯಂನಾಶವಾಗುತ್ತದೆ. ಹೀಗೆ ಆತ್ಮಜ್ಞಾನವು ಅಜ್ಞಾನನಿವೃತ್ತಿದ್ವಾರಾ ಸಂಸಾರನಿವರ್ತಕವಾಗುತ್ತದೆ. ಅರ್ಥಾತ್ ಸಂಸಾರ-ಬಂಧವು ಅವಿದ್ಯೋಪಾದಾನಕವಾಗಿ ಮಿಥ್ಯೆಯಾಗಿದೆ. ಬಂಧವೇ ಸತ್ಯವಾಗಿಲ್ಲ ಎಂದಮೇಲೆ ಸಂಸಾರಮುಕ್ತ ಹೇಗೆ ಇರಲು ಸಾಧ್ಯ ? ಮುಕ್ತಿಯೇ ಕೂಡುವುದಿಲ್ಲ ಎಂದಮೇಲೆ ಮುಕ್ತಿಯಲ್ಲಿ ಭೇದವಾದರೂ ಹೇಗೆ ಇರಲು ಸಾಧ್ಯ ?

ಅಂದಮೇಲೆ (ಸಂಸಾರಬಂಧವೇ ಸತ್ ಆಗದ ಕಾರಣ ಮುಕ್ತಿಯೇ ಅನುಪಪನ್ನವಾದ್ದರಿಂದ) ಸಂಸಾರಬಂಧನಿವೃತ್ತಿರೂಪವಾದ ಮುಕ್ತತ್ವವೇ (ಹೇತುವೇ) ಸತ್ಯವಾಗಿಲ್ಲ = ಅಸಿದ್ಧವಾಗಿದೆ. ಮುಕ್ತಿಯಲ್ಲಿ ಭೇದವೂ ಇನ್ನೂ ಅಸಿದ್ಧವಾಗಿದೆ. ಹೀಗಾಗಿ ನಿಮ್ಮ ಅನುಮಾನಕ್ಕೆ ಸ್ವರೂಪಾಸಿದ್ಧಿದೋಷ ಬರುತ್ತದೆ.

ಇದು ಪರರು ಮಾಡುವ ಆಕ್ಷೇಪ.

ಈ ಆಕ್ಷೇಪವನ್ನು ಆಚಾರ್ಯರು ಸ್ಪಷ್ಟವಾಗಿ ನಿರಾಕರಿಸುತ್ತಾರೆ. ಇಲ್ಲಿ ಎರಡು ಅಂಶಗಳಿವೆ. ೧) ಜಡವಾದ ಜಗತ್ತು ಮಿಥ್ಯೆಯಾಗಿದೆ. ೨) ಜೀವರು ಬ್ರಹ್ಮನಿಂದ

ಅಭಿನ್ನರಾಗಿದ್ದಾರೆ. ಇವುಗಳಲ್ಲಿ ಮೊದಲಿಗೆ 'ಜಡವಾದ ಜಗತ್ತು ಮಿಥ್ಯೆಯಾಗಿದೆ' ಎಂಬ ಮೊದಲನೇ ಅಂಶವನ್ನು ಆಚಾರ್ಯರು ನಿರಾಕರಿಸುತ್ತಾರೆ.

## ದೃಶ್ಯತ್ವಹೇತುನಿರಾಕರಣೆ

ಜಡವಾದ ಜಗತ್ತು ಮಿಥ್ಯೆಯಾಗಿದೆ ಎಂದು ಹೇಳುವುದು ಸರಿಯಲ್ಲ. ಆ ವಿಷಯದಲ್ಲಿ ಯಾವುದೇ ಪ್ರಮಾಣ ಇಲ್ಲ. ಪ್ರಮಾಣ ಇಲ್ಲ ಎಂದು ಏಕೆ ಹೇಳುತ್ತೀರಿ ? '**ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್**' ಎಂಬ ಅನುಮಾನವನ್ನು ಪ್ರಮಾಣವಾಗಿ ಉದಾಹರಿಸಿದ್ದೇವೆ-ಯಲ್ಲ ? ಎಂದರೆ, ಅದು ಸರಿಯಲ್ಲ. ಕಾರಣ ವ್ಯಭಿಚಾರದೋಷ ಬರುವುದರಿಂದ ನಿಮ್ಮ ಈ ಅನುಮಾನವೇ (ಮೊದಲನೇ ದೃಶ್ಯತ್ವಹೇತು) ನಿರ್ದುಷ್ಟವಾಗಿಲ್ಲ ಎಂದು ತೋರಿಸುತ್ತಾನೆ ಆಚಾರ್ಯರು -

**ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕತಾ ಚ ।**

ಆತ್ಮನು ಸತ್ಯನಾದ್ದರಿಂದ ಮಿಥ್ಯಾತ್ವಸಾಧ್ಯ ಇಲ್ಲ. ಆದರೆ ವೇದಾಂತವಾಕ್ಯಜನಿತವಾದ ವಿಜ್ಞಾನದಲ್ಲಿ ಆತ್ಮನು ವಿಷಯನಾಗುತ್ತಾನಾದ್ದರಿಂದ, ದೃಶ್ಯತ್ವ ಬರುತ್ತದೆ. ಹೀಗಾಗಿ ದೃಶ್ಯತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ ಬರುತ್ತದೆ.

## ಆತ್ಮನಿಗೆ ದೃಶ್ಯತ್ವಸಮರ್ಥನೆ

'**ಆತ್ಮಾ ವಾ ಅರೇ ದ್ರಷ್ಟವ್ಯಃ**' '**ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ**' ಇತ್ಯಾದಿ ಶ್ರುತಿಗಳೂ ಸ್ಪಷ್ಟವಾಗಿ ಆತ್ಮನಿಗೆ ದೃಶ್ಯತ್ವವನ್ನು ಪ್ರತಿಪಾದಿಸುತ್ತಿವೆ-ಯಾದ್ದರಿಂದ ಆತ್ಮನಿಗೆ ದೃಶ್ಯತ್ವವನ್ನು ಒಪ್ಪಲೇಬೇಕು.

ಮತ್ತು, ಒಂದುವೇಳೆ ಆತ್ಮನಿಗೆ ದೃಶ್ಯತ್ವವನ್ನು ಒಪ್ಪದೇಹೋದರೆ ಆಗ ವೇದಾಂತವಾಕ್ಯಜನಿತವಾದ ವಿಜ್ಞಾನವು ಆತ್ಮಜ್ಞಾನ ಆಗದೇಹೋಗಬೇಕಾಗುತ್ತದೆ.

ಹೌದು, ಆತ್ಮಜ್ಞಾನ ಒಪ್ಪುವುದೇ ಬೇಡ, ಏನು ಬಾಧಕ ? ಎಂದು ಕೇಳಿದರೆ ಆಚಾರ್ಯರು (ಆತ್ಮಜ್ಞಾನ ಒಪ್ಪದಿದ್ದರೆ) ಬಾಧಕ ತೋರಿಸುತ್ತಾರೆ -

**ತದಜ್ಞಾನನಿವೃತ್ತಿಶ್ಚ ತೇನ ಭವತಿ ।**

ಆ ಆ ವಸ್ತುವಿನ ಜ್ಞಾನದಿಂದ ಆ ಆ ವಸ್ತುವಿನ ಅಜ್ಞಾನ ನಿವೃತ್ತವಾಗುವುದು ಕಂಡಿದೆಯಾದ್ದರಿಂದ, ಆತ್ಮಜ್ಞಾನದಿಂದಲೇ ಆತ್ಮಾಜ್ಞಾನನಿವೃತ್ತಿಯಾಗಬೇಕು. ವೇದಾಂತಗಳು ಹೊರಟದ್ದೇ (ಆತ್ಮಜ್ಞಾನ ಮಾಡಿಸುವ ಮೂಲಕ) ಆತ್ಮಾಜ್ಞಾನನಿವೃತ್ತಿ ಮಾಡುವುದಕ್ಕಾಗಿ. ಪ್ರಕೃತ ಆತ್ಮಜ್ಞಾನವನ್ನೇ ಒಪ್ಪದಿದ್ದರೆ ಆತ್ಮಾಜ್ಞಾನನಿವೃತ್ತಿಯೇ ಆಗದೇಹೋಗಬೇಕಾಗುತ್ತದೆ. ವೇದಾಂತಗಳು ವ್ಯರ್ಥವಾಗಬೇಕಾಗುತ್ತದೆ.

ಹಾಗಾಗಿ ಆತ್ಮಾಜ್ಞಾನನಿವೃತ್ತಿಯನ್ನು ಕೂಡಿಸುವುದಕ್ಕಾಗಿ ಆತ್ಮಜ್ಞಾನವನ್ನು ಒಪ್ಪಲೇಬೇಕು. ಆತ್ಮಜ್ಞಾನ ಒಪ್ಪಿದರೆ ಆತ್ಮನಿಗೆ ದೃಶ್ಯತ್ವ ಹೇಳಿದಂತಾಗುತ್ತದೆ. ದೃಶ್ಯತ್ವಾನುಮಾನಕ್ಕೆ ಆತ್ಮನಲ್ಲಿ ವ್ಯಭಿಚಾರವು ಸುಸ್ಥವಾಗುತ್ತದೆ. ಆದ್ದರಿಂದ ವ್ಯಭಿಚಾರದೋಷ ಬರುವುದರಿಂದ, ಜಗತ್ತಿನ ಮಿಥ್ಯಾತ್ವವಿಷಯದಲ್ಲಿ ದೃಶ್ಯತ್ವಾನುಮಾನವು ಪ್ರಮಾಣವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

## ಜಡತ್ವಹೇತುನಿರಾಕರಣೆ

'ಜಡವಾದ ಜಗತ್ತು ಮಿಥ್ಯೆಯಾಗಿದೆ' ಎಂಬ ವಿಷಯದಲ್ಲಿ ದೃಶ್ಯತ್ವಹೇತುವನ್ನು ನಿರಾಕರಿಸಿ, ಪ್ರಕೃತ ಜಡತ್ವಹೇತುವನ್ನೂ ಆಚಾರ್ಯರು ನಿರಾಕರಿಸುತ್ತಾರೆ -

**ಜಡತ್ವಂ ಚಾಪ್ರಮಾತೃತ್ವಮೇವ । ನ ಚ ಪ್ರಮಾತೃತ್ವಮಾತ್ಮನಸ್ಪೈರಂಗೀಕ್ರಿಯತೇ । ಅತಸ್ತದಪ್ಯನೈಕಾಂತಿಕಮೇವ ।**

ಜಡತ್ವ ಎಂದರೆ ಅಪ್ರಮಾತೃತ್ವ (ಪ್ರಮಾತೃತ್ವಾಭಾವ) ಎಂದು ಹೇಳಬೇಕು. ಪ್ರಮಾತೃತ್ವವನ್ನು ಒಪ್ಪಬೇಕಾದರೆ ಪ್ರಮಾಣಪ್ರಮೇಯಗಳ ಸಿದ್ಧಿ ಅನಿವಾರ್ಯ-ವಾಗಿದೆ. ಆತ್ಮನಿಗೆ ಪ್ರಮಾತೃತ್ವವನ್ನು ಅಂಗೀಕರಿಸಿದರೆ ಪ್ರಮಾಣಪ್ರಮೇಯಗಳನ್ನು ಒಪ್ಪಬೇಕಾದ ಪ್ರಸಂಗ ಇರುವುದರಿಂದ ಪರರು ಆತ್ಮನಿಗೆ ಪ್ರಮಾತೃತ್ವವನ್ನು ಒಪ್ಪುವುದಿಲ್ಲ. ಹಾಗಾಗಿ ಆತ್ಮನಲ್ಲಿ ಮಿಥ್ಯಾತ್ವಸಾಧ್ಯ ಇಲ್ಲ. ಅಪ್ರಮಾತೃತ್ವ (ಪ್ರಮಾತೃತ್ವಾಭಾವ) ಹೇತು ಬರುತ್ತದೆಯಾದ್ದರಿಂದ, ದೃಶ್ಯತ್ವಹೇತುವಿನಂತೆ ಜಡತ್ವಹೇತುವಿಗೂ ಆತ್ಮನಲ್ಲಿ ವ್ಯಭಿಚಾರ ಬರುತ್ತದೆ.

ಜಡತ್ವ ಎಂದರೆ ಅಪ್ರಮಾತೃತ್ವ ಎಂದು ನಾವು ಹೇಳುವುದಿಲ್ಲ. ಹಾಗೆ ಹೇಳಿದರೆ ಆತ್ಮನಲ್ಲಿ ವ್ಯಭಿಚಾರ ಬರುತ್ತಿತ್ತು . ಕಿಂತು ಜಡತ್ವ ಎಂದರೆ ಅಪ್ರಕಾಶತ್ವ (ಪ್ರಕಾಶರೂಪತ್ವಾಭಾವ) ಎಂದು ಹೇಳುತ್ತೇವೆ. ಆತ್ಮನು ಪ್ರಕಾಶರೂಪನಾಗಿರುವ

ಕಾರಣ ಆತ್ಮನಲ್ಲಿ ಅಪ್ರಕಾಶತ್ವರೂಪವಾದ (ಪ್ರಕಾಶರೂಪತ್ವಾಭಾವ ಎಂಬ) ಜಡತ್ವ ಬರುವುದಿಲ್ಲ, ವ್ಯಭಿಚಾರ ಬರುವುದಿಲ್ಲ ಎಂದು ಪರರು ಹೇಳಿದರೆ, ಅದನ್ನೂ ಆಚಾರ್ಯರು ನಿರಾಕರಿಸುತ್ತಾರೆ -

**ಯದಿ ಜಡತ್ವಂ ನಾಮಾಪ್ರಕಾಶತ್ವಂ ತದಾಽಪ್ಯಾತ್ಮನಃ ಸ್ವವಿಷಯ-ಪ್ರಕಾಶತ್ವಾಭಾವಾತ್ ಪರವಿಷಯಪ್ರಕಾಶತ್ವಾಭಾವಾಚ್ಚಾನೈಕಾಂತಿಕಮೇವ ।**

ಆತ್ಮನು ಪ್ರಕಾಶರೂಪನಾಗಿದ್ದಾನೆ ಎಂದು ಹೇಳಲು ಬರುತ್ತಿದ್ದರೆ ಆಗ ಆತ್ಮನಲ್ಲಿ (ಪ್ರಕಾಶತ್ವವೇ ಇದೆ) ಅಪ್ರಕಾಶತ್ವರೂಪಜಡತ್ವ ಇಲ್ಲ, ವ್ಯಭಿಚಾರ ಬರುವುದಿಲ್ಲ ಎಂಬುದಾಗಿ ಹೇಳಬಹುದಿತ್ತು. ಆದರೆ ಆತ್ಮನು ಪ್ರಕಾಶ-ರೂಪನಾಗಿದ್ದಾನೆ ಎಂದು ಹೇಳಲು ಬರುವುದಿಲ್ಲ.

ಯಾಕೆಂದರೆ- ಆತ್ಮನು ಪ್ರಕಾಶರೂಪನಾಗಿದ್ದಾನೆ ಎನ್ನುವುದಾದರೆ, ಆತ್ಮ-ಸ್ವರೂಪವಾದ ಆ ಪ್ರಕಾಶವು (ಜ್ಞಾನವು) ಸವಿಷಯವೋ ? ನಿರ್ವಿಷಯವೋ? ಸವಿಷಯ ಎಂದರೆ, ಸ್ವವಿಷಯವೋ ? ಪರವಿಷಯವೋ ?

ಕರ್ತೃಕರ್ಮಭಾವವಿರೋಧ ಬರುವ ಕಾರಣ (ತಾನೇ ಜ್ಞಾನ, ತಾನೇ ವಿಷಯ ಎಂದು ಹೇಳಲು ಬಾರದ ಕಾರಣ) ಸ್ವವಿಷಯ ಎಂದು ಹೇಳಲು ಬರುವುದಿಲ್ಲ. ಪರನನ್ನು ಪರರೇ ಅಂಗೀಕರಿಸಿಲ್ಲವಾದ್ದರಿಂದ ಪರವಿಷಯ ಎಂದು ಹೇಳಲೂ ಬರುವುದಿಲ್ಲ. ಇನ್ನು ನಿರ್ವಿಷಯ ಎಂದು ಹೇಳಿದರೆ -

**ವಿಷಯವರ್ಜಿತಃ ಪ್ರಕಾಶ ಏವ ನ ಭವತಿ ಘಟವತ್ ।**

ಘಟವು ವಿಷಯಶೂನ್ಯವಾದ್ದರಿಂದ ಹೇಗೆ ಪ್ರಕಾಶರೂಪವಾಗಿಲ್ಲವೋ ಅದರಂತೆ ಆತ್ಮಸ್ವರೂಪವಾದ ಪ್ರಕಾಶವು ವಿಷಯಶೂನ್ಯ ಎನ್ನುವುದಾದರೆ ಪ್ರಕಾಶವೇ ಆಗದೇ ಹೋಗಬೇಕಾಗುತ್ತದೆ. ಹಾಗಾಗಿ ನಿರ್ವಿಷಯ ಎನ್ನುವುದೂ ಸರಿಯಲ್ಲ. ಅಂದಮೇಲೆ ಆತ್ಮನನ್ನು ಪ್ರಕಾಶರೂಪ ಎಂದು ಅಂಗೀಕರಿಸಲು ಬರುವುದಿಲ್ಲವಾದ್ದರಿಂದ, ಅಪ್ರಕಾಶತ್ವರೂಪಜಡತ್ವವು ಆತ್ಮನಲ್ಲಿ ಬಂದೇ ಬರುತ್ತದೆಯಾದ್ದರಿಂದ ಜಡತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ ಸುಸ್ಥವಾಗುತ್ತದೆ. ಆದ್ದರಿಂದ ಜಡತ್ವಹೇತುವೂ ಮಿಥ್ಯಾತ್ವಸಾಧಕವಾಗುವುದಿಲ್ಲ.

## ಪರಿಚ್ಛಿನ್ನತ್ವಹೇತುನಿರಾಕರಣೆ

'ಜಡವಾದ ಜಗತ್ತು ಮಿಥ್ಯೆಯಾಗಿದೆ' ಎಂಬ ವಿಷಯದಲ್ಲಿ ದೃಶ್ಯತ್ವ-ಜಡತ್ವಹೇತುಗಳನ್ನು ನಿರಾಕರಿಸಿ, ಪ್ರಕೃತ ಮೂರನೆಯ ಪರಿಚ್ಛಿನ್ನತ್ವಹೇತುವನ್ನೂ ಆಚಾರ್ಯರು ನಿರಾಕರಿಸುತ್ತಾರೆ -

ಪರಿಚ್ಛಿನ್ನತ್ವ ಎಂದರೆ ದೇಶತಃ ಪರಿಚ್ಛಿನ್ನತ್ವ ವಿವಕ್ಷಿತವೋ ? ಕಾಲತಃ ಪರಿಚ್ಛಿನ್ನತ್ವ ವಿವಕ್ಷಿತವೋ ? ವಸ್ತುತಃ ಪರಿಚ್ಛಿನ್ನತ್ವ ವಿವಕ್ಷಿತವೋ ?

**ದೇಶತಃ ಕಾಲತಃ ಪರಿಚ್ಛಿನ್ನತ್ವಂ ಪ್ರಕೃತಿಕಾಲಾದಿಷ್ವಭಾವಾದ್ಭಾಗಾಸಿದ್ಧಮ್ ।**

ದೇಶತಃ ಕಾಲತಃ ಪರಿಚ್ಛಿನ್ನತ್ವಗಳನ್ನು ವಿವಕ್ಷಿಸುವುದು ಸರಿಯಲ್ಲ. ಕಾರಣ - ದೇಶತಃ ಪರಿಚ್ಛಿನ್ನತ್ವ ಎಂದರೆ ಸೀಮಿತವಾದ ದೇಶದಲ್ಲಿ ಇರುವುದು. ಕಾಲತಃ ಪರಿಚ್ಛಿನ್ನತ್ವ ಎಂದರೆ ಸೀಮಿತವಾದ ಕಾಲದಲ್ಲಿ ಇರುವುದು. ಪ್ರಕೃತಿ-ಕಾಲ-ಆಕಾಶಾದಿಗಳು ಪಕ್ಷದ ಏಕದೇಶವಾಗಿವೆ. ಅವು ವ್ಯಾಪ್ತವಾಗಿವೆಯಾದ್ದರಿಂದ ದೇಶತಃ ಪರಿಚ್ಛಿನ್ನವಾಗಿಲ್ಲ. ಮತ್ತು ಅನಾದಿನಿತ್ಯವಾಗಿವೆಯಾದ್ದರಿಂದ ಕಾಲತಃ ಪರಿಚ್ಛಿನ್ನವಾಗಿಲ್ಲ. ಹಾಗಾಗಿ ಪ್ರಕೃತಿಕಾಲಾಕಾಶಾದಿಗಳಲ್ಲಿ ದೇಶತಃ ಕಾಲತಃ ಪರಿಚ್ಛಿನ್ನತ್ವಗಳು ಬಾರದ ಕಾರಣ ಭಾಗಾಸಿದ್ಧಿದೋಷ ಬರುತ್ತದೆ. ಆದ್ದರಿಂದ ದೇಶತಃ ಕಾಲತಃ ಪರಿಚ್ಛಿನ್ನತ್ವಗಳನ್ನು ವಿವಕ್ಷಿಸುವುದು ಸರಿಯಲ್ಲ.

ಇನ್ನು ವಸ್ತುತಃ ಪರಿಚ್ಛಿನ್ನತ್ವ ಹೇಳಬೇಕು. ವಸ್ತುತಃ ಪರಿಚ್ಛಿನ್ನತ್ವ ಎಂದರೆ ವಸ್ತ್ವಂತರದಿಂದ ಭೇದ ಎಂದರ್ಥ. ಆತ್ಮನಿಗೆ ನಾವು ವಸ್ತ್ವಂತರದಿಂದ (ಜಗತ್ತಿನಿಂದ) ಭೇದವನ್ನು ಅಂಗೀಕರಿಸುತ್ತೇವೆಯಾದ್ದರಿಂದ, ಆತ್ಮನಲ್ಲಿ ಮಿಥ್ಯಾತ್ವಸಾಧ್ಯ ಇಲ್ಲ, ವಸ್ತುತಃ ಪರಿಚ್ಛಿನ್ನತ್ವಹೇತು ಬಂತು, ಹಾಗಾಗಿ ಆತ್ಮನಲ್ಲಿ ವ್ಯಭಿಚಾರ ಬರುತ್ತದೆ. ಆದ್ದರಿಂದ ಪರಿಚ್ಛಿನ್ನತ್ವಹೇತುವೂ ಮಿಥ್ಯಾತ್ವಸಾಧಕ-ವಾಗುವುದಿಲ್ಲ.

ಅಂದಮೇಲೆ 'ಜಡವಾದ ಜಗತ್ತು ಮಿಥ್ಯೆಯಾಗಿದೆ' ಎಂಬ ವಿಷಯದಲ್ಲಿ ನೀವು ಉದಾಹರಿಸಿದ -

**'ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್'**

ಎಂಬ ದೃಶ್ಯತ್ವ-ಜಡತ್ವ-ಪರಿಚ್ಛಿನ್ನತ್ವ ಮೂರು ಹೇತುಗಳೂ ವ್ಯಭಿಚಾರಾದಿ ದೋಷ ಉಳ್ಳದ್ದಾದ್ದರಿಂದ ಜಗತ್ತಿಗೆ ಮಿಥ್ಯಾತ್ವ ಸಿದ್ಧವಾಗುವುದಿಲ್ಲ. ಆದ್ದರಿಂದ

'ಜಡವಾದ ಜಗತ್ತು ಮಿಥ್ಯೆಯಾಗಿದೆ' ಎಂಬ ನಿಮ್ಮ ವಾದ ಸಮಂಜಸವಾದದ್ದಲ್ಲ ಎಂಬುದಾಗಿ ಸ್ಫುಟವಾಗಿ ಸಿದ್ಧವಾಗುತ್ತದೆ ಎನ್ನುತ್ತಾರೆ ಆಚಾರ್ಯರು.

## ಜೀವ-ಬ್ರಹ್ಮರಲ್ಲಿ ಐಕ್ಯನಿರಾಕರಣೆ

ಇನ್ನು ಬ್ರಹ್ಮನಿಂದ ಭಿನ್ನರಾಗಿ ಜೀವ-ಈಶ್ವರರಿಲ್ಲ (ಜೀವ-ಈಶ್ವರರು ಬ್ರಹ್ಮನಿಂದ ಅಭಿನ್ನರಾಗಿದ್ದಾರೆ) ಎಂಬ ವಿಷಯದಲ್ಲಿ ಉದಾಹರಿಸಿದ ''**ವಿಮತಾಃ ಆತ್ಮಾನಃ, ಪರಮಾತ್ಮನಃ ತತ್ವತಃ ನ ಭಿದ್ಯಂತೇ, ಆತ್ಮತ್ವಾತ್, ಪರಮಾತ್ಮವತ್ ।**'' ಎಂಬ ಅನುಮಾನವೂ ಸಮಂಜಸವಾದದ್ದಲ್ಲ.

ಯಾಕೆಂದರೆ - ಆತ್ಮತ್ವಹೇತುವಿನಿಂದ ಆತ್ಮೈಕ್ಯವನ್ನು ಸಾಧಿಸಬೇಕಾದರೆ ಮೊದಲು ಆತ್ಮತ್ವದ ನಿರ್ವಚನ ಮಾಡಬೇಕು. ಹಾಗಾಗಿ ಆತ್ಮತ್ವ ಎಂದರೆ

೧) ಅದೃಶ್ಯತ್ವ ಎಂದು ಹೇಳುತ್ತೀರೋ ? ೨) ಪ್ರಮಾತೃತ್ವ ಎಂದು ಹೇಳುತ್ತೀರೋ ? ೩) ಪ್ರಕಾಶತ್ವ ಎಂದು ಹೇಳುತ್ತೀರೋ ? ೪) ಸ್ವಪ್ರಕಾಶತ್ವ ಎಂದು ಹೇಳುತ್ತೀರೋ ? ೫) ಅಪರಿಚ್ಛಿನ್ನತ್ವ ಎಂದು ಹೇಳುತ್ತೀರೋ ?

ಈ ಯಾವ ಪಕ್ಷಗಳೂ ಉಪಪನ್ನವಾಗುವುದಿಲ್ಲ. ಅಂದರೆ :-

೧) ವೇದಾಂತವಾಕ್ಯಜನಿತವಿಜ್ಞಾನವನ್ನು ಆತ್ಮಜ್ಞಾನವನ್ನಾಗಿ ಹೇಳುವುದಕ್ಕಾಗಿ ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸಲೇಬೇಕಾದ್ದರಿಂದ, ಪಕ್ಷರಾದ ಆತ್ಮರಲ್ಲಿ ಅದೃಶ್ಯತ್ವ(ದೃಶ್ಯತ್ವಾಭಾವ)ರೂಪಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಅದೃಶ್ಯತ್ವ ಎಂದು ಹೇಳಲು ಬರುವುದಿಲ್ಲ.

೨) ಪ್ರಮಾಣಪ್ರಮೇಯಸಿದ್ಧಿಪ್ರಸಂಗ ಬರುವ ಕಾರಣ ಆತ್ಮನಿಗೆ ಪ್ರಮಾತೃತ್ವವನ್ನು ಪರರೇ ಅಂಗೀಕರಿಸಿಲ್ಲವಾದ್ದರಿಂದ ಪಕ್ಷರಾದ ಆತ್ಮರಲ್ಲಿ ಪ್ರಮಾತೃತ್ವರೂಪಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಪ್ರಮಾತೃತ್ವ ಎಂದು ಹೇಳಲೂ ಬರುವುದಿಲ್ಲ.

೩-೪) ಜ್ಞಾತೃ-ಜ್ಞೇಯಗಳು ಇಲ್ಲದ ಕಾರಣ ಆತ್ಮನಿಗೆ ಪ್ರಕಾಶತ್ವ-ಸ್ವಪ್ರಕಾಶತ್ವಗಳು ಕೂಡುವುದಿಲ್ಲವಾದ್ದರಿಂದ, ಪಕ್ಷರಾದ ಆತ್ಮರಲ್ಲಿ ಪ್ರಕಾಶತ್ವ-ಸ್ವಪ್ರಕಾಶತ್ವರೂಪ ಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಪ್ರಕಾಶತ್ವ-ಸ್ವಪ್ರಕಾಶತ್ವ ಎಂದು ಹೇಳಲೂ ಬರುವುದಿಲ್ಲ.

೫) ಈ ಹಿಂದೆ ಹೇಳಿದಂತೆ ಆತ್ಮನಿಗೆ ಪ್ರಪಂಚದಿಂದ ಭೇದವನ್ನು (ವಸ್ತುತಃ ಪರಿಚ್ಛಿನ್ನತ್ವವನ್ನು) ಅಂಗೀಕರಿಸಿದ್ದರಿಂದ, ಪಕ್ಷರಾದ ಆತ್ಮರಲ್ಲಿ ಅಪರಿಚ್ಛಿನ್ನತ್ವ-ರೂಪಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಅಪರಿಚ್ಛಿನ್ನತ್ವ ಎಂದು ಹೇಳಲೂ ಬರುವುದಿಲ್ಲ.

ಮತ್ತು , ಪರಮಾತ್ಮನನ್ನು ನೀವು ದೃಷ್ಟಾಂತ ಮಾಡಿದ್ದೀರಿ. ಪಕ್ಷರಾದ ಆತ್ಮರಲ್ಲಿ ಅದೃಶ್ಯತ್ವಾದಿರೂಪಆತ್ಮತ್ವ ಹೇಗೆ ಬರುವುದಿಲ್ಲವೋ ಅದರಂತೆ ಪರಮಾತ್ಮ-ನಲ್ಲಿಯೂ ಅದೃಶ್ಯತ್ವಾದಿರೂಪಆತ್ಮತ್ವ (ಹೇತು) ಬರುವುದಿಲ್ಲವಾದ್ದರಿಂದ ಸಾಧನವೈಕಲ್ಯದೋಷವೂ ಬರುತ್ತದೆ.

ಹೀಗಾಗಿ ಆತ್ಮತ್ವದ ನಿರ್ವಚನವನ್ನೇ ಮಾಡಲು ಬಾರದ ಕಾರಣ, ಆತ್ಮತ್ವಾನುಮಾನವು ಆತ್ಮೈಕ್ಯಸಾಧಕವಾಗುವುದಿಲ್ಲ. ಆದ್ದರಿಂದ ''ಬ್ರಹ್ಮನಿಂದ ಭಿನ್ನರಾಗಿ ಜೀವ-ಈಶ್ವರರಿಲ್ಲ (ಜೀವ-ಈಶ್ವರರು ಬ್ರಹ್ಮನಿಂದ ಅಭಿನ್ನರಾಗಿ-ದ್ದಾರೆ)'' ಎಂಬ ನಿಮ್ಮ ವಾದವೂ ಸರಿಯಾದದ್ದಲ್ಲ ಎಂಬುದಾಗಿ ಸ್ಪಷ್ಟವಾಗಿ ಸಿದ್ಧವಾಗುತ್ತದೆ ಎನ್ನುತ್ತಾರೆ ಶ್ರೀಮಟ್ಟೀಕಾಕೃತ್ಪಾದರು.

## ಸಾರಸಂಗ್ರಹದ ಉಪಸಂಹಾರ

ಈ ರೀತಿಯಾಗಿ ಅನಿರ್ವಚನೀಯಪದಾರ್ಥವನ್ನೇ ನಿರಾಕರಿಸಿ, ''ವಿಮತೋ ಭಿನ್ನೋ ಮುಕ್ತತ್ವಾತ್'' ಎಂಬ ಅನುಮಾನದಿಂದ ಮುಕ್ತ-ಬ್ರಹ್ಮರಿಗೆ ಭೇದವನ್ನು (ಭಗವಂತನಿಗೆ ಮುಕ್ತನಿಯಾಮಕತ್ವವನ್ನು) ಸಮರ್ಥಿಸುವುದು ಒಂದುಕಡೆ-ಯಾದರೆ,

''ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್'' ''ವಿಮತಾ ಆತ್ಮಾನಃ ಪರಮಾತ್ಮನಃ ತತ್ವತಃ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್'' ಎಂಬ ಅನುಮಾನಗಳನ್ನು ದೂಷಿಸುವ ಮೂಲಕ ಜಗತ್ತಿನ ಮಿಥ್ಯಾತ್ವವನ್ನು, ಆತ್ಮೈಕ್ಯವನ್ನು ನಿರಾಕರಿಸಿ ಜಗತ್ತಿನ ಸತ್ಯತ್ವವನ್ನು ಹಾಗೂ ಆತ್ಮಭೇದವನ್ನು ಸಮರ್ಥಿಸುವುದು ಮತ್ತೊಂದುಕಡೆ.

ಇದು ಆಚಾರ್ಯರ, ಶ್ರೀಮಟ್ಟೀಕಾಕೃತ್ಪಾದರ ವಾದಕ್ರಮ. ತತ್ವಸಮರ್ಥನ-ಶೈಲಿ. ಇದನ್ನು ವಿಸ್ತಾರವಾಗಿ ತತ್ತ್ವೋದ್ಯೋತದಲ್ಲಿ ಕಾಣುತ್ತೇವೆ.

## ಟೀಕಾ-ಟಿಪ್ಪಣೀಕಾರರ ಪರಮೋಪಕಾರ

ಆಚಾರ್ಯರ ತತ್ತ್ವೋದ್ಯೋತ ಮೂಲಗ್ರಂಥ ಬಹುಭಾವಗರ್ಭಿತ. ''**ಬಾಲಸಂಘಮಪಿ ಬೋಧಯತ್ ಭೃಶಂ ದುರ್ನಿರೂಪವಚನಂ ಚ ಪಂಡಿತೈಃ**'' ಎಂಬ ಮಾತಿಗೆ ಸರಿಯಾದ ದೃಷ್ಟಾಂತ. ಸರ್ವಜ್ಞಕಲ್ಪರಾದ ಶ್ರೀಮಟ್ಟೀಕಾಕೃತ್ಪಾದರ ಟೀಕೆ ಇಲ್ಲದೇ ಅರ್ಥೈಸಿಕೊಳ್ಳುವುದು ದುಸ್ಸಾಹಸವೇ ಸರಿ. ತತ್ತ್ವೋದ್ಯೋತ-ಗ್ರಂಥವು ಕಠಿಣವಾಗಿರುವುದಕ್ಕೆ ವಿಷಯಜಾಟಿಲ್ಯದ ಜೊತೆ ಶ್ರೀಮಟ್ಟೀಕಾ-ಕೃತ್ಪಾದರ ಗಂಭೀರಶೈಲಿಯ ವ್ಯಾಖ್ಯಾನವೂ ಕಾರಣವೆಂದರೆ ತಪ್ಪಲ್ಲ. ''**ಚಿತ್ರೈಃ ಪದೈಶ್ಚ ಗಂಭೀರೈಃ ..... ಗುರುಭಾವಂ ವ್ಯಂಜಯಂತೀ**'' ಎಂಬ ಹೆಗ್ಗಳಿಕೆಗೆ ನಿದರ್ಶನ ತತ್ತ್ವೋದ್ಯೋತಟೀಕೆ ಎನ್ನಬಹುದು.

ಅಂತೆಯೇ ನಮ್ಮಂತಹ ಅಜ್ಞಾನಿಗಳಿಗೂ ಮೂಲ-ಟೀಕೆಗಳ ಭಾವಗಳನ್ನು ಬಿಡಿಸಿಹೇಳಲು ಶ್ರೀವೇದೇಶತೀರ್ಥರು, ಶ್ರೀವಿಜಯೀಂದ್ರತೀರ್ಥರು, ಶ್ರೀರಾಘವೇಂದ್ರಸ್ವಾಮಿಗಳವರು, ಶ್ರೀಶ್ರೀನಿವಾಸತೀರ್ಥರು, ಶ್ರೀಪಾಂಡುರಂಗೀ ಕೇಶವಾಚಾರ್ಯರು, ಶ್ರೀಹುಲಗಿ ಶ್ರಿಯಃಪತ್ಯಾಚಾರ್ಯರು, ಶ್ರೀಗೋವಿಂದ-ಭಟ್ಟರು, ಶ್ರೀಜನಾರ್ದನಭಟ್ಟರು, ಶ್ರೀನಾರೋಪಂತರು ಮುಂತಾದ ಅನೇಕ ಟಿಪ್ಪಣೀಕಾರರು ತತ್ತ್ವೋದ್ಯೋತಟೀಕೆಗೆ ಅದ್ಭುತವಾದ ಟಿಪ್ಪಣಿಗಳನ್ನು ರಚಿಸಿ, ಟೀಕೆಯ ಅಭಿಪ್ರಾಯ ಅರಿಯಲು ನಮಗೆ ಪರಮಾನುಗ್ರಹ ಮಾಡಿದ್ದಾರೆ.

## ಅನುವಾದ ಕುರಿತು ಎರಡು ಮಾತು

ಈ ಎಲ್ಲ ಟಿಪ್ಪಣೀಗ್ರಂಥಗಳ ಸಹಾಯದಿಂದಲೇ ಕನ್ನಡಾನುವಾದದ ಒಂದು ಸಣ್ಣ ಪ್ರಯತ್ನ ಮಾಡಲಾಗಿದೆ.

★ ಮುಂದಿನ ಟೀಕಾಗ್ರಂಥ ಯಾಕೆ ಹೊರಟಿದೆ ? ಎನ್ನುವುದನ್ನು ತಿಳಿಸಲು ಮೊದಲು ಅವತಾರಿಕೆ ಕೊಡಲಾಗಿದೆ.

★ ಅನಂತರ ಮೂಲ-ಟೀಕಾಗ್ರಂಥಗಳ ಅನುವಾದ.

★ ಶ್ರೀವೇದೇಶತೀರ್ಥರ ಹಾಗೂ ಶ್ರೀರಾಘವೇಂದ್ರಸ್ವಾಮಿಗಳವರ ಟಿಪ್ಪಣಿ-ಗಳನ್ನು ಸಂಪೂರ್ಣವಾಗಿ ಅವಲಂಬಿಸಿ, ಕನ್ನಡಾನುವಾದ ಮಾಡಲಾಗಿದೆ.

★ ಶ್ರೀವಿಜಯೀಂದ್ರತೀರ್ಥರ ಟಿಪ್ಪಣಿ ಮೊದಲಾದ ಇತರ ಟಿಪ್ಪಣಿಗಳ ವಿಶೇಷವಿಚಾರಗಳನ್ನು ಅಲ್ಲಲ್ಲಿ ಅಲ್ಲಲ್ಲಿ ತೆಗೆದುಕೊಂಡು, ಅನುವಾದದ ನಂತರ ವಿವರಿಸಲಾಗಿದೆ. ಕೆಲವು ಕಡೆ ಅಡಿಟಿಪ್ಪಣಿಗಳಲ್ಲಿ ವಿವರಿಸಲಾಗಿದೆ.

★ ಅನುವಾದದಲ್ಲಿ ಹೆಚ್ಚಿನ ವಿಚಾರಗಳನ್ನು ತಿಳಿಸಬೇಕಾದ ಪ್ರಸಂಗಗಳಲ್ಲಿ, ಸಿದ್ಧಾಂತಗಳ ಪ್ರಕ್ರಿಯೆ-ಪ್ರಮೇಯಗಳನ್ನು ವಿವರಿಸಬೇಕಾದ ಪ್ರಸಂಗ-ಗಳಲ್ಲಿ, ಟೀಕೆಯಲ್ಲಿ ಬರುವ ಕಠಿಣಪದಗಳ ಅರ್ಥವನ್ನು ತಿಳಿಸಬೇಕಾದ ಸಂದರ್ಭಗಳಲ್ಲಿ ಅಡಿಟಿಪ್ಪಣಿಗಳನ್ನು ನೀಡಲಾಗಿದೆ.

## ಗುರುಮೂಲಕವೇ ಅಧ್ಯಯನವಾಗಬೇಕು

ಒಂದು ಮಾತನ್ನು ಹೇಳಲೇಬೇಕು -

ಯಾವುದೇ ಶಾಸ್ತ್ರಗ್ರಂಥವಾದರೂ ಗುರುಗಳ ಮುಖದಿಂದಲೇ ಅದರ ಅಧ್ಯಯನ ಆಗಬೇಕು. ಅದೇ ಸರಿಯಾದ ಕ್ರಮ. ಅದೇ ನೈಜವಿದ್ಯೆ.

ತತ್ತ್ವೋದ್ಯೋತವು ಪ್ರಕರಣಗ್ರಂಥಗಳಲ್ಲಿ ಬಹಳ ಕಠಿಣವಾದ ಗ್ರಂಥ. ಹಾಗಾಗಿ ಆ ರೀತಿ ಗುರುಮುಖದಿಂದ ಪಾಠ ಹೇಳಿಸಿಕೊಂಡು ಓದುವಾಗ, ಪಾಠದ ನಂತರ ಅದರ ಚಿಂತನೆಗೆ ಅನುಕೂಲವಾಗಲಿ ಎಂಬ ಉದ್ದೇಶದಿಂದ ತತ್ತ್ವೋದ್ಯೋತಗ್ರಂಥದ ಕನ್ನಡಾನುವಾದ ಮಾಡಿ ಹೊರತರಲಾಗಿದೆ. ಹೊರತು ''ಕನ್ನಡಪುಸ್ತಕವಿದೆ ಸಾಕು, ಓದಿಬಿಡೋಣ. ಗುರುಗಳ ಬಳಿ ಪಾಠ ಏಕೆ'' ಎಂಬ ಭಾವನೆ ಯಾವ ಅಧ್ಯೇತೃಗಳಿಗೂ ಬರಬಾರದು.

## ಕೃಪಾಲುಗಳು ಕೃಪಾಲವ ಕರುಣಿಸಲಿ

ಆಚಾರ್ಯರ - ಶ್ರೀಮಟ್ಟೀಕಾಕೃತ್ಪಾದರ - ಟಿಪ್ಪಣೀಕಾರರ ವಾಕ್ಯಗಳನ್ನು ಓದಬೇಕು, ಬರೆಯಬೇಕು, ಆ ಮೂಲಕ ಪುಣ್ಯವಂತನಾಗಬೇಕು, ಶುದ್ಧಾಂತಃ-ಕರಣನಾಗಬೇಕು ಎಂಬ ಹಂಬಲ. ಹಂಬಲದ ಬೆನ್ನಲ್ಲಿ ಅನುವಾದದ ಅಲ್ಪಯತ್ನ.

ಅಸ್ವತಂತ್ರ ಎಂದಮೇಲೆ ಪುರುಷನಲ್ಲಿ ದೋಷಗಳು ಅನಿವಾರ್ಯ. ನಡೆಯುವಾಗ ಎಡವುದು ಸಹಜ. ಹಾಗಾಗಿ ಬರವಣಿಗೆಯಲ್ಲಿ ಬಹಳ ದೋಷಗಳಿವೆ. ದಯಾಲುಗಳು ದೋಷಗಳನ್ನು ದೂರವಿಟ್ಟು, ಗುಣವನ್ನು ಗ್ರಹಿಸಿ, ಕರುಣಾಳುಗಳು ಕರುಣೆ ಕರುಣಿಸುವವರಾಗಲೆಂದು ಕಣ್ಣುಮುಚ್ಚಿ ಕೈಮುಗಿದು ಕೇಳಿಕೊಳ್ಳುವ

**-ಕಾಂತೇಶಾಚಾರ್ಯ ಕದರಮಂಡಲಗಿ**

# ಉಪಕೃತೋಽಸ್ಮಿ...

ಚಿಕ್ಕವಯಸ್ಸಿನಲ್ಲೇ ವಿದ್ಯಾಪೀಠಕ್ಕೆ ಸೇರಿ ತಂದೆ-ತಾಯಿಗಳ ವಾತ್ಸಲ್ಯದಿಂದ ವಂಚಿತನಾದ ನನಗೆ ಸ್ವತಃ ತಾವು ತಂದೆ-ತಾಯಿಗಳ ಸ್ಥಾನದಲ್ಲಿ ನಿಂತು, ಅತಿಶಯವಾದ ವಿಶಿಷ್ಟವಾದ ವಾತ್ಸಲ್ಯವನ್ನು ಕೊಟ್ಟು, ಮೋಕ್ಷಸಾಧನವಾದ ಬ್ರಹ್ಮವಿದ್ಯೆಯನ್ನು ಧಾರೆಯೆರೆದು, ಅಶನ-ವಸನಾದಿಗಳನ್ನೂ ಕರುಣಿಸಿ, ಕೈಗೊಂದು ಲೇಖನಿಯನ್ನಿತ್ತು ಲೇಖನ-ಸಂಶೋಧನ ಕ್ಷೇತ್ರದಲ್ಲಿ ಮುಂದೆ ಬರುವಂತೆ ಹೆಜ್ಜೆಹೆಜ್ಜೆಗೂ ನನಗೆ ರಕ್ಷಕರಾಗಿ ನಿಂತು ಪರಮಾನುಗ್ರಹ ಮಾಡುತ್ತಿರುವ, ನನ್ನ ಸ್ವರೂಪೋದ್ಧಾರಕಗುರುಗಳ ಪಾದಾರವಿಂದಗಳಲ್ಲಿ

**''ಶ್ರೀಸತ್ಯಾತ್ಮಗುರೋ ತ್ವದಂಘ್ರಿಯುಗಲಂ ಹಿತ್ವಾ ನ ಮೇ ಸದ್ಗತಿಃ''**

ಎಂಬ ಉದ್ಗಾರದೊಂದಿಗೆ ಭಕ್ತಿಪೂರ್ವಕ ಸಾಷ್ಟಾಂಗಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ವಿದ್ಯಾಪೀಠದ ನೂರಾರು ವಿದ್ಯಾರ್ಥಿಗಳನ್ನೂ ಸ್ವಂತ ತಮ್ಮ ಮಕ್ಕಳಂತೆಯೇ ಪೋಷಿಸಿ, ವಿದ್ಯಾರ್ಥಿಗಳ ಏಳಿಗೆಗೆ ಶ್ರಮಿಸಿದ, ವಿದ್ವದ್ವರೇಣ್ಯರಾದ, ಸಹೃದಯಿಗಳಾದ **ಪಂ.ಪೂಜ್ಯ ಗುತ್ತಲಾಚಾರ್ಯರನ್ನು** ಭಕ್ತಿಯಿಂದ ವಂದಿಸುತ್ತೇನೆ.

ವಿದ್ಯಾಪೀಠದಲ್ಲಿ ಗಿಳಿಪಾಠದಂತೆ ವೇದಾಂತಗ್ರಂಥಗಳ ಪಾಠವನ್ನು ಹೇಳಿ, ಅನುವಾದ ಹೇಗೆ ಮಾಡಬೇಕೆಂದು ಕಲಿಸಿ, ವಿಶೇಷ ಅನುಗ್ರಹ ಮಾಡಿದವರು **ಪಂ. ಆಲೂರು ಶ್ರೀನಿವಾಸಾಚಾರ್ಯರು.** ಇಂದು ವೇದಾಂತಗ್ರಂಥದ ಎರಡುವಾಕ್ಯಗಳನ್ನು ಓದುತ್ತೇನೆ, ಬರೆಯುತ್ತೇನೆ ಎಂದರೆ ಅವರ ಅನುಗ್ರಹ ಎಂದರೆ ಅತಿಶಯೋಕ್ತಿಯಲ್ಲ. ಈ ತತ್ತ್ವೋದ್ಯೋತ ಗ್ರಂಥದ ಪಾಠವನ್ನೂ ಪೂರ್ಣವಾಗಿ ಹೇಳಿದವರು ಅವರು. ಕನ್ನಡಾನುವಾದ ಮಾಡುವಾಗ ಕಠಿಣವಿಚಾರಗಳನ್ನು ಎಳೆಎಳೆಯಾಗಿ ಸರಳವಾಗಿ ಬಿಡಿಸಿ ತಿಳಿಸಿ, ಬರೆಯಲು ಸಹಕಾರ ಮಾಡಿದವರೂ ಅವರು. ಅಂತಹ ಗುರುಗಳಿಗೆ ಭಕ್ತಿಪೂರ್ವಕ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

''ಹುಡುಗ ಛಲೋ ಇದ್ದಾನೆ, ಶಾಸ್ತ್ರ ಓದಲಿ'' ಎಂಬ ವಿಶೇಷ ಅಭಿಮಾನದಿಂದ ನನ್ನನ್ನು ವಿದ್ಯಾಪೀಠಕ್ಕೆ ಕರೆತಂದು, ಸಾಧನಮಾರ್ಗ ತೋರಿದ **ಡಾ || ಸತ್ಯಧ್ಯಾನಾಚಾರ್ಯ ಕಟ್ಟಿ** ಅವರಿಗೆ ನನ್ನ ಸಭಕ್ತಿನತಿತತಿಗಳು.

ಸಣ್ಣವಯಸ್ಸಿನಲ್ಲಿಯೇ ವಿದ್ಯಾಪೀಠಕ್ಕೆ ಕಳುಹಿಸಿ, ಶಾಸ್ತ್ರಾಭ್ಯಾಸ ಮಾಡಿಸಿ, ಆಧ್ಯಾತ್ಮಿಕಜೀವನಕ್ಕೆ ಕಾಲಿಡಿಸಿದ ನನ್ನ ತಂದೆ-ತಾಯಿಗಳಾದ **ರಾಧಾಭಾಯಿ ದಿ.ಕೃಷ್ಣಮೂರ್ತಿಆಚಾರ್ಯ**(RMS) ಅವರನ್ನು ಭಕ್ತಿಯಿಂದ ವಂದಿಸುತ್ತೇನೆ.

ನನ್ನ ಲೇಖನ-ಸಂಶೋಧನ ಮುಂತಾದ ಪ್ರತಿಯೊಂದು ಕಾರ್ಯಗಳಿಗೂ ವಿಶೇಷ ಪ್ರೋತ್ಸಾಹ ಕೊಟ್ಟು ಸಹಕಾರ ನೀಡುವ, ವಿಶ್ವಮಧ್ವಮಹಾಪರಿಷತ್ತಿನ ನಿರ್ದೇಶಕರಾದ, ಅದ್ಭುತಕಾರ್ಯಶಕ್ತಿಯ ಆದರ್ಶವ್ಯಕ್ತಿಗಳಾದ ನಮ್ಮ **ಪಂ.ವಿದ್ಯಾಧೀಶಾಚಾರ್ಯರನ್ನು** ತುಂಬುಹೃದಯದಿಂದ ನಮಿಸುತ್ತೇನೆ.

ನನ್ನದೊಂದು ಸೌಭಾಗ್ಯ. ವಿದ್ವತ್ಕುಲಚಕ್ರವರ್ತಿಗಳಾದ, ಅದ್ಭುತಪ್ರತಿಭಾ-ಶಾಲಿಗಳಾದ, ಪ್ರಾತಃಸ್ಮರಣೀಯರಾದ, ಶ್ರೀಸತ್ಯಧರ್ಮತೀರ್ಥರ ಸನ್ನಿಧಾನ-ದಲ್ಲಿ ಕೆಲವು ದಿನಗಳವರೆಗೆ ಇದ್ದು ಕನ್ನಡಾನುವಾದ ಮಾಡುವ ಸೌಭಾಗ್ಯ ದೊರೆಯಿತು. ಆ ಸಂದರ್ಭದಲ್ಲಿ ವಿಶೇಷ ಅಂತಃಕರಣದಿಂದ ಎಲ್ಲ ಸೌಲಭ್ಯಗಳನ್ನೂ ಕಲ್ಪಿಸಿ ಉತ್ತಮ ಸಹಕಾರ ಮಾಡಿದವರು ನನ್ನ ಮಿತ್ರ ಪಂ. **ನವರತ್ನ ಶ್ರೀನಿವಾಸಾಚಾರ್ಯರು.** ಅವರಿಗೆ ವಿಶೇಷ ಕೃತಜ್ಞತೆಗಳು.

ಕನ್ನಡಾನುವಾದದ ಈ ಕೃತಿಗೆ ಸುಂದರವಾದ ಆಕಾರ ಕೊಟ್ಟು, ಕೃತಿಯ ಲೋಕಾರ್ಪಣೆಗೆ ವಿಶೇಷ ಸಹಕಾರ ನೀಡಿದ, ನನ್ನ ಮಿತ್ರ **ಪಂ. ಮಹಿದಾಸಾಚಾರ್ಯರಿಗೆ** ವಿಶೇಷ ಅಭಿನಂದನೆಗಳು.

ನನಗೊಂದು ಅಭ್ಯಾಸ. ಏನೇ ಆದರೂ ಕೈಯಿಂದ ಬರೆಯುವ ಹವ್ಯಾಸ. ಹಾಗಾಗಿ ಅನುವಾದದ ಕಾರ್ಯವೂ ಬರವಣಿಗೆಯಲ್ಲೇ ಸಾಗಿತು. ಬರೆದದ್ದನ್ನು ಟಂಕಿಸಿ ವಿಶೇಷ ಸಹಕಾರ ನೀಡಿದವರು **ಶ್ರೀವೇಣುಗೋಪಾಲಾಚಾರ್ಯರು.** ಅವರಿಗೆ ಕೃತಜ್ಞತೆ ಹೇಳಲು ಮರೆಯುವುದಿಲ್ಲ.

ಅಂದವಾದ ಮುಖವನ್ನು ಮಾಡಿಕೊಟ್ಟು ಕೃತಿಯ ಅಂದವನ್ನು ಹೆಚ್ಚಿಸಿದವರು ಶ್ರೀಯುತ **ಕೆ.ಎಮ್.ಶೇಷಗಿರಿ** ಅವರು. ಅವರಿಗೆ ನಾನು ಕೃತಜ್ಞ.

ಗ್ರಂಥವನ್ನು ಚೊಕ್ಕವಾಗಿ ಮುದ್ರಿಸಿ, ಸಕಾಲಕ್ಕೆ ನಿಮ್ಮೆಲ್ಲರ ಕೈಸೇರಿಸಿದ **ವಾಗರ್ಥ** ಮುದ್ರಣಾಲಯದವರಿಗೆ ಧನ್ಯವಾದಗಳು.

**– ಕಾಂತೇಶಾಚಾರ್ಯ ಕದರಮಂಡಲಗಿ**

# ವಿಷಯಾನುಕ್ರಮಣಿಕೆ

★★★

ನಿಖಿಲನಿಗಮಗೀತಾನಂತಕಲ್ಯಾಣಧರ್ಮಾ-
ತುಲಮಣಿಗಣಭೂಷೋ ನಿರ್ಭಿದಾನಂತಮೂರ್ತಿಃ ।
ಅಘಟಿತಘಟನಾಯಾಂ ಶಕ್ತಶಕ್ತಿರ್ವಿಶೇಷಾತ್
ಅಖಿಲಸುಜನಪಾಲಃ ಪ್ರೀಯತಾಂ ವೇದನಾಥಃ ॥★॥

ಅದ್ವೈತಚಂದ್ರಿಕಾಧದ್ಮತಮೋಹೃತ್ಪಾಟನೇ ಪಟುಃ ।
ಸನ್ಮನಃಪಂಕಜೋಲ್ಲಾಸೀ ಜೇಜೀಯಾತ್ ದ್ವೈತಭಾಸ್ಕರಃ ॥★॥

ಕ್ವ ಟೀಕಾಕೃದ್ವಾಗ್ವಿಲಾಸಃ ಕ್ವ ಚಾಹಂ ಜಡಧೀಪತಿಃ ।
ತಥಾಪಿ ತತ್ಕೃಪಾಲೇಶೋ ನ ಕುರ್ಯಾತ್ ಕಿಮಲೌಕಿಕಮ್ ॥★॥

ಅನಯಾ ಗ್ರಂಥಕೃತ್ಯಾ ಯತ್ಪುಣ್ಯಂ ಸ್ಯಾತ್ತದಶೇಷತಃ ।
ಗುರುಹೃತ್ಪದ್ಮವಾಸಾಯ ಪ್ರಾಣೇಶಾಯಾರ್ಪಯಾಮ್ಯಹಮ್॥★॥

✍ ದ್ವೈತದ್ಯುಮಣಿಕಾರಾಃ – ಹುಲಗೀ ಶ್ರೀನಾಥಾಚಾರ್ಯಾಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ

# ತತ್ತ್ವೋದ್ದ್ಯೋತ

ಶ್ರೀಮಜ್ಜಯತೀರ್ಥವಿರಚಿತಟೀಕಾಸಹಿತ

---

॥ ಶ್ರೀಸತ್ಯಾತ್ಮತೀರ್ಥಗುರುಭ್ಯೋ ನಮಃ ॥

**ಅವತಾರಿಕೆ :-** ಶ್ರೀಮದಾನಂದತೀರ್ಥಭಗವತ್ಪಾದರ 'ತತ್ತ್ವೋದ್ದ್ಯೋತ' ಗ್ರಂಥಕ್ಕೆ ಟೀಕೆಯನ್ನು ರಚಿಸಲು ಹೊರಟ ಶ್ರೀಮಟ್ಟೀಕಾಕೃತ್ಪಾದರು ತಮ್ಮ ಟೀಕಾಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲಿ ಎಂಬ ಉದ್ದೇಶದಿಂದ, ಟೀಕಾಗ್ರಂಥದ ಆದಿಯಲ್ಲಿ 'ಸ್ವಇಷ್ಟದೇವತಾನಮಸ್ಕಾರ'ರೂಪವಾದ ಮಂಗಲಾಚರಣೆಯನ್ನು ಆಚರಿಸುತ್ತಾ, ತಮ್ಮ ಆ ಮಂಗಲಪದ್ಯದಲ್ಲಿ 'ತಾವು ಏನು ಮಾಡಲು ಹೊರಟಿದ್ದೇವೆ' ಎಂಬುದನ್ನು ಪ್ರತಿಜ್ಞೆ ಮಾಡಿ ತಿಳಿಸುತ್ತಾರೆ-

**ಟೀಕಾ ಮಂಗಲಾಚರಣೆ**

**ಟೀಕಾ : ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ ರಮಣಂ ಶ್ರಿಯಃ ।**
**ಅಭಿವಂದ್ಯ ಯಥಾಬೋಧಂ ತತ್ತ್ವೋದ್ದ್ಯೋತಂ ವಿವೃಣ್ಮಹೇ ॥**

**ಅರ್ಥ :- ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ** (ತನ್ನಿಂದ ಭಿನ್ನವಾದ) ಜಗತ್ತಿಗೆ ಉತ್ಪತ್ತಿ (ಪರಾಧೀನವಿಶೇಷಾವಾಪ್ತಿ) ಸ್ಥಿತಿ (ಪರಿಪಾಲನ) ಧ್ವಂಸ (ಸಂಹಾರ) ಇವುಗಳನ್ನು ಕೊಡುವ, **ಶ್ರಿಯಃ ರಮಣಂ** ಲಕ್ಷ್ಮೀಪತಿಯಾದ ಪರಮಾತ್ಮನನ್ನು **ಅಭಿವಂದ್ಯ** ಭಕ್ತ್ಯಾದ್ಯಂಗಸಹಿತವಾಗಿ ನಮಸ್ಕರಿಸಿ, [೧]**ಯಥಾಬೋಧಂ** ಯಥಾಮತಿಯಾಗಿ (ಬುದ್ಧಿಮಟ್ಟವನ್ನು ಮೀರದೇ) ಅಂದರೆ-

---

೧ ಯಥಾಬೋಧಂ ಅಸ್ಮದ್ಬುದ್ಧಿಮನತಿಕ್ರಮ್ಯ ಅಸ್ಮದ್ಬುದ್ಧ್ಯನುಸಾರೇಣೇತಿ ವಾ ಶಿಷ್ಯಬುದ್ಧಿ-ಮನತಿಕ್ರಮ್ಯ ತಸ್ಯ ಬೋಧೋ ಯಥಾ ಭವತಿ ತದನುಸಾರೇಣೇತಿ ವಾ ಮೂಲಕರ್ತೃ-ಬೋಧಮನತಿಕ್ರಮ್ಯ ತದಭಿಪ್ರಾಯಾನುಸಾರೇಣೇತಿ ವಾ ಅರ್ಥಃ ।
(ಶ್ರೀರಾಘವೇಂದ್ರಸ್ವಾಮಿಗಳವರ ಟಿಪ್ಪಣೀ)

★ ನಮ್ಮ ಬುದ್ಧಿಯನ್ನು ಮೀರದೇ (ನಮ್ಮ ಬುದ್ಧಿಗೆ ಅನುಸಾರವಾಗಿ)
★ ಶಿಷ್ಯರ ಬುದ್ಧಿಯನ್ನು ಮೀರದೇ, ಅಂದರೆ- ಯಾವ ರೀತಿಯಾಗಿ ವ್ಯಾಖ್ಯಾನ ಮಾಡಿದರೆ ಅಧ್ಯೇತೃಗಳಿಗೆ ಚೆನ್ನಾಗಿ ಅರ್ಥವಾಗುವುದೋ ಆ ರೀತಿಯಾಗಿ ಶಿಷ್ಯರ ಬುದ್ಧಿಮಟ್ಟಕ್ಕೆ ಅನುಸಾರವಾಗಿ
★ ಮೂಲಗ್ರಂಥಕಾರರಾದ ಶ್ರೀಮದಾಚಾರ್ಯರ ಬುದ್ಧಿಯನ್ನು ಮೀರದೇ, ಅಂದರೆ- ಮೂಲಕಾರರ ಅಭಿಪ್ರಾಯಕ್ಕೆ ಅನುಸಾರವಾಗಿ

[೧]**ತತ್ತ್ವೋದ್ಯೋತಂ** ಪರಮಪುರುಷತತ್ತ್ವದ (ಭಗವಂತನ) ಉದ್ಯೋತವು ಯಥಾರ್ಥಜ್ಞಾನವು ಯಾವ ಗ್ರಂಥದಿಂದ ಉಂಟಾಗುವುದೋ ಅಥವಾ ಪರಮ ಪುರುಷತತ್ತ್ವವು ಉತ್ಕೃಷ್ಟವಾಗಿ ಯಾವ ಗ್ರಂಥದಿಂದ ತಿಳಿಸಲ್ಪಡುತ್ತದೆಯೋ ಅಂತಹ 'ತತ್ತ್ವೋದ್ಯೋತ'ಗ್ರಂಥವನ್ನು **ವಿವೃಣ್ಮಹೇ** ವಿವರಿಸುತ್ತೇವೆ, ವ್ಯಾಖ್ಯಾನ ಮಾಡುತ್ತೇವೆ.

### ಶ್ರೀರಾಘವೇಂದ್ರಸ್ವಾಮಿಗಳವರ ವ್ಯಾಖ್ಯಾನ ವಿಶೇಷವಿಚಾರಗಳು

**ವಿಶ್ವ ಎಂದೇಕೆ ?**

ಆಚಾರ್ಯರ ಮೂಲಗ್ರಂಥದ ಮಂಗಳಶ್ಲೋಕದಲ್ಲಿ ''ನಿತ್ಯಾತಾದೃಶಚಿಚ್ಚೇತೃ -ಯಂತಾ'' ಎನ್ನುವಲ್ಲಿ ಚಿಚ್ಚೇತೃಪದದಿಂದ ಕೆಲವು ಚೇತನ-ಅಚೇತನಗಳನ್ನು ಮಾತ್ರ ಸ್ವೀಕರಿಸುವುದಲ್ಲ. ಕಿಂತು ಎಲ್ಲ ಚೇತನ-ಅಚೇತನಗಳನ್ನೂ ತೆಗೆದು ಕೊಳ್ಳಬೇಕು. ಹಾಗಾದರೆ ಭಗವಂತನೂ ಚೇತನನಾದ್ದರಿಂದ ಚೇತನಪದದಿಂದ ಇತರ ಚೇತನರನ್ನು ತೆಗೆದುಕೊಳ್ಳುವಂತೆ ಭಗವಂತನನ್ನೂ ತೆಗೆದುಕೊಳ್ಳ-ಬೇಕಾಗುತ್ತದೆ. ಆದರೆ ಭಗವಂತ ಇತರ ಚೇತನರಿಗೆ ಉತ್ಪತ್ತ್ಯಾದಿಗಳನ್ನು ಕೊಡುವುದು ಸಂಭಾವಿತವಾದರೂ ತನಗೆ ತಾನೇ ಉತ್ಪತ್ತ್ಯಾದಿಗಳನ್ನು ಕೊಡುವುದು ಅಸಂಭಾವಿತ. ಹಾಗೆ ಅರ್ಥ ಹೇಳಿದರೆ ಬಾಧಿತವಾಗುತ್ತದೆ. ಅದಕ್ಕೋಸ್ಕರವಾಗಿ (ಬಾಧಪರಿಹಾರಕ್ಕಾಗಿ) ಮೂಲದಲ್ಲಿರುವ ಚಿತ್‌ಪದದಿಂದ ತನ್ನನ್ನು ಬಿಟ್ಟು ಇತರ ಎಲ್ಲ ಚೇತನರನ್ನೂ ತೆಗೆದುಕೊಳ್ಳಬೇಕು ಎಂಬುದನ್ನು ಸೂಚಿಸುವುದಕ್ಕಾಗಿ ಶ್ರೀಮಟ್ಟೀಕಾಕೃತ್ಪಾದರು ತಮ್ಮ ಮಂಗಳಶ್ಲೋಕದಲ್ಲಿ ''ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ'' ಎಂಬುದಾಗಿ 'ವಿಶ್ವ' ಎಂದು ಹೇಳಿದ್ದಾರೆ.

---

೧. ತತ್ತ್ವಸ್ಯ ಪರಮಪುರುಷಾಖ್ಯಸ್ಯ ಉದ್ಯೋತಃ ಯಥಾರ್ಥಜ್ಞಾನಂ ಭವತ್ಯಸ್ಮಾದಿತಿ ವ್ಯಧಿಕರಣ ಬಹುವ್ರೀಹಿಃ । ಅಥವಾ ತತ್ತ್ವಮುದ್ಯೋತ್ಯತೇ ಉತ್ಕರ್ಷೇಣ ಜ್ಞಾಪ್ಯತೇಽನೇನೇತ್ಯನ್ವರ್ಥ-ಸಂಜ್ಞೇತ್ಯಾಹುಃ । -(ಶ್ರೀವೇದೇಶತೀರ್ಥರ ಟಿಪ್ಪಣೀ)

### ಉತ್ಪತ್ತಿ - ಸ್ಥಿತ್ಯಾದಿಗಳೂ ವಿವಕ್ಷಿತ

ಆಚಾರ್ಯರು ತಮ್ಮ ಮೂಲದಲ್ಲಿ ''ನಿತ್ಯಾತಾದೃಶಚಿಚ್ಚೇತ್ಯ**ಯಂತಾ**'' ಎಂಬುದಾಗಿ ಜಗತ್ತಿನ ನಿಯಮನವನ್ನು ಮಾತ್ರ ಹೇಳಿದ್ದಾರೆ (ಉತ್ಪತ್ತ್ಯಾದಿಗಳನ್ನು ಹೇಳಿಲ್ಲ) ಎಂದು ತಿಳಿಯಬೇಡಿ. ''ಯಂತಾ'' ಎಂಬುದಾಗಿ ಹೇಳಿದ ನಿಯಮನವು ಉಪಲಕ್ಷಣವಾಗಿದೆ. ಅಲ್ಲಿ ಉಪಲಕ್ಷಣತ್ವೇನ ಉತ್ಪತ್ತಿ-ಸ್ಥಿತ್ಯಾದಿಗಳನ್ನೂ ಇಟ್ಟುಕೊಳ್ಳಬೇಕು ಎಂದು ಸ್ಪಷ್ಟಪಡಿಸಲು ''ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ'' ಎಂಬುದಾಗಿ ಉತ್ಪತ್ತ್ಯಾದಿಗಳನ್ನೂ ಹೇಳಿದರು ಶ್ರೀಮಟ್ಟೀಕಾಕೃತ್ಪಾದರು.

### ಸೃಷ್ಟ್ಯಾದಿ ನಾಲ್ಕನ್ನು ಮಾತ್ರ ಏಕೆ ಹೇಳಿದರು ?

**ಪ್ರ :** ಭಗವಂತ ಜಗತ್ತಿಗೆ ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷ ಈ ಎಂಟನ್ನೂ ಕೊಡುತ್ತಾನಾದ್ದರಿಂದ ಆಚಾರ್ಯರು ಹಾಗೂ ಟೀಕಾಕೃತ್ಪಾದರು ಎಂಟನ್ನೂ ಹೇಳಬೇಕಿತ್ತು ? ಆದರೆ - ''**ನಿತ್ಯಾತಾದೃಶಚಿಚ್ಚೇತ್ಯ-ಯಂತಾ**'' ಎಂಬುದಾಗಿ ಆಚಾರ್ಯರು ನಿಯಮನವನ್ನು ಹೇಳಿದರೆ, ''**ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ**'' ಎಂಬುದಾಗಿ ಟೀಕಾರಾಯರು ಸೃಷ್ಟಿ-ಸ್ಥಿತಿ-ಲಯ ಮೂರನ್ನು ಹೇಳಿದ್ದಾರೆ. ಎರಡನ್ನೂ ಸೇರಿಸಿದರೆ ಒಟ್ಟು ಸೃಷ್ಟಿ-ಸ್ಥಿತಿ-ಲಯ-ನಿಯಮನ ನಾಲ್ಕನ್ನು ಮಾತ್ರ ಹೇಳಿದಂತಾಯಿತು. ಉಳಿದ ನಾಲ್ಕನ್ನು ಏಕೆ ಹೇಳಲಿಲ್ಲ ?

**ಉ :** ನಿಜವೇ. ದೇವರು ಎಂಟನ್ನೂ ಕೊಡುವವನೇ. ಆದರೆ ಆ ಎಂಟರಲ್ಲಿ ಸೃಷ್ಟಿ-ಸ್ಥಿತಿ-ಲಯ-ನಿಯಮನ ಈ ನಾಲ್ಕು ಮಾತ್ರ ಸಕಲಜಗತ್ತಿಗೆ ಸಂಬಂಧಿಸಿದ್ದಾದ್ದರಿಂದ ಸೃಷ್ಟ್ಯಾದಿ ಚತುಷ್ಟಯವನ್ನು ಮಾತ್ರ ಸ್ವೀಕರಿಸಿದ್ದಾರೆ. ಎಲ್ಲರಿಗೂ ಎಂಟೂ ಸಂಬಂಧಿಸಿಲ್ಲವಾದ್ದರಿಂದ (ಜ್ಞಾನ-ಅಜ್ಞಾನ-ಬಂಧ-ಮೋಕ್ಷ ಇವು ಸಕಲ ಜಗತ್ತಿಗೂ ಅನ್ವಯಿಸದ ಕಾರಣ) ಎಂಟನ್ನೂ ಇಲ್ಲಿ ಸ್ವೀಕರಿಸಿಲ್ಲ ಎಂದು ಭಾವ.

### ವಿವೃಣ್ಮಹೇ ಬಹುವಚನ ಏಕೆ ?

**ಪ್ರ :** ತತ್ತ್ವೋದ್ಯೋತಕ್ಕೆ ಟೀಕೆಯನ್ನು ರಚಿಸಲು ಹೊರಟ ಟೀಕಾಕೃತ್ಪಾದರು ಒಬ್ಬರೇ ಇರುವ ಕಾರಣ ''ವಿವೃಣ್ವೇ'' ಎಂಬುದಾಗಿ ಏಕವಚನಪ್ರಯೋಗ ಮಾಡಬೇಕಿತ್ತು. ''ವಿವೃಣ್ಮಹೇ'' ಎಂದು ಬಹುವಚನ ಏಕೆ ?

**ಉ :** ನಿಜವೇ. ವ್ಯಾಖ್ಯಾನಕಾರರು ಒಬ್ಬರೇ ಇರುವುದು ಸತ್ಯವೇ. ಆದರೆ ತಾವು ಪರಮಹಂಸಪೀಠಾಧಿಪತಿಗಳಾದ ಕಾರಣ ''ನಾವು ವ್ಯಾಖ್ಯಾನ ಮಾಡುತ್ತೇವೆ'' ಎಂಬುದಾಗಿ ಗೌರವದಿಂದ (ಸನ್ಯಾಸಾಶ್ರಮದ ಮೇಲಿನ ಗೌರವದಿಂದ) ಬಹುವಚನ ಪ್ರಯೋಗ ಮಾಡಿದ್ದಾರೆ ಎಂದು ಭಾವ.

**ವಿವೃಣ್ಮಹೇ ಆತ್ಮನೇಪದ ಏಕೆ ?**

**ಪ್ರ :** ಸರಿ. ಬಹುವಚನಪ್ರಯೋಗ ಉಪಪನ್ನವಾದರೂ ಟೀಕಾಕೃತ್ಪಾದರು ''ವಿವೃಣುಮಃ'' ಎಂಬುದಾಗಿ ಪರಸ್ಮೈಪದಪ್ರಯೋಗ ಮಾಡಬಹುದಿತ್ತು. ''ವಿವೃಣ್ಮಹೇ'' ಎಂಬುದಾಗಿ ಆತ್ಮನೇಪದಪ್ರಯೋಗ ಏಕೆ ಮಾಡಿದರು ?

**ಉ :** ''ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ'' (ಪಾ.ಸೂ ೧-೩-೭೨) 'ಸ್ವರಿತೇತೋ ಞಿತಶ್ಚ ಧಾತೋರಾತ್ಮನೇಪದಂ ಸ್ಯಾತ್ ಕರ್ತೃಗಾಮಿನಿ ಕ್ರಿಯಾಫಲೇ' ಎಂಬುದಾಗಿ ವ್ಯಾಕರಣಸೂತ್ರ ಹೇಳುವಂತೆ ಕ್ರಿಯಾಫಲವು ಕರ್ತೃಗಾಮಿಯಾದಾಗ ಆತ್ಮನೇಪದ ಬರುತ್ತದೆ. ಪ್ರಕೃತ ವ್ಯಾಖ್ಯಾನರೂಪವಾದ ಕ್ರಿಯಾ, ಅದರ ಫಲ ಪ್ರೀತಿ ಅನುಗ್ರಹ. (ವ್ಯಾಖ್ಯಾನ ಮಾಡುವುದರಿಂದ ಮೂಲಗ್ರಂಥಕರ್ತೃಗಳಾದ ಆಚಾರ್ಯರ ಪ್ರೀತಿ ಹಾಗೂ ಗ್ರಂಥಪ್ರತಿಪಾದ್ಯ ಭಗವಂತನ ಪ್ರೀತಿ ಅನುಗ್ರಹ ಉಂಟಾಗುತ್ತದೆ.) ಅಂತಹ ಕ್ರಿಯಾಫಲ, ವ್ಯಾಖ್ಯಾನಫಲ, ಪ್ರೀತಿ ಅನುಗ್ರಹ ಆತ್ಮಗಾಮಿಯಾಗಿದೆ (ನಮ್ಮಲ್ಲಿ ಉಂಟಾಗುತ್ತದೆ) ಎಂಬುದನ್ನು ತಿಳಿಸುವುದಕ್ಕಾಗಿ 'ವಿವೃಣ್ಮಹೇ' ಎಂದು ಆತ್ಮನೇಪದವನ್ನು ಪ್ರಯೋಗಿಸಿದ್ದಾರೆ ಟೀಕಾಕೃತ್ಪಾದರು ಎಂದು ಭಾವ.

## ಶ್ರೀವೇದೇಶತೀರ್ಥರ ವ್ಯಾಖ್ಯಾನವಿಶೇಷಗಳು

**ಸ್ಥಿತಿಶಬ್ದವನ್ನು ಮೊದಲು ಹೇಗೆ ಪ್ರಯೋಗಿಸಿದರು ?**

**ಪ್ರ :** ದ್ವಂದ್ವಸಮಾಸವನ್ನು ಹೇಳುವ ಪ್ರಕರಣದಲ್ಲಿ 'ಅಲ್ಪಾಚ್‌ತರಮ್' ಎಂಬ ಸೂತ್ರವು ದ್ವಂದ್ವಸಮಾಸದಲ್ಲಿ ಅಲ್ಪ ಸ್ವರಗಳುಳ್ಳ (ಕಡಿಮೆ ಸ್ವರ ಉಳ್ಳ) ಶಬ್ದವನ್ನು ಮೊದಲು ಪ್ರಯೋಗಿಸಬೇಕು (ಹೆಚ್ಚು ಸ್ವರಗಳುಳ್ಳ ಶಬ್ದವನ್ನು ಅನಂತರ ಪ್ರಯೋಗಿಸಬೇಕು) ಎಂಬುದಾಗಿ ಹೇಳಿದ್ದಾರೆ. ಆ ಪ್ರಕಾರ ಪ್ರಕೃತದಲ್ಲಿ ಉತ್ಪತ್ತಿ-ಸ್ಥಿತಿ ಎಂಬ ಎರಡು ಶಬ್ದಗಳಲ್ಲಿ ಸ್ಥಿತಿ ಎಂಬ ಶಬ್ದದಲ್ಲಿ ಕಡಿಮೆ ಸ್ವರಗಳಿದ್ದು, ಉತ್ಪತ್ತಿ ಎಂಬ ಶಬ್ದದಲ್ಲಿ ಬಹಳ ಸ್ವರಗಳಿವೆ. ಹಾಗಾಗಿ ಉತ್ಪತ್ತಿ ಶಬ್ದಕ್ಕಿಂತಲೂ ಮೊದಲು ಸ್ಥಿತಿ ಶಬ್ದವನ್ನು ಪ್ರಯೋಗಿಸಬೇಕಿತ್ತು ?

ಅನ್ನುವುದಕ್ಕಾಗಿಯೇ -

**''ವಿಶ್ವಸ್ಥಿತಿಪ್ರಲಯಸರ್ಗಮಹಾವಿಭೂತಿ**
**ವೃತ್ತಿಪ್ರಕಾಶನಿಯಮಾವೃತಿ ಬಂಧಮೋಕ್ಷಾ:।''**

ಎಂಬುದಾಗಿ ಶ್ರೀಮದಾಚಾರ್ಯರೂ ಸಹ ದ್ವಾದಶಸ್ತೋತ್ರದಲ್ಲಿ ಸ್ಥಿತಿ ಶಬ್ದವನ್ನೇ ಮೊದಲು ಪ್ರಯೋಗಿಸಿದ್ದಾರೆ. ಅಂದಮೇಲೆ ಟೀಕಾಕೃತ್ಪಾದರು- '**ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ**' ಎಂಬುದಾಗಿ ಉತ್ಪತ್ತಿಶಬ್ದವನ್ನು ಮೊದಲು ಹೇಗೆ ಪ್ರಯೋಗಿಸಿದರು ?

**ಉ :** ನಿಜವೇ. ಕಡಿಮೆ ಸ್ವರಗಳುಳ್ಳ ಕಾರಣ ಸ್ಥಿತಿಶಬ್ದವನ್ನೇ ಮೊದಲು ಪ್ರಯೋಗಿಸಬೇಕು ಎನ್ನುವುದು ಸತ್ಯವೇ. ಆದರೂ ಅದೇ 'ಅಲ್ಪಾಚ್‌ತರಮ್' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ''**ಅಭ್ಯರ್ಹಿತಂ ಚ**'' ಎಂಬುದಾಗಿ ವಾರ್ತಿಕದಲ್ಲಿ ಅಭ್ಯರ್ಹಿತವಾದದ್ದನ್ನು ಮೊದಲು ಹೇಳಬೇಕು ಎಂದು ಹೇಳಿದ್ದಾರೆ. ಪ್ರಕೃತದಲ್ಲಿ ಹುಟ್ಟಿದವನಿಗೇನೇ ಸ್ಥಿತ್ಯಾದಿಗಳು ಸಂಭಾವಿತವಾದ ಕಾರಣ, ಸ್ಥಿತಿಯನ್ನು ಕುರಿತು ಉತ್ಪತ್ತಿಯು ಉಪಜೀವ್ಯವಾಗಿದೆ. ಉಪಜೀವ್ಯವಾದ್ದರಿಂದ ಅಭ್ಯರ್ಹಿತವಾಗಿದೆ. ಹೀಗೆ ಉತ್ಪತ್ತಿಯು ಅಭ್ಯರ್ಹಿತವಾದ್ದರಿಂದ ವಾರ್ತಿಕಾನುಸಾರವಾಗಿ ಉತ್ಪತ್ತಿಶಬ್ದವನ್ನು ಮೊದಲು ಪ್ರಯೋಗಿಸಿದ್ದು ಸಮಂಜಸವೇ ಆಗಿದೆ ಎಂದು ಭಾವ.

**ಜಗಜ್ಜನ್ಮಾದಿಕರ್ತೃತ್ವ - ಶ್ರೀಪತಿತ್ವ ಎರಡು ವಿಶೇಷಣಗಳೇಕೆ ?**

**ಪ್ರ :** ಶ್ರೀಮಟ್ಟೀಕಾಕೃತ್ಪಾದರು ಮಂಗಳಶ್ಲೋಕದಲ್ಲಿ

**''ವಿಶ್ವೋತ್ಪತ್ತಿಸ್ಥಿತಿಧ್ವಂಸಕಾರಣಂ ರಮಣಂ ಶ್ರಿಯಃ।''**

ಎಂಬುದಾಗಿ ಭಗವಂತನಿಗೆ ಜಗಜ್ಜನ್ಮಾದಿಕರ್ತೃತ್ವ-ಶ್ರೀಪತಿತ್ವ ಎಂಬ ಎರಡು ವಿಶೇಷಣಗಳನ್ನು ಏಕೆ ನೀಡಿದ್ದಾರೆ ? ಅಂದರೆ ಈ ಎರಡು ವಿಶೇಷಣಗಳನ್ನು ಕೊಡುವುದರ ಹಿನ್ನೆಲೆಯಲ್ಲಿ ಏನು ಉದ್ದೇಶವಿದೆ ?

**ಉ :** ಈ ತತ್ತ್ವೋದ್ಯೋತಗ್ರಂಥದಲ್ಲಿ ಮುಕ್ತಜೀವರಿಗೂ ಈಶ್ವರನಿಗೂ ಭೇದವನ್ನು ಸಮರ್ಥಿಸುತ್ತಾರೆ. ಭೇದಜ್ಞಾನವು ವ್ಯಾವರ್ತಕಧರ್ಮಜ್ಞಾನಸಾಧ್ಯವಾಗಿದೆ. ಅಂದರೆ- ವ್ಯಾವರ್ತಕಧರ್ಮಗಳನ್ನು ಹೇಳಿದರೆ ಭೇದಜ್ಞಾನವು ಸುಲಭವಾಗಿ ಉಂಟಾಗುತ್ತದೆ. ಪ್ರಕೃತದಲ್ಲಿ ಮುಕ್ತ-ಈಶ್ವರರಲ್ಲಿ ಭೇದಜ್ಞಾನ

ಆಗಬೇಕಾದರೆ ವ್ಯಾವರ್ತಕಧರ್ಮಗಳನ್ನು ಹೇಳಬೇಕು. ಹಾಗಾಗಿ ಟೀಕಾಕೃತ್ಪಾದರು ಮಂಗಳಶ್ಲೋಕದಲ್ಲಿ- ೧) ಜಗಜ್ಜನ್ಮಾದಿಕರ್ತೃತ್ವ ೨) ಶ್ರೀಪತಿತ್ವ ಎಂಬ ಎರಡು ಧರ್ಮಗಳನ್ನು ವ್ಯಾವರ್ತಕಧರ್ಮವಾಗಿ ಹೇಳಿದ್ದಾರೆ. ಮುಕ್ತರಲ್ಲಿ ಜಗಜ್ಜನ್ಮಾದಿಕರ್ತೃತ್ವ ಇಲ್ಲ ಎಂಬ ವಿಚಾರವನ್ನು

**ಓಂ ಜಗದ್ವ್ಯಾಪಾರವರ್ಜಮ್ ಓಂ**

ಎಂಬ ಸೂತ್ರದಲ್ಲಿ ಬಾದರಾಯಣರೇ ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಅದರಂತೆ ಶ್ರೀಪತಿತ್ವವೂ ಸಹ ಮುಕ್ತರಲ್ಲಿ ಇಲ್ಲ. ಶ್ರೀಪತಿತ್ವವು ವಿಷ್ಣುವಿನ ಅಸಾಧಾರಣಧರ್ಮವಾಗಿದೆ ಎನ್ನುವುದು

**''ಮಮ ಯೋನಿರಪ್ಸು ಅಂತಃಸಮುದ್ರೇ'**

ಇತ್ಯಾದಿ ಶ್ರುತಿಪ್ರಸಿದ್ಧವಾಗಿದೆ. ಈ ರೀತಿಯಾಗಿ ಮುಕ್ತ-ಈಶ್ವರರಲ್ಲಿ ಭೇದಜ್ಞಾನ ಮಾಡಿಸುವುದಕ್ಕಾಗಿ ಜಗಜ್ಜನ್ಮಾದಿಕರ್ತೃತ್ವ ಹಾಗೂ ಶ್ರೀಪತಿತ್ವ ಎಂಬ ಎರಡು ಧರ್ಮಗಳನ್ನು ವ್ಯಾವರ್ತಕಧರ್ಮಗಳಾಗಿ ಹೇಳಿದ್ದಾರೆ ಎಂದು ಅಭಿಪ್ರಾಯ.

**ಅವಕಾರಿಕಾ :-** ಗ್ರಂಥಕ್ಕೆ ಅನಿವಾರ್ಯವಾಗಿ ಇರಲೇಬೇಕಾದ ಅನುಬಂಧ-ಚತುಷ್ಟಯವು (ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧಗಳು) ಇಲ್ಲ-ವಾದ್ದರಿಂದ ಶ್ರೀಮದಾಚಾರ್ಯರ ತತ್ತ್ವೋದ್ಯೋತಗ್ರಂಥವು ಅನಾರಂಭಣೀಯ -ವಾಗಿದೆ ಎಂಬುದಾಗಿ ಶಂಕೆ ಬಂದರೆ, ಆ ಶಂಕೆಯನ್ನು ನಿರಾಕರಿಸುವವರಾಗಿ (ಅನುಬಂಧಚತುಷ್ಟಯವನ್ನು ತೋರಿಸುವವರಾಗಿ) ಆಚಾರ್ಯರ ಮೂಲಗ್ರಂಥದ ಮಂಗಳಶ್ಲೋಕಕ್ಕೆ ಅವತಾರಿಕೆ ನೀಡುತ್ತಾರೆ :-

**ಗ್ರಂಥಾವತರಣಿಕೆ**

**ಟೀಕಾ :- ಇಹ ಅವಿದ್ಯಾತಿಮಿರನಿರಂತರೇ ಸಂಸಾರಕಾಂತಾರೇ ಪರಿಖಿನ್ನಾನಾ-ಮಲ್ಪಾಸ್ಥಿರಸುಖಖದ್ಯೋತಿಕಾಸು ದ್ಯೋತಮಾನಾಸ್ವಪಿ ಮನಃಪ್ರಸಾದಮನಾಸಾ-ದಯತಾಮಧಿಕಾರಿಣಾಮನಂತಾನಂದನಿದಾನಸ್ಯ ಪರಮಪುರುಷತತ್ತ್ವೋದ್ಯೋತಸ್ಯ ಸಿದ್ಧ್ಯೇ ಸಮೀಹಮಾನೋ ಭಗವಾನಾಚಾರ್ಯಸೂರ್ಯಃ ಸ್ವಯಮಂತರಾಯ-ವಿಧುರೋಽಪಿ ನಿರಂತರಾಯಪ್ರಾರಿಪ್ಸಿತಪರಿಸಮಾಪ್ತ್ಯಾದೇರಂಗಮಿಷ್ಟದೇವತಾಭಿ-ಪೂಜನಂ ಶಿಷ್ಯಾನ್ ಗ್ರಾಹಯಿತುಂ ಪ್ರಕರಣಾದೌ ನಿಬಧ್ನಾತಿ ।**

**ಅನುವಾದ:** ಅಧಿಕಾರಿ-ಅನಧಿಕಾರಿವರ್ಗದಲ್ಲಿ ಅಜ್ಞಾನ ಎಂಬ ಅಂಧಕಾರದಿಂದ ನಿಬಿಡವಾದ, ದುರ್ಗಮವಾದ ಮಾರ್ಗಉಳ್ಳ ಅರಣ್ಯದಲ್ಲಿ (ಸಂಚರಿಸುತ್ತಾ) ದುಃಖಿತರಾದ, ಅತ್ಯಲ್ಪವಾದ ಅಶಾಶ್ವತವಾದ ವೈಷಯಿಕ ಸುಖವೆಂಬ ಖದ್ಯೋತಿಕಾಗಳು (ದೀಪದ ಹುಳಗಳು) ಪ್ರಕಾಶಿಸುತ್ತಿದ್ದರೂ ಸಹ ಮನಃಪ್ರಸಾದವನ್ನು ಹೊಂದದ ಅಧಿಕಾರಿಗಳಿಗೆ ಅನಂತಕಾಲೀನ ಸ್ವರೂಪಾನಂದಾನುಭವಕ್ಕೆ ಕಾರಣವಾದ, ಪರಮಪುರುಷತತ್ತ್ವದ (ಪರಮಾತ್ಮನ) ಜ್ಞಾನವನ್ನು ಮಾಡಿಸುವುದಕ್ಕಾಗಿ ಪ್ರವೃತ್ತರಾದ, ಪರಮಪೂಜ್ಯರಾದ, ಶ್ರೀಮದಾಚಾರ್ಯರೆಂಬ ಸೂರ್ಯರು ತಾವು ವಿಘ್ನರಹಿತರಾದರೂ ಕೂಡ, ತಾವು ರಚಿಸಲು ಹೊರಟ 'ತತ್ತ್ವೋದ್ಯೋತ' ಗ್ರಂಥದ ನಿರ್ವಿಘ್ನಪರಿಸಮಾಪ್ತಿ-ಪ್ರಚಯಗಳಿಗೆ ಅಂಗವಾದ, ಇಷ್ಟದೇವತಾನಮನರೂಪವಾದ ಮಂಗಳಾಚರಣೆ-ಯನ್ನು ಮನಸ್ಸಿನಲ್ಲಿಯೇ ಮಾಡಿಕೊಂಡು ಅಸನ್ನಿಹಿತರಾದ ಶಿಷ್ಯರಿಗೆ ಶಿಕ್ಷಣ ಕೊಡುವುದಕ್ಕಾಗಿ ಗ್ರಂಥದ ಪ್ರಾರಂಭದಲ್ಲಿ ಮಂಗಳಶ್ಲೋಕವನ್ನು ನಿಬಂಧನ ಮಾಡುತ್ತಾರೆ.

**ವಿವರಣೆ :** ಶ್ರೀಮದಾಚಾರ್ಯರು ತತ್ತ್ವೋದ್ಯೋತ ಗ್ರಂಥವನ್ನು ಯಾಕೆ ರಚಿಸಲು ಹೊರಟಿದ್ದಾರೆ ? ಎಂಬುದಾಗಿ ತಿಳಿಸಲು ಹೊರಟ ಶ್ರೀಮಟ್ಟೀಕಾ-ಕೃತ್ಪಾದರು ನಮ್ಮ ಪರಿಸ್ಥಿತಿಯನ್ನು ಉತ್ತಮ ಉದಾಹರಣೆ ಮೂಲಕ ನಿರೂಪಿಸುತ್ತಿದ್ದಾರೆ.

ಬಹಳ ಗಾಢವಾದ ಅಂಧಕಾರದಿಂದ ಕೂಡಿದ, ಅಂತೆಯೇ ದುರ್ಗಮವಾದ ದಾರಿಗಳುಳ್ಳ ದೊಡ್ಡ ಅರಣ್ಯದಲ್ಲಿ ಸಂಚರಿಸುವಾಗ ನಾವು ಬಹಳ ದುಃಖಿತ-ರಾಗಿರುತ್ತೇವೆ. ಅಲ್ಲಲ್ಲಿ ಅಲ್ಲಲ್ಲಿ ದೀಪದ ಹುಳಗಳು ಓಡಾಡುತ್ತಿದ್ದರೂ (ದೀಪದ ಹುಳಗಳ ಅತ್ಯಲ್ಪ ಬೆಳಕು ನಮ್ಮ ಸಂಚಾರಕ್ಕೆ ಏನೂ ಉಪಯೋಗ ಬೀಳದ ಕಾರಣ) ಅದರಿಂದ ಮನಸ್ಸಿಗೆ ಸಮಾಧಾನ ಆಗುವುದಿಲ್ಲ. ಅಂತಹ ಪರಿಸ್ಥಿತಿಯಲ್ಲಿ ನಮಗೆ ಸೂರ್ಯನೇ ಉದಯಿಸಬೇಕು.

ಅದರಂತೆ ಪ್ರಕೃತ ಸಂಸಾರವೇ ಒಂದು ದೊಡ್ಡ ಅರಣ್ಯ. ಅದು ಅಜ್ಞಾನ ಎಂಬ ನಿಬಿಡವಾದ ಅಂಧಕಾರದಿಂದ ಕೂಡಿದ್ದು, ಬಹಳ ದುರ್ಗಮವಾಗಿದೆ. ಇಂತಹ ಸಂಸಾರವೆಂಬ ಗಹನಾರಣ್ಯದಲ್ಲಿ ಇರುವ ನಾವು ಬಹಳ ದುಃಖಿತ-ರಾಗಿದ್ದೇವೆ. ಸಂಸಾರದಲ್ಲಿ ಆಗಾಗ ಆಗಾಗ ವೈಷಯಿಕ ಸುಖಗಳನ್ನು ಅನುಭವಿಸುತ್ತೇವೆಯಾದರೂ, ಆ ವೈಷಯಿಕಸುಖವು ಅತ್ಯಲ್ಪ ಹಾಗೂ

ಅಶಾಶ್ವತವಾದ್ದರಿಂದ ಅದರಿಂದ ನಮ್ಮ ಮನಸ್ಸಿಗೆ ಸಮಾಧಾನ ಆಗುವುದಿಲ್ಲ. ಇಂತಹ ಸಂಸಾರವೆಂಬ ಗಹನಾರಣ್ಯದಲ್ಲಿ ಸಿಕ್ಕು ದುಃಖಿತರಾದ ನಮಗೆ ಸೂರ್ಯೋದಯವೇ ಆವಶ್ಯಕವಾದ್ದರಿಂದ ಶ್ರೀಮದಾಚಾರ್ಯರೆಂಬ ಸೂರ್ಯರು ಅವತರಿಸಿದ್ದಾರೆ. ವೈಷಯಿಕಸುಖದಿಂದ ತೃಪ್ತರಾಗದ ನಮಗೆ ಅನಂತಕಾಲೀನ ಸ್ವರೂಪಸುಖವನ್ನು (ಮೋಕ್ಷವನ್ನು) ಕೊಡಲು ಉದ್ಯುಕ್ತರಾಗಿ, ಅದಕ್ಕೆ ಕಾರಣವಾದ ಪರಮಾತ್ಮನ ಜ್ಞಾನವನ್ನು ಮಾಡಿಸುವುದಕ್ಕಾಗಿ ತತ್ತ್ವೋದ್ಯೋತ ಗ್ರಂಥವನ್ನು ರಚಿಸುತ್ತಿದ್ದಾರೆ ಎಂದು ಆಶಯ.

**-: ವ್ಯಾಖ್ಯಾನ ವಿಶೇಷಗಳು :-**

**ಮಂಗಳಾಚರಣೆಯ ಕೃತ್ಯ**

**ಪ್ರ:** ಮಂಗಳಾಚರಣೆ ಮಾಡುವ ಉದ್ದೇಶವೇನು ? ತಾವು ಬರೆಯಲು ಹೊರಟ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿ ಆಗುವುದಕ್ಕಾಗಿ ಮಂಗಳಾಚರಣೆ ಅನುಷ್ಠೇಯವಾಗಿದೆ. ಆದರೆ ಇದು ವಿಘ್ನ ಉಳ್ಳ ಇತರರಿಗೆ ಅನ್ವಯಿಸುತ್ತದೆ-ಯಾದರೂ, ಶ್ರೀಮದಾಚಾರ್ಯರಿಗೆ ಅನ್ವಯಿಸುವುದಿಲ್ಲ. ಕಾರಣ ಶ್ರೀಮದಾಚಾರ್ಯರಿಗೆ ವಿಘ್ನಗಳೇ ಇಲ್ಲ. ವಿಘ್ನರಹಿತರಾದ ಶ್ರೀಮದಾಚಾರ್ಯರಿಗೆ ಗ್ರಂಥದ ಸಮಾಪ್ತಿ ಎನ್ನುವುದು ಅನ್ಯಥಾಸಿದ್ಧವಾಗಿದೆ. ಮಂಗಳಾಚರಣೆ ಮಾಡದೇ ಇದ್ದರೂ ಗ್ರಂಥಸಮಾಪ್ತಿ ಆಗೇ ಆಗುತ್ತದೆ. ವಿಘ್ನಪರಿಹಾರಕ್ಕಾಗಿ ಮಂಗಳಾಚರಣೆ ಮಾಡುವ ಅಗತ್ಯ ಇಲ್ಲ. ಅಂದಮೇಲೆ ಶ್ರೀಮದಾಚಾರ್ಯರು ಮಂಗಳಾಚರಣೆ ಏಕೆ ಮಾಡಿದರು ?

**ಉ :** ಶ್ರೀಮದಾಚಾರ್ಯರಿಗೆ ವಿಘ್ನಗಳೇ ಇಲ್ಲವಾದ್ದರಿಂದ ನಿರ್ವಿಘ್ನ-ಪರಿಸಮಾಪ್ತಿಗಾಗಿ ಮಂಗಳಾಚರಣೆ ಮಾಡುವ ಅಗತ್ಯ ಇಲ್ಲ ನಿಜವೇ. ಆದರೆ ಪ್ರಕೃತ ಶ್ರೀಮದಾಚಾರ್ಯರು ನಿರ್ವಿಘ್ನಪರಿಸಮಾಪ್ತಿಗಾಗಿ ಮಂಗಳಾಚರಣೆ ಮಾಡಿಲ್ಲ. ಕಿಂತು ಅವರು ಪರಮಾಸ್ತಿಕರಾದ ಕಾರಣ ಯಾವಾಗಲೂ ಭಗವಂತನನ್ನು ನಮಸ್ಕರಿಸುವುದರಲ್ಲಿಯೇ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ ಆದ್ದರಿಂದ, ಯಾವ ಫಲಾಪೇಕ್ಷೆಯೂ ಇಲ್ಲದೇ ಸ್ವಾಭಾವಿಕವಾಗಿ ನಮಸ್ಕಾರ (ಮಂಗಳಾನುಷ್ಠಾನ) ಮಾಡಿದ್ದಾರೆ.

**ಪ್ರ :** ಹಾಗಾದರೆ ತಾವು ದೈಹಿಕವಾಗಿ, ವಾಚನಿಕವಾಗಿ ಅಥವಾ ಮಾನಸಿಕವಾಗಿ ಮಂಗಳಾಚರಣೆ ಮಾಡಿಕೊಂಡಿದ್ದರೂ ಅದನ್ನು ಗ್ರಂಥದಲ್ಲಿ ಏಕೆ ಬರೆದಿದ್ದಾರೆ ?

**ಉ :** ಆಚಾರ್ಯರಿಗೆ ವಿಘ್ನವಿಲ್ಲವಾದ್ದರಿಂದ ಅವರು ನಿರ್ವಿಘ್ನ-ಪರಿಸಮಾಪ್ತಿಗಾಗಿ ಮಂಗಳಾಚರಣೆ ಮಾಡಬೇಕಿಲ್ಲ ನಿಜವೇ. ಆದರೆ ಶಿಷ್ಯರು ವಿಘ್ನಗಳುಳ್ಳವರಾದ್ದರಿಂದ, ನಿರ್ವಿಘ್ನಪರಿಸಮಾಪ್ತಿಗಾಗಿ ಮಂಗಳಾಚರಣೆ ಮಾಡುವ ಅಗತ್ಯ ಶಿಷ್ಯರಿಗೆ ಇದೆ. ಹಾಗಾಗಿ

**ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।**

ಎಂದು ಹೇಳಿದಂತೆ ತಾವು ಗ್ರಂಥದ ಪ್ರಾರಂಭದಲ್ಲಿ ಮಂಗಳಾಚರಣೆ ಮಾಡಿ ತೋರಿಸಿದರೆ, ತಮ್ಮ ಶಿಷ್ಯರೂ ತಮ್ಮನ್ನು ಅನುಸರಿಸುತ್ತಾರೆ. 'ಆಚಾರ್ಯರು ಗ್ರಂಥಾರಂಭದಲ್ಲಿ ಮಂಗಳಾನುಷ್ಠಾನ ಮಾಡಿದ್ದಾರೆಂದಮೇಲೆ ನಾವೂ ಸಹ ನಿರ್ವಿಘ್ನಪರಿಸಮಾಪ್ತಿಗಾಗಿ ಗ್ರಂಥಾರಂಭದಲ್ಲಿ ಮಂಗಳಾನುಷ್ಠಾನ ಮಾಡಬೇಕು' ಎಂಬುದಾಗಿ ತಿಳಿದು ಶಿಷ್ಯರೂ ಅನುಷ್ಠಾನ ಮಾಡುತ್ತಾರೆ. ಹೀಗೆ ಅಸನ್ನಿಹಿತರಾದ ಶಿಷ್ಯರಿಗೆ ಶಿಕ್ಷಣ ನೀಡುವುದಕ್ಕಾಗಿ ಆಚಾರ್ಯರು ಮಂಗಳಶ್ಲೋಕವನ್ನು ಗ್ರಂಥದ ಪ್ರಾರಂಭದಲ್ಲಿ ನಿಬಂಧನ ಮಾಡಿದ್ದಾರೆ ಎಂದು ಅಭಿಪ್ರಾಯ.

**ಅಧಿಕಾರ್ಯಾದಿ ಅನುಬಂಧಚತುಷ್ಟಯ**

ಶ್ರೀಮದಾಚಾರ್ಯರ ತತ್ತ್ವೋದ್ಯೋತ ಗ್ರಂಥದಲ್ಲಿ ಅಧಿಕಾರಿ ಮೊದಲಾದ ಅನುಬಂಧಚತುಷ್ಟಯ ಇಲ್ಲವಾದ್ದರಿಂದ ಮೂಲಗ್ರಂಥವೇ ಅನಾರಂಭಣೀಯ-ವಾಗಿದೆ ಎಂಬುದಾಗಿ ಶಂಕೆ ಬಂದಿತ್ತು. ಆ ಶಂಕೆಗೆ ಉತ್ತರರೂಪವಾಗಿ ಟೀಕಾ ಕೃತ್ಪಾದರು ಆಚಾರ್ಯರ ತತ್ತ್ವೋದ್ಯೋತ ಗ್ರಂಥಕ್ಕೆ ಅನುಬಂಧಚತುಷ್ಟಯವನ್ನು ಇಲ್ಲಿ ನಿರೂಪಿಸಿದ್ದಾರೆ.

ಅದು ಹೇಗೆಂದರೆ -

★ ''ಅಲ್ಪಾಸ್ಥಿರಸುಖಖದ್ಯೋತಿಕಾಸು ದ್ಯೋತಮಾನಾಸ್ವಪಿ ಮನಃಪ್ರಸಾದ-ಮನಾಸಾದಯತಾಂ ಅಧಿಕಾರಿಣಾಂ'' ಎಂಬ ವಾಕ್ಯದಿಂದ ವಿವಿಧ-ಸಾಂಸಾರಿಕದುಃಖದರ್ಶನದಿಂದ ವಿಷಯವೈರಾಗ್ಯ ಹೊಂದಿದವನೇ ಈ ಗ್ರಂಥಕ್ಕೆ ಅಧಿಕಾರಿ ಎಂದು ಹೇಳಿದಂತಾಯಿತು.

★ ''ಪರಮಪುರುಷತತ್ತ್ವೋದ್ಯೋತಸ್ಯ'' ಎಂಬ ವಾಕ್ಯದಿಂದ ಪರಮ-ಪುರುಷತತ್ತ್ವವೇ ಈ ಗ್ರಂಥಕ್ಕೆ ವಿಷಯ ಎಂದು ಹೇಳಿದಂತಾಯಿತು.

★ ''ಅನಂತಾನಂದನಿದಾನಸ್ಯ ಪರಮಪುರುಷತತ್ತ್ವೋದ್ಯೋತಸ್ಯ ಸಿದ್ಧಯೇ''

ಎಂಬ ವಾಕ್ಯದಿಂದ ಪರಮಪುರುಷತತ್ತ್ವದ ಜ್ಞಾನವೇ (ಭಗವಂತನ ಜ್ಞಾನವೇ) ಅವಾಂತರಪ್ರಯೋಜನ, ಅನಂತವಾದ ಆನಂದವೇ (ಶಾಶ್ವತಸುಖಸ್ಥಾನವಾದ ಮೋಕ್ಷವೇ) ಮುಖ್ಯಪ್ರಯೋಜನ ಎಂದು ಹೇಳಿದಂತಾಯಿತು.

★ ತತ್ತ್ವಜ್ಞಾನಕ್ಕೂ ಗ್ರಂಥಕ್ಕೂ ಜನ್ಯಜನಕಭಾವಸಂಬಂಧ, ಅನಂತಾನಂದಕ್ಕೂ (ಮೋಕ್ಷಕ್ಕೂ) ತತ್ತ್ವಜ್ಞಾನಕ್ಕೂ ಸಾಧ್ಯಸಾಧನಭಾವಸಂಬಂಧ, ಹೀಗೆ ಸಂಬಂಧವನ್ನು ಹೇಳಿದಂತಾಯಿತು.

ಈ ರೀತಿಯಾಗಿ ಅಧಿಕಾರಿ-ವಿಷಯ-ಪ್ರಯೋಜನ-ಸಂಬಂಧ ಎಂಬ ಅನುಬಂಧಚತುಷ್ಟಯ ಇರುವುದರಿಂದ ಆಚಾರ್ಯರ ತತ್ತ್ವೋದ್ಯೋತಗ್ರಂಥವು (ಅನಾರಂಭಣೀಯ ಅಲ್ಲ) ಆರಂಭಣೀಯವೇ ಆಗಿದೆ ಎಂದು ಸ್ಫುಟವಾಗಿ ಸಿದ್ಧವಾಗುತ್ತದೆ.

**ಮೂಲದಲ್ಲಿ ಮಂಗಲಾಚರಣೆ**

**ಮೂಲ :- ಸರ್ವತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ ।**
**ನಿತ್ಯಾತಾದೃಶಚಿಚ್ಚೇತ್ಯಯಂತೇಷ್ಟೋ ನೋ ರಮಾಪತಿಃ ॥★॥**

**ಮೂಲಾರ್ಥ :- ರಮಾಪತಿಃ** ಲಕ್ಷ್ಮೀಪತಿಯಾದ ಭಗವಂತನು **ಸರ್ವತ್ರ** ಸಕಲ ಚಿತ್‌ಚೇತ್ಯಗಳನ್ನು ನಿಯಮನ ಮಾಡುವ ವಿಷಯದಲ್ಲಿ **ಅಖಿಲಸಚ್ಛಕ್ತಿಃ** ಪರ್ಯಾಪ್ತವಾದ, ಪ್ರತಿಬಂಧಾದಿದೋಷರಹಿತವಾದ ಶಕ್ತಿ ಉಳ್ಳವನಾಗಿದ್ದಾನೆ. **ರಮಾಪತಿಃ** ಲಕ್ಷ್ಮೀಪತಿಯಾದ ಭಗವಂತನು **ಸ್ವತಂತ್ರಃ** ಸ್ವೇಚ್ಛಾಧೀನಪ್ರವೃತ್ತಿ ಉಳ್ಳವನಾಗಿದ್ದಾನೆ. **ರಮಾಪತಿಃ** ಲಕ್ಷ್ಮೀಪತಿಯಾದ ಭಗವಂತನು **ಅಶೇಷದರ್ಶನಃ** ಸರ್ವವಿಷಯಕಜ್ಞಾನ ಉಳ್ಳವನಾಗಿದ್ದಾನೆ. (ಸರ್ವಜ್ಞನಾಗಿದ್ದಾನೆ.) **ರಮಾಪತಿಃ** ಲಕ್ಷ್ಮೀಪತಿಯಾದ ಭಗವಂತನು **ನಿತ್ಯಾತಾದೃಶಚಿಚ್ಚೇತ್ಯಯಂತಾ** ನಿತ್ಯದಲ್ಲಿಯೂ ಅತಾದೃಶವಾದ (ಅಪರ್ಯಾಪ್ತಶಕ್ತಿ ಉಳ್ಳ, ಅಸ್ವತಂತ್ರವಾದ, ಅಸರ್ವಜ್ಞವಾದ) ಚಿತ್‌ಚೇತ್ಯಗಳನ್ನು ನಿಯಮಿಸುವವನಾಗಿದ್ದಾನೆ. **ರಮಾಪತಿಃ** ಲಕ್ಷ್ಮೀಪತಿಯಾದ ಭಗವಂತನು **ನಃ ಇಷ್ಟಃ** ನಮಗೆ ಇಷ್ಟನಾಗಿದ್ದಾನೆ.

**ಅವತಾರಿಕೆ** - ಮಂಗಳಪದ್ಯದಲ್ಲಿ 'ರಮಾಪತಿಃ ಜಯತಿ' ಇತ್ಯಾದಿಯಾಗಿ ಕ್ರಿಯಾಪದವು ಇಲ್ಲವಾದ್ದರಿಂದ ವಾಕ್ಯವು ಸಾಕಾಂಕ್ಷವಾಯಿತಲ್ಲವೇ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಉತ್ತರ ಕೊಡುತ್ತಾರೆ -

**ಟೀಕಾ: ದೇವತಾಸ್ತುತಿಮಾತ್ರಪರತ್ವಾದಸ್ಯ ಶ್ಲೋಕಸ್ಯ ಕ್ರಿಯಾಭಿಸಂಬಂಧಾ-ಭಾವೋ ನ ದೋಷಾಯ । ಕಿಂತು ರಮಾಪತಿಃ ಸರ್ವತ್ರಾಖಿಲ-ಸಚ್ಛಕ್ತಿರಿತ್ಯಾದಿರೂಪೈವ ಯೋಜನಾ ।**

**ಅನುವಾದ :-** ಈ ಮಂಗಳಪದ್ಯವು ದೇವತಾಸ್ತುತಿರೂಪವಾಗಿದೆಯಾದ್ದರಿಂದ ಇಲ್ಲಿ ಕ್ರಿಯಾಪದ ಇಲ್ಲದಿರುವುದು ದೋಷವಾಗುವುದಿಲ್ಲ. ಹೌದು, ದೇವತಾಸ್ತುತಿರೂಪವಾದರೂ ಸಹ

**ನಾರಾಯಣೋಽಗಣ್ಯಗುಣನಿತ್ಯೈಕನಿಲಯಾಕೃತಿಃ ।**
**ಅಶೇಷದೋಷರಹಿತಃ ಪ್ರೀಯತಾಂ ಕಮಲಾಲಯಃ ।।**

ಇತ್ಯಾದಿ ಪದ್ಯಗಳಲ್ಲಿ ಕ್ರಿಯಾಪದವು ಇರುವುದು ಕಂಡಿದೆಯಲ್ಲವೇ? ಎಂದರೆ, ಅದಕ್ಕಾಗಿ 'ದೇವತಾಸ್ತುತಿ**ಮಾತ್ರ**ಪರತ್ವಾತ್' ಎಂಬುದಾಗಿ ಮಾತ್ರಶಬ್ದ ಹಾಕಿದ್ದಾರೆ ಟೀಕಾಕೃತ್ಪಾದರು. 'ನಾರಾಯಣೋಽಗಣ್ಯಗುಣ...' ಇತ್ಯಾದಿ ಪದ್ಯಗಳು ದೇವತಾಸ್ತುತಿಪರವಾಗಿದ್ದರೂ ಅಲ್ಲಿ 'ಪ್ರೀಯತಾಂ ಕಮಲಾಲಯಃ' ಎಂಬುದಾಗಿ ಪ್ರೀತಿಯ ಆಶಂಸನೆಯನ್ನೂ ಮಾಡಿರುವುದರಿಂದ ಅವು ದೇವತಾಸ್ತುತಿಮಾತ್ರಪರವಾಗಿಲ್ಲ. ಅಂದರೆ ಅಲ್ಲಿ ಪ್ರೀತಿಯ ಆಶಂಸನೆ ಇರುವುದರಿಂದ ಕ್ರಿಯಾಪದವು ಆವಶ್ಯಕವಾಗಿದೆ. ಪ್ರಕೃತ ಇಲ್ಲಿ ಪ್ರೀತಿಯ ಆಶಂಸನೆ ಇಲ್ಲವಾದ್ದರಿಂದ ಕ್ರಿಯಾಪದವು ಆವಶ್ಯಕವಾಗಿಲ್ಲ. ಹೀಗೆ ದೇವತಾಸ್ತುತಿಮಾತ್ರಪರವಾದ್ದರಿಂದ ಇಲ್ಲಿ ಕ್ರಿಯಾಪದ ಇಲ್ಲದಿರುವುದು ದೋಷವಾಗುವುದಿಲ್ಲ ಎಂದು ಅಭಿಪ್ರಾಯ.

'ವಿಶ್ವಂ ವಿಷ್ಣುಃ ವಷಟ್ಕಾರಃ' ಇತ್ಯಾದಿ ಪದ್ಯಗಳು ದೇವತಾಸ್ತುತಿಮಾತ್ರಪರ-ವಾದ್ದರಿಂದ ಅಲ್ಲಿ ಕ್ರಿಯಾಪದ ಇಲ್ಲದಿರುವುದು ಹೇಗೆ ದೋಷವಲ್ಲವೋ ಹಾಗೆ ಎಂದು ಭಾವ.

ಹಾಗಾದರೆ ಕ್ರಿಯಾಪದ ಇಲ್ಲವಾದರೆ ಅನ್ವಯ ಹೇಗೆ ಮಾಡಿಕೊಳ್ಳುವುದು ? ಎಂದು ಪ್ರಶ್ನೆ ಬಂದರೆ, ಟೀಕಾಕೃತ್ಪಾದರು ಅನ್ವಯ ತೋರಿಸುತ್ತಾರೆ - **ಕಿಂತು** ಇತ್ಯಾದಿಯಾಗಿ.

**ರಮಾಪತಿಃ ಸರ್ವತ್ರ ಅಖಿಲಸಚ್ಛಕ್ತಿಃ    ರಮಾಪತಿಃ ಸ್ವತಂತ್ರಃ**
**ರಮಾಪತಿಃ ಅಶೇಷದರ್ಶನಃ    ರಮಾಪತಿಃ ನಿತ್ಯಾತಾದೃಶಚಿಚ್ಚೇತ್ಯಯಂತಾ**
**ರಮಾಪತಿಃ ನಃ ಇಷ್ಟಃ**

ಈ ರೀತಿಯಾಗಿ ಐದು ವಿಧವಾಗಿ ವಾಕ್ಯಭೇದ ಮಾಡಿಕೊಂಡು, ಅನ್ವಯ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ.

**ಅವತಾರಿಕೆ :-** ಹಾಗಾದರೆ ಪದಗಳಲ್ಲಿ ಪರಸ್ಪರವಾಗಿ ಸಂಗತಿ ಇಲ್ಲ ಎಂದಾಯಿತಲ್ಲವೇ? ಮತ್ತು ಸಂಗತವಾದ ಬೇರೆ ವಿಶೇಷಣಗಳನ್ನು ಬಿಟ್ಟು ಈ (ಅಸಂಗತವಾದ) ವಿಶೇಷಣಗಳಿಂದಲೇ ಸ್ತೋತ್ರ ಮಾಡುವುದಕ್ಕೆ ಏನಾದರೂ ಫಲವನ್ನೂ ಹೇಳಬೇಕಲ್ಲವೇ?

ಈ ವಿಧವಾದ ಶಂಕೆಗೆ ಸಮಾಧಾನ ಹೇಳುತ್ತಾರೆ -

**ಟೀಕಾ : ಯದ್ಯಪ್ಯತ್ರ ನ ವಿಶೇಷಣಾನಾಂ ಪರಸ್ಪರಸಂಗತ್ಯಪೇಕ್ಷಾ । ವಿಶೇಷ್ಯ-ಪ್ರಶಂಸಾಮಾತ್ರಪರತ್ವೇನ ನಿರಾಕಾಂಕ್ಷತ್ವಾತ್ । ತಥಾಪ್ಯೇತೈರೇವ ಸ್ತವನೇ ಕಿಮಪಿ ಪ್ರಯೋಜನಮಭಿಧೀಯತೇ । ಅತ ಏವ ಚ ನ ವಾಕ್ಯಭೇದದೋಷಃ ।**

**ಅನುವಾದ :-** ಯದ್ಯಪಿ ಈ ಮಂಗಳಪದ್ಯದಲ್ಲಿ ವಿಶೇಷಣಗಳಲ್ಲಿ ಪರಸ್ಪರ ಸಂಗತ್ಯಪೇಕ್ಷಾ ಇಲ್ಲ. ಎಲ್ಲ ವಿಶೇಷಣಗಳೂ ವಿಶೇಷ್ಯಪ್ರಶಂಸಾಮಾತ್ರಪರ-ವಾದ್ದರಿಂದ ನಿರಾಕಾಂಕ್ಷವಾಗಿವೆ.

ಆದರೂ ಸಹ ಅಸಂಗತವಾದ ಈ ವಿಶೇಷಣಗಳಿಂದಲೇ ಸ್ತೋತ್ರ ಮಾಡುವುದಕ್ಕೆ ಏನು ಪ್ರಯೋಜನ ? ಎಂದರೆ, ಈ ವಿಶೇಷಣಗಳಿಂದ ಸ್ತೋತ್ರ ಮಾಡುವುದರಿಂದ ಈಶ್ವರಸಾಧಕವಾದ ಪ್ರಮಾಣವನ್ನು ಸೂಚಿಸಿದಂತಾಗುತ್ತದೆ. ಅದೇ (ಈಶ್ವರಸಾಧಕಪ್ರಮಾಣಸೂಚನೆಯೇ) ಇಲ್ಲಿ ಪ್ರಯೋಜನ ಎಂದು ಭಾವ.

ಹಾಗಾದರೆ ನೀವು ಹೇಳಿದ ಪ್ರಕಾರ- ''ರಮಾಪತಿಃ ಸರ್ವತ್ರ ಅಖಿಲಸಚ್ಛಕ್ತಿಃ'' ''ರಮಾಪತಿಃ ಸ್ವತಂತ್ರಃ'' ಇತ್ಯಾದಿಯಾಗಿ ಯೋಜನೆ ಮಾಡಿಕೊಳ್ಳುವುದಾದರೆ

**''ಸಂಭವತ್ಯೇಕವಾಕ್ಯತ್ವೇ ವಾಕ್ಯಭೇದೋ ಹಿ ದೂಷಣಮ್ ॥''**

ಎಂಬ ವಚನದಂತೆ ವಾಕ್ಯಭೇದ ಎಂಬ ದೋಷ ಬರುವುದಲ್ಲವೇ?

ಈ ವಿಧವಾದ ಶಂಕೆಗೆ ಅವಕಾಶವಿಲ್ಲ. ವಾಕ್ಯಭೇದದೋಷ ಬರುವುದಿಲ್ಲ. ಕಾರಣ- ಇತರ ವಿಶೇಷಣಗಳನ್ನು ಬಿಟ್ಟು ಈ ವಿಶೇಷಣಗಳಿಂದಲೇ ಸ್ತೋತ್ರ ಮಾಡುವುದಕ್ಕೆ ಏನೋ ಒಂದು ಪ್ರಯೋಜನ ಯಾವ ಕಾರಣ ಇರುವುದೋ ಆ

ಕಾರಣ ವಾಕ್ಯಭೇದದೋಷ ಇಲ್ಲ. ಅಂದರೆ - ''ರಮಾಪತಿಃ ಸರ್ವತ್ರ ಅಖಿಲಸಚ್ಛಕ್ತಿಃ'' ಇತ್ಯಾದಿ ಐದು ವಾಕ್ಯಗಳೂ ಈಶ್ವರಸಾಧಕಪ್ರಮಾಣರೂಪ-ಏಕಾರ್ಥಪರವಾದ್ದರಿಂದ ಏಕವಾಕ್ಯತೆ ಕೂಡುವುದರಿಂದ ಮಹಾವಾಕ್ಯಭೇದ ಇಲ್ಲವೇ ಇಲ್ಲ. ಅವಾಂತರವಾಕ್ಯಭೇದವಾದರೂ ದೋಷವಾಗುವುದಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** 'ರಮಾಪತಿಃ' ಎಂಬುದಾಗಿ ರಮಾಪತಿತ್ವವಿಶೇಷಣವನ್ನು ಕೊಡುವುದಕ್ಕೆ ವಿಶೇಷಕೃತ್ಯ ಹೇಳುತ್ತಾರೆ -

**ಟೀಕಾ : ತತ್ರ ವಿದ್ಯೋಪದೇಶಾವಸರೇ ಸಕಲವಾಙ್ಮನಸದೇವತಯಾ ರಮಯಾ ಯುತಸ್ಯೈವ ಹರೇಃ ಸ್ತುತಿರುಚಿತಾ । ಅತೋ ರಮಾಪತಿರಿತಿ ವಿಶೇಷ್ಯಂ ನಿರದಿಕ್ಷತ್ ॥**

**ಅನುವಾದ :-** ಗ್ರಂಥವನ್ನು ರಚಿಸುವ ಮೂಲಕ ವಿದ್ಯೋಪದೇಶ ಮಾಡುವುದು ಗ್ರಂಥಕಾರರ ಉದ್ದೇಶ. ಗ್ರಂಥವು ವಾಙ್ಮನೋವ್ಯಾಪಾರರೂಪವಾಗಿರುತ್ತದೆ. ಇಂತಹ ವಾಙ್ಮನೋವ್ಯಾಪಾರರೂಪವಾದ ಗ್ರಂಥದ ರಚನೆ ಆಗಬೇಕಾದರೆ, ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಬೇಕಾದರೆ ವಾಙ್ಮನಸದೇವತೆಯಾದ ಲಕ್ಷ್ಮೀದೇವಿಯ ಅನುಗ್ರಹವೂ ಅತ್ಯಾವಶ್ಯಕ. ಹಾಗಾಗಿ ಮಂಗಳಶ್ಲೋಕದಲ್ಲಿ ಲಕ್ಷ್ಮೀದೇವಿಯನ್ನೂ ನಮಸ್ಕರಿಸಬೇಕಾದದ್ದು ಅವಶ್ಯಕರ್ತವ್ಯ. ಆದರೆ ಲಕ್ಷ್ಮೀ-ದೇವಿಯನ್ನು ಪ್ರತ್ಯೇಕವಾಗಿ ನಮಸ್ಕರಿಸುವಂತಿಲ್ಲ. ಕಾರಣ- ಅವಳು ನಿತ್ಯಾ-ವಿಯೋಗಿನಿಯಾಗಿದ್ದಾಳೆ. ಹಾಗಾದರೆ ಲಕ್ಷ್ಮಿಯನ್ನು ನಮಿಸಲೇಬೇಕು. ಪ್ರತ್ಯೇಕವಾಗಿ ನಮಿಸುವಂತಿಲ್ಲ. ಏನು ಮಾಡುವುದು ?

**ವಿಶಿಷ್ಟಸ್ಯ ಯತ್ ಭವತಿ ವಿಶೇಷಣಸ್ಯಾಪಿ ತತ್ ಭವತಿ ।**

ವಿಶಿಷ್ಟಕ್ಕೆ ಹೇಳುವ ಕ್ರಿಯೆಯು ವಿಶೇಷಣವಾದದ್ದಕ್ಕೂ ಅನ್ವಿತವಾಗುತ್ತದೆ ಎಂದು ನಿಯಮ. ಉದಾ- 'ದಂಡಿನಮಾನಯ' ಎಂದು ಹೇಳಿದಾಗ, ದಂಡ-ವಿಶಿಷ್ಟನಾದ ದೇವದತ್ತನನ್ನು ಕರೆದುಕೊಂಡು ಬರುತ್ತಾನೆ. ದಂಡವಿಶಿಷ್ಟನಾದ ದೇವದತ್ತ ಬಂದಾಗ ವಿಶಿಷ್ಟನಾದ ದೇವದತ್ತನಲ್ಲಿರುವ ಆನಯನಕ್ರಿಯೆಯು ವಿಶೇಷಣವಾದ ದಂಡದಲ್ಲಿಯೂ ಇದೆ.

ಈ ನ್ಯಾಯವನ್ನು ಅನುಸರಿಸಿ ಲಕ್ಷ್ಮೀದೇವಿಯಿಂದ ವಿಶಿಷ್ಟನಾದ ಭಗವಂತನಿಗೆ ನಮಸ್ಕಾರ ಮಾಡಿಬಿಟ್ಟರೆ ವಿಶೇಷಣಳಾದ ಲಕ್ಷ್ಮೀದೇವಿಗೂ ನಮಸ್ಕಾರ ಸಲ್ಲುತ್ತದೆ

ಎಂಬ ಅಭಿಪ್ರಾಯದಿಂದ "**ರಮಾಪತಿಃ**" ಎಂಬುದಾಗಿ ವಿಶೇಷ್ಯಪದಪ್ರಯೋಗ ಮಾಡಿದ್ದಾರೆ (ಲಕ್ಷ್ಮೀವಿಶಿಷ್ಟನಾದ ಲಕ್ಷ್ಮೀಪತಿಯಾದ ಭಗವಂತನಿಗೆ ನಮಸ್ಕಾರ ಮಾಡಿದ್ದಾರೆ) ಎಂದು ಅಭಿಪ್ರಾಯ.

**ಅವತಾರಿಕೆ :-** ವಿಶೇಷಣಗಳು ಪರಸ್ಪರ ಅಸಂಗತವಾದರೂ ಇವುಗಳಿಂದಲೇ ಸ್ತೋತ್ರ ಮಾಡುವುದಕ್ಕೆ ಏನೋ ಒಂದು ಪ್ರಯೋಜನ ಇದೆ (ಈಶ್ವರಸಾಧಕ-ಪ್ರಮಾಣಸೂಚನೆ ಎಂಬ ಪ್ರಯೋಜನ ಇದೆ) ಎಂದು ಹೇಳಿದರು. ಆ ಪ್ರಯೋಜನವನ್ನು ತೋರಿಸಲು ಆಕ್ಷೇಪ ಮಾಡಿಕೊಳ್ಳುತ್ತಾರೆ -

**ಈಶ್ವರವಿಷಯದಲ್ಲಿ ಆಗಮಕ್ಕೆ ಪ್ರಾಮಾಣ್ಯಸಮರ್ಥನೆ**

**ಟೀಕಾ: ನನ್ವೀಶ್ವರ ಏವ ಕಿಂ ಪ್ರಮಾಣಮ್ ? ಆಗಮಂ ತಾವದ್ ಭ್ರೂಮಃ। ಶ್ರೂಯತೇ ಹಿ 'ದ್ಯಾವಾಭೂಮೀ ಜನಯನ್ ದೇವ ಏಕಃ' ಇತ್ಯಾದಿ। ಕೇವಲಸಿದ್ಧಾರ್ಥಬೋಧಕಸ್ಯ ಪ್ರವೃತ್ತ್ಯಾದ್ಯನಂಗತಯಾ ವೈಯರ್ಥ್ಯಪ್ರಸಂಗಾದಾಗಮಸ್ಯೇಶ್ವರೇ ನ ಪ್ರಾಮಾಣ್ಯಮಿತಿ ಚೇತ್, ತತ್ರಾಹ- ಇಷ್ಟ ಇತಿ।**

**ಯದ್ಧಿ ಯಸ್ಯೇಷ್ಟಂ ತತ್ತಂ ಪ್ರತಿ ಬೋಧನೀಯಂ ನಾನ್ಯತ್। ತಥಾ ಸತ್ಯನುಪಾದೇಯತಾಪ್ರಸಂಗಾತ್। ಇಷ್ಟಶ್ಚ ರಮಾಪತಿರಿತಿ ಯುಕ್ತ-ಮೇವ ತದ್ಬೋಧನಮ್। ನ ಚ ಪ್ರವೃತ್ತ್ಯಾದ್ಯನುಪಪತ್ತಿದೋಷಃ। ಇಷ್ಟಾನುಭವಸ್ಯೈವ ಪುರುಷಾರ್ಥತ್ವೇನ ತತಃ ಪ್ರಯೋಜನಾನ-ಪೇಕ್ಷಣಾತ್। ನ ಹಿ ಸುಖಾನುಭವಸ್ಯ ಪ್ರಯೋಜನಮನ್ವಿಷ್ಯತೇ। ತಸ್ಯೈವ ಸ್ವರಸಸುಂದರತ್ವಾತ್।**

**ಅನುವಾದ :-** (ಭಗವಂತನು) ಲಕ್ಷ್ಮೀಪತಿಯು ನಮಗೆ ಇಷ್ಟನಾಗಿದ್ದಾನೆ ಇತ್ಯಾದಿಯಾಗಿ ಹೇಳಿದ್ದು ಸಮಂಜಸವಾಗುತ್ತಿತ್ತು. ಯಾವಾಗ ? ಭಗವಂತನು ಪ್ರಮಾಣಸಿದ್ಧನಾಗಿದ್ದರೆ. ಆದರೆ ಆ ಭಗವಂತನೇ ಯಾವ ಪ್ರಮಾಣದಿಂದ ಸಿದ್ಧನಾಗಿದ್ದಾನೆ ? ಭಗವಂತ ಇದ್ದಾನೆ ಎಂಬ ವಿಷಯದಲ್ಲಿ ಏನು ಪ್ರಮಾಣ ?

ಗ್ರಂಥವು ವಾದಪ್ರಕ್ರಿಯೆಯಿಂದ ಹೊರಟಿರುತ್ತದೆ. ವಾದದಲ್ಲಿ-

**ಪೃಷ್ಟೇನಾಗಮ ಏವಾದೌ ವಕ್ತವ್ಯಃ ಸಾಧ್ಯಸಿದ್ಧಯೇ।**

ಪ್ರತಿಪಕ್ಷಿಯು ಪ್ರಮಾಣಪ್ರಶ್ನೆಯನ್ನು ಮಾಡಿದಾಗ ವಾದಿಯು ಉದ್ದೇಶ-

ಸಿದ್ಧಿಗಾಗಿ ಮೊದಲು ಆಗಮಪ್ರಮಾಣವನ್ನೇ ಹೇಳಬೇಕು ಎಂದು ನಿಯಮ. ಹಾಗಾಗಿ 'ಭಗವಂತ ಇದ್ದಾನೆ' ಎಂಬ ವಿಷಯದಲ್ಲಿ ಆಗಮಪ್ರಮಾಣವನ್ನು ಹೇಳುತ್ತೇವೆ.

**ದ್ಯಾವಾಭೂಮೀ ಜನಯನ್ ದೇವ ಏಕಃ ಏಕೋ ದಾಧಾರ ಭುವನಾನಿ ವಿಶ್ವಾ**
**ಉಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ ಯತ್ ಪ್ರಯಂತಿ**
**ಆತ್ಮಾನಮಂತರೋ ಯಮಯತಿ**

ಇತ್ಯಾದಿ ಅನೇಕ ಆಗಮಗಳು ಭಗವಂತನ ಅಸ್ತಿತ್ವವನ್ನು ಪ್ರತಿಪಾದಿಸುತ್ತಿರುವುದರಿಂದ ಆಗಮಗಳೇ ಭಗವಂತನ ವಿಷಯದಲ್ಲಿ ಪ್ರಮಾಣವಾಗಿವೆ.

ವೇದವು ಈಶ್ವರವಿಷಯಕ ಎನ್ನುವುದಾದರೆ ಪ್ರಮಾಣವೇ ಆಗದೇ ಹೋಗಬೇಕಾಗುತ್ತದೆ. ಹೇಗೆಂದರೆ- ಪರಬೋಧನೆಗಾಗಿ ವಾಕ್ಯಪ್ರಯೋಗ ಮಾಡುವುದರಿಂದ, ಪರಪ್ರವೃತ್ತಿನಿವೃತ್ತಿಔಪಯಿಕವಾದ ವಸ್ತುವೇ ವಾಕ್ಯದಿಂದ ಬೋಧ್ಯ ಎಂದು ಅಂಗೀಕರಿಸಬೇಕು. ಆ ವಿಧವಾದ ವಸ್ತು ಕಾರ್ಯವೇ ಆಗಿದೆ. ಕಾರ್ಯವಾಚಿಪದಸಹಿತವಾಕ್ಯದಿಂದ ಪ್ರವೃತ್ತ್ಯಾದಿಗಳು ಕಂಡಿವೆ, ಕಾರ್ಯವಾಚಿಪದರಹಿತವಾಕ್ಯದಿಂದ ಪ್ರವೃತ್ತ್ಯಾದಿಗಳು ಕಂಡಿಲ್ಲ. ಆದ್ದರಿಂದ ಪರಪ್ರವೃತ್ತಿನಿವೃತ್ತಿಔಪಯಿಕವಾದ ವಸ್ತು ಕಾರ್ಯವೇ. ಹಾಗಾಗಿ ವೇದವು ಕಾರ್ಯಪ್ರತಿಪಾದಕವಾಗುವುದಾದರೆ ಸಾರ್ಥಕವಾಗುತ್ತದೆ. ಈಶ್ವರನು ಪರಪ್ರವೃತ್ತಿನಿವೃತ್ತಿಔಪಯಿಕವಾದ ವಸ್ತು ಆಗಿಲ್ಲವಾದ್ದರಿಂದ ವೇದವು ಈಶ್ವರಪ್ರತಿಪಾದಕವಾಗುವುದಾದರೆ ಸ್ವಪ್ರಧಾನತಯಾ ಕಾರ್ಯತ್ವಾತಿರಿಕ್ತ- ಅರ್ಥಬೋಧಕವಾಗಿ ಪ್ರವೃತ್ತ್ಯಾದಿಗಳಿಗೆ ಅಂಗವಾಗದೇ (ಸಾರ್ಥಕವಾಗದೇ ಹೋಗಬೇಕಾಗುತ್ತದೆ) ಪ್ರಮಾಣವೇ ಆಗದೇ ಹೋಗಬೇಕಾಗುತ್ತದೆ ?

ಈ ವಿಧವಾಗಿ ಶಂಕೆಯು ಬಂದರೆ, ಅದಕ್ಕಾಗಿ ಶ್ರೀಮದಾಚಾರ್ಯರು "**ರಮಾಪತಿಃ ಇಷ್ಟಃ**" ಎಂಬುದಾಗಿ ಭಗವಂತನಿಗೆ ಇಷ್ಟತ್ವವನ್ನು ಹೇಳಿದ್ದಾರೆ.

ಯಾರಿಗೆ ಯಾವ ವಸ್ತು ಇಷ್ಟವಾಗಿರುತ್ತದೆಯೋ ಅವರಿಗೆ ಆ ವಸ್ತುವನ್ನು ಬೋಧಿಸಬೇಕು. ಹೊರತು ಇಷ್ಟವಲ್ಲದ್ದನ್ನು ಬೋಧಿಸಬಾರದು. ಹಾಗೆ ಒಂದುವೇಳೆ ಇಷ್ಟವಲ್ಲದ್ದನ್ನು ಬೋಧಿಸಿದರೆ ಅನುಪಾದೇಯತ್ವ ಬರಬೇಕಾಗುತ್ತದೆ.

ಪ್ರಕೃತ ರಮಾಪತಿಯು ಇಷ್ಟನೇ ಆಗಿದ್ದಾನೆ. ಆದ್ದರಿಂದ ವೇದಗಳು ಇಷ್ಟನಾದ ಭಗವಂತನನ್ನು ಬೋಧಿಸುವುದು ಯುಕ್ತವೇ ಆಗಿದೆ ಎಂದು ಭಾವ.

ರಮಾಪತಿಯು ಇಷ್ಟನಾದರೂ ಸಹ ವೇದವು ಸ್ವಪ್ರಧಾನತಯಾ ಕಾರ್ಯತ್ವಾತಿರಿಕ್ತಅರ್ಥಬೋಧಕವಾದರೆ ಪ್ರವೃತ್ತ್ಯಾದಿಗಳು ಕೂಡುವುದಿಲ್ಲವಲ್ಲ? ಎಂಬ ಆಕ್ಷೇಪ ಸರಿಯಲ್ಲ.

ಇಷ್ಟವಾದ ವಸ್ತುವನ್ನು ತಿಳಿಸಿಕೊಟ್ಟಾಗ ಇಷ್ಟಾನುಭವವೇ ಪುರುಷಾರ್ಥವಾಗುವುದರಿಂದ, ಇಷ್ಟಾನುಭವದಿಂದ ಮತ್ತೊಂದು ಪ್ರಯೋಜನದ ಅಪೇಕ್ಷೆ ಇರುವುದಿಲ್ಲ. ಜಗತ್ತಿನಲ್ಲಿ ಸುಖಾನುಭವವೇ ಪ್ರಯೋಜನವಾಗಿದೆ, ಹೊರತು ಸುಖಾನುಭವಕ್ಕೆ ಮತ್ತೊಂದು ಪ್ರಯೋಜನವಿಲ್ಲ. ಕಾರಣ- ಸುಖಾನುಭವವೇ ಸ್ವರಸಸುಂದರವಾಗಿದೆ. ಆದ್ದರಿಂದ ಇಷ್ಟನಾದ ಭಗವಂತನನ್ನು ತಿಳಿಸಿಕೊಡುವುದು ವೇದಗಳಿಗೆ ಉಪಪನ್ನವೇ ಆಗಿದೆ. ಹೀಗಾಗಿ ವೇದಗಳಿಗೆ ಅಪ್ರಾಮಾಣ್ಯಪ್ರಸಂಗ ಇಲ್ಲ ಎಂದು ತಾತ್ಪರ್ಯ.

'ಸಿದ್ಧಾರ್ಥಬೋಧಕವಾದ ವಾಕ್ಯವು ವ್ಯರ್ಥ' ಎಂದು ಹೇಳುವವರ ಮತದಲ್ಲಿ ಕಾರ್ಯತಾಬೋಧವು ಪ್ರವೃತ್ತ್ಯಾದಿಗಳಿಗೆ ಅಂಗವಾದ್ದರಿಂದ ವೇದಗಳಿಗೆ ಕಾರ್ಯತಾಬೋಧಕತ್ವೇನ ಪ್ರಾಮಾಣ್ಯವು ಸಮ್ಮತವಾಗಿದೆ.

**ಕಾರ್ಯತಾ ಚ ನ ಕಾಚಿತ್ ಸ್ಯಾತ್ ಇಷ್ಟಸಾಧನತಾಂ ವಿನಾ ।**

ಎಂಬುದಾಗಿ ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಕಾರ್ಯತಾ ಎನ್ನುವುದು ಇಷ್ಟಸಾಧನತಾರೂಪವೇ ಆಗಿದೆ. ಹಾಗಾಗಿ ಇಷ್ಟರೂಪನಾದ ಪರಮಾತ್ಮನನ್ನು ಬೋಧಿಸುವ ಆಗಮಕ್ಕೆ ಕಾರ್ಯತಾಬೋಧಕತ್ವದಿಂದಲೇ ಪ್ರಾಮಾಣ್ಯವು ಉಪಪನ್ನವಾಗಿದೆ ಎಂದು ಅಭಿಪ್ರಾಯ.

**ಟೀಕಾ : ಸ್ವಾಶ್ರಿತೇ ಸುಖೇ ದುಃಖನಿವೃತ್ತೌ ವಾ ಲೋಕಾನಾಮಿಷ್ಟವ್ಯವಹಾರಃ। ನಚಾನಯೋರನ್ಯತರೋರಮಾಪತಿಸ್ತತ್ಕಥಮಸಾವಿಷ್ಟ ಇತ್ಯತ ಆಹ ॥ ನೋಽಸ್ಮಾಕಮಿತಿ ॥**

**ಯಥಾ ಖಲು ಕೇಷಾಂಚಿದಿಷ್ಟಸಾಧನತಾಮನಾಸಾದಯಂತೋಽಪಿ ಭಾವಾಃ ಪರೇಷಾಂ ತಥಾಭೂತಾ ದೃಶ್ಯಂತೇ ತಥಾ ಲೌಕಿಕಾನಾಮಿಷ್ಟತಾಮಭಜನ್ನಪಿ ಭಗವಾನುತ್ತಮಾಧಿಕಾರಿಣಾಮಿಷ್ಟೋ ಭವತೀತಿ ಕಿಮನುಪಪನ್ನಮ್ । ಸಂತಿ ಖಲು ತೇಽಪಿ ಪುರುಷಾಃ ಯೇಷಾಮಪವರ್ಗೋಽಪಿ ಪರಮ ಪುರುಷಾವಬೋಧನಾರ್ಥಮೇವಾರ್ಥನೀಯಃ। ಯಥೋಕ್ತಮ್ –**

**... ... ... ... ... ... ... . ಏಕಾಂತಾನಾಂ ನ ಕಸ್ಯಚಿತ್ ।**
**ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮ್ ॥**

**ಇತಿ । ಇತರಾನ್ ಪ್ರತ್ಯಪೀಶ್ವರಸ್ಯೇಷ್ಟಸಾಧನತ್ವಾತ್ ನ ತತ್ಪರತ್ವಮಾಗಮಸ್ಯಾನುಪಪನ್ನಮ್ । ಇಷ್ಟವದಿಷ್ಟಸಾಧನಸ್ಯಾಪಿ ಬುಭುತ್ಸಿತತ್ವಾತ್ ।**

**ಅನುವಾದ :-** 'ಭಗವಂತನು ಇಷ್ಟನಾಗಿದ್ದಾನೆ' ಎಂದು ಹೇಗೆ ಹೇಳುತ್ತೀರಿ? ಯಾಕೆಂದರೆ ಲೋಕದಲ್ಲಿ ಪರರೀತಿಯಿಂದ ಜೀವನಲ್ಲಿ ಆಶ್ರಿತವಾದ, ಸಿದ್ಧಾಂತರೀತಿಯಿಂದ ಜೀವನ ಮನಸ್ಸಿನಲ್ಲಿರುವ ಸುಖದ ವಿಷಯದಲ್ಲಿಯಾಗಲೀ ಅಥವಾ ದುಃಖದ ನಿವೃತ್ತಿವಿಷಯದಲ್ಲಿಯಾಗಲೀ ಇಷ್ಟವ್ಯವಹಾರ ಕಂಡಿದೆ. ಪ್ರಕೃತ ರಮಾಪತಿಯು ಸುಖರೂಪನೂ ಅಲ್ಲ. ದುಃಖನಿವೃತ್ತಿಸ್ವರೂಪನೂ ಅಲ್ಲ ಎಂದಮೇಲೆ ರಮಾಪತಿಯು ಇಷ್ಟ ಹೇಗಾಗುತ್ತಾನೆ ? ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕಾಗಿ ಆಚಾರ್ಯರು- "**ನಃ ಅಸ್ಮಾಕಂ ಇಷ್ಟಃ**" (ನಮಗೆ ಇಷ್ಟನಾಗಿದ್ದಾನೆ) ಎಂದು ಹೇಳಿದರು.

ಯಾವ ರೀತಿಯಾಗಿ ಕೆಲವರಿಗೆ ಇಷ್ಟಸಾಧನವಾಗದ ಪದಾರ್ಥಗಳು ಇನ್ನು ಕೆಲವರಿಗೆ ಇಷ್ಟಸಾಧನವಾಗಿರುವುದನ್ನು ಕಾಣುತ್ತೇವೆ.

೧) ಉದಾಹರಣೆ- ಜ್ವರ ಉಳ್ಳಂತಹ ಪುರುಷನಿಗೆ ಕ್ಷೀರಾದಿಗಳು ಇಷ್ಟಸಾಧನವಾಗದೇ ಇದ್ದರೂ ಜ್ವರರಹಿತನಾದ ಪುರುಷನಿಗೆ ಇಷ್ಟಸಾಧನವಾಗಿವೆ.

೨) ಉದಾಹರಣೆ- ಒಂಟೆಗಳಿಗೆ ಬಾಳೆಹಣ್ಣು ಇಷ್ಟಸಾಧನವಾಗದೇ ಇದ್ದರೂ ಇತರರಿಗೆ ಬಾಳೆಹಣ್ಣು ಇಷ್ಟಸಾಧನವಾದದ್ದು ಕಂಡಿದೆ.

ಅದರಂತೆ ಭಗವಂತನು ಲೌಕಿಕರಿಗೆ ಇಷ್ಟನಾಗದೇ ಇದ್ದರೂ ಸಹ ಉತ್ತಮಾಧಿಕಾರಿಗಳಿಗೆ ಇಷ್ಟನಾಗುತ್ತಾನೆ ಎಂದು ಹೇಳಲು ಬರುತ್ತದೆಯಾದ್ದರಿಂದ ಏನು ಅನುಪಪತ್ತಿ ಇದೆ ?

ಹಾಗಾದರೆ ಕೇವಲ ಭಗವಂತ ಇಷ್ಟನಾಗುವ ಅಧಿಕಾರಿಗಳು ಇದ್ದಾರೆಯೇ ? ಎಂದರೆ, ಅಂತಹ ಅಧಿಕಾರಿಗಳು ಅವಶ್ಯ ಇದ್ದೇ ಇದ್ದಾರೆ. ಯಾವ ಬ್ರಹ್ಮಾದಿ ಉತ್ತಮಭಕ್ತರಿಗೆ ಪರಮಪುರುಷಾರ್ಥವಾದ ಮೋಕ್ಷವೂ ಸಹ ಪರಮಪುರುಷನಾದ ಭಗವಂತನಿಗಾಗಿ ಮಾತ್ರವೇ ಅಪೇಕ್ಷಣೀಯವಾಗಿದೆ. ಅಂತಹ ಬ್ರಹ್ಮಾದಿ ಉತ್ತಮಭಕ್ತರಿಗೆ ಭಗವಂತನು ಮಾತ್ರ ಇಷ್ಟನಾಗಿದ್ದಾನೆ.

ಅದನ್ನು ೭ ನೇ ಅಧ್ಯಾಯ ಗೀತಾಭಾಷ್ಯದಲ್ಲಿ ಆಚಾರ್ಯರು ಸ್ಪಷ್ಟವಾಗಿ ತಿಳಿಸಿದ್ದಾರೆ-

**..... ಏಕಾಂತಾನಾಂ ನ ಕಸ್ಯಚಿತ್ ।**
**ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮ್ ॥**

ಯಾರು ಏಕಾಂತಭಕ್ತರಲ್ಲ ಅಂತಹ ಮಧ್ಯಮಾಧಿಕಾರಿಗಳಿಗೆ ಮೋಕ್ಷವೇ ಅಪೇಕ್ಷಣೀಯವಾಗಿರುತ್ತದೆ. ಅಂತಹ ಮೋಕ್ಷವನ್ನು ಕೊಡುವವನು ಭಗವಂತ. ಆದ್ದರಿಂದ ಮೋಕ್ಷಕ್ಕಾಗಿ ಭಗವಂತ ಅಪೇಕ್ಷಣೀಯನಾಗಿದ್ದಾನೆ ಅವರಿಗೆ. ಆದರೆ ಬ್ರಹ್ಮಾದಿ ಉತ್ತಮಭಕ್ತರಿಗೆ ಮೋಕ್ಷವೂ ಅಪೇಕ್ಷಣೀಯವಾಗಿರುವುದಿಲ್ಲ. ಅವರಿಗೆ ಕೇವಲ ಭಗವಂತ ಮಾತ್ರ ಇಷ್ಟ. ಮೋಕ್ಷಾದಿ ಪುರುಷಾರ್ಥಕ್ಕಾಗಿ ಅವರು ಭಗವಂತನನ್ನು ಭಜಿಸುವುದಿಲ್ಲ. ಕೇವಲ ಭಗವಂತನ ಅನುಗ್ರಹಕ್ಕಾಗಿ ಭಗವಂತನನ್ನು ಭಜಿಸುವವರು ಅವರು. ಭಗವಂತನಿಗಾಗಿ ಎಲ್ಲ ಪುರುಷಾರ್ಥ-ಗಳು ಅವರಿಗೆ. ಅಂತಹ ಉತ್ತಮಭಕ್ತರೂ ಇದ್ದಾರೆ.

ಆದ್ದರಿಂದ ಏಕಾಂತಭಕ್ತರಿಗೆ ಭಗವಂತನು ಮಾತ್ರ ಇಷ್ಟನಾಗಿರುವುದರಿಂದ ಪ್ರಕೃತ 'ತತ್ತ್ವೋದ್ಯೋತ'ಗ್ರಂಥಕರ್ತೃಗಳಾದ ಶ್ರೀಮದಾಚಾರ್ಯರೂ ಏಕಾಂತ -ಭಕ್ತರೇ ಆಗಿದ್ದರಿಂದ "**ರಮಾಪತಿಃ ನಃ ಇಷ್ಟಃ**" ಎಂಬುದಾಗಿ ಆಚಾರ್ಯರು ಹೇಳಿದ್ದು ಸಮಂಜಸವೇ.

ಏಕಾಂತಭಕ್ತರಿಗೆ ಭಗವಂತನೇ ಇಷ್ಟನಾಗುವುದರಿಂದ ಅವರ ದೃಷ್ಟಿಯಲ್ಲಿ ವೇದಗಳು ಇಷ್ಟನಾದ ಭಗವಂತನನ್ನು ತಿಳಿಸಿಕೊಡುವುದು ಉಪಪನ್ನವೇ ಆಗುತ್ತದೆ. ಇನ್ನು ಮಧ್ಯಮಭಕ್ತರಿಗೆ ಭಗವಂತನು ಇಷ್ಟನಾಗದೇ ಹೋದರೂ ಸಹ ಇಷ್ಟಸಾಧನನಾದ್ದರಿಂದ (ಇಷ್ಟವಾದ ಮೋಕ್ಷವನ್ನು ಕೊಡುವವನಾದ್ದರಿಂದ) ಇಷ್ಟದಂತೆ ಇಷ್ಟಸಾಧನವೂ ಬುಭುತ್ಸುವೇ ಆದಕಾರಣ ವೇದಗಳು ಇಷ್ಟಸಾಧನನಾದ ಭಗವಂತನನ್ನು ತಿಳಿಸಿಕೊಡುವುದು ಅವರ ರೀತಿಯಲ್ಲಿಯೂ ಉಪಪನ್ನವೇ ಆಗುತ್ತದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಈಶ್ವರನ ವಿಷಯದಲ್ಲಿ 'ದ್ಯಾವಾಭೂಮೀ ಜನಯನ್ ದೇವ ಏಕಃ' ಇತ್ಯಾದಿ ಆಗಮಗಳನ್ನು ಪ್ರಮಾಣವನ್ನಾಗಿ ಉದಾಹರಿಸಿ, ಈಗ ಉದಾಹೃತ ಆಗಮಗಳಿಗೆ ಅನುಸಾರವಾಗಿ ಅನುಮಾನವೂ ಸಹ ಈಶ್ವರನ ವಿಷಯದಲ್ಲಿ ಪ್ರಮಾಣವಾಗಿ ಆಚಾರ್ಯರಿಗೆ ಅಭಿಪ್ರೇತವಾಗಿದೆ ಎಂದು

ಹೇಳಲು ಅನುಮಾನಪ್ರಮಾಣಪರವಾಗಿಯೂ ವಿಶೇಷಣಗಳ ಯೋಜನೆ ಮಾಡುತ್ತಾರೆ -

**ಈಶ್ವರವಿಷಯದಲ್ಲಿ ಅನುಮಾನಕ್ಕೆ ಪ್ರಾಮಾಣ್ಯಸಮರ್ಥನೆ**

**ಟೀಕಾ: ಅನುಮಾನಮಪಿ ರಮಾಪತಿಂ ಗಮಯತೀತ್ಯಾಶಯವಾನಾಹ ॥ ನಿತ್ಯಾತಾದೃಶಚಿಚ್ಚೇತ್ಯಯಂತೇತಿ ॥ ಅತ್ರ ತದಿತಿ 'ಸರ್ವತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ' ಇತ್ಯುಕ್ತಂ ಪರಾಮೃಶ್ಯತೇ । ಚಿತ್ ಚೇತನಂ ರಮಾಬ್ರಹ್ಮಾದಿ । ಚೇತ್ಯಂ ದೃಶ್ಯಂ ಜಡಂ ಪ್ರಕೃತ್ಯಾದಿ ।**

**ನನು ಚೇತ್ಯತಾ ಚಿತೋಽಪ್ಯಸ್ತಿ । ಯದ್ವಕ್ಷ್ಯತಿ 'ಆತ್ಮನೋಽಪಿ ದೃಶ್ಯತ್ವಾ'ದಿತಿ । ತತ್ಕಥಮುಚ್ಯತೇ ಚೇತ್ಯಂ ದೃಶ್ಯಂ ಜಡಮಿತಿ । ಸತ್ಯಮ್ । ಚಿತಃ ಪೃಥಗಭಿಧಾನಾತ್ ಸಮಾನೋಽಪಿ ಚೇತ್ಯಶಬ್ದೋ ಜಡವಿಷಯೋಽವಗಮ್ಯತೇ ।**

**ಚೇತ್ಯಗ್ರಹಣಾದೇವೋಭಯಲಾಭೇ ಸತಿ ಕಿಂ ಚಿದ್ಗ್ರಹಣೇನೇತಿ ಚೇತ್ । ಸತ್ಯಮ್ । ಕುರುಪಾಂಡವನ್ಯಾಯೇನಾಸಾಧಾರಣಧರ್ಮೇಣ ವ್ಯವಹಾರೋಪಪತ್ತಿಃ । ನಿತ್ಯಮತಾದೃಶೇ ಅಪರ್ಯಾಪ್ತಶಕ್ತಿನೀ ಅಸ್ವತಂತ್ರೇ ಅಸರ್ವಜ್ಞೇ ಚಿಚ್ಚೇತ್ಯೇ ಯಂತೇತಿ ವಿಗ್ರಹಃ ।**

**ಅನುವಾದ :-** ಆಗಮದಂತೆ ಅನುಮಾನವೂ ಸಹ ಲಕ್ಷ್ಮೀಪತಿಯಾದ ಪರಮಾತ್ಮನನ್ನು ಸಾಧಿಸುತ್ತದೆ ಎಂಬ ಅಭಿಪ್ರಾಯ ಉಳ್ಳವರಾಗಿ ಆಚಾರ್ಯರು ''**ನಿತ್ಯಾತಾದೃಶಚಿಚ್ಚೇತ್ಯಯಂತಾ**'' ಎಂಬುದಾಗಿ ವಿಶೇಷಣ ನೀಡಿದ್ದಾರೆ. (ಪರಮಾತ್ಮಸಾಧಕವಾದ ಅನುಮಾನವನ್ನು ಅನುಮಾನಪ್ರಯೋಗವನ್ನು ''**ಇದಮುಕ್ತಂ ಭವತಿ**'' ಎಂಬುದಾಗಿ ಮುಂದೆ ಹೇಳುವವರಿದ್ದಾರೆ.)

'ನಿತ್ಯಾತಾದೃಶ....' ಎಂಬ ವಿಶೇಷಣದಲ್ಲಿ ಅತಾದೃಶ ಎನ್ನುವಲ್ಲಿ ತತ್ ಶಬ್ದ ಇದೆ. (ತಸ್ಯ ಸದೃಶಂ ತಾದೃಶಂ, ನ ತಾದೃಶಂ ಅತಾದೃಶಂ ಎಂದು ವಿಗ್ರಹ ಮಾಡುವುದರಿಂದ ತಸ್ಯ ಎಂದು ತತ್ ಶಬ್ದ ಇದೆ.) ಸಾಮಾನ್ಯವಾಗಿ ತತ್ ಶಬ್ದವು ಪೂರ್ವಪ್ರಸಕ್ತವಾದದ್ದನ್ನು ಪರಾಮರ್ಶ ಮಾಡುತ್ತದೆ. ಹೀಗಾಗಿ ಇಲ್ಲಿ ತತ್ ಶಬ್ದವು ಯಾವುದನ್ನು ಪರಾಮರ್ಶ ಮಾಡುತ್ತಿದೆ ? ಎಂದರೆ,

'ಸರ್ವತ್ರಾಖಿಲಸಚ್ಛಕ್ತಿಃ' 'ಸ್ವತಂತ್ರಃ' 'ಅಶೇಷದರ್ಶನಃ' ಎಂಬುದಾಗಿ ಪರಮಾತ್ಮನಿಗೆ ಹೇಳಿದ ಪರ್ಯಾಪ್ತಶಕ್ತಿ ಮೊದಲಾದವುಗಳನ್ನು ಪರಾಮರ್ಶ ಮಾಡುತ್ತಿದೆ ತತ್ ಶಬ್ದ.

ಅಂದರೆ- ಅತಾದೃಶ ಎಂದರೆ ಹಾಗಲ್ಲದ್ದು. ಪರಮಾತ್ಮನು ಪರ್ಯಾಪ್ತ-ಶಕ್ತಿಯುಳ್ಳವನು, ಸ್ವತಂತ್ರನು, ಸರ್ವಜ್ಞನೂ ಆಗಿದ್ದಾನಾದ್ದರಿಂದ ಚೇತನಾ-ಚೇತನಾತ್ಮಕವಾದ ಜಗತ್ತು ಅತಾದೃಶ ಹಾಗಲ್ಲದ್ದು (ಹಾಗಾಗಿಲ್ಲ) ಎಂದರೆ ಅಪರ್ಯಾಪ್ತಶಕ್ತಿಯುಳ್ಳದ್ದು, ಅಸ್ವತಂತ್ರ, ಅಸರ್ವಜ್ಞ ಆಗಿದೆ ಎನ್ನುವುದು ಅತಾದೃಶ ಎಂಬುದರ ಅರ್ಥವಾಗಿದೆ ಎಂದು ಅಭಿಪ್ರಾಯ.

'ನಿತ್ಯಾತಾದೃಶಚಿಚ್ಚೇತ್ಯ.......' ಎನ್ನುವಲ್ಲಿ ಚಿತ್ ಎಂದರೆ ಚೇತನ, ಪರಮಾತ್ಮನಿಂದ ಭಿನ್ನರಾದ ರಮಾಬ್ರಹ್ಮಾದಿ ಚೇತನರು ಎಂದರ್ಥ. ಚೇತ್ಯ ಎಂದರೆ ದೃಶ್ಯವಾದದ್ದು ಎಂದರ್ಥ. 'ಚಿತೀ ಸಂಜ್ಞಾನೇ' ಎಂಬ ಜ್ಞಾನಾರ್ಥಕ ವಾದ ಧಾತುವಿಗೆ ಕರ್ಮಾರ್ಥದಲ್ಲಿ 'ಋಹಲೋರ್ಣ್ಯತ್' ಎಂಬ ಸೂತ್ರದಿಂದ 'ಣ್ಯತ್' ಪ್ರತ್ಯಯ ಬಂದು ಚಿತ್ಯ ಎಂದಾಗಿ, 'ಪುಗಂತಲಘೂಪಧಸ್ಯ ಚ' ಎಂಬ ಸೂತ್ರದಿಂದ ಗುಣವಾಗಿ (ಚಿ ಎನ್ನುವಲ್ಲಿನ ಇ ಕಾರಕ್ಕೆ ಏಕಾರ ಬಂದು) ಚೇತ್ಯ ಎಂದು ರೂಪಸಿದ್ಧಿಯಾಗಿರುವುದರಿಂದ ಚೇತ್ಯ ಎಂದರೆ ಜ್ಞಾನವಿಷಯವಾದದ್ದು ಅರ್ಥಾತ್ ದೃಶ್ಯವಾದದ್ದು, ಜಡವಾದ ಪ್ರಕೃತ್ಯಾದಿಗಳು ಎಂದರ್ಥ. ಹಾಗಾಗಿ ಚಿತ್-ಚೇತ್ಯ ಎಂದರೆ ಚೇತನ-ಅಚೇತನಾತ್ಮಕವಾದ ಜಗತ್ತು ಎಂದರ್ಥ.

ಹೌದು, ಚೇತ್ಯ ಎಂಬ ಶಬ್ದಕ್ಕೆ ದೃಶ್ಯ ಎಂದು ಅರ್ಥ ವಿವಕ್ಷಿತವಾದರೆ 'ದೃಶ್ಯವಾದದ್ದು ಜಡವಾದ ಪ್ರಕೃತ್ಯಾದಿಗಳು' ಎಂದು ಅರ್ಥ ಹೇಗೆ ಸರಿಯಾಗುತ್ತದೆ ? ಏಕೆಂದರೆ ಚೇತ್ಯತಾ ಅಂದರೆ ದೃಶ್ಯತ್ವವು (ಜ್ಞಾನವಿಷಯತ್ವವು) ಚೇತನರಿಗೂ ಇದೆ.

''**ಆತ್ಮನೋಽಪಿ ದೃಶ್ಯತ್ವಾತ್.....**'' ಎಂಬುದಾಗಿ ಮುಂದೆ ನೀವೇ ಆತ್ಮನಿಗೆ ದೃಶ್ಯತ್ವವನ್ನು ಹೇಳುವವರಿದ್ದೀರಿ. ಅಂದಮೇಲೆ (ಚೇತ್ಯ ಎಂಬ ಶಬ್ದಕ್ಕೆ ಚೇತನರು ಎಂಬ ಅರ್ಥವನ್ನೂ ಹೇಳಲು ಬರುತ್ತದೆ ಎಂದಮೇಲೆ) 'ಚೇತ್ಯ ಎಂದರೆ ದೃಶ್ಯವಾದದ್ದು, ಜಡವಾದ ಪ್ರಕೃತ್ಯಾದಿಗಳು' ಎಂಬುದಾಗಿ ಹೇಗೆ ಹೇಳುತ್ತೀರಿ?

ಸತ್ಯವೇ. ಚೇತ್ಯತಾ ಎನ್ನುವುದು ಜಡಪದಾರ್ಥಗಳಿಗೆ ಇರುವಂತೆ ಚೇತನರಿಗೂ ಇದೆ ಎನ್ನುವುದು ನಿಜವೇ. ಆದರೂ ಸಹ ಚೇತ್ಯಶಬ್ದವು ಚೇತನ-ಅಚೇತನ ಎರಡರಲ್ಲಿಯೂ ಸಮಾನವಾಗಿದ್ದರೂ ಸಹ, ಚಿತ್-ಚೇತ್ಯ ಎಂಬುದಾಗಿ ಚಿತ್‌ಶಬ್ದದಿಂದ ಚೇತನರನ್ನು ಪ್ರತ್ಯೇಕವಾಗಿ ಹೇಳಿದ್ದರಿಂದ, ಪ್ರಕೃತದಲ್ಲಿ ಚೇತ್ಯಶಬ್ದವು ಜಡಮಾತ್ರವಿಷಯಕವಾಗಿದೆ ಎಂದು ತಿಳಿದುಬರುತ್ತದೆ.

ಹಾಗಾದರೆ ಚೇತ್ಯ ಎಂಬ ಒಂದೇ ಶಬ್ದವನ್ನು ಇಡುವುದರಿಂದ ಚೇತನ-ಅಚೇತನ ಎರಡೂ ಲಭ್ಯವಾಗುವಾಗ ಚಿತ್ ಶಬ್ದವನ್ನು ಪ್ರತ್ಯೇಕವಾಗಿ ಏಕೆ ಇಡಬೇಕು?

ಈ ರೀತಿಯಾಗಿ ಆಕ್ಷೇಪ ಬಂದರೆ, ಅದು ಸತ್ಯವೇ. ಸಮಾನವಾದ ಚೇತ್ಯಶಬ್ದಪ್ರಯೋಗದಿಂದಲೇ ಎರಡೂ ಲಭ್ಯವಾಗುವ ಕಾರಣ ಚಿತ್ ಶಬ್ದವನ್ನು ಪ್ರತ್ಯೇಕವಾಗಿ ಇಡಬೇಕಾದ ಪ್ರಸಕ್ತಿಯಿಲ್ಲ ಎನ್ನುವುದು ಸರಿಯೇ. ಆದರೂ ಸಹ ಕುರುಪಾಂಡವನ್ಯಾಯದಿಂದ ಅಸಾಧಾರಣಧರ್ಮದಿಂದ ವ್ಯವಹಾರವನ್ನು ಕೂಡಿಸಬಹುದಾಗಿದೆ.

ಅಂದರೆ- ಧರ್ಮರಾಜಾದಿಗಳೂ ಕುರುವಂಶದಲ್ಲಿಯೇ ಬಂದವರಾದರೂ ಸಹ ಕುರುತ್ವ-ಪಾಂಡವತ್ವ ಎಂಬ ಪ್ರಾತಿಸ್ವಿಕರೂಪದಿಂದ (ಪ್ರತ್ಯೇಕವಾದ ಧರ್ಮದಿಂದ) ಪ್ರತಿಪಾದನೆ ಮಾಡಬೇಕೆಂಬ ಇಚ್ಛೆಯಿಂದ **ಕುರವಃ ಸಮಾಗತಾಃ ಪಾಂಡವಾಶ್ಚ** ಎಂದು ವ್ಯವಹಾರ ಮಾಡುವುದು ಹೇಗೆ ವ್ಯರ್ಥವಲ್ಲವೋ, ಅದರಂತೆಯೇ ಚೇತನತ್ವ-ಜಡತ್ವ ಎಂಬುದಾಗಿ ಪ್ರಾತಿಸ್ವಿಕರೂಪದಿಂದ (ಪ್ರತ್ಯೇಕವಾದ ಧರ್ಮದಿಂದ) ಚೇತನ-ಜಡಗಳನ್ನು ಪ್ರತಿಪಾದನೆ ಮಾಡಬೇಕೆಂಬ ಇಚ್ಛೆಯಿಂದ **ಚೇತನಂ ಚೇತ್ಯಂ ಚ** ಎಂದು ವ್ಯವಹಾರ ಮಾಡುವುದೂ ವ್ಯರ್ಥವಲ್ಲ ಎಂದು ಅಭಿಪ್ರಾಯ.

ಹಾಗಾದರೆ, ''ಚಿತ್ ಚ ಚೇತ್ಯಂ ಚ ಚಿಚ್ಚೇತ್ಯೇ, ನಿತ್ಯಂ ಅತಾದೃಶೇ ನಿತ್ಯಾತಾದೃಶೇ, ನಿತ್ಯಾತಾದೃಶೇ ಚ ತೇ ಚಿಚ್ಚೇತ್ಯೇ ಚ ನಿತ್ಯಾತಾದೃಶಚಿಚ್ಚೇತ್ಯೇ, ನಿತ್ಯಾತಾದೃಶಚಿಚ್ಚೇತ್ಯೇ ಯಂತಾ ನಿತ್ಯಾತಾದೃಶಚಿಚ್ಚೇತ್ಯಯಂತಾ''

ಎಂಬುದಾಗಿ ವಿಗ್ರಹ (ದ್ವಿತೀಯಾತತ್ಪುರುಷಸಮಾಸ) ಮಾಡಿಕೊಳ್ಳಬೇಕು.

**ಅವತಾರಿಕೆ :-** ಅನುಮಾನವೂ ಸಹ ರಮಾಪತಿಯನ್ನು ಸಾಧಿಸುತ್ತದೆ ಎಂಬ ಆಶಯದಿಂದ ಆಚಾರ್ಯರು 'ನಿತ್ಯಾತಾದೃಶಚಿಚ್ಚೇತ್ಯಯಂತಾ' ಎಂಬುದಾಗಿ

ವಿಶೇಷಣ ನೀಡಿದ್ದಾರೆ ಎಂದು ನೀವು ಹಿಂದೆ ಹೇಳಿದ್ದು ಸರಿಯಲ್ಲ. ಕಾರಣ 'ನಿತ್ಯಾತಾದೃಶ ....' ಎಂಬ ವಿಶೇಷಣದಿಂದ ಈಶ್ವರಸಾಧಕವಾದ ಅನುಮಾನವು ತೋರುವುದಿಲ್ಲವಲ್ಲ ?

ಈ ರೀತಿಯಾಗಿ ಆಕ್ಷೇಪ ಬಂದರೆ, 'ನಿತ್ಯಾತಾದೃಶ....' ಎಂಬ ವಿಶೇಷಣದಿಂದ ಈಶ್ವರಸಾಧಕವಾದ ಅನುಮಾನವು ಹೇಗೆ ಸೂಚಿತವಾಗಿದೆ ಎನ್ನುವುದನ್ನು ಟೀಕಾಕೃತ್ಪಾದರು ತೋರಿಸಿಕೊಡುತ್ತಾರೆ -

**ಟೀಕಾಃ ಇದಮುಕ್ತಂ ಭವತಿ । ಚಿಚ್ಚೇತ್ಯೇ ಖಲ್ವಪರ್ಯಾಪ್ತಶಕ್ತ್ಯಾದಿಮತ್ತಯಾ ಪ್ರತ್ಯಕ್ಷಾದಿಸಿದ್ಧೇ । ಅನ್ಯಥಾ ನಿತ್ಯಸುಖಾದಿಪ್ರಸಂಗಾತ್ । ಯಚ್ಚೈವಂವಿಧಂ ತತ್ ಕೇನಾಪಿ ನಿಯತಮೇವ ಪ್ರವರ್ತಮಾನ-ಮುಪಲಬ್ಧಮ್ । ಯಥಾ ರಥಾದಿ । ತದೇತಾಭ್ಯಾಮಪಿ ಯೇನ ಕೇನಚಿನ್ನಿಯತಾಭ್ಯಾಂ ಭವಿತವ್ಯಮ್ । ಯಶ್ಚೈತನ್ನಿಯಂತಾ ಸ ಭಗವಾನ್ ರಮಾಪತಿರಿತಿ ।**

**ಅನುವಾದ :-** ಚೇತನ-ಜಡಗಳು ಅಪರ್ಯಾಪ್ತಶಕ್ತಿ ಉಳ್ಳದ್ದಾಗಿ, ಅಸರ್ವಜ್ಞತ್ವ ಉಳ್ಳದ್ದಾಗಿ, ಅಸ್ವತಂತ್ರವಾಗಿ ಪ್ರತ್ಯಕ್ಷಾದಿಪ್ರಮಾಣಸಿದ್ಧವಾಗಿವೆ. 'ಅಹಂ ದುರ್ಬಲಃ' 'ನಾಹಂ ಸರ್ವಜ್ಞಃ' 'ಅಹಮಸ್ವತಂತ್ರಃ' ಇತ್ಯಾದಿಯಾಗಿ ಅನುಭವ ಎಲ್ಲರಿಗೂ ಸಿದ್ಧವಾಗಿದೆ. ಒಂದುವೇಳೆ ಚೇತನ-ಜಡಗಳು ಅಪರ್ಯಾಪ್ತಶಕ್ತ್ಯಾದಿಗಳುಳ್ಳದ್ದಲ್ಲ ಎಂದಾದರೆ (ಪರ್ಯಾಪ್ತಶಕ್ತಿ-ಸರ್ವಜ್ಞತ್ವ-ಸ್ವಾತಂತ್ರ್ಯ ಉಳ್ಳದ್ದಾಗಿದ್ದರೆ) ನಿತ್ಯಸುಖಾದಿಗಳು ಆಗಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಚೇತನ-ಜಡಗಳು ಅಪರ್ಯಾಪ್ತಶಕ್ತ್ಯಾದಿಗಳುಳ್ಳದ್ದಾಗಿವೆ.

ಯಾವುದು ಈ ರೀತಿಯಾಗಿ ಅಪರ್ಯಾಪ್ತಶಕ್ತ್ಯಾದಿಗಳುಳ್ಳದ್ದೋ ಅದು ವ್ಯಾಪಾರಗಳಲ್ಲಿ ಯಾವನೋ ಒಬ್ಬನಿಂದ ನಿಯಮ್ಯವಾಗಿಯೇ ಇರುವುದು ಕಂಡಿದೆ. ಹೇಗೆ ? ರಥಾದಿಗಳಂತೆ. ಆದ್ದರಿಂದ ಅಪರ್ಯಾಪ್ತಶಕ್ತ್ಯಾದಿಗಳುಳ್ಳ ಚೇತನ-ಜಡಗಳೂ ಸಹ ಯಾವನೋ ಒಬ್ಬನಿಂದ ನಿಯಮ್ಯವಾಗಿಯೇ ಇರಬೇಕು. ಯಾವ ವ್ಯಕ್ತಿ ಈ ಚೇತನ-ಜಡಗಳಿಗೆ ನಿಯಾಮಕ ಆಗಿರುವನೋ ಅವನೇ ಭಗವಾನ್ ರಮಾಪತಿ ಎಂದು ಭಾವ.

**-: ವಿಶೇಷ ವಿವರಣೆ :-**

**ಇಲ್ಲಿಯ ಸಾರಾಂಶ ಇಷ್ಟು :-** ಇಲ್ಲಿ ಸಾಮಾನ್ಯ-ಪರಿಶೇಷಗಳಿಂದ ರಮಾಪತಿಯನ್ನು ಸಾಧಿಸಲು ಹೊರಟಿದ್ದಾರೆ. ಅದು ಹೇಗೆಂದರೆ -

ಮೊದಲಿಗೆ ಚೇತನಾಚೇತನಾತ್ಮಕವಾದ ಈ ಜಗತ್ತಿಗೆ ನಿಯಾಮಕನಾದವನು ಒಬ್ಬನು ಇದ್ದಾನೆ ಎಂಬುದಾಗಿ ಸಾಮಾನ್ಯವಾಗಿ ಅನುಮಾನಮೂಲಕ ಸಾಧಿಸುತ್ತಾರೆ -

**೧) ಚಿಚ್ಚೇತ್ಯೇಕೇನಚಿನ್ನಿಯತೇಅಪೂರ್ಣಶಕ್ತಿತ್ವಾತ್ ಬಲವನ್ನಿಯತದುರ್ಬಲವತ್।**

ದುರ್ಬಲನಾದ ವ್ಯಕ್ತಿ ಅಪೂರ್ಣಶಕ್ತಿ ಉಳ್ಳವನಾದ್ದರಿಂದ ಪ್ರಬಲನಾದ ಒಬ್ಬನಿಂದ ಹೇಗೆ ನಿಯಮ್ಯನಾಗಿರುತ್ತಾನೆಯೋ ಹಾಗೆಯೇ ಚೇತನ-ಜಡಗಳೂ ಸಹ (ಭಗವಂತನಿಂದ ಭಿನ್ನರಾದ ರಮಾ-ಬ್ರಹ್ಮಾದಿ ಸಕಲ ಚೇತನರು ಹಾಗೂ ಪ್ರಕೃತ್ಯಾದಿ ಜಡಪದಾರ್ಥಗಳು) ಅಪೂರ್ಣಶಕ್ತಿ ಉಳ್ಳದ್ದಾದ್ದರಿಂದ ಒಬ್ಬ ವ್ಯಕ್ತಿಯಿಂದ ನಿಯಮ್ಯವಾಗಿವೆ.

**೨) ಚಿಚ್ಚೇತ್ಯೇ ಕೇನಚಿನ್ನಿಯತೇ ಅಸ್ವತಂತ್ರತ್ವಾತ್ ಭೃತ್ಯಭಾರ್ಯಾವತ್ ।**

ಭೃತ್ಯರು-ಹೆಂಡತಿ ಇವರು ಅಸ್ವತಂತ್ರರಾದ್ದರಿಂದ ಹೇಗೆ ಒಬ್ಬನಿಂದ (ಭೃತ್ಯರು ಸ್ವಾಮಿಯಿಂದ, ಹೆಂಡತಿಯ ಗಂಡನಿಂದ) ನಿಯಮ್ಯರಾಗಿದ್ದಾರೆಯೋ ಹಾಗೆಯೇ ಚೇತನ-ಜಡಗಳೂ ಸಹ ಅಸ್ವತಂತ್ರವಾದ್ದರಿಂದ ಒಬ್ಬನಿಂದ ನಿಯಮ್ಯವಾಗಿವೆ.

**೩) ಚಿಚ್ಚೇತ್ಯೇ ಕೇನಚಿನ್ನಿಯತೇ ಅಲ್ಪಜ್ಞತ್ವಾತ್ ಪುತ್ರ-ಶಿಷ್ಯಾದಿವತ್ ।**

ಮಕ್ಕಳು-ಶಿಷ್ಯರು ಅಲ್ಪಜ್ಞರಾದ್ದರಿಂದ ಹೇಗೆ ಒಬ್ಬರಿಂದ (ಮಕ್ಕಳು ತಂದೆ-ತಾಯಿಗಳಿಂದ, ಶಿಷ್ಯರು ಗುರುಗಳಿಂದ) ನಿಯಮ್ಯರಾಗಿದ್ದಾರೆಯೋ ಹಾಗೆಯೇ ಚೇತನ-ಜಡಗಳೂ ಸಹ ಅಲ್ಪಜ್ಞವಾದ್ದರಿಂದ ಒಬ್ಬ ವ್ಯಕ್ತಿಯಿಂದ ನಿಯಮ್ಯವಾಗಿವೆ.

**ಪಕ್ಷಧರ್ಮತಾ ಉಂಟೇ ?**

ಹೌದು ಈ ಅನುಮಾನಗಳಲ್ಲಿ ಪಕ್ಷಧರ್ಮತಾ ಇದೆಯೇ ? (ಪಕ್ಷವಾದ ಚೇತನ-ಜಡಗಳಲ್ಲಿ ಹೇತುಗಳಾದ ಅಪೂರ್ಣಶಕ್ತಿತ್ವ-ಅಸ್ವತಂತ್ರತ್ವ-ಅಲ್ಪಜ್ಞತ್ವ-ಗಳು ಇವೆಯೇ ?) ಎಂಬುದಾಗಿ ಪ್ರಶ್ನೆ ಬಂದರೆ, ಹೇತುಗಳಿಗೆ ಪಕ್ಷಧರ್ಮತಾವನ್ನು

ತೋರಿಸುವುದಕ್ಕಾಗಿ (ಚೇತನ-ಜಡಗಳಲ್ಲಿ ಅಪೂರ್ಣಶಕ್ತಿತ್ವಾದಿಗಳು ಇವೆ ಎಂದು ತಿಳಿಸುವುದಕ್ಕಾಗಿ) ಆಚಾರ್ಯರು '**ನಿತ್ಯಾತಾದೃಶಚಿಚ್ಚೇತ್ಯಯಂತಾ**' ಎಂಬ ವಿಶೇಷಣ ಕೊಟ್ಟಿದ್ದಾರೆ.

'ಅಹಂ ದುರ್ಬಲಃ' 'ನಾಹಂ ಸ್ವತಂತ್ರಃ' 'ಅಲ್ಪಜ್ಞೋಽಹಂ' ಎಂಬುದಾಗಿ ಎಲ್ಲರಿಗೂ ಅನುಭವ ಬರುವುದರಿಂದ, ಜಡಪದಾರ್ಥಗಳಲ್ಲಿ ಅಸ್ವಾತಂತ್ರ್ಯವು ಸರ್ವಸಿದ್ಧವಾದ್ದರಿಂದ ಚೇತನ-ಜಡಗಳಲ್ಲಿ ಅಪೂರ್ಣಶಕ್ತಿತ್ವಾದಿಗಳು ಪ್ರತ್ಯಕ್ಷಸಿದ್ಧವೂ ಆಗಿವೆ.

**ಚಿಚ್ಚೇತ್ಯೇ ಅಸ್ವತಂತ್ರೇ ಹಿತಾಕರಣ-ಅಹಿತಕರಣವತ್ತ್ವಾತ್ ।**

ಇತ್ಯಾದಿ ಅನುಮಾನಸಿದ್ಧವೂ ಆಗಿವೆ.

'**ಅಲ್ಪಶಕ್ತಿಃ ಅಸಾರ್ವಜ್ಞಂ....**' ಇತ್ಯಾದಿ ಆಗಮಸಿದ್ಧವೂ ಆಗಿವೆ. ಆದ್ದರಿಂದ ಚೇತನ-ಜಡಗಳಲ್ಲಿ ಅಪೂರ್ಣಶಕ್ತಿತ್ವಾದಿಗಳು ಪ್ರತ್ಯಕ್ಷಾದಿಪ್ರಮಾಣಸಿದ್ಧ-ವಾದ್ದರಿಂದ ಪಕ್ಷಧರ್ಮತಾ ಇದ್ದೇ ಇದೆ ಎಂದು ಭಾವ.

**ಪ್ರತ್ಯಕ್ಷ ಭ್ರಮ ಆಗಿರಬಹುದಲ್ಲ?**

ಹೌದು, 'ನಾಹಂ ಸ್ವತಂತ್ರಃ' 'ಅಲ್ಪಜ್ಞೋಽಹಂ' ಎಂಬುದಾಗಿ ನಮಗೆ ಅನುಭವ ಬರುತ್ತದೆಯಾದರೂ ಸಹ ಆ ಅನುಭವ ಭ್ರಮ ಏಕೆ ಆಗಿರಬಾರದು? ಅರ್ಥಾತ್ ಜೀವ ಸ್ವತಂತ್ರನೇ ಆಗಿದ್ದರೂ 'ನಾಹಂ ಸ್ವತಂತ್ರಃ' ಎಂಬುದಾಗಿ ಭ್ರಮ ಬರುತ್ತದೆ ಎನ್ನಬಹುದು. ಜೀವ ಸರ್ವಜ್ಞನಾಗಿದ್ದರೂ 'ಅಲ್ಪಜ್ಞೋಽಹಂ' ಎಂಬುದಾಗಿ ಭ್ರಮ ಬರುತ್ತದೆ ಎನ್ನಬಹುದು. ಜೀವ ಪೂರ್ಣಶಕ್ತಿಯುಳ್ಳವನೇ ಆಗಿದ್ದರೂ 'ದುರ್ಬಲೋಽಹಂ' ಎಂಬುದಾಗಿ ಭ್ರಮ ಬರುತ್ತದೆ ಎನ್ನಬಹುದು. ಆದ್ದರಿಂದ ಪ್ರತ್ಯಕ್ಷವು ಅನ್ಯಥೋಪಪನ್ನವಾಗುತ್ತದೆ ಎಂದು ಶಂಕೆ ಮಾಡುವುದು ಸರಿಯಲ್ಲ.

ಏಕೆಂದರೆ - ಹಾಗೆ ಜೀವನು ನಿಜವಾಗಿ ಸ್ವತಂತ್ರನೇ ಆಗಿದ್ದರೆ, ಸರ್ವಜ್ಞ-ಪೂರ್ಣಶಕ್ತನೇ ಆಗಿದ್ದರೆ

''**ಯದಿ ನಾಮ ನ ತಸ್ಯ ವಶೇ ಸಕಲಂ ಕಥಮೇವ ತು ನಿತ್ಯಸುಖಂ ನ ಭವೇತ್ ।**'

(ದ್ವಾದಶಸ್ತೋತ್ರ ಅ-3 ಶ್ಲೋ-5 )

ಎಂಬುದಾಗಿ ಆಚಾರ್ಯರು ಹೇಳುವಂತೆ ಸ್ವತಂತ್ರನಾದವನಿಗೆ ದುಃಖಾದಿಗಳು ಉಪಪನ್ನವಾಗುವುದಿಲ್ಲವಾದ್ದರಿಂದ ಜೀವನಿಗೆ ನಿತ್ಯಸುಖ, ದುಃಖನಿವೃತ್ತಿ, ಆರಬ್ಧಕಾರ್ಯಸಿದ್ಧಿ ಇವುಗಳು ಆಗಬೇಕಾದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಜೀವನು ನಿಜವಾಗಿ ಸ್ವತಂತ್ರ-ಪೂರ್ಣಶಕ್ತ-ಸರ್ವಜ್ಞ ಅಲ್ಲ. ಅಪೂರ್ಣಶಕ್ತಿ ಅಸ್ವಾತಂತ್ರ್ಯ ಅಸರ್ವಜ್ಞತ್ವ ಉಳ್ಳವನೇ ಆಗಿದ್ದಾನೆ.

**ವ್ಯಾಪ್ತಿ ಇದೆ**

ಆಗಲಿ, ಚೇತನ ಜಡಗಳು ಅಪೂರ್ಣಶಕ್ತ್ಯಾದಿಗಳುಳ್ಳವಾಗಲಿ. ಪಕ್ಷಧರ್ಮತಾ ಇದೆ ಒಪ್ಪೋಣ. ಅಂದಮಾತ್ರಕ್ಕೆ ಒಬ್ಬನಿಂದ ನಿಯಮ್ಯ ಏಕೆ ಆಗಬೇಕು ? ಎಂಬ ಶಂಕೆಗೆ ಅವಕಾಶವಿಲ್ಲ. ಕಾರಣ -

'**ಯತ್ ಅಪೂರ್ಣಶಕ್ತ್ಯಾದಿಮತ್ ತತ್ ಕೇನಚಿತ್ ನಿಯಮ್ಯಂ ।**' (ಯಾವುದು ಅಪೂರ್ಣಶಕ್ತ್ಯಾದಿಗಳುಳ್ಳದ್ದೋ ಅದು ಒಬ್ಬರಿಂದ ನಿಯಮ್ಯವೇ ಆಗಿರುತ್ತದೆ.)

ಎಂಬ ವ್ಯಾಪ್ತಿಯು ರಥಾದಿಗಳಲ್ಲಿ ಕಂಡಿದೆ. ರಥಾದಿಗಳು ಅಪೂರ್ಣಶಕ್ತ-ಅಸ್ವತಂತ್ರ ಆದ್ದರಿಂದ ವ್ಯಾಪಾರಗಳಲ್ಲಿ ಒಬ್ಬರಿಂದ ನಿಯಮ್ಯವೇ ಆಗಿರುವುದು ಕಂಡಿದೆ. ಪ್ರಕೃತ ಚೇತನ-ಜಡಗಳೂ ಅಪೂರ್ಣಶಕ್ತ್ಯಾದಿಗಳುಳ್ಳದ್ದಾದ್ದರಿಂದ ಒಬ್ಬನಿಂದ ನಿಯಮ್ಯವೇ ಆಗಿವೆ ಎಂದು ಅಂಗೀಕರಿಸಲೇಬೇಕು. ಅರ್ಥಾತ್ ಈ ಚೇತನ-ಜಡಗಳನ್ನು ನಿಯಮನ ಮಾಡುವ ಒಬ್ಬ ವ್ಯಕ್ತಿ ಇದ್ದಾನೆ ಎಂದು ಒಪ್ಪಲೇಬೇಕು.

**ನಿಯಾಮಕ ಒಬ್ಬನೇ ಏಕೆ ?**

ನಿಯಾಮಕ ಇದ್ದಾನೆ ಎಂದು ಒಪ್ಪುವುದಾದರೆ, ಒಬ್ಬನೇ ನಿಯಾಮಕ ಎಂದು ಏಕೆ ಒಪ್ಪಬೇಕು ? ಸಣ್ಣ ಸಣ್ಣ ಕಾರ್ಯಗಳಿಗೆ ಒಬ್ಬನು ನಿಯಾಮಕ. ದೊಡ್ಡ ದೊಡ್ಡ ಕಾರ್ಯಗಳಿಗೆ ಅನೇಕರು ನಿಯಾಮಕರು ಇರುತ್ತಾರೆ. ಪ್ರಕೃತ ಜಗತ್ತನ್ನು ನಿಯಮನ ಮಾಡುವುದು ಬಹಳ ದೊಡ್ಡ ಕೆಲಸವಾದ್ದರಿಂದ ಅನೇಕ ನಿಯಾಮಕರನ್ನು ಒಪ್ಪೋಣ ಎಂಬ ಶಂಕೆ ಬೇಡ. ಕಾರಣ- ''**ದ್ಯಾವಾಭೂಮೀ ಜನಯನ್ ದೇವ ಏಕಃ**'' ಎಂಬುದಾಗಿ ಶ್ರುತಿಯು ಜಗನ್ನಿಯಾಮಕನಾದವನು ಒಬ್ಬನೇ ಎಂದು ಸ್ಪಷ್ಟಪಡಿಸುತ್ತಿರುವುದರಿಂದ, ಮತ್ತು ಬಹಳ ನಿಯಾಮಕರನ್ನು ಒಪ್ಪುವುದಕ್ಕಿಂತ ಒಬ್ಬನೇ ಸಮರ್ಥ ನಿಯಾಮಕನನ್ನು ಒಪ್ಪಿದರೆ ಲಾಘವವೂ

ಇರುವುದರಿಂದ ಜಗತ್ತನ್ನು ನಿಯಮನ ಮಾಡುವ ಆ ವ್ಯಕ್ತಿ ಒಬ್ಬನೇ ಎಂದು ಹೇಳುವುದು ಸೂಕ್ತ .

**ಪರಿಶೇಷದಿಂದ ಪರಮಾತ್ಮಸಿದ್ಧಿ**

ಈ ರೀತಿಯಾಗಿ 'ಜನಯನ್ ದೇವ ಏಕಃ' ಎಂಬ ಆಗಮದಿಂದ ಹಾಗೂ ಲಾಘವರೂಪತರ್ಕದಿಂದ ಅನುಗೃಹೀತವಾದ ಉದಾಹೃತವಾದ ಸಾಮಾನ್ಯ ಅನುಮಾನಗಳಿಂದ ಜಗತ್ತಿಗೆ ನಿಯಾಮಕನಾದ ಒಬ್ಬ ವ್ಯಕ್ತಿ ಇದ್ದಾನೆ ಎಂಬುದಾಗಿ ಸಾಮಾನ್ಯತಃ ಸಿದ್ಧವಾದರೆ, ಆ ನಿಯಾಮಕನಾದ ಒಬ್ಬ ವ್ಯಕ್ತಿ ಯಾರು ? ಎಂದು ಆಕಾಂಕ್ಷೆ ಬಂದಾಗ, 'ಚಿಚ್ಚೇತ್ಯೇ' ಎನ್ನುವಲ್ಲಿ ಚಿತ್ ಪದದಿಂದ ರಮಾ-ಬ್ರಹ್ಮಾದಿಗಳೆಲ್ಲರನ್ನೂ ಪಕ್ಷಕೋಟಿಯಲ್ಲಿ ಸೇರಿಸಿದ್ದರಿಂದ, ಬ್ರಹ್ಮರುದ್ರಾದಿಗಳಿಂದ ಭಿನ್ನನಾದ ರಮಾಪತಿಯೇ ಜಗತ್ತಿಗೆ ನಿಯಾಮಕನು ಎಂದು ಪರಿಶೇಷದಿಂದ ಸಿದ್ಧವಾಗುತ್ತದೆ.

ರಮಾಪತಿಯನ್ನು ಬಿಟ್ಟು ಬೇರೆ ಯಾರಿಗೂ ಜಗನ್ನಿಯಮನಸಾಮರ್ಥ್ಯ ಇಲ್ಲ ಎಂಬುದನ್ನು ತಿಳಿಸುವುದಕ್ಕಾಗಿಯೇ ಟೀಕಾಕೃತ್ಪಾದರು ರಮಾಪತಿಗೆ 'ಭಗವಾನ್' ಎಂಬ ವಿಶೇಷಣ ನೀಡಿದ್ದಾರೆ. ಭಗವತ್‌ಶಬ್ದಪ್ರವೃತ್ತಿನಿಮಿತ್ತವಾದ ಸರ್ವೈಶ್ವರ್ಯವು ಯಾರಲ್ಲಿ ಇದೆಯೋ ಅವನೇ ಚಿದಚಿನ್ನಿಯಂತಾ ಆಗಲು ಸಾಧ್ಯ .

**ಅಥಾಪಿ ಯತ್ಪಾದನಖಾವಸೃಷ್ಟಂ**
**ಜಗದ್ವಿರಿಂಚೋಪಹೃತಾರ್ಹಣಾಂಭಃ ।**
**ಸೇಶಂ ಪುನಾತ್ಯನ್ಯತಮೋ ಮುಕುಂದಾತ್**
**ಕೋ ನಾಮ ಲೋಕೇ ಭಗವತ್ಪದಾರ್ಥಃ ॥★॥**

ಎಂಬುದಾಗಿ ಸ್ಮೃತಿ ಇರುವ ಕಾರಣ ಭಗವತ್‌ಶಬ್ದ ಮುಖ್ಯಾರ್ಥನಾದವನು ರಮಾಪತಿಯೇ ಆಗುತ್ತಾನೆ. ಅಂತಹ ಭಗವಂತ್‌ಶಬ್ದಮುಖ್ಯಾರ್ಥನಾದ ರಮಾಪತಿಯೇ ಜಗನ್ನಿಯಾಮಕ ಎಂದು ಭಾವ.

ಹೀಗೆ ಆಗಮದಂತೆ ಅನುಮಾನವೂ ಈಶ್ವರಸಾಧಕವಾಗುತ್ತದೆ ಎಂದು ತಿಳಿಸುವುದಕ್ಕಾಗಿ ಆಚಾರ್ಯರು ''**ನಿತ್ಯಾತಾದೃಶಚಿಚ್ಚೇತ್ಯಯಂತಾ**'' ಎಂಬ ವಿಶೇಷಣ ಕೊಟ್ಟಿದ್ದಾರೆ ಎಂದು ಅಭಿಪ್ರಾಯ.

**ಅವತಾರಿಕೆ :-** 'ಚಿಚ್ಚೇತ್ಯೇ ಕೇನಚಿನ್ನಿಯತೇ ಅತಾದೃಶತ್ವಾತ್' ಎಂಬ ಅನುಮಾನವನ್ನು ಮನಸ್ಸಿನಲ್ಲಿ ಇಟ್ಟುಕೊಂಡು

**''ನಿತ್ಯಾತಾದೃಶಚಿಚ್ಚೇತ್ಯಯಂತಾ ರಮಾಪತಿಃ''**

ಎಂಬುದಾಗಿ ವಿಶೇಷಣ ಕೊಟ್ಟಿದ್ದಾರೆ ಎಂದು ಹೇಳುತ್ತಿದ್ದೀರಿ. ಆದರೆ ಇಲ್ಲಿ ಆಚಾರ್ಯರು ನಿತ್ಯತ್ವ ವಿಶೇಷಣ ಹಾಕಿದ್ದಾರೆ. ಈ ನಿತ್ಯತ್ವ ಎನ್ನುವುದು ಯಾವುದಕ್ಕೆ ವಿಶೇಷಣ ? ಅತಾದೃಶತ್ವ ಎಂಬ ಹೇತುವಿಗೆ ವಿಶೇಷಣವೋ ? ನಿಯಂತೃತ್ವ ಎಂಬ ಸಾಧ್ಯಕ್ಕೆ ವಿಶೇಷಣವೋ ?

ನಿತ್ಯತ್ವ ಎನ್ನುವುದು ಅತಾದೃಶತ್ವ ಎಂಬ ಹೇತುವಿಗೆ ವಿಶೇಷಣ ಎನ್ನುವುದಾದರೆ,

**ಚಿಚ್ಚೇತ್ಯೇ ಕೇನಚಿನ್ನಿಯತೇ ನಿತ್ಯಂ ಅತಾದೃಶತ್ವಾತ್ ।**

(ಚಿಚ್ಚೇತ್ಯಗಳು, ಒಬ್ಬನಿಂದ ನಿಯಮ್ಯವಾಗಿವೆ, ನಿತ್ಯದಲ್ಲಿಯೂ ಅಪರ್ಯಾಪ್ತಶಕ್ತ್ಯಾದಿಗಳುಳ್ಳದ್ದಾದ್ದರಿಂದ)

ಎಂಬುದಾಗಿ ಹೇಳಿದಂತಾಗುತ್ತದೆ. ಆದರೆ ವಹ್ನಿಯನ್ನು ಸಾಧಿಸುವಾಗ ಕೇವಲ ಧೂಮಾತ್ ಎಂಬ ಹೇತುವಿನಿಂದಲೇ ವಹ್ನಿಯನ್ನು ಸಾಧಿಸಲು ಬರುವಾಗ ನೀಲಧೂಮಾತ್ ಎಂಬುದಾಗಿ ಧೂಮಹೇತುವಿಗೆ ನೀಲತ್ವ ವಿಶೇಷಣ ಕೊಟ್ಟರೆ ಅದು ಹೇಗೆ ವ್ಯರ್ಥವೋ, ಅದರಂತೆ ಕೇವಲ ಅತಾದೃಶತ್ವಾತ್ ಎಂಬ ಹೇತುವಿನಿಂದಲೇ ಒಬ್ಬ ನಿಯಾಮಕನನ್ನು ಸಾಧಿಸಲು ಬರುವಾಗ 'ನಿತ್ಯಂ ಅತಾದೃಶತ್ವಾತ್' ಎಂಬುದಾಗಿ ಅತಾದೃಶತ್ವಕ್ಕೆ ನಿತ್ಯತ್ವ ವಿಶೇಷಣ ಕೊಟ್ಟರೆ ಅದು ವ್ಯರ್ಥವೇ ಆಗುತ್ತದೆ. (ಅಪರ್ಯಾಪ್ತಶಕ್ತ್ಯಾದಿಗಳುಳ್ಳದ್ದಾದ್ದರಿಂದ ಅದಕ್ಕೆ ಒಬ್ಬ ನಿಯಾಮಕ ಇದ್ದಾನೆ ಎಂದಷ್ಟೇ ಸಾಧಿಸಲು ಬರುವಾಗ, ನಿತ್ಯವೂ ಅಪರ್ಯಾಪ್ತಶಕ್ತ್ಯಾದಿಗಳುಳ್ಳದ್ದಾದ್ದರಿಂದ ಅದಕ್ಕೆ ಒಬ್ಬ ನಿಯಾಮಕ ಇದ್ದಾನೆ ಎಂದು ಸಾಧಿಸಬೇಕಾದ ಅಗತ್ಯ ಇಲ್ಲ.) ಆದ್ದರಿಂದ ನಿತ್ಯತ್ವವು ಅತಾದೃಶತ್ವಕ್ಕೆ ವಿಶೇಷಣ ಎನ್ನುವುದು ಸರಿಯಲ್ಲ.

ಇನ್ನು ನಿತ್ಯತ್ವವು ನಿಯಂತೃತ್ವ ಎಂಬ ಸಾಧ್ಯಕ್ಕೆ ವಿಶೇಷಣವಾಗಿದೆ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಹಾಗಾದರೆ -

**ಚಿಚ್ಚೇತ್ಯೇ , ನಿತ್ಯಂ ಕೇನಚಿನ್ನಿಯತೇ, ಅತಾದೃಶತ್ವಾತ್, ರಥಾದಿವತ್ ।**

ಎಂಬುದಾಗಿ ಅನುಮಾನ ಮಾಡಿದಂತಾಗುತ್ತದೆ. ಆದರೆ ದೃಷ್ಟಾಂತವಾದ ರಥಾದಿಗಳು ಸದಾಕಾಲದಲ್ಲಿಯೂ (ಯಾವಾಗಲೂ) ನಿಯಮ್ಯವಾಗದ

ಕಾರಣ, ದೃಷ್ಟಾಂತವಾದ ರಥಾದಿಗಳಲ್ಲಿ 'ನಿತ್ಯಂ ನಿಯಮ್ಯತ್ವ' ಎಂಬ ಸಾಧ್ಯ ಬರುವುದಿಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆ.

ಆದ್ದರಿಂದ ನಿತ್ಯತ್ವ ವಿಶೇಷಣ ಯಾವುದಕ್ಕೆ ? ಈ ರೀತಿಯಾಗಿ ಪ್ರಶ್ನೆ ಬಂದರೆ, ಅದಕ್ಕೆ ಟೀಕಾಕೃತ್ಪಾದರು ಉತ್ತರ ನೀಡುತ್ತಾರೆ -

**ಟೀಕಾಃ ನಿತ್ಯೇತ್ಯತಾದೃಶತ್ವಸ್ಯ ನಿಯಂತೃತಾಯಾಶ್ಚ ಸ್ವರೂಪಸಂಕೀರ್ತನಮ್ ।**

**ಅನುವಾದಃ-** ಆಚಾರ್ಯರು ಕೊಟ್ಟಿರುವ ನಿತ್ಯತ್ವ ಎಂಬ ವಿಶೇಷಣ ಅದು ಅತಾದೃಶತ್ವಕ್ಕೂ ವಿಶೇಷಣ, ನಿಯಂತೃತ್ವಕ್ಕೂ ವಿಶೇಷಣ. ಎರಡಕ್ಕೂ ಅದು ವಿಶೇಷಣವಾಗಿದೆ.

ಹಾಗಾದರೆ ನೀಲಧೂಮಾದಿಗಳಂತೆ ಅತಾದೃಶತ್ವಕ್ಕೆ ನಿತ್ಯತ್ವ ವಿಶೇಷಣ ಕೊಡುವುದು ವ್ಯರ್ಥ ಎಂಬುದಾಗಿ ವೈಯರ್ಥ್ಯಶಂಕಾ ಬರುತ್ತದೆಯಲ್ಲವೇ ? ಮತ್ತು ದೃಷ್ಟಾಂತವಾದ ರಥಾದಿಗಳಲ್ಲಿ ನಿತ್ಯಂ ನಿಯಮ್ಯತ್ವ ಇಲ್ಲದ ಕಾರಣ ಸಾಧ್ಯವೈಕಲ್ಯ ಬರುತ್ತದೆ ಎಂದೂ ಹೇಳಿದ್ದೇವೆಯಲ್ಲ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ- ವಿಶೇಷಣವು ಎರಡುವಿಧವಾಗಿರುತ್ತದೆ. ೧) ವ್ಯಾವರ್ತಕ ರೂಪವಾದದ್ದು ೨) ಸ್ವರೂಪಕಥನರೂಪವಾದದ್ದು.

ವ್ಯಾವರ್ತಕ ರೂಪವಾದ ವಿಶೇಷಣವಿದ್ದರೆ, ಆಗ ವಿಶೇಷಣ ಕೊಡದಿದ್ದರೆ ಏನಾದರೂ ದೋಷ ಬರುತ್ತಿದ್ದು, ಅದರ ಪರಿಹಾರಕ್ಕಾಗಿ ವಿಶೇಷಣ ಕೊಟ್ಟು, ವಿಶೇಷಣ ಕೊಡುವುದರಿಂದ ಆ ದೋಷ ಪರಿಹಾರವಾಗುತ್ತಿದ್ದರೆ ಅಂತಹ ವಿಶೇಷಣ ಸಾರ್ಥಕ. ಆದರೆ ವಿಶೇಷಣ ಕೊಟ್ಟರೂ ಯಾವುದೇ ಪ್ರಯೋಜನ ಇಲ್ಲ ಎಂದಾದಾಗ ವಿಶೇಷಣವೈಯರ್ಥ್ಯ ಹೇಳಲು ಅವಕಾಶವಿರುತ್ತದೆ. ಆದರೆ ಪ್ರಕೃತದಲ್ಲಿ ಆಚಾರ್ಯರು ಕೊಟ್ಟಿರುವ ನಿತ್ಯತ್ವ ವಿಶೇಷಣವು ವ್ಯಾವರ್ತಕ ರೂಪವಾದ ವಿಶೇಷಣವಲ್ಲ.

ಕಿಂತು ಸ್ವರೂಪಕಥನರೂಪವಾದ ವಿಶೇಷಣವಾಗಿದೆ. ಅಂದರೆ ಚಿಚ್ಚೇತ್ಯಗಳು ಭಗವಂತನಿಂದ ನಿಯಮ್ಯವಾಗಿವೆ ಎಂದರೆ, ರಥಾದಿಗಳು ಕೆಲವೊಮ್ಮೆ ಮಾತ್ರ ನಿಯಮ್ಯವಾಗುವಂತೆ ಚಿಚ್ಚೇತ್ಯಗಳು ಕೆಲವೊಮ್ಮೆ ಮಾತ್ರ ನಿಯಮ್ಯವಾಗುತ್ತವೆ ಎಂದಲ್ಲ. ಕಿಂತು ವಾಸ್ತವಿಕವಾಗಿ ನಿತ್ಯದಲ್ಲಿಯೂ (ಸದಾಕಾಲದಲ್ಲಿಯೂ)

ಭಗವಂತನಿಂದ ನಿಯಮ್ಯವಾಗಿವೆ ಎಂಬ ವಸ್ತುಸ್ಥಿತಿಯನ್ನು ತಿಳಿಸುವುದಕ್ಕಾಗಿ ನಿತ್ಯತ್ವ ವಿಶೇಷಣ ಕೊಡಲ್ಪಟ್ಟಿದೆ.

ಅದರಂತೆ ಚಿಚ್ಚೇತ್ಯಗಳು ಅತಾದೃಶವಾಗಿವೆ (ಅಪರ್ಯಾಪ್ತಶಕ್ತ್ಯಾದಿ-ಗಳುಳ್ಳದ್ದಾಗಿವೆ) ಎಂದರೆ, ಕೆಲವೊಮ್ಮೆ ಮಾತ್ರ ಅತಾದೃಶವಾಗಿವೆ ಮತ್ತೆ ಕೆಲವೊಮ್ಮೆ ತಾದೃಶವೂ ಆಗಿವೆ (ಪರ್ಯಾಪ್ತಶಕ್ತ್ಯಾದಿಗಳುಳ್ಳದ್ದೂ ಆಗಿವೆ) ಎಂಬುದಾಗಿ ತಿಳಿಯಬೇಡಿ. ಕಿಂತು ಚಿಚ್ಚೇತ್ಯಗಳು ವಾಸ್ತವಿಕವಾಗಿ ನಿತ್ಯದಲ್ಲಿಯೂ (ಸದಾಕಾಲದಲ್ಲಿಯೂ) ಅತಾದೃಶವೇ ಆಗಿವೆ ಎಂಬ ವಸ್ತುಸ್ಥಿತಿಯನ್ನು ತಿಳಿಸುವುದಕ್ಕಾಗಿ ನಿತ್ಯತ್ವ ವಿಶೇಷಣ ಕೊಡಲ್ಪಟ್ಟಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** 'ಚಿಚ್ಚೇತ್ಯೇ' ಎಂಬುದಾಗಿ ಚೇತನ-ಅಚೇತನ ಎರಡನ್ನೂ ಪಕ್ಷ ಮಾಡಲಾಗಿದೆ. ಅದರ ಸಾರ್ಥಕತೆಯನ್ನು ತೋರಿಸುತ್ತಾರೆ -

**ಟೀಕಾ: ಚಿತ ಏವ ಪಕ್ಷೀಕಾರೇ ಪ್ರಕೃತಿನಿಯತತಯಾ ಸಾಂಖ್ಯಾನಾಂ, ಕರ್ಮಾಧೀನತಯಾ ಚ ಮೀಮಾಂಸಕಾನಾಂ ಸಿದ್ಧಸಾಧನಂ ಸ್ಯಾತ್ । ತತ್ಪರಿಹಾರಾಯ ಚೇತ್ಯಸ್ಯಾಪಿ ಪರಾಯತ್ತತಯಾ ಚಿನ್ನಿಯತತಾಸಂಭವಪ್ರದರ್ಶನಾಯ ಪಕ್ಷೀಕರಣಮ್ ॥**

**ಅನುವಾದ :-** 'ಚಿಚ್ಚೇತ್ಯೇ' ಎಂಬುದಾಗಿ ಚೇತನ-ಅಚೇತನ ಎರಡನ್ನೂ ಏಕೆ ಪಕ್ಷ ಮಾಡಬೇಕು ? 'ಚಿತ್ ಕೇನಚಿನ್ನಿಯತಂ' ಎಂಬುದಾಗಿ ಚೇತನರನ್ನು ಮಾತ್ರ ಪಕ್ಷ ಮಾಡಬಹುದಲ್ಲ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಕಾರಣ- ಹಾಗೆ **ಚಿತ್ ಕೇನಚಿನ್ನಿಯತಂ ಅತಾದೃಶತ್ವಾತ್ ।** ಎಂಬುದಾಗಿ ಚೇತನರನ್ನು ಮಾತ್ರ ಪಕ್ಷ ಮಾಡಿದರೆ,

**ವತ್ಸವಿವೃದ್ಧಿನಿಮಿತ್ತಂ ಕ್ಷೀರಸ್ಯ ಯಥಾ ಪ್ರವೃತ್ತಿರಜ್ಞಸ್ಯ ।**
**ಪುರುಷವಿಮೋಕ್ಷನಿಮಿತ್ತಂ ತಥಾ ಪ್ರವೃತ್ತಿಃ ಪ್ರಧಾನಸ್ಯ ॥**

ಎಂಬ ಕಾರಿಕೆಯಂತೆ ಸಾಂಖ್ಯಮತದಲ್ಲಿ ಎಲ್ಲ ಚೇತನರೂ ಪ್ರಕೃತಿಯ ಅಧೀನರೆಂದು ಅಂಗೀಕರಿಸುವುದರಿಂದ, 'ಚಿತ್ ಕೇನಚಿನ್ನಿಯತಂ' ಎಂದು ಸಾಧಿಸುವಾಗ ಪಕ್ಷವಾದ ಚಿತ್‌ಗೆ ಪ್ರಕೃತಿನಿಯಮ್ಯತ್ವವು ಸಾಂಖ್ಯರಿಗೆ ಸಿದ್ಧವೇ ಆಗಿರುವುದರಿಂದ ಸಾಂಖ್ಯಮತರೀತ್ಯಾ ಸಿದ್ಧಸಾಧನತಾ ಬರುತ್ತದೆ.

ಮತ್ತು

**ಬ್ರಹ್ಮಾ ಯೇನ ಕುಲಾಲವನ್ನಿಯಮಿತೋ ಬ್ರಹ್ಮಾಂಡಭಾಂಡೋದರೇ**
**ವಿಷ್ಣುರ್ಯೇನ ದಶಾವತಾರಗಹನೇ ಕ್ಷಿಪ್ತೋ ಮಹಾಸಂಕಟೇ ।**
**ರುದ್ರೋ ಯೇನ ಕಪಾಲಪಾಣಿಪುಟಕೇ ಭಿಕ್ಷಾಟನಂ ಕಾರಿತಃ**
**ಸೂರ್ಯೋ ಭ್ರಾಮ್ಯತಿ ನಿತ್ಯಮೇವ ಗಗನೇ ತಸ್ಮೈ ನಮಃ ಕರ್ಮಣೇ ॥**

ಎಂಬುದಾಗಿ ವಚನವಿರುವಂತೆ ಮೀಮಾಂಸಕಮತದಲ್ಲಿ ಎಲ್ಲ ಚೇತನರೂ ಕರ್ಮದ ಅಧೀನರೆಂದು ಅಂಗೀಕರಿಸಿರುವುದರಿಂದ, 'ಚಿತ್ ಕೇನಚಿನ್ನಿಯತಂ' ಎಂದು ಸಾಧಿಸುವಾಗ ಪಕ್ಷವಾದ ಚಿತ್‌ಗೆ ಕರ್ಮಾಧೀನತ್ವವು ಮೀಮಾಂಸಕರಿಗೆ ಸಿದ್ಧವೇ ಆಗಿರುವುದರಿಂದ ಮೀಮಾಂಸಕಮತರೀತಿಯಿಂದಲೂ ಸಿದ್ಧಸಾಧನತಾ ಬರುತ್ತದೆ.

ಅದರ ಪರಿಹಾರಕ್ಕಾಗಿ ಕೇವಲ ಚಿತ್ ಅನ್ನು ಪಕ್ಷ ಮಾಡದೇ ಚೇತ್ಯ(ಜಡ) ವನ್ನೂ ಪಕ್ಷಕೋಟಿಯಲ್ಲಿ ಸೇರಿಸಬೇಕು. ಎಲ್ಲ ಚೇತನರಂತೆ ಎಲ್ಲ ಜಡಪದಾರ್ಥಗಳನ್ನೂ ಪಕ್ಷದಲ್ಲಿ ಸೇರಿಸಿಕೊಳ್ಳಬೇಕು. ಅಂದರೆ ಜಡವಾದ ಘಟ-ಪಟಾದಿಗಳು ಪಕ್ಷವಾಗಿರುವಂತೆ, ಜಡವಾದ ಪ್ರಕೃತಿ-ಕರ್ಮಗಳೂ ಪಕ್ಷವಾಗಿವೆ. ಪ್ರಕೃತಿ-ಕರ್ಮಗಳನ್ನೂ ಪಕ್ಷ ಮಾಡಿಕೊಳ್ಳುವುದರ ಉದ್ದೇಶ ಇಷ್ಟೇ- ಜಡವಾದ ಘಟಪಟಾದಿಗಳು ಪರಾಧೀನವಾದ್ದರಿಂದ ಅವುಗಳು ಹೇಗೆ ಚಿನ್ನಿಯತವಾಗಿವೆಯೇ (ಒಬ್ಬ ಚೇತನನಿಂದ ಹೇಗೆ ನಿಯಮ್ಯವಾಗಿವೆಯೋ) ಅದರಂತೆ ಪ್ರಕೃತಿ-ಕರ್ಮಗಳೂ ಪರಾಧೀನವೇ ಆದ್ದರಿಂದ ಇವೂ ಚಿನ್ನಿಯತವಾಗಿವೆ (ಒಬ್ಬ ಚೇತನನಿಂದ ನಿಯಮ್ಯವಾಗಿವೆ) ಎನ್ನುವುದನ್ನು ತೋರಿಸಿಕೊಡುವುದು.

ಹೀಗೆ ಪ್ರಕೃತಿ-ಕರ್ಮಗಳನ್ನೂ ಪಕ್ಷದಲ್ಲಿ ಸೇರಿಸಿ, ''ಅವು ಚಿನ್ನಿಯಾಮಕವಲ್ಲ. ಕಿಂತು ಅವುಗಳೂ ಜಡವಾದ್ದರಿಂದ ಪರಾಧೀನವೇ ಚಿನ್ನಿಯತವೇ ಆಗಿವೆ. ಅರ್ಥಾತ್ ಚಿಚ್ಚೇತ್ಯನಿಯಾಮಕನಾದ (ಪ್ರಕೃತಿ-ಕರ್ಮಗಳಿಗೂ ನಿಯಾಮಕನಾದ) ಒಬ್ಬ ಈಶ್ವರ ಇದ್ದಾನೆ'' ಎಂದು ಸಾಧಿಸುವುದಕ್ಕಾಗಿ ಕೇವಲ ಚಿತ್‌ಅನ್ನು ಪಕ್ಷ ಮಾಡದೇ ಚಿತ್-ಚೇತ್ಯ ಎರಡನ್ನೂ ಪಕ್ಷ ಮಾಡಲಾಗಿದೆ ಎಂದು ಭಾವ.

**ಟೀಕಾ: ಚೇತ್ಯಮಾತ್ರಪಕ್ಷೀಕಾರೇ ಚ ಲೋಕದೃಷ್ಟ್ಯಾ ಪಾಶುಪತಾದಿ-ಸ್ಮೃತಿರೀತ್ಯಾ ಚ ಚಿನ್ನಿಯತತಯಾ ಸಿದ್ಧಸಾಧನಂ ಸ್ಯಾತ್ । ತನ್ನಿರಾಸಾಯ ಚಿತೋಽಪಿ ಪಕ್ಷೀಕಾರಃ।**

**ಅನುವಾದ :-** ಇನ್ನು ಚಿತ್-ಚೇತ್ಯಗಳಲ್ಲಿ ಚೇತ್ಯ(ಜಡ)ವನ್ನು ಮಾತ್ರ ಪಕ್ಷ ಮಾಡಬಹುದಲ್ಲ? ''**ಚೇತ್ಯಂ ಕೇನಚಿನ್ನಿಯತಂ**'' ಎಂದು ಅನುಮಾನ ಮಾಡಬಹುದಲ್ಲವೇ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಕಾರಣ- ಹಾಗೆ ಜಡವನ್ನು ಮಾತ್ರ ಪಕ್ಷ ಮಾಡಿದರೆ ಜಡವು (ಒಬ್ಬ) ಚೇತನನಿಂದ ನಿಯಮ್ಯವಾಗಿದೆ ಎಂದು ಹೇಳಿದಂತಾಗುತ್ತದೆ. ಹಾಗೆ ಹೇಳಿದರೆ- ''**ಸರ್ವಂ ಅಚೇತನಂ ಚೇತನಾರ್ಥಂ**'' ಎಂಬುದಾಗಿ ತತ್ತ್ವಸಂಖ್ಯಾನಟೀಕೆಯಲ್ಲಿ ಹೇಳಿದಂತೆ ಸ್ವತಃ ಪ್ರವೃತ್ತಿಶೂನ್ಯವಾದ ಜಡವು ಚೇತನರ ಅಧೀನವಾಗಿರುವುದು ಲೋಕದಲ್ಲಿ ಕಂಡಿದ್ದರಿಂದ ಮತ್ತು ಸಕಲಜಗತ್ತು ರುದ್ರದೇವರ ಅಧೀನವಾಗಿದೆ ಎಂಬುದಾಗಿ ಪಾಶುಪತಾದಿಸ್ಮೃತಿಗಳಲ್ಲಿಯೂ ಹೇಳಿದ್ದರಿಂದ ''**ಚೇತ್ಯಂ ಕೇನಚಿನ್ನಿಯತಂ**'' (ಜಡವು ಚೇತನಾಧೀನವಾಗಿದೆ) ಎಂಬುದಾಗಿ ಸಾಧಿಸಿದರೆ ಲೋಕದೃಷ್ಟಿಯಿಂದ ಹಾಗೂ ಪಾಶುಪತಾದಿಸ್ಮೃತಿರೀತಿಯಿಂದ ಸಿದ್ಧಸಾಧನತಾ ಬರುತ್ತದೆ.

ಆ ಸಿದ್ಧಸಾಧನತಾಪರಿಹಾರಕ್ಕಾಗಿ ಚೇತನರನ್ನೂ ಪಕ್ಷ ಮಾಡಬೇಕು. (ಎಲ್ಲ ಚೇತನರನ್ನೂ ಪಕ್ಷಕೋಟಿಯಲ್ಲಿ ಸೇರಿಸಬೇಕು.)

ಎಲ್ಲ ಚೇತನರನ್ನೂ ಪಕ್ಷ ಮಾಡಿಕೊಂಡಾಗ 'ಸಕಲಜಗತ್ತು ರುದ್ರದೇವರ ಅಧೀನವಾಗಿದೆ' ಎನ್ನುವುದು ಪಾಶುಪತಾದಿಸ್ಮೃತಿಸಿದ್ಧವಾಗಿದ್ದರೂ ಸಹ ಆ ರುದ್ರದೇವರೂ ಮತ್ತೊಬ್ಬ ಚೇತನನ ಅಧೀನ ಎನ್ನುವುದು ಸಿದ್ಧವಾಗಿಲ್ಲ (ಸಮ್ಮತವಾಗಿಲ್ಲ) ವಾದ್ದರಿಂದ ಪಾಶುಪತಾದಿಸ್ಮೃತಿರೀತಿಯಿಂದ ಸಿದ್ಧಸಾಧನತಾ ಬರುವುದಿಲ್ಲ.

ಇನ್ನು ಸ್ವತಃ ಪ್ರವೃತ್ತಿಶೂನ್ಯವಾದ ಜಡಪದಾರ್ಥಗಳು ಚೇತನನ ಅಧೀನ ಎನ್ನುವುದು ಲೋಕದೃಷ್ಟಿಯಿಂದ ಸಿದ್ಧವಾಗಿದ್ದರೂ ಸಹ ಜಡಪದಾರ್ಥಗಳಂತೆ ಚೇತನರೂ ಚೇತನರ ಅಧೀನ ಎನ್ನುವುದು ಲೋಕದೃಷ್ಟವಾಗಿಲ್ಲ. ಆದ್ದರಿಂದ ಲೋಕದೃಷ್ಟಿಯಿಂದಲೂ ಸಿದ್ಧಸಾಧನತಾ ಬರುವುದಿಲ್ಲ ಎಂದು ಭಾವ.

**ಅವತಾರಿಕೆ:-** ''ಚಿಚ್ಚೇತ್ಯೇ ಕೇನಚಿನ್ನಿಯತೇ ಅಪರ್ಯಾಪ್ತಶಕ್ತ್ಯಾದಿಮತ್ತ್ವಾತ್'' ಎಂಬ ಅನುಮಾನದಿಂದ ಚೇತನ-ಅಚೇತನಾತ್ಮಕವಾದ ಜಗತ್ತಿಗೆ ನಿಯಾಮಕನಾದ ಒಬ್ಬ ಚೇತನ ಇದ್ದಾನೆ ಎಂಬುದಾಗಿ ನಾವು ಸಾಧಿಸಿದಾಗ, ಈ ಅನುಮಾನದ ಮೇಲೆ ಶಂಕಿಸುತ್ತಾರೆ -

**ಟೀಕಾ: ನ ಚ ಚಿಚ್ಚೇತ್ಯೇ ಏವಾಂಧಪಂಗುನ್ಯಾಯೇನಾನ್ಯೋನ್ಯನಿಯತೇ ಭವಿಷ್ಯತಃ ಕಿಮೀಶ್ವರೇಣೇತಿ ವಾಚ್ಯಮ್ । ಸ್ವತಃ ಶಕ್ತಿಮಾತ್ರ-ಶೂನ್ಯಯೋರಿತರೇತರಾಶ್ರಯೇಣ ಇತರೇತರಪ್ರತ್ಯಾಸತ್ತೇರೇವಾ-ಯೋಗಾತ್ ।**

**ಅನುವಾದ:-** ಚೇತನ-ಜಡಗಳು ಮತ್ತೊಬ್ಬ ಚೇತನನಿಂದ ನಿಯಮ್ಯವಾಗಿವೆ ಎಂದು ಏಕೆ ಹೇಳಬೇಕು? ಅಂಧ-ಪಂಗುನ್ಯಾಯದಿಂದ ಚೇತನ-ಜಡಗಳೇ ಪರಸ್ಪರ ನಿಯಮ್ಯವಾಗಬಹುದಾಗಿದೆ.

ಅಂದರೆ :- ಒಬ್ಬ ಕುರುಡ ಹಾಗೂ ಒಬ್ಬ ಕುಂಟ ಇಬ್ಬರೂ ಪ್ರತ್ಯೇಕ-ಪ್ರತ್ಯೇಕವಾಗಿ ಒಂದು ಸ್ಥಲಕ್ಕೆ ಹೋಗಲು ಅಸಮರ್ಥರಾಗಿದ್ದರೂ ಸಹ, ಕುರುಡನ ಹೆಗಲಮೇಲೆ ಕುಂಟನು ಹತ್ತಿ ಕುಳಿತು ಮಾರ್ಗ ತೋರಿಸುತ್ತಾನೆ ಎಂದಾದರೆ ಆಗ ಕುರುಡನು ಕುಂಟನು ತೋರಿದ ಹಾದಿಯಲ್ಲಿ ಸ್ವಯಂ ತನ್ನ ಪಾದಗಳಿಂದ ನಡೆದುಕೊಂಡು ಕುರುಡನನ್ನೂ ಹೊತ್ತುಕೊಂಡು ಹೋಗುತ್ತಾನೆ. ಹಾಗಾದರೆ ಇಬ್ಬರೂ ಸಹ (ಪರಸ್ಪರ ಅಧೀನರಾಗಿ) ನಿಗದಿತವಾದ ಒಂದುಸ್ಥಳಕ್ಕೆ ಹೋಗಿ ತಲುಪುತ್ತಾರೆ.

ಅದರಂತೆಯೇ ಚೇತನ-ಜಡಗಳೂ ಸಹ ಪರಸ್ಪರ ಅಧೀನರಾಗಿ ತಮ್ಮ ತಮ್ಮ ವ್ಯಾಪಾರಗಳನ್ನು (ಮಾಡುತ್ತಾರೆ) ಮಾಡಲಿ. ಹೀಗೆ ಸಂಭಾವಿತವಾಗುವಾಗ ಚೇತನ-ಜಡಗಳನ್ನು ನಿಯಮನ ಮಾಡುವುದಕ್ಕಾಗಿ ಈಶ್ವರನನ್ನು ಏಕೆ ಅಂಗೀಕರಿಸಬೇಕು ?

ಈ ರೀತಿಯಾಗಿ ಶಂಕೆ ಬಂದರೆ ಅದು ಸರಿಯಲ್ಲ. ಕಾರಣ - ಕುರುಡ ಮತ್ತು ಕುಂಟ ಇಬ್ಬರ ಮೇಲನ ಆದರೆ ಆಗ ಇಬ್ಬರೂ ಪರಸ್ಪರ ಅಧೀನರಾಗಿ ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಲು ಸಂಭಾವಿತ. ಆದರೆ ಇಬ್ಬರ ಮೇಲನ ಮಾಡಿಸುವುದಕ್ಕಾಗಿಯೇ ಒಬ್ಬ ಕರಣಪಾಟವ ಉಳ್ಳ ವ್ಯಕ್ತಿ ಬೇಕೇ ಬೇಕಲ್ಲವೇ?

ಅಂದರೆ - ಕುರುಡ ಕುಂಟನ ಹತ್ತಿರ ಹೋಗುವುದಕ್ಕೆ ಮಾರ್ಗದರ್ಶನಕ್ಕಾಗಿ ಕುಂಟನನ್ನು ಅಪೇಕ್ಷಿಸುತ್ತಾನೆ. ಅದೇ ರೀತಿ ಕುಂಟನೂ ಸಹ ಕುರುಡನ ಹತ್ತಿರ ಹೋಗುವುದಕ್ಕೆ ಕುರುಡನ ಪಾದಚಾರವನ್ನು (ಕುರುಡನ ಪಾದಗಳಿಂದ ಹೋಗುವುದನ್ನು) ಅಪೇಕ್ಷಿಸುತ್ತಾನೆ. ಹೀಗಾಗಿ ಅನ್ಯೋನ್ಯಾಶ್ರಯ ಬರುವುದರಿಂದ ಇಬ್ಬರ ಮೇಲನವೇ ಅನುಪಪನ್ನ. ಆದ್ದರಿಂದ ಇಬ್ಬರ ಮೇಲನ ಮಾಡಿಸುವುದಕ್ಕಾಗಿ ಕರಣಪಾಟವ ಉಳ್ಳ (ಕಣ್ಣು-ಕಾಲು ಮುಂತಾದ ಎಲ್ಲ ಅವಯವಗಳೂ ಸಮಂಜಸವಾಗಿ ಉಳ್ಳ) ಒಬ್ಬ ವ್ಯಕ್ತಿ ಬೇಕೇಬೇಕು.

ಅದರಂತೆಯೇ ಚೇತನ-ಜಡಗಳೂ ಸಹ ಪರಸ್ಪರ ಅಧೀನರಾಗಿ ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಲು ಮೊದಲು ಮೇಲನ ಆಗಬೇಕು. ತಮ್ಮಷ್ಟಕ್ಕೆ ತಾವೇ ಮೇಲನ ಮಾಡಿಕೊಳ್ಳಲು ಸಾಧ್ಯವಿಲ್ಲ. ಕಾರಣ ಹಿಂದೆ ಹೇಳಿದಂತೆ ಅನ್ಯೋನ್ಯಾಶ್ರಯ ಬರುತ್ತದೆ. ಹಾಗಾಗಿ ಚೇತನ-ಜಡಗಳಲ್ಲಿ ಮೇಲನ ಮಾಡಿಸುವುದಕ್ಕಾಗಿ ಈಶ್ವರ ಬೇಕೇಬೇಕು ಎಂದು ಅಭಿಪ್ರಾಯ.

**ಅವತಾರಿಕೆ :-** 'ಚಿಚ್ಚೇತ್ಯೇ ಕೇನಚಿನ್ನಿಯತೇ' ಎಂಬ ನಮ್ಮ ಅನುಮಾನಕ್ಕೆ ನಿಯಮನಾಯೋಗರೂಪವಾದ ತರ್ಕಪರಾಹತಿಯನ್ನು ಶಂಕಿಸಿ, ನಿರಾಕರಿಸುತ್ತಾರೆ

**ಟೀಕಾ : ಪ್ರಯೋಜನಮನನುಸಂಧದಯಂ ನ ನಿಯಚ್ಛೇತ್ । ತದನುಸಂಧಾನೇ ಚಾಪೂರ್ಣಃ ಸ್ಯಾದಿತಿ ತರ್ಕಪರಾಹತಿಪರಿಹಾರಾಯ ನಿಯಮನಶೀಲತ್ವಾತ್ ಪ್ರಯೋಜನಾನುಸಂಧಾನಾಭಾವೇಽಪಿ ತದುಪಪನ್ನಮಿತಿ ಜ್ಞಾಪಯಿತುಂ ಯಂತೇತಿ ತಾಚ್ಛೀಲಿಕತೃನ್ನಂತಪ್ರಯೋಗಃ । ತಥಾ ಚ ಶ್ರುತಿಃ 'ದೇವಸ್ಯೈಷ ಸ್ವಭಾವೋಽಯಂ' ಇತಿ ।**

**ಅನುವಾದ :-** ರಮಾಪತಿಯು ಚೇತನ-ಅಚೇತನಾತ್ಮಕ ಜಗತ್ತಿಗೆ ನಿಯಾಮಕನಾಗಿದ್ದಾನೆ ಎನ್ನುವುದಾದರೆ, ಯಾವ ಪ್ರಯೋಜನವನ್ನೂ ಅಪೇಕ್ಷಿಸದೇ ನಿಯಮನ ಮಾಡುತ್ತಾನೆಯೋ ? ಅಥವಾ ಏನನ್ನಾದರೂ ಪ್ರಯೋಜನವನ್ನು ಅಪೇಕ್ಷಿಸಿ ನಿಯಮನ ಮಾಡುತ್ತಾನೆಯೋ ?

ಯಾವ ಪ್ರಯೋಜನವನ್ನೂ ಅಪೇಕ್ಷಿಸದೇ ನಿಯಮನ ಮಾಡಲು ಸಾಧ್ಯವಿಲ್ಲ. ಕಾರಣ -

**ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ ।**

ಎಂಬ ವಚನದಂತೆ ಯಾವುದೇ ಪ್ರಯೋಜನವಿಲ್ಲದೇ ಒಬ್ಬ ದಡ್ಡನೂ ಕೆಲಸ ಮಾಡುವುದಿಲ್ಲ ಎಂದಮೇಲೆ ಸರ್ವಜ್ಞನಾದ ಭಗವಂತ ಯಾವ ಪ್ರಯೋಜನವೂ ಇಲ್ಲದೇ ಜಗನ್ನಿಯಮನವನ್ನು ಹೇಗೆ ಮಾಡಲು ಸಾಧ್ಯ ? ಸಾಧ್ಯವಿಲ್ಲ.

ಇನ್ನು ಪ್ರಯೋಜನವನ್ನು ಅಪೇಕ್ಷಿಸಿ ನಿಯಮನ ಮಾಡುತ್ತಾನೆ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಕಾರಣ - ಭಗವಂತ ಯಾವ ಪ್ರಯೋಜನವನ್ನು ಅಪೇಕ್ಷಿಸಿ ನಿಯಮನ ಮಾಡುತ್ತಾನೆಯೋ ಆ ಪ್ರಯೋಜನ ಭಗವಂತನಿಗೆ ಮೊದಲು ಸಿಕ್ಕಿಲ್ಲ ಎಂದೇ ಅರ್ಥ. ಹಾಗಾದರೆ ಚೈತ್ರ-ಮೈತ್ರಾದಿಗಳಂತೆ ಭಗವಂತ ಅಪೂರ್ಣ ಎಂದಾಗುತ್ತದೆ. ಭಗವಂತ ಅಪೂರ್ಣನಾದರೆ, ಚೈತ್ರ-ಮೈತ್ರಾದಿಗಳು ಅಪೂರ್ಣರಾದ್ದರಿಂದ ಹೇಗೆ ಜಗನ್ನಿಯಮನ ಮಾಡಲು ಸಾಧ್ಯವಿಲ್ಲವೋ ಹಾಗೆ ಭಗವಂತನೂ ಅಪೂರ್ಣನಾದ್ದರಿಂದ ಜಗನ್ನಿಯಮನ ಮಾಡಲು ಸಾಧ್ಯವಿಲ್ಲ.

ಆದ್ದರಿಂದ ಪ್ರಯೋಜನಾಪೇಕ್ಷೆ ಇಟ್ಟುಕೊಂಡು ಅಥವಾ ಇಟ್ಟುಕೊಳ್ಳದೇ ಎಂಬ ಎರಡು ಪಕ್ಷಗಳಲ್ಲಿಯೂ ನಿಯಮನಕಾರ್ಯ ಕೂಡುವುದಿಲ್ಲ.

**ಯದಿ ರಮಾಪತಿಃ ಪ್ರಯೋಜನಮನನುಸಂಧಾನಃ ನಿಯಚ್ಛೇತ್ ತರ್ಹಿ 'ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ' ಇತಿ ವಚನಾತ್ ನಿಯಮನಾಯೋಗಃ ।**

**ಯದಿ ರಮಾಪತಿಃ ಪ್ರಯೋಜನಮನುಸಂಧಾನಃ ನಿಯಚ್ಛೇತ್ ತರ್ಹಿ ಅಸ್ಮದಾದಿವತ್ ಅಪೂರ್ಣತ್ವೇನ ನಿಯಮನಾಯೋಗಃ ।**

ಈ ರೀತಿಯಾಗಿ ನಿಯಮನಾಯೋಗರೂಪವಾದ ಪ್ರತಿಕೂಲತರ್ಕ-ಪರಾಹತಿಯು 'ಚಿಚ್ಚೇತ್ಯೇ ಕೇನಚಿನ್ನಿಯತೇ' ಎಂಬ ನಿಮ್ಮ ಅನುಮಾನಕ್ಕೆ ಬರುವುದರಿಂದ ನಿಮ್ಮ ಅನುಮಾನವು ಈಶ್ವರಸಾಧಕವಾಗುವುದಿಲ್ಲ ಎಂಬುದಾಗಿ ಶಂಕಿಸಿದರೆ, ಈ ವಿಧವಾದ ತರ್ಕಪರಾಹತಿಯ ಪರಿಹಾರಕ್ಕಾಗಿ ಆಚಾರ್ಯರು '**ಚಿಚ್ಚೇತ್ಯಯಂತಾ**' ಎಂಬುದಾಗಿ ತಾಚ್ಛೀಲಿಕ ತೃನ್ ಪ್ರತ್ಯಯಾಂತ ಶಬ್ದಪ್ರಯೋಗ ಮಾಡಿದ್ದಾರೆ.

ಅದರ ಅಭಿಪ್ರಾಯ :- ಭಗವಂತನು ಯಾವುದೇ ಪ್ರಯೋಜನವನ್ನೂ ಅಪೇಕ್ಷಿಸದೇ ಜಗನ್ನಿಯಮನ ಮಾಡುತ್ತಾನೆ ಎಂಬ ಮೊದಲನೇ ಪಕ್ಷವನ್ನೇ ಅಂಗೀಕರಿಸುತ್ತೇವೆ. ಹಾಗಾದರೆ ಪ್ರಯೋಜನಾಪೇಕ್ಷೆ ಇಲ್ಲದೇ ಪ್ರವೃತ್ತಿ ಹೇಗೆ ಕೂಡುತ್ತದೆ ? ಎಂಬ ಶಂಕೆ ಬೇಡ. ಕಾರಣ ಭಗವಂತನು ನಿಯಮನ-ಶೀಲನಾಗಿದ್ದಾನೆ ಅರ್ಥಾತ್ ಜಗನ್ನಿಯಮನ ಮಾಡುವುದು ಭಗವಂತನ ಸ್ವಭಾವಪ್ರವೃತ್ತಿಯಾಗಿದೆ. ಯಾವುದು ಸ್ವಭಾವಪ್ರವೃತ್ತಿಯೋ ಅದರ ಹಿನ್ನಲೆಯಲ್ಲಿ ಪ್ರಯೋಜನಾಪೇಕ್ಷೆ ಇರುವುದಿಲ್ಲ. ಉದಾ- ನಡೆದಾಡುವಾಗ ಕರಪ್ರಸರಣಾದಿಗಳನ್ನು ಮಾಡುತ್ತೇವೆ. ಹಾಗೆ ಕರಪ್ರಸರಣಾದಿಗಳನ್ನು ಮಾಡುವುದಕ್ಕೆ ಏನು ಪ್ರಯೋಜನ ? ಯಾವ ಪ್ರಯೋಜನವೂ ಇಲ್ಲ. ಯಾಕೆ? ಅದು ಪ್ರಯೋಜನಾಪೇಕ್ಷೆಯಿಂದ ಮಾಡುವಂತಹ ಕೆಲಸವಲ್ಲ. ಅದು ಸ್ವಭಾವಪ್ರವೃತ್ತಿ. ಅದರಂತೆಯೇ ಜಗನ್ನಿಯಮನ ಮಾಡುವುದೂ ಭಗವಂತನ ಸ್ವಭಾವಪ್ರವೃತ್ತಿಯಾದ್ದರಿಂದ, ಅದರ ಹಿನ್ನಲೆಯಲ್ಲಿ ಭಗವಂತನಿಗೆ ಯಾವುದೇ ಪ್ರಯೋಜನಾಪೇಕ್ಷೆ ಇಲ್ಲದಿದ್ದರೂ ನಿಯಮನವು ಉಪಪನ್ನವೇ.

ಇದನ್ನು ತಿಳಿಸುವುದಕ್ಕಾಗಿ ಆಚಾರ್ಯರು '**ಯಂತಾ**' ಎಂಬುದಾಗಿ ತಾಚ್ಛೀಲಿಕ ತೃನ್‌ಪ್ರತ್ಯಯಾಂತ ಶಬ್ದಪ್ರಯೋಗ ಮಾಡಿದ್ದಾರೆ. ಅಂದರೆ ಈ ಹಿಂದೆ ಹೇಳಿದಂತೆ ಯಮ ಧಾತುವಿಗೆ ತಾಚ್ಛೀಲ್ಯ ಎಂಬ ಅರ್ಥದಲ್ಲಿ ತೃನ್ ಪ್ರತ್ಯಯ ಬಂದು ಯಂತಾ ಎಂದು ರೂಪವಾಗಿದೆ. ಹೀಗಾಗಿ ಯಂತಾ ಎಂದರೆ ನಿಯಮನಶೀಲ ಎಂದು ಅರ್ಥ ಬರುತ್ತದೆ.

''**ದೇವಸ್ಯೈಷ ಸ್ವಭಾವೋಽಯಂ**'' ಎಂಬುದಾಗಿ ಶ್ರುತಿಯು ಹೇಳುವಂತೆ ಜಗನ್ನಿಯಮನ ಮಾಡುವುದು ಭಗವಂತನ ಸ್ವಭಾವವಾಗಿದೆ. ಆದ್ದರಿಂದ ಇಂತಹ ಸ್ವಭಾವಪ್ರವೃತ್ತಿಯಾಗಿರುವ ಜಗನ್ನಿಯಮನದ ಹಿನ್ನಲೆಯಲ್ಲಿ ಭಗವಂತನಿಗೆ ಯಾವುದೇ ಪ್ರಯೋಜನಾಪೇಕ್ಷೆ ಇಲ್ಲ. ಆದರೂ ನಿಯಮನಕಾರ್ಯ ಉಪಪನ್ನವೇ ಎಂದು ಭಾವ.

**ಅವತಾರಿಕೆ :-** 'ಚಿಚ್ಚೇತ್ಯೇ ಕೇನಚಿನ್ನಿಯತೇ ಅಪರ್ಯಾಪ್ತಶಕ್ತ್ಯಾದಿಮತ್ವಾತ್' ಎಂಬ ಅನುಮಾನದಿಂದ ಚೇತನ-ಅಚೇತನಾತ್ಮಕ ಜಗತ್ತಿಗೆ ನಿಯಾಮಕನಾಗಿ ಈಶ್ವರನನ್ನು ಸಾಧಿಸಿದಾಗ, ನಮ್ಮ ಈ ಅನುಮಾನದ ಮೇಲೆ ಪ್ರತಿಪಕ್ಷಾನುಮಾನ-ಶಂಕೆ ಮಾಡುತ್ತಾರೆ -

**ಟೀಕಾ: ನ ಚ ರುದ್ರಾದೀನಾಮಿವ ರಮಾಪತೇರಪಿ ಕಥಂ ಚಿಚ್ಚೇತ್ಯ-ಯಂತೃತೋಪಪತ್ತಿರಿತಿ ವಾಚ್ಯಮ್ । ಯತೋಽಸಾವ-ಪರ್ಯಾಪ್ತಶಕ್ತಿತ್ವಾದೀನಾಂ ಹೇತೂನಾಂ ಪಕ್ಷಧರ್ಮತಾಬಲೇನ ಸಿದ್ಧ್ಯನ್ ಪೂರ್ಣಶಕ್ತ್ಯಾದಿರೂಪೇಣೈವ ಸಿದ್ಧ ಇತ್ಯಾಶಯವಾನ್ ಆಹ ॥ ಸರ್ವತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನ ಇತಿ ॥**

**ಅನುವಾದ :-** 'ಚಿಚ್ಚೇತ್ಯೇ ಕೇನಚಿನ್ನಿಯತೇ' ಎಂಬುದಾಗಿ ಚೇತನ-ಅಚೇತನಾತ್ಮಕವಾದ ಜಗತ್ತಿಗೆ ರಮಾಪತಿಯು ನಿಯಾಮಕನಾಗಿದ್ದಾನೆ ಎಂದು ಸಾಧಿಸುವುದು ಸರಿಯಲ್ಲ. ಏಕೆಂದರೆ - ರುದ್ರಾದಿಗಳಿಗೆ ಚಿಚ್ಚೇತ್ಯನಿಯಂತೃತ್ವ ಹೇಗೆ ಉಪಪನ್ನವಾಗುವುದಿಲ್ಲವೋ ಅದರಂತೆ ರಮಾಪತಿಗೂ ಚಿಚ್ಚೇತ್ಯ-ನಿಯಂತೃತ್ವ ಉಪಪನ್ನವಾಗುವುದಿಲ್ಲ. ಅರ್ಥಾತ್

**'ರಮಾಪತಿಃ ನ ಚಿಚ್ಚೇತ್ಯಯಂತಾ ಚೇತನತ್ವಾತ್ ರುದ್ರಾದಿವತ್'**

''ರುದ್ರಾದಿಗಳು ಚೇತನರಾದ್ದರಿಂದ ಹೇಗೆ ಚಿಚ್ಚೇತ್ಯನಿಯಂತೃಗಳಾಗಿಲ್ಲವೋ ಹಾಗೆ ರಮಾಪತಿಯೂ ಚೇತನನಾದ್ದರಿಂದ ಚಿಚ್ಚೇತ್ಯನಿಯಂತಾ ಅಲ್ಲ'' ಎಂಬುದಾಗಿ ನಿಮ್ಮ ಅನುಮಾನಕ್ಕೆ ಪ್ರತಿಪಕ್ಷಾನುಮಾನ ಮಾಡುತ್ತೇವೆ. ನಿಮ್ಮ ಅನುಮಾನವು ಪ್ರತಿಪಕ್ಷಾನುಮಾನ ಉಳ್ಳದ್ದಾದ್ದರಿಂದ (ಸತ್ಪ್ರತಿಪಕ್ಷವಾಗುವುದ-ರಿಂದ) ಈಶ್ವರಸಾಧಕವಾಗುವುದಿಲ್ಲ.

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ- ಪಕ್ಷವಾದ ಚಿಚ್ಚೇತ್ಯಗಳಲ್ಲಿ ಅಪರ್ಯಾಪ್ತಶಕ್ತಿಮತ್ತ್ವ ಮೊದಲಾದವುಗಳು ಇವೆ ಎಂದು ಪ್ರಮಾಣ(ಅನುಭವ)ಸಿದ್ಧವಾಗಿದೆ. ಅರ್ಥಾತ್ ಪಕ್ಷಧರ್ಮತಾ ಇದೆ. ಚಿಚ್ಚೇತ್ಯಗಳು ಅಪರ್ಯಾಪ್ತಶಕ್ತ್ಯಾದಿಗಳುಳ್ಳದ್ದಾದ್ದರಿಂದ, ಅಪರ್ಯಾಪ್ತಶಕ್ತ್ಯಾದಿ-ಗಳುಳ್ಳ ಚಿಚ್ಚೇತ್ಯಗಳಿಗೆ ನಿಯಾಮಕನಾಗಿ ಸಿದ್ಧನಾಗುವವನು ಅಪರ್ಯಾಪ್ತ-ಶಕ್ತ್ಯಾದಿಗಳುಳ್ಳವನಾಗಿರಲು ಸಾಧ್ಯವಿಲ್ಲ. ಕಾರಣ ಅವನೂ (ನಿಯಾಮಕನಾದ ರಮಾಪತಿಯೂ) ಅಪರ್ಯಾಪ್ತಶಕ್ತ್ಯಾದಿಗಳುಳ್ಳವನಾದರೆ ಇತರ ಚೇತನರಂತೆ ಅವನೂ ಒಬ್ಬನಿಂದ ನಿಯಮ್ಯನಾಗಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಅಪರ್ಯಾಪ್ತಶಕ್ತ್ಯಾದಿಗಳುಳ್ಳ ಚಿಚ್ಚೇತ್ಯಗಳಿಗೆ ನಿಯಾಮಕನಾಗಿ ಸಿದ್ಧನಾಗುವ ರಮಾಪತಿಯು ಪರ್ಯಾಪ್ತಶಕ್ತ್ಯಾದಿಗಳುಳ್ಳವನಾಗಿಯೇ ಸಿದ್ಧನಾಗುತ್ತಾನೆ ಎಂಬ ಅಭಿಪ್ರಾಯದಿಂದ ಆಚಾರ್ಯರು ಹೇಳಿದರು -

**ಸರ್ವತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ ।**

ಎಂಬುದಾಗಿ. ಹಾಗಾದರೆ -

''**ರಮಾಪತಿಃ ನ ಚಿಚ್ಚೇತ್ಯಯಂತಾ ಚೇತನತ್ವಾತ್ ರುದ್ರಾದಿವತ್**'

ಎಂಬ ನಿಮ್ಮ ಪ್ರತಿಪಕ್ಷಾನುಮಾನಕ್ಕೆ ಅಪೂರ್ಣಶಕ್ತ್ಯಾದಿಮತ್ತ್ವ ಎಂಬ ಉಪಾಧಿ ಬರುತ್ತದೆ. ಉಪಾಧಿಯಾಗಬೇಕಾದರೆ ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾಗಬೇಕು. ಪ್ರಕೃತ

**ಯತ್ರ ಯತ್ರ ಚಿಚ್ಚೇತ್ಯಯಂತೃತ್ವಾಭಾವಃ ತತ್ರ ತತ್ರ ಅಪೂರ್ಣಶಕ್ತ್ಯಾದಿಮತ್ತ್ವಮ್।**

ಎಂಬ ವ್ಯಾಪ್ತಿಯು ದೃಷ್ಟಾಂತವಾದ ರುದ್ರಾದಿಗಳಲ್ಲಿ ಇದೆ. ರುದ್ರಾದಿಗಳು ಚಿಚ್ಚೇತ್ಯಯಂತೃಗಳಾಗಿಲ್ಲವಾದ್ದರಿಂದ ಚಿಚ್ಚೇತ್ಯಯಂತೃತ್ವಾಭಾವ ಎಂಬ ಸಾಧ್ಯ ಇದೆ. ಅಪೂರ್ಣಶಕ್ತ್ಯಾದಿಗಳುಳ್ಳವರಾದ್ದರಿಂದ ಅಪೂರ್ಣಶಕ್ತ್ಯಾದಿಮತ್ತ್ವ ಉಪಾಧಿಯೂ ಇದೆ. ಉಪಾಧಿಯು ಸಾಧ್ಯವ್ಯಾಪಕವಾಯಿತು. ಇನ್ನು

**ಯತ್ರ ಯತ್ರ ಚೇತನತ್ವಂ ತತ್ರ ತತ್ರ ಅಪೂರ್ಣಶಕ್ತ್ಯಾದಿಮತ್ತ್ವಮ್ ।**

ಎಂಬುದಾಗಿ ವ್ಯಾಪ್ತಿ ಇಲ್ಲ. ಪಕ್ಷನಾದ ರಮಾಪತಿಯಲ್ಲಿ ಚೇತನತ್ವ ಇದ್ದರೂ ಅಪೂರ್ಣಶಕ್ತ್ಯಾದಿಮತ್ತ್ವ ಇಲ್ಲವಾದ್ದರಿಂದ. ಉಪಾಧಿಯು ಸಾಧನಾವ್ಯಾಪಕವಾಯಿತು. ಹೀಗೆ ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾಗುವುದರಿಂದ ಅಪೂರ್ಣಶಕ್ತ್ಯಾದಿಮತ್ತ್ವವು ಉಪಾಧಿಯಾಗುತ್ತದೆ. ಸೋಪಾಧಿಕವಾಗುವುದರಿಂದ ನಿಮ್ಮ ಪ್ರತಿಪಕ್ಷಾನುಮಾನವು ಸರಿಯಲ್ಲ. ಪ್ರತಿಪಕ್ಷಾನುಮಾನ ದುಷ್ಟವಾದ್ದರಿಂದ ನಮ್ಮ ಅನುಮಾನವು ಸತ್ಪ್ರತಿಪಕ್ಷವಾಗುವುದಿಲ್ಲ. ಆದ್ದರಿಂದ ''**ಚಿಚ್ಚೇತ್ಯೇ ಕೇನಚಿನ್ನಿಯತೇ**' ಎಂಬ ಅನುಮಾನದಿಂದ ಈಶ್ವರನನ್ನು ಸಾಧಿಸುತ್ತಿರುವುದು ಅತ್ಯಂತ ಸಮಂಜಸವಾಗಿದೆ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :- ಸರ್ವತ್ರಾಖಿಲಸಚ್ಛಕ್ತಿಃ ಸ್ವತಂತ್ರೋಽಶೇಷದರ್ಶನಃ ।** ಎಂಬ ಆಚಾರ್ಯರ ಮೂಲವನ್ನು ಅರ್ಥೈಸುತ್ತಾರೆ ಟೀಕಾಕೃತ್ಪಾದರು -

**ಟೀಕಾ: ಸರ್ವತ್ರ ಸಕಲಚಿಚ್ಚೇತ್ಯನಿಯಮನವಿಷಯೇ ಅಖಿಲಾ ಪರ್ಯಾಪ್ತಾ, ಸತೀ ಪ್ರತಿಬಂಧಾದಿದೋಷರಹಿತಾ, ಶಕ್ತಿರ್ಯಸ್ಯಾಸೌ ತಥೋಕ್ತಃ। ಸ್ವತಂತ್ರಃ ಸ್ವೇಚ್ಛಾಧೀನಪ್ರವೃತ್ತಿಃ । ಅಶೇಷವಿಷಯತ್ವಾದಶೇಷಂ ದರ್ಶನಂ ಯಸ್ಯಾಸಾವಶೇಷದರ್ಶನ ಇತಿ ।**

**ಅನುವಾದ :- ಸರ್ವತ್ರ** ಸಕಲಚಿಚ್ಚೇತ್ಯ (ಚೇತನ-ಅಚೇತನಾತ್ಮಕ ಜಗತ್ತಿನ) ನಿಯಮನ ವಿಷಯದಲ್ಲಿ, **ಅಖಿಲಾ** ಪರ್ಯಾಪ್ತವಾದ (ಪರಿಪೂರ್ಣವಾದ) **ಸತೀ** ಪ್ರತಿಬಂಧ ಮೊದಲಾದ ದೋಷರಹಿತವಾದ **ಶಕ್ತಿಃ** ಶಕ್ತಿಯು ಯಸ್ಯ ಯಾವನಿಗೆ ಇದೆಯೋ **ಸಃ** ಅಂತಹ ಪರಮಾತ್ಮನು **ಸರ್ವತ್ರಾಖಿಲಸಚ್ಛಕ್ತಿಃ** ಎಂದು ಅರ್ಥ.

ಸಮಸ್ತ ಚೇತನ-ಅಚೇತನಾತ್ಮಕ ಜಗತ್ತನ್ನು ನಿಯಮನ ಮಾಡುವ ವಿಷಯದಲ್ಲಿ ಪರಮಾತ್ಮನ ಶಕ್ತಿ ಪರ್ಯಾಪ್ತ(ಪರಿಪೂರ್ಣ)ವಾದದ್ದು. ಆ ಪರಮಾತ್ಮನ ಶಕ್ತಿಗೆ ಯಾವುದೇ ವಿಧವಾದ ಪ್ರತಿಬಂಧಾದಿಗಳು ಇಲ್ಲ. ಅಂತಹ ಅಪ್ರತಿಬದ್ಧವಾದ, ಪರಿಪೂರ್ಣವಾದ ಶಕ್ತಿ ಉಳ್ಳವನು ಪರಮಾತ್ಮ ಎಂದು ಭಾವ.

'ಪರಮಾತ್ಮನು ಸ್ವತಂತ್ರನಾಗಿದ್ದಾನೆ' ಎಂಬುದಾಗಿ ಆಚಾರ್ಯರು ವಿಶೇಷಣ ಕೊಟ್ಟಿದ್ದಾರೆ. ಇಲ್ಲಿ ಸ್ವಾತಂತ್ರ್ಯ ಎಂದರೆ ಏನು ? ಒಂದುವೇಳೆ **ಸ್ವಸತ್ತಾದೌ ಪರಾನಪೇಕ್ಷತ್ವಂ ಸ್ವತಂತ್ರತ್ವಮ್** (ತನ್ನ ಸತ್ತಾ-ಪ್ರವೃತ್ತಿ-ಪ್ರಮಿತಿಗಳ ವಿಷಯದಲ್ಲಿ ಮತ್ತೊಬ್ಬರ ಅಪೇಕ್ಷೆ ಯಾರಿಗೆ ಇರುವುದಿಲ್ಲ ಅವನು ಸ್ವತಂತ್ರ) ಎಂಬುದಾಗಿ ಸ್ವಾತಂತ್ರ್ಯದ ಲಕ್ಷಣ ಹೇಳುವುದಾದರೆ, ಸ್ವಸತ್ತಾದೌ ಪರಾನಪೇಕ್ಷತ್ವವು ಸ್ವತಂತ್ರತ್ವವಾದರೆ, ಸ್ವಸತ್ತಾದೌ ಪರಸಾಪೇಕ್ಷತ್ವವು ಅಸ್ವತಂತ್ರತ್ವ ಆಗುತ್ತದೆ. ಹಾಗಾದರೆ "**ಚಿಚ್ಚೇತ್ಯೇ ಕೇನಚಿನ್ನಿಯತೇ ಅಸ್ವತಂತ್ರತ್ವಾತ್**" ಎಂಬ ಅನುಮಾನದಲ್ಲಿ ಕೇನಚಿನ್ನಿಯತತ್ವ ಎಂಬ ಸಾಧ್ಯವನ್ನು ಕುರಿತು (ಅಸ್ವತಂತ್ರತ್ವ) ಸ್ವಸತ್ತಾದೌ ಪರಸಾಪೇಕ್ಷತ್ವವನ್ನು ಹೇತುವನ್ನಾಗಿ ಮಾಡಿದಂತಾಗುತ್ತದೆ. ಆದರೆ ಕೇನಚಿನ್ನಿಯತತ್ವ ಎಂದರೂ ಒಂದೇ, ಸ್ವಸತ್ತಾದೌ ಪರಸಾಪೇಕ್ಷತ್ವ (ಅಸ್ವತಂತ್ರತ್ವ) ಎಂದರೂ ಒಂದೇ ಆದ್ದರಿಂದ ಅರ್ಥಾತ್ ಸಾಧ್ಯ-ಹೇತುಗಳು ಒಂದೇ ಆಗುವುದರಿಂದ ಸಾಧ್ಯಾವಿಶಿಷ್ಟತಾದೋಷ ಬರುತ್ತದೆಯಲ್ಲವೇ ?

ಈ ವಿಧವಾದ ಶಂಕೆ ಬಂದರೆ, ಅದಕ್ಕೆ ಉತ್ತರ ನೀಡುವುದಕ್ಕಾಗಿ ಟೀಕಾಕೃತ್ಪಾದರು ಸ್ವಾತಂತ್ರ್ಯದ ಪರಿಷ್ಕಾರವನ್ನು ಬದಲಿಸಿ ತಿಳಿಸುತ್ತಾರೆ -

**ಸ್ವತಂತ್ರಃ ಸ್ವೇಚ್ಛಾಧೀನಪ್ರವೃತ್ತಿಃ** ತನ್ನ ಇಚ್ಛೆಗೆ ಅನುಗುಣವಾಗಿ ಯಾವನ ಪ್ರವೃತ್ತಿ ಇರುವುದೋ ಅವನು ಸ್ವತಂತ್ರ. ಇದು ಸ್ವಾತಂತ್ರ್ಯದ ಪರಿಷ್ಕಾರ. ಹಾಗಾದರೆ ಸಾಧ್ಯವಾದ ಕೇನಚಿನ್ನಿಯತತ್ವವು ಸ್ವಸತ್ತಾದೌ ಪರಸಾಪೇಕ್ಷತ್ವರೂಪ-

ವಾದರೆ, ಹೇತುವಾದ ಅಸ್ವತಂತ್ರತ್ವವು ಸ್ವೇಚ್ಛಾಧೀನಪ್ರವೃತ್ತ್ಯಭಾವರೂಪವಾಗಿದೆ. ಆದ್ದರಿಂದ ಸಾಧ್ಯಾವಿಶಿಷ್ಟತಾದೋಷಕ್ಕೆ ಅವಕಾಶವಿಲ್ಲ.

ಹೌದು, ಸ್ವತಂತ್ರತ್ವ ಎಂದರೆ ಸ್ವೇಚ್ಛಾಧೀನಪ್ರವೃತ್ತಿತ್ವ ಎಂಬುದಾಗಿ ಪರಿಷ್ಕಾರ ಮಾಡಿದಿರಿ. ಅದರಿಂದ ಸಾಧ್ಯಾವಿಶಿಷ್ಟತಾ ಪರಿಹೃತವಾಯಿತು. ಆದರೆ ನೀವು ಮಾಡಿದ ಈ ಪರಿಷ್ಕಾರವನ್ನು ಯಾರೂ ಮಾಡಿಲ್ಲವಾದ್ದರಿಂದ ಇದು ಅಸಾಂಪ್ರದಾಯಿಕವಾಗಿದೆ ಎಂಬ ಶಂಕೆಗೆ ಅವಕಾಶವಿಲ್ಲ. ಕಾರಣ -

**ಸ್ವೇಚ್ಛಾನುಸಾರಿತಾಮೇವ ಸ್ವಾತಂತ್ರ್ಯಂ ಹಿ ವಿದೋ ವಿದುಃ।**

ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಈ ಪರಿಷ್ಕಾರವನ್ನು ಆಚಾರ್ಯರೇ ಹೇಳಿದ್ದಾರೆ. ಹೀಗಾಗಿ ನಾವು ಮಾಡಿದ ಪರಿಷ್ಕಾರವು ಅಸಾಂಪ್ರದಾಯಿಕವಾದದ್ದಲ್ಲ ಕಿಂತು ಸಾಂಪ್ರದಾಯಿಕವೇ ಆಗಿದೆ.

'ಅಶೇಷದರ್ಶನಃ' ಎನ್ನುವಲ್ಲಿ 'ಅಶೇಷಂ ದರ್ಶನಂ ಯಸ್ಯ ಸಃ ಅಶೇಷದರ್ಶನಃ' ಎಂಬುದಾಗಿ ವಿಗ್ರಹ. ಇಲ್ಲಿ ದರ್ಶನವು ಅಶೇಷವಾಗಿದೆ ಎಂದರೆ ಅಶೇಷವಿಷಯಕವಾಗಿದೆ ಎಂದರ್ಥ. ಹಾಗಾದರೆ ಅಶೇಷವಿಷಯಕವಾದ ಸಮಸ್ತಜಗದ್ವಿಷಯಕವಾದ ದರ್ಶನ ಜ್ಞಾನವು ಯಾವನಿಗೆ ಇದೆಯೋ ಅಂತಹ ಸರ್ವಜ್ಞನಾದವನು ಭಗವಂತ ಎಂದು ಅಭಿಪ್ರಾಯ.

**ಅವತಾರಿಕೆ :-** 'ಚಿಚ್ಚೇತ್ಯೇ ಕೇನಚಿನ್ನಿಯತೇ .....' ಎಂಬ ನಮ್ಮ ಅನುಮಾನಕ್ಕೆ ಅಂಶತಃ ಸಿದ್ಧಸಾಧನತಾ ಹಾಗೂ ಅಂಶತಃ ಬಾಧ ದೋಷಗಳನ್ನು ಶಂಕಿಸುತ್ತಾರೆ-

### ಮುಕ್ತಚೇತನರಲ್ಲಿ ಭೇದವಿಲ್ಲವೆಂಬ ಆಕ್ಷೇಪ

**ಟೀಕಾ : ಅತ್ರಾಹುಃ - ಭವತು ಚೇತ್ಯಂ ಪರಮೇಶ್ವರನಿಯತಮ್। ಚೇತನಶ್ಚ ಸಂಸಾರೀ । ಮುಕ್ತಸ್ತು ನ ಕೇನಾಪಿ ನಿಯತಃ । ನಿಯಮ್ಯ-ನಿಯಾಮಕಭಾವಸ್ಯ ಭೇದವ್ಯಾಪ್ತತ್ವಾತ್ । ನ ಚ ಮುಕ್ತಸ್ಯ ಕುತೋಽಪಿ ಭೇದೋಽಸ್ತಿ । ಪ್ರಮಾಣಾಭಾವಾತ್ । ವ್ಯಾಪಕಾಭಾವೇ ಚ ವ್ಯಾಪ್ಯನಿವೃತ್ತಿರವಶ್ಯಂಭಾವಿನೀತಿ।**

**ಅನುವಾದಃ-** 'ಚಿಚ್ಚೇತ್ಯೇ ಕೇನಚಿನ್ನಿಯತೇ...' ಚೇತನ-ಅಚೇತನಾತ್ಮಕವಾದ ಜಗತ್ತಿಗೆ ಪರಮಾತ್ಮನು ನಿಯಾಮಕನಾಗಿದ್ದಾನೆ ಎಂಬುದಾಗಿ ನಾವು ಸಾಧಿಸಿದಾಗ, ಇದರ ಮೇಲೆ ಮಾಯಾವಾದಿಗಳು ಶಂಕಿಸುತ್ತಾರೆ-

ಚೇತನ-ಅಚೇತನ ಎರಡೂ ಈಶ್ವರನಿಂದ ನಿಯಮ್ಯವಾಗಿದೆ ಎನ್ನುತ್ತಿದ್ದೀರಿ. ಆದರೆ ಅವುಗಳಲ್ಲಿ (ಚೇತನ-ಚೇತನಗಳಲ್ಲಿ) ಅಚೇತನ ಈಶ್ವರನಿಂದ ನಿಯಾಮ್ಯವಾಗಲಿ. ಇನ್ನು ಚೇತನರಲ್ಲಿಯೂ ಸಹ ಸಂಸಾರಿಗಳಾದ ಚೇತನರು ಈಶ್ವರನಿಂದ ನಿಯಮ್ಯರಾಗಲಿ. ಆದರೆ ಮುಕ್ತರಾದಂತಹ ಚೇತನರು ಮಾತ್ರ ಯಾರಿಂದಲೂ ನಿಯಮ್ಯರಾಗಲು [೧]ಸಾಧ್ಯವಿಲ್ಲ.

ಯಾಕೆಂದರೆ ನಿಯಮ್ಯ-ನಿಯಾಮಕಭಾವವು ಭೇದದಿಂದ ವ್ಯಾಪ್ತವಾಗಿದೆ. ಅರ್ಥಾತ್ ''ಯತ್ರ ನಿಯಮ್ಯ-ನಿಯಾಮಕಭಾವಃ ತತ್ರ ಭೇದಃ'' ಎಲ್ಲಿ ನಿಯಮ್ಯ-ನಿಯಾಮಕಭಾವ ಇರುತ್ತದೆಯೋ ಅಲ್ಲಿ ಭೇದ ಇರುತ್ತದೆ. ಪ್ರಕೃತದಲ್ಲಿ ಮುಕ್ತನಾದಂತಹ ಚೇತನನಿಗೆ ಯಾವ ವಸ್ತುವಿನಿಂದಲೂ [೨]ಭೇದ ಇಲ್ಲ. ಕಾರಣ 'ಮುಕ್ತನಿಗೆ ಯಾವುದೇ ವಸ್ತುವಿನಿಂದ ಭೇದವಿದೆ' ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ. ಹೀಗೆ ಮುಕ್ತನಿಗೆ ಯಾವುದೇ ವಸ್ತುವಿನಿಂದ ಭೇದ ಇಲ್ಲ ಎಂದಮೇಲೆ, ವ್ಯಾಪಕವಾದ ಭೇದ ಇಲ್ಲವಾದರೆ ವ್ಯಾಪ್ಯವಾದ ನಿಯಮ್ಯ-ನಿಯಾಮಕಭಾವವೂ ಇರುವುದಿಲ್ಲ-ವಾದ್ದರಿಂದ, ಮುಕ್ತನಾದ ಚೇತನನು ಯಾರಿಂದಲೂ ನಿಯಮ್ಯನಲ್ಲ.

ಆದ್ದರಿಂದ ಪಕ್ಷವಾದ ಚೇತನ-ಅಚೇತನಗಳಲ್ಲಿ ಅಚೇತನಪದಾರ್ಥಗಳು ಹಾಗೂ ಅಮುಕ್ತರಾದ (ಸಂಸಾರಿಗಳಾದ) ಚೇತನರು ಈಶ್ವರನಿಂದ ನಿಯಮ್ಯರು

೧. ಮುಕ್ತರಾದಂತಹ ಚೇತನರೂ ಸಹ ಈಗ ಮುಕ್ತದಶಾದಲ್ಲಿ ಯಾರಿಂದಲೂ ನಿಯಮ್ಯರಾಗದಿದ್ದರೂ ಸಹ ಹಿಂದೆ ಸಂಸಾರದಶಾದಲ್ಲಿ ನಿಯಮ್ಯರೇ ಆಗಿದ್ದರಲ್ಲವೇ? ಎಂಬ ಶಂಕೆ ಬೇಡ. ಕಾರಣ- ''ನಿತ್ಯೇತಿ ನಿಯಂತೃತಾಯಾಃ ಸ್ವರೂಪಸಂಕೀರ್ತನಮ್'' ಎಂದು ಹೇಳಿದ್ದರಿಂದ ನಿಮಗೆ ಅಭಿಮತವಾದ ನಿತ್ಯನಿಯಂತೃತ್ವವು ಅಸಿದ್ಧವಾಗಿದೆ ಎಂದು ಭಾವ.

೨. ಅಥವಾ ಮುಕ್ತನಾದಂತಹ ವ್ಯಕ್ತಿಗೆ ಯಾವುದೇ ಕಾರಣದಿಂದಲೂ ಭೇದ ಇಲ್ಲ ಎಂದು ಜನಾರ್ದನೀಯ ವ್ಯಾಖ್ಯಾನ. ಅಂದರೆ - ಸಂಸಾರಿಯಾದ ಜೀವನಿಗೆ ಅವಿದ್ಯಾಸಂಬಂಧ ಇರುವ ಕಾರಣ ಆವಿದ್ಯಕಭೇದ ಇರುವಂತೆ, ಮುಕ್ತನಿಗೆ ಆವಿದ್ಯಕಭೇದವೂ ಇಲ್ಲ. ಕಾರಣ -

ವಿಭೇದಜನಕೇಽಜ್ಞಾನೇ ನಾಶಮಾತ್ಯಂತಿಕಂ ಗತೇ ।
ಆತ್ಮನೋ ಬ್ರಹ್ಮಣೋ ಭೇದಮಸಂತಂ ಕಃ ಕರಿಷ್ಯತಿ ॥

ಯಾವನ್ಮೋಕ್ಷಂ ತು ಭೇದಃ ಸ್ಯಾತ್ ಜೀವಸ್ಯ ಪರಮಸ್ಯ ಚ ।
ಅತಃ ಪರಂ ನ ಭೇದೋಽಸ್ತಿ ಭೇದಹೇತೋರಭಾವತಃ ॥

ಎಂಬುದಾಗಿ ಹೇಳಿದಂತೆ ಮೋಕ್ಷದಲ್ಲಿ ಅಜ್ಞಾನರೂಪವಾದ ಕಾರಣವೂ ಇರುವುದಿಲ್ಲವಾದ್ದರಿಂದ ಮುಕ್ತನಿಗೆ ಆವಿದ್ಯಕಭೇದವೂ ಇಲ್ಲ ಎಂದು ಭಾವ.

ಎಂದು ನಾವು ಅಂಗೀಕರಿಸಿದ್ದರಿಂದ, ನಮ್ಮನ್ನು ಕುರಿತು 'ಅಚೇತನ-ಅಮುಕ್ತ-ಚೇತನರು ನಿಯಮ್ಯರು' ಎಂದು ಸಾಧಿಸಿದರೆ ಸಿದ್ಧಸಾಧನತಾ ಬರುತ್ತದೆ. ಇನ್ನು ಮುಕ್ತರೂ ಪಕ್ಷದಲ್ಲಿ ಸೇರಿದ್ದರಿಂದ 'ಮುಕ್ತರು ನಿಯಮ್ಯರಾಗಿದ್ದಾರೆ' ಎಂದು ಸಾಧಿಸಿದರೆ (ಭೇದ ವ್ಯಾಪ್ತ ಈಶ್ವರನಿಯಮ್ಯತ್ವವನ್ನು ಸಾಧಿಸಿದರೆ) ಮುಕ್ತರು ಈಶ್ವರನಿಂದ ಅಭಿನ್ನರಾಗಿದ್ದರಿಂದ (ಭೇದ ಇಲ್ಲವಾದ್ದರಿಂದ, ಭೇದವ್ಯಾಪ್ತವಾದ ಈಶ್ವರನಿಯಮ್ಯತ್ವವೂ ಇಲ್ಲವಾದ್ದರಿಂದ) ತದಂಶದಲ್ಲಿ ಬಾಧವೂ ಬರುತ್ತದೆ.

ಆದ್ದರಿಂದ ಚೇತನ-ಅಚೇತನಾತ್ಮಕಜಗತ್ತಿಗೆ ನಿಯಾಮಕನಾದ ಪರಮಾತ್ಮನನ್ನು ಸಾಧಿಸುವುದು ಸರಿಯಲ್ಲ.

ಇದು ಮಾಯಾವಾದಿಗಳ ಆಕ್ಷೇಪ.

### ಮುಕ್ತಭೇದಸಾಧಕಾನುಮಾನಪ್ರಯೋಗ

**ಟೀಕಾ : ತತ್ರಾಹ –**

**ಮೂಲ :- ವಿಮತೋ ಭಿನ್ನೋ ಮುಕ್ತತ್ವಾತ್ । ಯದಿತ್ಥಂ ತತ್ತಥಾ । ಯಥಾ ಸಂಪ್ರತಿಪನ್ನಃ ।।**

**ಅನುವಾದ :-** ಈ ರೀತಿಯಾಗಿ ಮಾಯಾವಾದಿಗಳು ಶಂಕಿಸಿದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

ಅಥವಾ ''ಪ್ರಮಾಣ ಇಲ್ಲವಾದ್ದರಿಂದ ಮುಕ್ತರಲ್ಲಿ ಭೇದವಿಲ್ಲ. (ಮುಕ್ತ-ಈಶ್ವರರಲ್ಲಿ ಭೇದವಿಲ್ಲ.) ಭೇದವೇ ಇಲ್ಲವಾದ್ದರಿಂದ ಈಶ್ವರನಿಯಮ್ಯತ್ವವೂ ಇಲ್ಲ'' ಎಂಬುದಾಗಿ ಮಾಯಾವಾದಿಗಳು ಶಂಕಿಸಿದರೆ, ಅದಕ್ಕೆ ಆಚಾರ್ಯರು ಮುಕ್ತ-ಈಶ್ವರಭೇದವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ -

ಮೂಲ :- ವಿಮತೋ ಭಿನ್ನೋ ಮುಕ್ತತ್ವಾತ್ । ಯದಿತ್ಥಂ ತತ್ತಥಾ । ಯಥಾ ಸಂಪ್ರತಿಪನ್ನಃ ।।

**ಮೂಲಾರ್ಥ:-** ವಿಮತನಾದ ಮುಕ್ತನು, ಭಿನ್ನನಾಗಿದ್ದಾನೆ, ಮುಕ್ತನಾದ್ದರಿಂದ. ಯಾವನು ಮುಕ್ತನೋ ಅವನು ಭಿನ್ನನಾಗಿರುತ್ತಾನೆ. ನಿಗಡಮುಕ್ತನಂತೆ. ನಿಗಡಮುಕ್ತನು ಮುಕ್ತನಾದ್ದರಿಂದ ರಾಜನಿಂದ ಭಿನ್ನನಾಗಿದ್ದಾನೆ ಹೇಗೋ ಅದರಂತೆ ಮುಕ್ತರಾದ ಚೇತನರೂ ಮುಕ್ತರಾದ್ದರಿಂದ ಈಶ್ವರನಿಂದ ಭಿನ್ನರಾಗಿದ್ದಾರೆ ಎಂದು ಭಾವ.

**ಅವತಾರಿಕೆ** :- ಪ್ರಮಾಣ ಇಲ್ಲವಾದ್ದರಿಂದ ಮುಕ್ತ-ಈಶ್ವರರಲ್ಲಿ ಭೇದವಿಲ್ಲ. ಮುಕ್ತ-ಈಶ್ವರರಲ್ಲಿ ಭೇದವೇ ಇಲ್ಲವಾದ್ದರಿಂದ ಭೇದವ್ಯಾಪ್ತವಾದ ನಿಯಮ್ಯ-ನಿಯಾಮಕಭಾವ ಹೇಗೆ ? ಎಂಬುದಾಗಿ ಶಂಕೆ ಬಂದಾಗ, ಉತ್ತರರೂಪವಾಗಿ ಆಚಾರ್ಯರು ಮುಕ್ತ-ಈಶ್ವರಭೇದವಿಷಯದಲ್ಲಿ ಅನುಮಾನವನ್ನು ಪ್ರಮಾಣವಾಗಿ ಉದಾಹರಿಸಿದರು. ಇದರಮೇಲೆ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

**ಟೀಕಾ: ನನು ಗ್ರಂಥೋ ಹಿ ವಾದಪ್ರಕ್ರಿಯಯಾ ಪ್ರವರ್ತತೇ । ಶಿಷ್ಯಾನುಕಂಪಯಾ ಪ್ರವರ್ತನಾತ್ । ವಾದೇ ಚ ಪೃಷ್ಟೇನಾಗಮ ಏವಾದೌ ವಕ್ತವ್ಯ: ಸಾಧ್ಯಸಿದ್ಧಯೇ । ಇತ್ಯಂಗೀಕಾರ: । ತತ್ಕಥಮನುಮಾನಮುಚ್ಯತೇ। ಸತ್ಯಮ್। ಆಗಮೋಽಪ್ಯತ್ರಾರ್ಥೇ ಅಭಿಧಾಸ್ಯತೇ । ಅನುಮಾನಂ ತು ತದರ್ಥಾವಧಾರಣಾರ್ಥ-ಮುಪೋದ್ಘಾತಪ್ರಕ್ರಿಯಯೋಪನ್ಯಸ್ತಮಿತ್ಯದೋಷ: ।**

**ಅನುವಾದ** :- ಶಿಷ್ಯರ ಮೇಲಿನ ಅನುಕಂಪದಿಂದ ಗ್ರಂಥವನ್ನು ರಚಿಸುವುದರಿಂದ ಯಾವುದೇ ಒಂದು ಗ್ರಂಥವು ವಾದಪ್ರಕ್ರಿಯೆಯಲ್ಲಿ ಪ್ರವೃತ್ತವಾಗಿರುತ್ತದೆ. ವಾದದಲ್ಲಿಯಾದರೂ -

**ಪೃಷ್ಟೇನಾಗಮ ಏವಾದೌ ವಕ್ತವ್ಯ: ಸಾಧ್ಯಸಿದ್ಧಯೇ ।**

ಎಂದು ನಿಯಮ ಅಂಗೀಕರಿಸಲಾಗಿದೆ. ಅಂದರೆ ವಾದದಲ್ಲಿ ಪ್ರತಿವಾದಿ-ಯಾದವರು ಪ್ರಮಾಣದ ಶಂಕೆ ಮಾಡಿದಾಗ (ವಾದಿಯು ನಿರೂಪಿಸಿದ ವಿಷಯದಲ್ಲಿ ಪ್ರಮಾಣ ಏನಿದೆ ? ಎಂಬುದಾಗಿ ಪ್ರತಿವಾದಿಗಳು ಕೇಳಿದಾಗ) ವಾದಿಯು ಸಾಧ್ಯಸಿದ್ಧಿಗಾಗಿ ಮೊದಲಿಗೆ ಆಗಮವನ್ನೇ ಪ್ರಮಾಣವನ್ನಾಗಿ ಉದಾಹರಿಸಬೇಕು ಎಂದು ನಿಯಮದ ಅರ್ಥ.

ಪ್ರಕೃತ ಗ್ರಂಥವೂ ವಾದಪ್ರಕ್ರಿಯೆಯಲ್ಲಿಯೇ ಹೊರಟಿರುತ್ತದೆಯಾದ್ದರಿಂದ, ಮುಕ್ತ-ಈಶ್ವರರ ಭೇದವಿಷಯದಲ್ಲಿ ಪ್ರಮಾಣ ಏನಿದೆ ? ಎಂಬುದಾಗಿ ಪ್ರತಿವಾದಿಗಳು ಕೇಳಿದಾಗ, ಆಚಾರ್ಯರು ಭೇದವಿಷಯದಲ್ಲಿ ಆಗಮವನ್ನು ಪ್ರಮಾಣವಾಗಿ ಉದಾಹರಿಸಬೇಕಿತ್ತು. ಆದರೆ ಆಚಾರ್ಯರು ಆಗಮವನ್ನು ಉದಾಹರಿಸದೇ 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬುದಾಗಿ ಅನುಮಾನವನ್ನು ಏಕೆ ಉದಾಹರಿಸಿದ್ದಾರೆ ?

ಈ ರೀತಿಯಾಗಿ ಆಕ್ಷೇಪ ಬಂದರೆ, ಅದಕ್ಕೆ ಸಮಾಧಾನ ಇಷ್ಟು :- ಸತ್ಯವೇ ಆಗಿದೆ. ಆಗಮವನ್ನೇ ಮೊದಲಿಗೆ ಉದಾಹರಿಸಬೇಕು ಎಂಬ ನಿಯಮ ಸರಿಯೇ. ಅನ್ನುವುದಕ್ಕಾಗಿಯೇ -

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**

ಇತ್ಯಾದಿಯಾಗಿ ಮುಂದೆ ಮುಕ್ತ-ಈಶ್ವರರ ಭೇದವಿಷಯದಲ್ಲಿ ಆಗಮವನ್ನೂ ಪ್ರಮಾಣವಾಗಿ ಉದಾಹರಿಸುವವರಿದ್ದಾರೆ ಆಚಾರ್ಯರು.

ಹಾಗಾದರೆ ಈಗ ಅನುಮಾನವನ್ನು ಏಕೆ ಹೇಳಿದ್ದಾರೆ ? ಎಂದರೆ,

**ಉಪಪತ್ತ್ಯವಕಾಶೋಽತ್ರ ಹ್ಯಾಗಮಾರ್ಥವಿನಿರ್ಣಯೇ ।**

ಎಂಬುದಾಗಿ ಅಲ್ಲಿಯೇ ಹೇಳಿದಂತೆ, ಆಗಮಾರ್ಥನಿರ್ಣಯಕ್ಕಾಗಿ ಅನುಮಾನವನ್ನು ಹೇಳಬೇಕಾದ್ದರಿಂದ ಪ್ರಕೃತ ಆ ಮುಂದೆ ಹೇಳುವ ಆಗಮಾರ್ಥನಿಶ್ಚಯಕ್ಕಾಗಿ ಈಗ ಅನುಮಾನವನ್ನು ಹೇಳಿದ್ದಾರೆ ಎಂದು ಭಾವ.

ಹೌದು, ಆಗಮಾರ್ಥನಿಶ್ಚಯಕ್ಕಾಗಿ ಅನುಮಾನವನ್ನು ಹೇಳುವುದಾಗಿದ್ದರೆ, ಭೇದವಿಷಯದಲ್ಲಿ ಮೊದಲಿಗೆ ಆಗಮವನ್ನು ಪ್ರಮಾಣವಾಗಿ ಹೇಳಿ, ಅನಂತರ ಆ ಆಗಮಕ್ಕೆ ಪರರು ಬೇರೆ ಅರ್ಥವನ್ನು ಹೇಳಿದಾಗ, ಆಚಾರ್ಯರು ತಾವು ಹೇಳಿದ ಅರ್ಥದ ನಿರ್ಧಾರಕ್ಕಾಗಿ ಆಮೇಲೆ ಅನುಮಾನವನ್ನು ಹೇಳಬೇಕು. ಅದನ್ನು ಬಿಟ್ಟು ಆಗಮಕ್ಕಿಂತ ಮೊದಲೇ ಅನುಮಾನವನ್ನು ಹೇಗೆ ಹೇಳಿದರು ?

ಈ ವಿಧವಾದ ಶಂಕೆ ಬೇಡ. ಕಾರಣ ಆಗಮಾರ್ಥನಿಶ್ಚಯಕ್ಕಾಗಿ ಅನುಮಾನವನ್ನು ಹೇಳುತ್ತಿದ್ದರೂ (ಆಗಮವನ್ನು ಹೇಳಿದ ನಂತರ ಹೇಳಬೇಕಿದ್ದರೂ) ಪ್ರಕೃತದಲ್ಲಿ ಉಪೋದ್ಘಾತಪ್ರಕ್ರಿಯೆಯಿಂದ ಮೊದಲಿಗೇ ಅನುಮಾನವನ್ನು ಹೇಳಿದ್ದಾರೆ ಆದ್ದರಿಂದ ಯಾವುದೇ ದೋಷವಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬ ಅನುಮಾನದಲ್ಲಿ 'ವಿಮತ' ಪದಪ್ರಯೋಗಕ್ಕೆ ಪ್ರಯೋಜನವನ್ನು ತೋರಿಸುತ್ತಾರೆ -

### ಅನುಮಾನದಲ್ಲಿ ವಿಮತ ಪದಪ್ರಯೋಗದ ಪ್ರಯೋಜನ

**ಟೀಕಾ : ಅತ್ರ ವಿಮತ ಇತಿ ಸಂಸಾರಾನ್ಮುಕ್ತೋ ವಿವಕ್ಷ್ಯತೇ । ತಸ್ಯಾತ್ಮೇತ್ಯೇವ ಗ್ರಹಣೇ ಸಿದ್ಧಾರ್ಥಾ ಪ್ರತಿಜ್ಞಾ ಸ್ಯಾತ್ । ಅದ್ವೈತವಾದಿನಾಽಪಿ**

**ಸಂಸಾರಿಣೋ ಭಿನ್ನತ್ವೇನಾಭ್ಯುಪಗತತ್ವಾತ್ । ಭೇದಸ್ಯ ಚ ಪಾರಮಾರ್ಥಿಕತ್ವಾನೌಪಾಧಿಕತ್ವಾಭ್ಯಾಮವಿಶೇಷಿತತ್ವಾತ್ ।**

**ಮುಕ್ತ ಇತ್ಯೇವ ತರ್ಹ್ಯುಚ್ಯತಾಮ್ । ನಿಗಡಮುಕ್ತೇನ ಸಿದ್ಧಾರ್ಥತಾ ಸ್ಯಾದಿತಿ ಚೇತ್ । ತರ್ಹಿ ಸಂಸಾರಾನ್ಮುಕ್ತ ಇತಿ ವಕ್ತವ್ಯಮ್ । ತಥಾ ಕೃತೇ ಗೌರವಂ ಸ್ಯಾದಿತಿ ಚೇನ್ನ । ವಿಮತೇರನೇಕವಿಧತ್ವೇನ ಧರ್ಮಿವಿಶೇಷಾನಿಶ್ಚಯೇ ಸಾಧ್ಯವಿಶೇಷೋಪಾದಾನಾದಿನಾ ತನ್ನಿಶ್ಚಯಾನುಸರಣೇಽಪಿ ಗೌರವಸಾಮ್ಯಾತ್॥**

**ತಥಾಪಿ ವಿನಿಗಮನಂ ಕುತ ಇತಿ ಚೇತ್ । ಅರ್ಥಪ್ರತಿಪತ್ತಿ-ಗೌರವಾಚ್ಛಬ್ದಗೌರವಸ್ಯ ಜ್ಯಾಯಸ್ತ್ವಾತ್ ।**

**ಅನುವಾದ :-** ಈ ಅನುಮಾನದಲ್ಲಿ 'ವಿಮತಃ' ಎಂಬುದಾಗಿ ಪಕ್ಷನಿರ್ದೇಶ ಮಾಡಿದ್ದೀರಿ. ಇಲ್ಲಿ ವಿಮತಶಬ್ದದಿಂದ ಸಂಸಾರಮುಕ್ತನು (ಸಂಸಾರದಿಂದ ಮುಕ್ತನಾದವನು) ವಿವಕ್ಷಿತನಾಗಿದ್ದಾನೆ. ಅಂತಹ ಸಂಸಾರಮುಕ್ತನನ್ನು ಪಕ್ಷ ಮಾಡುವ ಉದ್ದೇಶ ಇದ್ದಿದ್ದರೆ, ವಿಮತಪದವನ್ನೇ ಏಕೆ ಪ್ರಯೋಗಿಸಬೇಕು ? ಅರ್ಥಾತ್ ಆತ್ಮಾ ಎಂದಾಗಲೀ, ಮುಕ್ತಃ ಎಂದಾಗಲೀ, ಸಂಸಾರಾನ್ಮುಕ್ತಃ ಎಂದಾಗಲೀ ಪಕ್ಷ ಮಾಡಬಹುದಲ್ಲ? ಹಾಗೆ 'ಆತ್ಮಾ' 'ಮುಕ್ತಃ' ಇತ್ಯಾದಿಯಾಗಿ ಪಕ್ಷ ಮಾಡಿದರೆ ಶಬ್ದಲಾಘವವೂ ಇದೆ, ಪ್ರತಿಪತ್ತಿಲಾಘವವೂ ಇದೆ[೧] ಅಲ್ಲವೇ?

ಈ ರೀತಿಯಾಗಿ ಆಕ್ಷೇಪ ಬಂದರೆ, 'ಆತ್ಮಾ' 'ಮುಕ್ತಃ' 'ಸಂಸಾರಾನ್ಮುಕ್ತಃ' ಎಂಬ ಮೂರೂ ಪಕ್ಷಗಳನ್ನು ಕ್ರಮವಾಗಿ ನಿರಾಕರಿಸುತ್ತಾರೆ.

ಮೊದಲನೆಯದಾಗಿ, ಆತ್ಮಾ ಎಂದಷ್ಟೇ ಪಕ್ಷ ಮಾಡಿದರೆ, 'ಆತ್ಮಾ ಭಿನ್ನಃ' ಎಂಬ ಪ್ರತಿಜ್ಞೆ ಸಿದ್ಧಾರ್ಥವಾಗುತ್ತದೆ. ಅರ್ಥಾತ್ ಸಿದ್ಧಸಾಧನತಾ ಬರುತ್ತದೆ. ಏಕೆಂದರೆ- ಆತ್ಮಾ ಎಂದರೆ ಯಾವ ಆತ್ಮನನ್ನಾದರೂ ತೆಗೆದುಕೊಳ್ಳ-ಬಹುದಾದ್ದರಿಂದ, ಪ್ರಕೃತ ಸಂಸಾರಿಯಾದ ಆತ್ಮನನ್ನು ಸ್ವೀಕರಿಸಿ, ಅಂತಹ

---

೧ 'ಆತ್ಮಾ' 'ಮುಕ್ತಃ' 'ಸಂಸಾರಾನ್ಮುಕ್ತಃ' ಎಂಬುದಾಗಿ ಪಕ್ಷನಿರ್ದೇಶ ಮಾಡಿದರೆ ಶಬ್ದವೂ ಚಿಕ್ಕದಾಗುತ್ತದೆ, ಜೊತೆಗೆ ಶೀಘ್ರದಲ್ಲಿ ಜ್ಞಾನವೂ ಉಂಟಾಗುತ್ತದೆ. ಆದರೆ 'ವಿಮತಃ' ಎಂಬುದಾಗಿ ಪಕ್ಷನಿರ್ದೇಶ ಮಾಡಿದರೆ ಜ್ಞಾನ ಆಗುವುದೂ ಕಷ್ಟ (ವಿಮತಿ ಶಬ್ದಾರ್ಥ ಆಗಬೇಕು. ಸಂಶಯಕ್ಕೆ ಧರ್ಮಿ ಎಂದರೆ, ಯಾವ ಸಂಶಯ? ಧರ್ಮಿ ಯಾವುದು ? ಇತ್ಯಾದಿ ಜ್ಞಾನ ಆಗುವುದು ಕಷ್ಟ) ಎಂದು ಅಭಿಪ್ರಾಯ.

ಸಂಸಾರಿಯಾದ ಆತ್ಮನಿಗೆ ಈಶ್ವರನಿಂದ ಭೇದವನ್ನು ಮಾಯಾವಾದಿಗಳು ಹಾಗೂ ಭಾಸ್ಕರಾಚಾರ್ಯರೂ ಅಂಗೀಕರಿಸುತ್ತಾರಾದ್ದರಿಂದ ಸಿದ್ಧಸಾಧನತಾ ಬರುತ್ತದೆ.

ನಾವು ಕೇವಲ ಭೇದವನ್ನು ಸಾಧಿಸುವುದಿಲ್ಲ. ಕಿಂತು ಪಾರಮಾರ್ಥಿಕ-ಭೇದವನ್ನಾಗಲೀ ಅನೌಪಾಧಿಕಭೇದವನ್ನಾಗಲೀ ಸಾಧಿಸುತ್ತೇವೆ. ಅದ್ವೈತ-ವಾದಿಗಳಾದ ಮಾಯಾವಾದಿಗಳು ಮಿಥ್ಯಾಭೇದವನ್ನು ಅಂಗೀಕರಿಸಿದರೂ ಪಾರಮಾರ್ಥಿಕಭೇದವನ್ನು ಅಂಗೀಕರಿಸಿಲ್ಲವಾದ್ದರಿಂದ ಅವರ ಪ್ರಕಾರ ಸಿದ್ಧಸಾಧನತಾ ಬರುವುದಿಲ್ಲ. ಇನ್ನು ಸತ್ಯಭೇದವಾದಿಗಳಾದ ಭಾಸ್ಕರಾಚಾರ್ಯರು ಔಪಾಧಿಕಭೇದವನ್ನು ಅಂಗೀಕರಿಸಿದರೂ ಅನೌಪಾಧಿಕಭೇದವನ್ನು ಅಂಗೀಕರಿ-ಸಿಲ್ಲವಾದ್ದರಿಂದ ಅವರ ಪ್ರಕಾರವೂ ಸಿದ್ಧಸಾಧನತಾ ಬರುವುದಿಲ್ಲ ಎಂಬುದಾಗಿ ಹೇಳಲು ಬರುವುದಿಲ್ಲ. ಕಾರಣ ಅನುಮಾನದಲ್ಲಿ ಭೇದವನ್ನು ಮಾತ್ರ ಸಾಧ್ಯವನ್ನಾಗಿ ಮಾಡಿದ್ದೇವೆಯೇ ಹೊರತು ಭೇದಕ್ಕೆ ಪಾರಮಾರ್ಥಿಕತ್ವ ಅಥವಾ ಅನೌಪಾಧಿಕತ್ವ ಎಂಬ ವಿಶೇಷಣ ಕೊಟ್ಟಿಲ್ಲ. ಕೇವಲ ಭೇದವು ಅವರಿಗೂ ಅಂಗೀಕೃತವೇ ಆದ್ದರಿಂದ ಸಿದ್ಧಸಾಧನತಾ ಬಂದೇ ಬರುತ್ತದೆ. ಹೀಗಾಗಿ 'ಆತ್ಮಾ' ಎಂದಷ್ಟೇ ಪಕ್ಷ ಮಾಡುವುದು ಸರಿಯಲ್ಲ.

ಹಾಗಾದರೆ 'ಮುಕ್ತಃ' ಎಂದು ಪಕ್ಷನಿರ್ದೇಶ ಮಾಡಬಹುದಲ್ಲ? ಹಾಗೆ 'ಮುಕ್ತಃ' ಎಂದಷ್ಟೇ ಪಕ್ಷನಿರ್ದೇಶ ಮಾಡಿದರೆ, ಮುಕ್ತಪದದಿಂದ ಯಾವ ಮುಕ್ತನನ್ನಾದರೂ ಸ್ವೀಕರಿಸಬಹುದಾದ್ದರಿಂದ, ಪ್ರಕೃತ [1]ನಿಗಡಮುಕ್ತನನ್ನು ಸ್ವೀಕರಿಸಿ ಅವನಲ್ಲಿ ಭೇದವು ಅಂಗೀಕೃತವೇ (ಸಿದ್ಧವೇ) ಆದರಿಂದ ಸಿದ್ಧಸಾಧನತಾ ಬರುತ್ತದೆ. ಆದ್ದರಿಂದ 'ಮುಕ್ತಃ' ಎಂದು ಪಕ್ಷನಿರ್ದೇಶ ಮಾಡುವುದು ಸರಿಯಲ್ಲ.

ಹಾಗಾದರೆ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡಿರಿ. ಸಂಸಾರದಿಂದ ಮುಕ್ತ ಎಂದು ಸ್ಪಷ್ಟವಾಗಿ ಹೇಳುವುದರಿಂದ ನಿಗಡಮುಕ್ತನನ್ನು ತೆಗೆದುಕೊಳ್ಳಲು (ತೆಗೆದುಕೊಂಡು ಸಿದ್ಧಸಾಧನತಾ ಹೇಳಲು) ಬರುವುದಿಲ್ಲ. ಆದ್ದರಿಂದ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡಿರಿ.

'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡಿದರೆ, ಸಿದ್ಧಸಾಧನತಾ ಬರುವುದಿಲ್ಲವಾದರೂ ಶಬ್ದ ದೊಡ್ಡದಾಗುವುದರಿಂದ ಶಬ್ದಗೌರವ ಬರುತ್ತದೆ. ಅದೇ 'ವಿಮತಃ' ಎಂದು ಪಕ್ಷನಿರ್ದೇಶ ಮಾಡಿದರೆ ಶಬ್ದ ಚಿಕ್ಕದಾಗುವುದರಿಂದ

---

೧ ನಿಗಡಮುಕ್ತ ಎಂದರೆ ಜೈಲಿನಿಂದ ಬಿಡುಗಡೆಯಾದವನು ಎಂದರ್ಥ.

ಶಬ್ದಗೌರವ ಬರುವುದಿಲ್ಲ ಎಂದರೆ, ಅದು ಸರಿಯಲ್ಲ. ಏಕೆಂದರೆ- 'ವಿಮತಃ' ಎಂದು ಪಕ್ಷನಿರ್ದೇಶ ಮಾಡಿದ ಪಕ್ಷದಲ್ಲಿ ಶಬ್ದಗೌರವ ಬರದಿದ್ದರೂ ಅರ್ಥಗೌರವ ಬಂದೇ ಬರುತ್ತದೆ. ಹೇಗೆಂದರೆ ವಿಮತ ಎಂದರೆ ವಿಮತಿವಿಷಯೀಭೂತ ಎಂದರ್ಥ. ಅರ್ಥಾತ್ ವಿಮತಿ ಸಂಶಯ, ಆ ಸಂಶಯಕ್ಕೆ ವಿಷಯೀಭೂತವಾದದ್ದು ಧರ್ಮಿಯಾದದ್ದು ಮಿಮತ ಎನಿಸಿಕೊಳ್ಳುತ್ತದೆ. ಸಂಶಯ ಎಂದರೆ 'ಶಬ್ದಃ ನಿತ್ಯೋ ವಾ ಅನಿತ್ಯೋ ವಾ' 'ಅಯಂ ಸ್ಥಾಣುರ್ವಾ ಪುರುಷೋ ವಾ' ಇತ್ಯಾದಿಯಾಗಿ ಅನೇಕವಿಧ ಸಂಶಯಗಳು ಇರುವುದರಿಂದ ನಾವು ಯಾವ ಸಂಶಯವನ್ನು ತೆಗೆದುಕೊಳ್ಳಬೇಕು? ಎಂದು ಜಿಜ್ಞಾಸೆ ಉಂಟಾಗಿ, ಸಾಧ್ಯವಿಶೇಷ ಉಪಾದಾನಾದಿಗಳಿಂದ ಅಂದರೆ 'ವಿಮತೋ ಭಿನ್ನಃ' ಎಂಬ ಪ್ರತಿಜ್ಞೆಯಲ್ಲಿ 'ಭಿನ್ನಃ' ಎಂಬುದಾಗಿ ಭೇದರೂಪವಾದ ಒಂದು ಕೋಟಿಯನ್ನು ಸೂಚಿಸಿರುವುದರಿಂದ (ಭೇದಕ್ಕೆ ವಿರುದ್ಧವಾದ ಅಭೇದ ರೂಪವಾದ ಇನ್ನೊಂದು ಕೋಟಿಯನ್ನು ತೆಗೆದುಕೊಂಡು) ಭಿನ್ನತ್ವ-ಅಭಿನ್ನತ್ವಕೋಟಿಕವಾದ 'ಸಂಸಾರಾನ್ಮುಕ್ತಃ ಭಿನ್ನೋ ವಾ ಅಭಿನ್ನೋ ವಾ' ಎಂಬ ಸಂಶಯವಿಶೇಷವನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಬೇಕು. ಹೀಗೆ ನಿಶ್ಚಯಿಸಲು ಹೊರಟರೂ ಸಹ ವಿಮತಶಬ್ದದ ಹಿನ್ನೆಲೆಯಲ್ಲಿ ಇಷ್ಟೆಲ್ಲ ಅರ್ಥ ಅಡಕವಾಗಿರುವುದರಿಂದ ಶಬ್ದಗೌರವ ಬರದಿದ್ದರೂ ಅರ್ಥಗೌರವ ಬರುತ್ತದೆ.

ಆದ್ದರಿಂದ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡುವ ಪಕ್ಷದಲ್ಲಿ ಶಬ್ದಗೌರವ ಬರುವುದಾದರೆ, 'ವಿಮತಃ' ಎಂದು ಪಕ್ಷನಿರ್ದೇಶ ಮಾಡುವ ಪಕ್ಷದಲ್ಲಿ ಅರ್ಥಗೌರವ ಬರುತ್ತದೆ. ಹೀಗೆ ಎರಡೂ ಪಕ್ಷಗಳಲ್ಲಿ ಗೌರವ ಸಮಾನವಾಗಿದೆ.

ಹಾಗಾದರೆ ಎರಡೂ ಪಕ್ಷಗಳಲ್ಲಿಯೂ ಗೌರವ ಸಮಾನವಾಗಿರುವಾಗ 'ಸಂಸಾರಾನ್ಮುಕ್ತಃ' ಎಂದೇ ಪಕ್ಷನಿರ್ದೇಶ ಮಾಡಿರಿ ಎಂದು ವಿನಿಗಮನ ಏಕೆ? ಎಂದರೆ,

**''ಅರ್ಥಪ್ರತಿಪತ್ತಿಗೌರವಾತ್ ಶಬ್ದಗೌರವಸ್ಯ ಜ್ಯಾಯಸ್ತ್ವಾತ್'**

ಅರ್ಥಗೌರವಕ್ಕಿಂತಲೂ ಶಬ್ದಗೌರವ ಉತ್ತಮವಾಗಿದೆ. ಶಬ್ದ ದೊಡ್ಡದಾದರೂ ಶೀಘ್ರೋಪಸ್ಥಿತಿಕಾರಣವಾಗುವುದರಿಂದ ಶಬ್ದಗೌರವವೇ ಶ್ರೇಷ್ಠವಾಗಿದೆ.

ಆದ್ದರಿಂದ ಅರ್ಥಗೌರವಕ್ಕಿಂತಲೂ ಶಬ್ದಗೌರವ ಸಹ್ಯವಾದ್ದರಿಂದ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡುವುದೇ ಸಮಂಜಸ.

ಅಂದಮೇಲೆ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡುವುದನ್ನು ಬಿಟ್ಟು 'ವಿಮತಃ' ಎಂದು ಏಕೆ ಪಕ್ಷನಿರ್ದೇಶ ಮಾಡಿದ್ದೀರಿ?

**ಅವತಾರಿಕೆ :-** ಈ ರೀತಿಯಾಗಿ ಶಂಕೆ ಬಂದರೆ, ವಿಮತ ಪದಪ್ರಯೋಗದ ಹಿನ್ನೆಲೆಯಲ್ಲಿ ನಿಜವಾಗಿ ಇರುವ ಪ್ರಯೋಜನವನ್ನು ತಿಳಿಸುವ ಮೂಲಕ, ವಿಮತಪದಪ್ರಯೋಗದ ಸಾರ್ಥಕತೆ ತೋರಿಸಿಕೊಡುತ್ತಾರೆ -

**ಟೀಕಾ: ಸತ್ಯಮ್ । ತಥಾಪ್ಯಪ್ರಸಿದ್ಧವಿಶೇಷ್ಯತ್ವಾಪ್ರಸಿದ್ಧವಿಶೇಷಣತ್ವ-ಪ್ರಸಿದ್ಧಾರ್ಥತ್ವಪ್ರಮಾಣಬಾಧಾನಾಂ ಪ್ರತಿಜ್ಞಾದೋಷಾಣಾ-ಮುದ್ಧಾರೋಽಪ್ಯನೇನ ಸಂಕ್ಷೇಪತಃ ಕೃತಃ ಸ್ಯಾದಿತ್ಯೇವಮರ್ಥಂ ವಿಮತಗ್ರಹಣಮ್ ।**

**ತಥಾಹಿ- ಯದಿ ವಿಶೇಷ್ಯೋ ಮುಕ್ತಾತ್ಮಾಽಪ್ರಸಿದ್ಧಃ ಸ್ಯಾತ್ತದಾ ಕಿಮಾಶ್ರಯಾ ವಿಮತಿಃ ಸ್ಯಾತ್ । ಯದಿ ಚ ವಿಶೇಷಣಂ ಭೇದೋಽ-ಪ್ರಸಿದ್ಧೋ ಭವೇತ್ತದಾ ಕಿಮುಲ್ಲೇಖಿನೀ ವಿಮತಿರ್ಭವೇತ್ । ಯದಿ ವಾ ಭೇದೋ ಮುಕ್ತಾತ್ಮನಿ ಸಿದ್ಧೋ ಬಾಧಿತೋ ವಾ ಭವೇತ್ತದಾಽ-ಪ್ಯನ್ಯತರಪಕ್ಷನಿಶ್ಚಯಾನ್ನ ವಿಮತಿಃ ಸ್ಯಾತ್ । ಅಸ್ತಿ ಚೇಯಮ್ । ತತೋ ನಾಪ್ರಸಿದ್ಧವಿಶೇಷ್ಯತ್ವಾದೀತಿ ॥**

**ಅನುವಾದ :-** ಸತ್ಯವೇ ಆಗಿದೆ. ನೀವು ಹೇಳಿದಂತೆ ಅರ್ಥಗೌರವಕ್ಕಿಂತ ಶಬ್ದಗೌರವವೇ ಶ್ರೇಷ್ಠವಾಗಿದೆ. ಅಂತೆಯೇ 'ವಿಮತಃ' ಎಂದು ಪಕ್ಷನಿರ್ದೇಶ ಮಾಡುವುದಕ್ಕಿಂತ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡುವುದೇ ಸರಿ.

ಆದರೆ ಕೇವಲ ಗೌರವಭಯದಿಂದ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡದೇ 'ವಿಮತಃ' ಎಂದು ಪಕ್ಷನಿರ್ದೇಶ ಮಾಡಲು ನಾವು ಹೊರಟಿಲ್ಲ. ಗೌರವಪರಿಹಾರ ಮಾತ್ರವೇ ನಮಗೆ ಪ್ರಯೋಜನವಲ್ಲ. ಹಾಗಾಗಿದ್ದರೆ ''ಗೌರವದೋಷ ಎರಡೂ ಪಕ್ಷಗಳಲ್ಲಿಯೂ ಸಮಾನವಾಗಿದೆ. ಅದರಲ್ಲಿಯೂ ಅರ್ಥಗೌರವಕ್ಕಿಂತ ಶಬ್ದಗೌರವವೇ ಶ್ರೇಷ್ಠ'' ಎಂಬ ನಿಮ್ಮ ಆಕ್ಷೇಪ ಸರಿಯಾಗುತ್ತಿತ್ತು.

ಪರಂತು 'ವಿಮತಃ' ಎಂದು ಪಕ್ಷನಿರ್ದೇಶ ಮಾಡುವುದರಿಂದ ಅಪ್ರಸಿದ್ಧ-ವಿಶೇಷ್ಯತ್ವ-ಅಪ್ರಸಿದ್ಧವಿಶೇಷಣತ್ವ-ಸಿದ್ಧಾರ್ಥತಾ-ಪ್ರಮಾಣಬಾಧ ಈ ನಾಲ್ಕೂ

ದೋಷಗಳ ಪರಿಹಾರವೂ ಸಂಕ್ಷೇಪವಾಗಿ ಮಾಡಿದಂತಾಗುತ್ತದೆ. ಈ ಒಂದು ಪ್ರಯೋಜನ ಇರುವುದರಿಂದ 'ವಿಮತಃ' ಎಂದು ಪಕ್ಷನಿರ್ದೇಶ ಮಾಡಿದ್ದೇವೆ.

ಅದು ಹೇಗೆ ? 'ವಿಮತಃ' ಎಂದು ಪಕ್ಷನಿರ್ದೇಶ ಮಾಡುವುದರಿಂದ ಅಪ್ರಸಿದ್ಧವಿಶೇಷ್ಯತ್ವಾದಿ ದೋಷಗಳ ಪರಿಹಾರ ಹೇಗೆ ಮಾಡಿದಂತಾಗುತ್ತದೆ ?

**ವಿಮತಶಬ್ದಪ್ರಯೋಗದಿಂದ ಅಪ್ರಸಿದ್ಧವಿಶೇಷ್ಯತಾ (ಆಶ್ರಯಾಸಿದ್ಧಿ) ಪರಿಹಾರಸೂಚನೆ**

ಪಕ್ಷನಾದ ಮುಕ್ತಾತ್ಮನೇ ಅಪ್ರಸಿದ್ಧನಾದ್ದರಿಂದ ನಿಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷ್ಯತಾ (ಆಶ್ರಯಾಸಿದ್ಧಿ) ದೋಷ ಬರುತ್ತದೆ ಎಂಬುದಾಗಿ ಆಶ್ರಯಾಸಿದ್ಧಿದೋಷಶಂಕೆ ಬಂದರೆ, ಅದಕ್ಕೆ ಕೇವಲ 'ಸಂಸಾರಾನ್ಮುಕ್ತಃ' ಎಂದಷ್ಟೇ ಪಕ್ಷನಿರ್ದೇಶ ಮಾಡುವುದರಿಂದ ಆ ಆಶ್ರಯಾಸಿದ್ಧದೋಷದ ಪರಿಹಾರವು ಸೂಚಿತವಾಗುವುದಿಲ್ಲ. ಆದರೆ 'ವಿಮತಃ' ಎಂದು ಪಕ್ಷನಿರ್ದೇಶ ಮಾಡುವುದರಿಂದ ಆಶ್ರಯಾಸಿದ್ಧಿದೋಷದ ಪರಿಹಾರವು ಸೂಚಿತವಾಗುತ್ತದೆ.

ಅದು ಹೇಗೆ ? ಪಕ್ಷನಾದ ಮುಕ್ತಾತ್ಮನು ವಿಮತನಾಗಿದ್ದಾನೆ (ಸಂಶಯಕ್ಕೆ ಧರ್ಮಿಯಾಗಿದ್ದಾನೆ) ಎಂದಮೇಲೆ ಅವನು ಅಪ್ರಸಿದ್ಧನಾಗಲು ಸಾಧ್ಯವಿಲ್ಲ.

ಒಂದು ಸಂಶಯ ಬರಬೇಕಾದರೆ ಧರ್ಮಿಯು ಇರಬೇಕು, ಎರಡು ಕೋಟಿಗಳೂ ಇರಬೇಕು. ಧರ್ಮಿಯೇ ಅಪ್ರಸಿದ್ಧವಾಗಿದ್ದರೆ ಅಥವಾ ಕೋಟಿಗಳೇ ಅಪ್ರಸಿದ್ಧವಾದರೆ ಸಂಶಯ ಬರಲು ಸಾಧ್ಯವಿಲ್ಲ. ಹಾಗಾದರೆ -

**''ಯದಿ ಮುಕ್ತಾತ್ಮೈವ ನ ಸ್ಯಾತ್ (ಅಪ್ರಸಿದ್ಧಃ ಸ್ಯಾತ್) ತರ್ಹಿ ಭಿನ್ನತ್ವ - ಅಭಿನ್ನತ್ವಾಭ್ಯಾಂ ವಿಮತಿಃ ಕಿಮಾಶ್ರಯಾ ಸ್ಯಾತ್ ? ಕಿಂಧರ್ಮಿಣೀ ಸ್ಯಾತ್ ? ಕುತ್ರ ಸ್ಯಾದಿತಿ ಯಾವತ್ । ಅಸ್ತಿ ಚೇಯಮ್ । ತಸ್ಮಾನ್ನ ನಿರಾಶ್ರಯತ್ವಮ್ ।''**

ಒಂದುವೇಳೆ ಮುಕ್ತಾತ್ಮನೇ ಅಪ್ರಸಿದ್ಧನಾಗಿದ್ದರೆ ಭಿನ್ನತ್ವ-ಅಭಿನ್ನತ್ವ ಕೋಟಿಕ-ವಾದ ವಿಮತಿಯು ಯದ್ಧರ್ಮಿಕವಾಗಿ ಬರಬೇಕು ? (ಮುಕ್ತಾತ್ಮನೇ ಅಪ್ರಸಿದ್ಧ-ನಾಗಿದ್ದರೆ ಧರ್ಮಿಯೇ ಅಪ್ರಸಿದ್ಧವಾದ ಕಾರಣ ಸಂಶಯವೇ ಬರಬಾರದಿತ್ತು ಎಂದು ಭಾವ.) ಈಗಲಾದರೋ ಸಂಶಯ ಬರುತ್ತಿದೆ ಎಂದಮೇಲೆ, ಧರ್ಮಿಯಾದ ಮುಕ್ತಾತ್ಮನು ಅಪ್ರಸಿದ್ಧನಾಗಿರಲು ಸಾಧ್ಯವಿಲ್ಲ. ಆದ್ದರಿಂದ ಆಶ್ರಯಾಸಿದ್ಧಿ ಬರುವುದಿಲ್ಲ.

ಈ ರೀತಿಯಾಗಿ ವಿಮತಶಬ್ದವೇ ನಮಗೆ ಆಶ್ರಯಾಸಿದ್ಧಿಪರಿಹಾರವನ್ನು ಸೂಚಿಸುತ್ತದೆ.

**ವಿಮತಶಬ್ದಪ್ರಯೋಗದಿಂದ ಅಪ್ರಸಿದ್ಧವಿಶೇಷಣತಾ ಪರಿಹಾರಸೂಚನೆ**

ಸಾಧ್ಯವಾದ ಭೇದವೇ ಅಪ್ರಸಿದ್ಧವಾದ್ದರಿಂದ ನಿಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾದೋಷ ಬರುತ್ತದೆ ಎಂಬುದಾಗಿ ಅಪ್ರಸಿದ್ಧವಿಶೇಷಣತಾ-ದೋಷಶಂಕೆ ಬಂದರೆ, ಅದಕ್ಕೆ ಕೇವಲ 'ಸಂಸಾರಾನ್ಮುಕ್ತಃ' ಎಂದಷ್ಟೇ ಪಕ್ಷನಿರ್ದೇಶ ಮಾಡುವುದರಿಂದ ಆ ಅಪ್ರಸಿದ್ಧವಿಶೇಷಣತಾದೋಷದ ಪರಿಹಾರವು ಸೂಚಿತ-ವಾಗುವುದಿಲ್ಲ. ಆದರೆ 'ವಿಮತಃ' ಎಂಬುದಾಗಿ ಪಕ್ಷನಿರ್ದೇಶ ಮಾಡುವುದರಿಂದ ಆ ಅಪ್ರಸಿದ್ಧವಿಶೇಷಣತಾದೋಷದ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ಪಕ್ಷನಾದ ಮುಕ್ತಾತ್ಮನು ವಿಮತನಾಗಿದ್ದಾನೆ (ಭೇದ-ಅಭೇದ ಕೋಟಿಕವಾದ ಸಂಶಯಕ್ಕೆ ಧರ್ಮಿಯಾಗಿದ್ದಾನೆ) ಎಂದಮೇಲೆ (ಸಂಶಯದಲ್ಲಿ ಕೋಟಿಯಾಗಿರುವ) ಸಾಧ್ಯವಾದ ಭೇದವು ಅಪ್ರಸಿದ್ಧವಾಗಿರಲು ಸಾಧ್ಯವಿಲ್ಲ.

**''ಯದಿ ಭೇದೋಽಪ್ರಸಿದ್ಧಃ ಸ್ಯಾತ್ ತರ್ಹಿ ಭಿನ್ನತ್ವಾಭಿನ್ನತ್ವಾಭ್ಯಾಂ ಕಥಂ ವಿಮತಿಃ ಸ್ಯಾತ್ । ಏಕಸ್ಯಾಃ ಕೋಟೇಃ ಅಪ್ರಸಿದ್ಧತ್ವಾತ್ । ಅಸ್ತಿ ಚೇಯಮ್ । ತಸ್ಮಾನ್ನ ಅಪ್ರಸಿದ್ಧವಿಶೇಷಣತಾ ।''**

ಒಂದುವೇಳೆ ಸಾಧ್ಯವಾದ ಭೇದವೇ ಅಪ್ರಸಿದ್ಧವಾದದ್ದಾದರೆ ಭಿನ್ನತ್ವ-ಅಭಿನ್ನತ್ವಕೋಟಿಕವಾದ ವಿಮತಿಯು ಹೇಗೆ ತಾನೆ ಬರಲು ಸಾಧ್ಯ ? (ಒಂದು ಕೋಟಿಯೇ ಅಪ್ರಸಿದ್ಧವಾದ್ದರಿಂದ ಸಂಶಯವೇ ಬರಬಾರದಿತ್ತು ಎಂದು ಭಾವ.) ಈಗಲಾದರೋ ಸಂಶಯ ಬರುತ್ತಿದೆ ಎಂದಮೇಲೆ, ಸಾಧ್ಯವಾದ (ಸಂಶಯದಲ್ಲಿ ಒಂದು ಕೋಟಿಯಾಗಿರುವ) ಭೇದವು ಅಪ್ರಸಿದ್ಧವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಅಪ್ರಸಿದ್ಧವಿಶೇಷಣತಾ ಬರುವುದಿಲ್ಲ.

ಈ ರೀತಿಯಾಗಿ ವಿಮತಶಬ್ದವೇ ನಮಗೆ ಅಪ್ರಸಿದ್ಧವಿಶೇಷಣತಾ ಪರಿಹಾರವನ್ನು ಸೂಚಿಸುತ್ತದೆ.

**ವಿಮತಶಬ್ದಪ್ರಯೋಗದಿಂದ ಸಿದ್ಧಸಾಧನತಾ-ಬಾಧ ದೋಷಗಳ ಪರಿಹಾರಸೂಚನೆ**

ಪಕ್ಷನಾದ ಮುಕ್ತಾತ್ಮನಲ್ಲಿ ಸಾಧ್ಯವಾದ ಭೇದವು ನಮಗೆ ಸಿದ್ಧವೇ ಆಗಿರುವುದರಿಂದ ನಿಮ್ಮ ಅನುಮಾನಕ್ಕೆ ಸಿದ್ಧಸಾಧನತಾದೋಷ ಬರುತ್ತದೆ ಎಂಬುದಾಗಿ ಸಿದ್ಧಸಾಧನತಾದೋಷಶಂಕೆ ಬಂದರೆ,

ಹಾಗೂ ಪಕ್ಷನಾದ ಮುಕ್ತಾತ್ಮನಲ್ಲಿ ಸಾಧ್ಯವಾದ ಭೇದವು ಇಲ್ಲ ಎಂದೇ (ಸಾಧ್ಯಾಭಾವವೇ ಅಭೇದವೇ) ನಮಗೆ ಸಿದ್ಧವಾಗಿರುವುದರಿಂದ ನಿಮ್ಮ ಅನುಮಾನಕ್ಕೆ ಬಾಧದೋಷ ಬರುತ್ತದೆ ಎಂಬುದಾಗಿ ಬಾಧದೋಷಶಂಕೆ ಬಂದರೆ,

ಅದಕ್ಕೆ ಕೇವಲ 'ಸಂಸಾರಾನ್ಮುಕ್ತಃ' ಎಂದಷ್ಟೇ ಪಕ್ಷನಿರ್ದೇಶ ಮಾಡುವುದರಿಂದ ಸಿದ್ಧಸಾಧನತಾ-ಬಾಧ ದೋಷಗಳ ಪರಿಹಾರವು ಸೂಚಿತವಾಗುವುದಿಲ್ಲ. ಆದರೆ 'ವಿಮತಃ' ಎಂಬುದಾಗಿ ಪಕ್ಷನಿರ್ದೇಶ ಮಾಡುವುದರಿಂದ ಆ ಸಿದ್ಧಸಾಧನತಾ-ಬಾಧ ದೋಷಗಳ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ಪಕ್ಷನಾದ ಮುಕ್ತಾತ್ಮನು ವಿಮತನಾಗಿದ್ದಾನೆ (ಭೇದ-ಅಭೇದ ಕೋಟಿಕ ಸಂಶಯಕ್ಕೆ ಧರ್ಮಿಯಾಗಿದ್ದಾನೆ) ಎಂದಮೇಲೆ ಸಾಧ್ಯವಾದ ಭೇದವು ಸಿದ್ಧವಾಗಿರಲೂ ಸಾಧ್ಯವಿಲ್ಲ. ಸಾಧ್ಯವಾದ ಭೇದವು ಇಲ್ಲ ಎಂಬುದಾಗಿ ಸಿದ್ಧವಾಗಿರಲೂ ಸಾಧ್ಯವಿಲ್ಲ.

**''ಯದಿ ಪಕ್ಷೇ ಸಾಧ್ಯಂ ಭೇದಃ ಸಿದ್ಧೋ ಭವೇತ್ ತರ್ಹಿ ಭಿನ್ನತ್ವಾಭಿನ್ನತ್ವಾಭ್ಯಾಂ ಕಥಂ ವಿಮತಿಃ ಸ್ಯಾತ್ ? ಏಕಸ್ಯಾಃ ಕೋಟೇಃ ಸಿದ್ಧತ್ವಾತ್ ।**

**ಯದಿ ವಾ ಪಕ್ಷೇ ಸಾಧ್ಯಂ ಭೇದಃ ನಾಸ್ತೀತಿ (ಸಾಧ್ಯಾಭಾವಃ) ಸಿದ್ಧೋ ಭವೇತ್ ತರ್ಹಿ ಭಿನ್ನತ್ವಾಭಿನ್ನತ್ವಾಭ್ಯಾಂ ಕಥಂ ವಿಮತಿಃ ಸ್ಯಾತ್ ? ಏಕಸ್ಯಾಃ ಕೋಟೇಃ ಸಿದ್ಧತ್ವಾತ್ ।**

**ಅಸ್ತಿ ಚೇಯಮ್ । ತಸ್ಮಾನ್ನ ಸಿದ್ಧಸಾಧನತಾ ಬಾಧಶ್ಚ ।''**

ಒಂದುವೇಳೆ ಸಾಧ್ಯವಾದ ಭೇದವು ಪಕ್ಷದಲ್ಲಿ (ಮುಕ್ತಾತ್ಮನಲ್ಲಿ) ಸಿದ್ಧವಾದದ್ದೇ ಆಗಿದ್ದರೆ ಭಿನ್ನತ್ವಾಭಿನ್ನತ್ವಕೋಟಿಕವಾದ ವಿಮತಿಯು ಹೇಗೆ ತಾನೇ ಬರಲು ಸಾಧ್ಯ ? ಸಂಶಯದಲ್ಲಿ ಸಾಧ್ಯವಾದ ಭೇದವು ಒಂದು ಕೋಟಿಯಾಗಿದೆ. ಅಂತಹ ಒಂದು ಕೋಟಿಯೇ ಸಿದ್ಧವಾದ ಕಾರಣ (ಸಂಶಯಕ್ಕೆ ವಿರೋಧಿಯಾದ ಅನ್ಯತರಕೋಟಿನಿಶ್ಚಯ ಇರುವುದರಿಂದ) ಸಂಶಯವೇ ಬರಬಾರದಿತ್ತು.

ಅದರಂತೆಯೇ ಒಂದುವೇಳೆ ಸಾಧ್ಯವಾದ ಭೇದವು ಪಕ್ಷದಲ್ಲಿ (ಮುಕ್ತಾತ್ಮನಲ್ಲಿ) ಇಲ್ಲ ಎಂದು ಸಿದ್ಧವಾಗಿದ್ದಾದರೂ (ಸಾಧ್ಯಾಭಾವವು ನಿಶ್ಚಿತವಾಗಿದ್ದರೂ) ಭಿನ್ನತ್ವಾಭಿನ್ನತ್ವಕೋಟಿಕವಾದ ವಿಮತಿಯು ಹೇಗೆ ತಾನೇ ಬರಲು ಸಾಧ್ಯ ?

ಸಂಶಯದಲ್ಲಿ ಸಾಧ್ಯಾಭಾವವೂ ಒಂದು ಕೋಟಿಯಾಗಿದೆ. ಅಂತಹ ಒಂದು ಕೋಟಿಯೇ ಸಿದ್ಧವಾದ ಕಾರಣ (ಸಂಶಯಕ್ಕೆ ವಿರೋಧಿಯಾದ ಅನ್ಯತರಕೋಟಿ-ನಿಶ್ಚಯ ಇರುವುದರಿಂದ) ಸಂಶಯವೇ ಬರಬಾರದಿತ್ತು.

ಈಗಲಾದರೋ ಮುಕ್ತಾತ್ಮನು ವಿಮತನಾಗಿದ್ದಾನೆ, ಸಂಶಯ ಬರುತ್ತಿದೆ ಎಂದಮೇಲೆ ಸಾಧ್ಯವಾದ (ಒಂದು ಕೋಟಿಯಾಗಿರುವ) ಭೇದವು ಸಿದ್ಧವಾಗಿರಲು ಸಾಧ್ಯವಿಲ್ಲ. ಅದರಂತೆ ಮತ್ತೊಂದು ಕೋಟಿಯಾಗಿರುವ ಸಾಧ್ಯಾಭಾವವೂ ಸಿದ್ಧವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಸಿದ್ಧಸಾಧನತಾ ಹಾಗೂ ಬಾಧ ಬರುವುದಿಲ್ಲ.

ಈ ರೀತಿಯಾಗಿ ವಿಮತಶಬ್ದವೇ ನಮಗೆ ಸಿದ್ಧಸಾಧನತಾ-ಬಾಧ ದೋಷಗಳ ಪರಿಹಾರವನ್ನು ಸೂಚಿಸುತ್ತದೆ.

ಹೀಗೆ 'ವಿಮತ'ಶಬ್ದ ಪ್ರಯೋಗದಿಂದ ಅಪ್ರಸಿದ್ಧವಿಶೇಷ್ಯತಾ (ಆಶ್ರಯಾಸಿದ್ಧಿ), ಅಪ್ರಸಿದ್ಧವಿಶೇಷಣತಾ, ಸಿದ್ಧಸಾಧನತಾ, ಬಾಧ ದೋಷಗಳ ಪರಿಹಾರವೂ ಸೂಚಿತವಾಗುವುದರಿಂದ 'ಸಂಸಾರಾನ್ಮುಕ್ತಃ' ಎಂದು ಪಕ್ಷನಿರ್ದೇಶ ಮಾಡದೇ 'ವಿಮತಃ' ಎಂದು ಪಕ್ಷನಿರ್ದೇಶ ಮಾಡಿರುವುದು ಸಾರ್ಥಕವೇ ಆಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಈ ರೀತಿಯಾಗಿ ಪಕ್ಷಕ್ಕೆ ಸಂಬಂಧಪಟ್ಟಂತೆ 'ವಿಮತ' ಶಬ್ದಪ್ರಯೋಗದ ಹಿನ್ನೆಲೆಯಲ್ಲಿ ನಿಜವಾಗಿ ಇರುವ ಪ್ರಯೋಜನವನ್ನು ತಿಳಿಸಿ, 'ವಿಮತ'ಪದಪ್ರಯೋಗದ ಸಾರ್ಥಕತೆ ತೋರಿಸಿಕೊಟ್ಟ ನಂತರ, ಪ್ರಕೃತ ದೃಷ್ಟಾಂತಕ್ಕೆ ಸಂಬಂಧಪಟ್ಟಂತೆ 'ಸಂಪ್ರತಿಪನ್ನ' ಶಬ್ದಪ್ರಯೋಗದ ಹಿನ್ನೆಲೆಯಲ್ಲಿ ಇರುವ ಪ್ರಯೋಜನವನ್ನು ತಿಳಿಸುತ್ತಾ, 'ಸಂಪ್ರತಿಪನ್ನ' ಶಬ್ದಪ್ರಯೋಗದ ಸಾರ್ಥಕತೆ ತೋರಿಸಿಕೊಡುತ್ತಾರೆ -

## ಅನುಮಾನದಲ್ಲಿ ಸಂಪ್ರತಿಪನ್ನ ಪದಪ್ರಯೋಗದ ಪ್ರಯೋಜನ

**ಟೀಕಾಃ ಏತೇನೋದಾಹರಣೇಽಪಿ ಸಂಪ್ರತಿಪನ್ನಗ್ರಹಣಸ್ಯ ಸಾಧ್ಯಸಾಧನ-ವೈಕಲ್ಯಾದ್ಯುದ್ಧಾರಃ ಪ್ರಯೋಜನಂ ವ್ಯಾಖ್ಯಾತಮ್ । ಅನ್ಯಥಾ ಯಥಾ ನಿಗಡಮುಕ್ತ ಇತ್ಯವಕ್ಷ್ಯತ್ ।**

**ಅನುವಾದ :-** ಇದರಿಂದ ದೃಷ್ಟಾಂತವಿಷಯದಲ್ಲಿಯೂ ಸಹ 'ಸಂಪ್ರತಿಪನ್ನ' ಶಬ್ದಪ್ರಯೋಗ ಮಾಡುವುದಕ್ಕೆ ಸಾಧ್ಯವೈಕಲ್ಯ-ಸಾಧನವೈಕಲ್ಯಾದಿಗಳ ಪರಿಹಾರವು ಪ್ರಯೋಜನವಾಗಿದೆ ಎಂದು ತಿಳಿಸುತ್ತಿದ್ದಾರೆ.

ಒಂದುವೇಳೆ ಆ ವಿಧವಾದ ಪ್ರಯೋಜನ ಇಲ್ಲ ಎಂದಾಗಿದ್ದರೆ 'ಯಥಾ ಸಂಪ್ರತಿಪನ್ನಃ' ಎಂದೇಕೆ ಹೇಳುತ್ತಿದ್ದರು ? 'ಯಥಾ ನಿಗಡಮುಕ್ತಃ' ಎಂದೇ ಹೇಳುತ್ತಿದ್ದರು.

**ವಿವರಣೆ :-** ಅನುಮಾನದಲ್ಲಿ 'ಯಃ ಮುಕ್ತಃ ಸ ಭಿನ್ನಃ' (ಯಾವನು ಮುಕ್ತನಾಗಿರುವನೋ ಅವನು ಭಿನ್ನನು) ಎಂಬ ವ್ಯಾಪ್ತಿಯನ್ನು ತೋರಿಸುವುದಕ್ಕಾಗಿ 'ಯಥಾ ಸಂಪ್ರತಿಪನ್ನಃ' ಎಂದು ದೃಷ್ಟಾಂತ ಹೇಳಿದ್ದಾರೆ. ಇಲ್ಲಿ ಸಂಪ್ರತಿಪನ್ನ ಶಬ್ದದಿಂದ ನಿಗಡಮುಕ್ತನನ್ನು ತೆಗೆದುಕೊಳ್ಳಲಾಗಿದೆ. ಹೀಗೆ ನಿಗಡಮುಕ್ತನನ್ನೇ ದೃಷ್ಟಾಂತ ಮಾಡುವ ಅಭಿಪ್ರಾಯ ಇದ್ದದ್ದಾದರೆ 'ಯಥಾ ನಿಗಡಮುಕ್ತಃ' ಎಂದೇ ಸ್ಪಷ್ಟವಾಗಿ ಹೇಳಬಹುದಿತ್ತಲ್ಲವೇ ? ಅದನ್ನು ಬಿಟ್ಟು 'ಯಥಾ ಸಂಪ್ರತಿಪನ್ನಃ' ಎಂದೇಕೆ ಶಬ್ದಪ್ರಯೋಗ ಮಾಡಿದ್ದಾರೆ ?

ನಿಜ. ನಿಗಡಮುಕ್ತನನ್ನು ದೃಷ್ಟಾಂತವಾಗಿ ತಿಳಿಸುವ ಉದ್ದೇಶವಷ್ಟೇ ಇದ್ದಿದ್ದರೆ ಆಗ 'ಯಥಾ ನಿಗಡಮುಕ್ತಃ' ಎಂದಷ್ಟೇ ಹೇಳುತ್ತಿದ್ದರು. ಆದರೆ ಪ್ರಕೃತದಲ್ಲಿ ನಿಗಡಮುಕ್ತನನ್ನು ದೃಷ್ಟಾಂತವಾಗಿ ತಿಳಿಸುವ ಉದ್ದೇಶ ಮಾತ್ರ ಇಲ್ಲ. ಕಿಂತು ಸಾಧ್ಯವೈಕಲ್ಯ-ಸಾಧನವೈಕಲ್ಯ-ದೃಷ್ಟಾಂತಾಪ್ರಸಿದ್ಧಿ ದೋಷಗಳ ಪರಿಹಾರ-ಸೂಚನೆಯೂ ಆಗಬೇಕಿದೆ. ಅದಕ್ಕಾಗಿ 'ಯಥಾ ಸಂಪ್ರತಿಪನ್ನಃ' ಎಂದು ಶಬ್ದಪ್ರಯೋಗ ಮಾಡಿದ್ದಾರೆ.

ಅದು ಹೇಗೆ ?

**ಸಂಪ್ರತಿಪನ್ನಶಬ್ದಪ್ರಯೋಗದಿಂದ ಸಾಧ್ಯವೈಕಲ್ಯ-ಸಾಧನವೈಕಲ್ಯದೋಷಗಳ ಪರಿಹಾರಸೂಚನೆ**

ದೃಷ್ಟಾಂತ ಮಾಡಿರುವ ನಿಗಡಮುಕ್ತನಲ್ಲಿ ಸಾಧ್ಯವಾದ ಭೇದವನ್ನು ಹಾಗೂ ಸಾಧನವಾದ ಮುಕ್ತತ್ವವನ್ನು ನಾವು (ಪ್ರತಿವಾದಿಗಳು) ಒಪ್ಪಿಲ್ಲವಾದ್ದರಿಂದ ನಿಮ್ಮ ಅನುಮಾನಕ್ಕೆ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳು ಬರುತ್ತವೆ ಎಂಬುದಾಗಿ ಸಾಧ್ಯವೈಕಲ್ಯ-ಸಾಧನವೈಕಲ್ಯದೋಷಶಂಕೆ ಬಂದರೆ, ಅದಕ್ಕೆ

ಕೇವಲ 'ಯಥಾ ನಿಗಡಮುಕ್ತಃ' ಎಂಬುದಾಗಿ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳ ಪರಿಹಾರವು ಸೂಚಿತವಾಗುವುದಿಲ್ಲ. ಆದರೆ 'ಯಥಾ ಸಂಪ್ರತಿಪನ್ನಃ' ಎಂಬುದಾಗಿ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ದೃಷ್ಟಾಂತನಾದ ನಿಗಡಮುಕ್ತನು ಸಂಪ್ರತಿಪನ್ನನಾಗಿದ್ದಾನೆ. (ಸಂಪ್ರತಿಪತ್ತಿಗೆ ವಿಷಯನಾಗಿದ್ದಾನೆ ಅಂದರೆ ಸಾಧ್ಯ-ಹೇತುಗಳು ಅಲ್ಲಿ ಇವೆ ಎಂಬುದಾಗಿ ಇಬ್ಬರು ವಾದಿಗಳಿಗೂ ಸಮ್ಮತನಾಗಿದ್ದಾನೆ.) ಅಂದಮೇಲೆ 'ದೃಷ್ಟಾಂತದಲ್ಲಿ ಸಾಧ್ಯ- ಸಾಧನಗಳು ಇಲ್ಲವಾದ್ದರಿಂದ ಸಾಧ್ಯವೈಕಲ್ಯ - ಸಾಧನವೈಕಲ್ಯಗಳು ಬರುತ್ತವೆ' ಎಂದು ಶಂಕಿಸಲು ಸಾಧ್ಯವಿಲ್ಲ.

**''ಯದಿ ಸಾಧ್ಯಂ ಭಿನ್ನತ್ವಂ ಸಾಧನಂ ಮುಕ್ತತ್ವಂ ಚ ನಿಗಡಮುಕ್ತೇ ನ ಸ್ಯಾತ್ ತದಾ ಕೇನ ಧರ್ಮೇಣ ಸಂಪ್ರತಿಪತ್ತಿಃ ಸ್ಯಾತ್ ? ಅಸ್ತಿ ಚೇಯಮ್ । ತಸ್ಮಾನ್ನ ಸಾಧ್ಯವೈಕಲ್ಯಾದಿ ।''**

ಒಂದುವೇಳೆ ಸಾಧ್ಯವಾದ ಭೇದ ಹಾಗೂ ಸಾಧನವಾದ ಮುಕ್ತತ್ವ ದೃಷ್ಟಾಂತನಾದ ನಿಗಡಮುಕ್ತನಲ್ಲಿ ಇಲ್ಲ ಎಂದಾಗಿದ್ದರೆ, ಆಗ ಯಾವ ಧರ್ಮದಿಂದ ಸಂಪ್ರತಿಪತ್ತಿ ಕೂಡಬೇಕು ? (ಸಾಧ್ಯ-ಹೇತುಗಳು ಅಲ್ಲಿ ಇವೆ ಎಂಬುದಾಗಿ ಇಬ್ಬರು ವಾದಿಗಳಿಗೂ ಸಮ್ಮತಿಯು ಹೇಗೆ ಉಪಪನ್ನವಾಗುತ್ತದೆ?) ಈಗಲಾದರೋ ನಿಗಡಮುಕ್ತನಲ್ಲಿ ಸಾಧ್ಯ-ಹೇತುಗಳು ಇವೆ ಎಂಬುದಾಗಿ ಇಬ್ಬರಿಗೂ ಸಂಪ್ರತಿಪತ್ತಿ ಇದೆ ಎಂದಮೇಲೆ ''ದೃಷ್ಟಾಂತನಾದ ನಿಗಡಮುಕ್ತನಲ್ಲಿ ಸಾಧ್ಯವಾದ ಭೇದ, ಸಾಧನವಾದ ಮುಕ್ತತ್ವಗಳು ಇಲ್ಲವಾದ್ದರಿಂದ ಸಾಧ್ಯವೈಕಲ್ಯ - ಸಾಧನವೈಕಲ್ಯಗಳು ಬರುತ್ತವೆ'' ಎಂಬುದಾಗಿ ಶಂಕಿಸಲು ಸಾಧ್ಯವಿಲ್ಲ. ಆದ್ದರಿಂದ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳು ಬರುವುದಿಲ್ಲ.

ಹೀಗೆ 'ಸಂಪ್ರತಿಪನ್ನ'ಶಬ್ದವೇ ನಮಗೆ ಸಾಧ್ಯವೈಕಲ್ಯ-ಸಾಧನವೈಕಲ್ಯ ದೋಷಗಳ ಪರಿಹಾರವನ್ನು ಸೂಚಿಸುತ್ತದೆ.

### ಸಂಪ್ರತಿಪನ್ನಶಬ್ದಪ್ರಯೋಗದಿಂದ ದೃಷ್ಟಾಂತಾಪ್ರಸಿದ್ಧಿದೋಷದ ಪರಿಹಾರಸೂಚನೆ

ಇನ್ನು ಅದೇ ರೀತಿಯಾಗಿ ದೃಷ್ಟಾಂತವನ್ನಾಗಿ ಉದಾಹರಿಸಿರುವ ನಿಗಡಮುಕ್ತನೇ ಅಪ್ರಸಿದ್ಧನಾದ್ದರಿಂದ ನಿಮ್ಮ ಅನುಮಾನಕ್ಕೆ ದೃಷ್ಟಾಂತಾಪ್ರಸಿದ್ಧಿ

ಎಂಬ ದೋಷ ಬರುತ್ತದೆ ಎಂಬುದಾಗಿ ದೃಷ್ಟಾಂತಾಪ್ರಸಿದ್ಧಿದೋಷಶಂಕೆ ಬಂದರೆ, ಅದಕ್ಕೆ ಕೇವಲ 'ಯಥಾ ನಿಗಡಮುಕ್ತಃ' ಎಂದಷ್ಟೇ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ದೃಷ್ಟಾಂತಾಪ್ರಸಿದ್ಧಿದೋಷದ ಪರಿಹಾರವು ಸೂಚಿತ-ವಾಗುವುದಿಲ್ಲ. ಆದರೆ 'ಯಥಾ ಸಂಪ್ರತಿಪನ್ನಃ' ಎಂಬುದಾಗಿ ದೃಷ್ಟಾಂತನಿರ್ದೇಶ ಮಾಡುವುದರಿಂದ ಆ ದೃಷ್ಟಾಂತಾಪ್ರಸಿದ್ಧಿದೋಷದ ಪರಿಹಾರವೂ ಸೂಚಿತವಾಗುತ್ತದೆ.

ಅದು ಹೇಗೆ ? ದೃಷ್ಟಾಂತನಾದ ನಿಗಡಮುಕ್ತನು ಸಂಪ್ರತಿಪನ್ನನಾಗಿದ್ದಾನೆ. (ಸಂಪ್ರತಿಪತ್ತಿಗೆ ವಿಷಯನಾಗಿದ್ದಾನೆ ಸಾಧ್ಯ-ಹೇತುಗಳು ಅಲ್ಲಿ ಇವೆ ಎಂಬುದಾಗಿ ಇಬ್ಬರು ವಾದಿಗಳಿಗೂ ಸಮ್ಮತನಾಗಿದ್ದಾನೆ.) ಅಂದಮೇಲೆ ಅವನು ಅಪ್ರಸಿದ್ಧನಾಗಲೂ ಸಾಧ್ಯವಿಲ್ಲ.

**''ಯದಿ ನಿಗಡಮುಕ್ತ ಏವ ನ ಸ್ಯಾತ್ ತರ್ಹಿ ಆವಯೋಃ ಭಿನ್ನತ್ವ - ಮುಕ್ತತ್ವವತ್ತ್ವೇನ ಸಂಪ್ರತಿಪತ್ತಿಃ ಕುತ್ರ ಸ್ಯಾತ್ ? ಅಸ್ತಿ ಚೇಯಮ್ । ತಸ್ಮಾನ್ನ ದೃಷ್ಟಾಂತಾಪ್ರಸಿದ್ಧಿಃ ।''**

ಒಂದುವೇಳೆ ದೃಷ್ಟಾಂತನಾದ ನಿಗಡಮುಕ್ತನೇ ಅಪ್ರಸಿದ್ಧನಾಗಿದ್ದಾದರೆ ಆಗ ನಮ್ಮಿಬ್ಬರಿಗೆ (ವಾದಿ-ಪ್ರತಿವಾದಿಗಳಿಗೆ) ಭಿನ್ನತ್ವ-ಮುಕ್ತತ್ವಗಳುಳ್ಳದ್ದಾಗಿದೆ ಎಂದು ಸಂಪ್ರತಿಪತ್ತಿಯು ಎಲ್ಲಿ ಆಗಬೇಕು ? (ಯಾವ ವ್ಯಕ್ತಿಯಲ್ಲಿ ಆಗಬೇಕು ?) ಈಗಲಾದರೋ ನಿಗಡಮುಕ್ತನು ಭಿನ್ನತ್ವ-ಮುಕ್ತತ್ವಗಳುಳ್ಳವನಾಗಿದ್ದಾನೆ ಎಂಬುದಾಗಿ ಇಬ್ಬರಿಗೂ ಸಂಪ್ರತಿಪತ್ತಿ ಇದೆ ಎಂದಮೇಲೆ ದೃಷ್ಟಾಂತನಾದ ನಿಗಡಮುಕ್ತನು ಅಪ್ರಸಿದ್ಧನಾಗಿರಲು ಸಾಧ್ಯವಿಲ್ಲ. ಆದ್ದರಿಂದ ದೃಷ್ಟಾಂತಾಪ್ರಸಿದ್ಧಿ-ದೋಷ ಬರುವುದಿಲ್ಲ.

ಈ ರೀತಿಯಾಗಿ 'ಸಂಪ್ರತಿಪನ್ನ'ಶಬ್ದವೇ ನಮಗೆ ದೃಷ್ಟಾಂತಾಪ್ರಸಿದ್ಧಿದೋಷದ ಪರಿಹಾರವನ್ನು ಸೂಚಿಸುತ್ತದೆ.

ಹೀಗೆ ಸಾಧ್ಯವೈಕಲ್ಯ-ಸಾಧನವೈಕಲ್ಯ-ದೃಷ್ಟಾಂತಾಪ್ರಸಿದ್ಧಿ ದೋಷಗಳ ಪರಿಹಾರಸೂಚನೆ ಎಂಬ ಪ್ರಯೋಜನ ಇರುವುದರಿಂದ, 'ಯಥಾ ನಿಗಡಮುಕ್ತಃ' ಎಂದು ದೃಷ್ಟಾಂತನಿರ್ದೇಶ ಮಾಡದೇ 'ಯಥಾ ಸಂಪ್ರತಿಪನ್ನಃ' ಎಂಬುದಾಗಿ ದೃಷ್ಟಾಂತನಿರ್ದೇಶ ಮಾಡಿರುವುದು ಸಾರ್ಥಕವೇ ಆಗಿದೆ ಎಂದು ಭಾವ.

**ಅವತಾರಿಕೆ :-** ಈವರೆಗೆ 'ವಿಮತಃ' 'ಸಂಪ್ರತಿಪನ್ನಃ' ಎಂಬುದಾಗಿ ಪಕ್ಷ-ದೃಷ್ಟಾಂತಗಳ ನಿರ್ದೇಶ ಮಾಡಿದ್ದರ ಅಭಿಪ್ರಾಯವನ್ನು ತಿಳಿಸಿಕೊಟ್ಟು, ಈಗ 'ಭಿನ್ನಃ' ಎಂಬುದಾಗಿ ಸಾಮಾನ್ಯವಾಗಿ ಸಾಧ್ಯನಿರ್ದೇಶ ಮಾಡಿದ್ದರ ಅಭಿಪ್ರಾಯವನ್ನು ತಿಳಿಸಿಕೊಡುತ್ತಾರೆ -

### ಪೂರ್ವೋಕ್ತಾನುಮಾನದಲ್ಲಿ ಸಾಧ್ಯನಿರ್ವಚನ

**ಟೀಕಾಃ ನನ್ವತ್ರ ಭೇದಃ ಕಿಂ ಪರಮಾತ್ಮಪ್ರತಿಯೋಗಿಕಃ ಸಾಧ್ಯಃ ಉತ ಜೀವಪ್ರತಿಯೋಗಿಕಃ ಅಥವಾ ಜಡಪ್ರತಿಯೋಗಿಕಃ ಆಹೋಸ್ವಿತ್ ಸಕಲಪ್ರತಿಯೋಗಿಕಃ । ನಾದ್ಯಃ । ಪರಮಾತ್ಮನಿ ಹೇತೋರನೈಕಾಂತ್ಯಾತ್ । ಸಂಸಾರಾಭಾವಲಕ್ಷಣಮುಕ್ತತ್ವಸ್ಯ ತತ್ರ ಸತ್ವಾತ್ ।**

**ದ್ವಿತೀಯೇಽಪಿ ಸಕಲಜೀವಪ್ರತಿಯೋಗಿಕಃ ಸ್ವವ್ಯತಿರಿಕ್ತಜೀವಪ್ರತಿಯೋಗಿಕೋ ವಾ । ನ ಪ್ರಥಮಃ । ಮುಕ್ತಸ್ಯಾಪಿ ಜೀವತ್ವೇನಾಂಶೇ ಬಾಧಾತ್ । ನ ದ್ವಿತೀಯಃ । ಮುಕ್ತಸ್ಯ ತದ್ಭೇದಸಿದ್ಧ್ಯ ವಿನಾ ತೇಷಾಮೇತದ್ವ್ಯತಿರಿಕ್ತತ್ವಾಸಿದ್ಧ್ಯಾಽಪ್ರಸಿದ್ಧವಿಶೇಷಣತ್ವಾತ್ । ಸಿದ್ಧೌ ಚ ಸಿದ್ಧಸಾಧನತ್ವಾತ್ । ಜೀವಭೇದಸಾಧನಸ್ಯ ಪ್ರಕೃತಾನುಪಯೋಗಿತ್ವೇನಾರ್ಥಾಂತರತ್ವಾಚ್ಚ ।**

**ಏತೇನ ಸಂಸಾರಿಭ್ಯೋ ಭೇದಃ ಸಾಧ್ಯತ ಇತ್ಯಪಿ ಪರಾಸ್ತಮ್ । ಅತ ಏವ ನ ತೃತೀಯಃ । ನಾಪಿ ಚತುರ್ಥಃ । ಪೂರ್ವವದಂಶೇ ಬಾಧಾತ್ । ಅಪ್ರಸಿದ್ಧವಿಶೇಷಣತ್ವಾಚ್ಚ ।**

**ಅನುವಾದ :-** ಇಲ್ಲಿ ಅನುಮಾನದಲ್ಲಿ ಭೇದವನ್ನು ಸಾಧ್ಯ ಮಾಡಿದ್ದೀರಿ. ಭೇದ ಸಾಧ್ಯ ಎಂದರೆ ಯಾವ ಭೇದ ಸಾಧ್ಯ ?

[೧]ಪರಮಾತ್ಮಪ್ರತಿಯೋಗಿಕಭೇದವು ಸಾಧ್ಯವೋ ? ಅಥವಾ [೨]ಜೀವಪ್ರತಿಯೋಗಿಕಭೇದವು ಸಾಧ್ಯವೋ ? ಅಥವಾ [೩]ಜಡಪ್ರತಿಯೋಗಿಕಭೇದವು ಸಾಧ್ಯವೋ ? ಅಥವಾ [೪]ಸಕಲಪ್ರತಿಯೋಗಿಕಭೇದವು ಸಾಧ್ಯವೋ ?

೧ ಮುಕ್ತಾತ್ಮನಲ್ಲಿ ಪರಮಾತ್ಮನಿಂದ ಭೇದವನ್ನು ಸಾಧಿಸುತ್ತೀರೋ ?
೨ ಮುಕ್ತಾತ್ಮನಲ್ಲಿ ಜೀವರಿಂದ ಭೇದವನ್ನು ಸಾಧಿಸುತ್ತೀರೋ ?
೩ ಮುಕ್ತಾತ್ಮನಲ್ಲಿ ಜಡದಿಂದ ಭೇದವನ್ನು ಸಾಧಿಸುತ್ತೀರೋ ?
೪ ಮುಕ್ತಾತ್ಮನಲ್ಲಿ ಸಕಲಪದಾರ್ಥಗಳಿಂದ ಭೇದವನ್ನು ಸಾಧಿಸುತ್ತೀರೋ ?

ಪರಮಾತ್ಮಪ್ರತಿಯೋಗಿಕಭೇದವು ಸಾಧ್ಯ ಎಂಬ ಮೊದಲನೇ ಪಕ್ಷ ಸರಿಯಲ್ಲ. ಏಕೆಂದರೆ ಈ ಪಕ್ಷದಲ್ಲಿ

**''ಮುಕ್ತಃ ಪರಮಾತ್ಮಪ್ರತಿಯೋಗಿಕಭೇದವಾನ್ ಮುಕ್ತತ್ವಾತ್''**

ಎಂದು ಅನುಮಾನ ಮಾಡಿದಂತಾಗುತ್ತದೆ. ಆದರೆ ಹೀಗೆ ಅನುಮಾನ ಮಾಡಿದರೆ ಪರಮಾತ್ಮನಲ್ಲಿಯೇ ವ್ಯಭಿಚಾರ ಬರುತ್ತದೆ. ಕಾರಣ- ತನ್ನ ಭೇದ ತನ್ನಲ್ಲಿ ಇರಲು ಸಾಧ್ಯವಿಲ್ಲವಾದ್ದರಿಂದ ಪರಮಾತ್ಮನಲ್ಲಿ ಪರಮಾತ್ಮ-ಪ್ರತಿಯೋಗಿಕಭೇದ ಎಂಬ ಸಾಧ್ಯ ಇಲ್ಲ. ಆದರೆ [೧]ಸಂಸಾರಾಭಾವ ರೂಪವಾದ ಮುಕ್ತತ್ವ (ಹೇತು) ಇದೆಯಾದ್ದರಿಂದ ವ್ಯಭಿಚಾರ ಬರುತ್ತದೆ.

ಇನ್ನು ಜೀವಪ್ರತಿಯೋಗಿಕಭೇದವು ಸಾಧ್ಯ ಎಂಬ ಎರಡನೇ ಪಕ್ಷದಲ್ಲಿಯೂ ಸಹ ಸಕಲಜೀವಪ್ರತಿಯೋಗಿಕಭೇದವು ಸಾಧ್ಯವೋ ? ಅಥವಾ ಸ್ವವ್ಯತಿರಿಕ್ತ-ಜೀವಪ್ರತಿಯೋಗಿಕಭೇದವು ಸಾಧ್ಯವೋ ?

ಸಕಲಜೀವಪ್ರತಿಯೋಗಿಕಭೇದ ಸಾಧ್ಯ ಎನ್ನುವುದಾದರೆ, ಮುಕ್ತಜೀವನಲ್ಲಿ ಸಕಲಜೀವರ ಭೇದವನ್ನು ಸಾಧಿಸಿದಂತಾಗುತ್ತದೆ. ಆದರೆ ಮುಕ್ತಜೀವನೂ ಒಬ್ಬ ಜೀವನೇ ಆದ್ದರಿಂದ (ಸಕಲಜೀವರಲ್ಲಿ ಮುಕ್ತಜೀವನೂ ಒಬ್ಬ ಸೇರಿದ್ದರಿಂದ) ಮುಕ್ತಜೀವನಲ್ಲಿ ಇತರಜೀವರ ಭೇದವನ್ನು ಸಾಧಿಸಬಹುದಾದರೂ ಅವನಲ್ಲಿ ಅವನ ಭೇದವನ್ನೇ ಸಾಧಿಸಲು ಬರುವುದಿಲ್ಲವಾದ್ದರಿಂದ ಅರ್ಥಾತ್ ಮುಕ್ತಜೀವನಲ್ಲಿ ಮುಕ್ತಜೀವನ ಭೇದವು ಬಾಧಿತವಾಗುವುದರಿಂದ (ಅಂಶೇ ಬಾಧ ಬರುವುದರಿಂದ) ಮುಕ್ತಜೀವನಲ್ಲಿ ಸಕಲಜೀವಪ್ರತಿಯೋಗಿಕಭೇದವನ್ನು ಸಾಧಿಸುವುದು ಸರಿಯಲ್ಲ.

---

೧ ಮುಕ್ತತ್ವ ಹೇತು ಸಂಸಾರದಿಂದ ಮುಕ್ತನಾದವನಲ್ಲಿಯೂ ಇದೆ, ಪರಮಾತ್ಮನಲ್ಲಿಯೂ ಇದೆ. ಹೇಗೆಂದರೆ- ಮುಕ್ತತ್ವ ಎಂದರೆ ಸಂಸಾರಾಭಾವ. (ಪ್ರಧ್ವಂಸ - ಅತ್ಯಂತಾಭಾವ ಎರಡರಲ್ಲಿಯೂ ಸಾಧಾರಣವಾದ ಅಭಾವ ವಿವಕ್ಷಿತ.) ಪರಮಾತ್ಮನಲ್ಲಿ ಸಂಸಾರ ಇಲ್ಲ ಎಂದರೆ, ಪರಮಾತ್ಮನಲ್ಲಿ ಸಂಸಾರಸಂಬಂಧ ಇಲ್ಲವೇ ಇಲ್ಲ. (ಪರಮಾತ್ಮನಿಗೆ ಸಂಸಾರಸಂಬಂಧ ಯಾವ ಕಾಲದಲ್ಲಿಯೂ ಇಲ್ಲ) ಎಂದರ್ಥವಾದರೆ, ಮುಕ್ತನಲ್ಲಿ ಸಂಸಾರ ಇಲ್ಲ ಎಂದರೆ, ಮುಕ್ತನಿಗೆ ಸಂಸಾರಸಂಬಂಧ ಹಿಂದೆ ಇತ್ತಾದ್ದರಿಂದ ಮುಕ್ತನಿಗೆ ಸಂಸಾರಸಂಬಂಧ ಈಗ ಇಲ್ಲ ಎಂದರ್ಥ. ಅರ್ಥಾತ್ ಪರಮಾತ್ಮನಲ್ಲಿ ಮುಕ್ತತ್ವವು ಸಂಸಾರಸಂಬಂಧಅತ್ಯಂತಾಭಾವರೂಪವಾದರೆ, ಮುಕ್ತನಲ್ಲಿ ಮುಕ್ತತ್ವವು ಸಂಸಾರಸಂಬಂಧಧ್ವಂಸರೂಪವಾಗಿದೆ ಎಂದು ಅಭಿಪ್ರಾಯ.

ಸ್ವವ್ಯತಿರಿಕ್ತಜೀವಪ್ರತಿಯೋಗಿಕಭೇದ ಸಾಧ್ಯ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ- ಮುಕ್ತನಿಗೆ ಇತರಜೀವರಿಂದ ಭೇದ ಸಿದ್ಧವಾಗದ ಹೊರತು ಇತರಜೀವರಿಗೆ ಮುಕ್ತನಿಂದ ಭೇದ ಸಿದ್ಧವಾಗದ ಕಾರಣ, ಸ್ವವ್ಯತಿರಿಕ್ತತ್ವ ವಿಶೇಷಣವೇ ಅಸಿದ್ಧವಾದ್ದರಿಂದ ತದ್ವಿಶಿಷ್ಟವಾದ ಸ್ವವ್ಯತಿರಿಕ್ತಜೀವ-ಪ್ರತಿಯೋಗಿಕಭೇದ ಎಂಬ ಸಾಧ್ಯವು ಅಪ್ರಸಿದ್ಧವಾಗಿದೆಯಾದ್ದರಿಂದ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ. ಅಥವಾ ಮುಕ್ತನಿಗೆ ಇತರಜೀವಭೇದವಾಗಲೀ ಇತರಜೀವರಿಗೆ ಮುಕ್ತನಿಂದ ಭೇದವಾಗಲೀ ಸಿದ್ಧವಾಗಿದೆ ಎಂದರೆ, ಸಿದ್ಧವಾದ ಮುಕ್ತ-ಇತರಜೀವಭೇದವನ್ನೇ ಸಾಧಿಸಿದಂತಾಗುವುದರಿಂದ ಸಿದ್ಧಸಾಧನತಾ ಬರುತ್ತದೆ.

ಮತ್ತು ''ಮುಕ್ತಸ್ತು ನ ಕೇನಾಪಿ ನಿಯತಃ'' ಇತ್ಯಾದಿಯಾಗಿ ಮುಕ್ತ-ಈಶ್ವರರಲ್ಲಿ ಭೇದವಿಲ್ಲ ಎಂದು ಶಂಕಿತವಾದ್ದರಿಂದ ಮುಕ್ತ-ಪರಮಾತ್ಮರ ಭೇದವನ್ನು ಸಾಧಿಸುವುದು ಪ್ರಕೃತಕ್ಕೆ ಉಪಯುಕ್ತವೇ ಹೊರತು ಜೀವಭೇದವನ್ನು (ಮುಕ್ತಜೀವನಿಗೂ ಇತರಜೀವರಿಗೂ ಭೇದವನ್ನು) ಸಾಧಿಸುವುದು ಪ್ರಕೃತಕ್ಕೆ ಅನುಪಯುಕ್ತವಾದ್ದರಿಂದ ಅರ್ಥಾತ್ ಉದ್ದೇಶ್ಯವಾದ ಮುಕ್ತ-ಪರಮಾತ್ಮಭೇದವು ಸಿದ್ಧವಾಗದೇ ಜೀವ-ಜೀವಭೇದ ಎಂಬ ಸಾಧ್ಯ ಪರ್ಯವಸಾನ ಆಗುವುದರಿಂದ ಅರ್ಥಾಂತರತಾ ದೋಷವೂ ಬರುತ್ತದೆ.

ಪ್ರಕೃತಕ್ಕೆ ಅನುಪಯೋಗಿಯಾಗಿದೆ ಎಂಬ ಕಾರಣಕ್ಕೇನೇ ಮುಕ್ತನಿಗೆ ಸಂಸಾರಿಗಳಿಂದ ಭೇದವನ್ನು ಸಾಧಿಸುತ್ತೇವೆ ಎಂಬ ಹೊಸಪಕ್ಷವೂ ನಿರಾಕೃತವಾದಂತೆಯೇ. (ಮುಕ್ತ-ಪರಮಾತ್ಮರ ಭೇದವನ್ನು ಸಾಧಿಸುವುದು ಪ್ರಕೃತಕ್ಕೆ ಉಪಯುಕ್ತವೇ ಹೊರತು ಮುಕ್ತನಿಗೂ ಸಂಸಾರಿಗಳಿಗೂ ಭೇದವನ್ನು ಸಾಧಿಸುವುದು ಪ್ರಕೃತಕ್ಕೆ ಅನುಪಯುಕ್ತ. ಆದ್ದರಿಂದ ಮುಕ್ತ-ಸಂಸಾರಿಭೇದ ಸಾಧ್ಯ ಎಂಬ ಹೊಸಪಕ್ಷವೂ ಸರಿಯಲ್ಲ ಎಂದು ಭಾವ.)

ಪ್ರಕೃತಕ್ಕೆ ಅನುಪಯೋಗಿಯಾಗಿದೆ ಎಂಬ ಅದೇ ಕಾರಣಕ್ಕೇನೇ ಜಡಪ್ರತಿಯೋಗಿಕಭೇದ ಸಾಧ್ಯ ಎಂಬ ಮೂರನೇ ಪಕ್ಷವೂ ಸಮಂಜಸವಲ್ಲ. ಮುಕ್ತ-ಪರಮಾತ್ಮರಿಗೆ ಭೇದವನ್ನು ಸಾಧಿಸುವುದು ಪ್ರಕೃತಕ್ಕೆ ಉಪಯೋಗಿಯೇ ಹೊರತು ಮುಕ್ತರಿಗೆ ಜಡಗಳಿಂದ ಭೇದವನ್ನು ಸಾಧಿಸುವುದು ಪ್ರಕೃತಕ್ಕೆ ಅನುಪಯೋಗಿಯಾಗಿದೆ. ಆದ್ದರಿಂದ ಜಡಪ್ರತಿಯೋಗಿಕಭೇದ ಸಾಧ್ಯ ಎಂಬ ಮೂರನೇ ಪಕ್ಷವೂ ಸಮಂಜಸವಲ್ಲ.

ಕೊನೆಯದಾಗಿ ಸಕಲಪ್ರತಿಯೋಗಿಕಭೇದ ಸಾಧ್ಯ ಎಂಬ ನಾಲ್ಕನೇ ಪಕ್ಷವೂ ಸಮಂಜಸವಲ್ಲ. ಏಕೆಂದರೆ ಮುಕ್ತನಲ್ಲಿ ಸಕಲಪ್ರತಿಯೋಗಿಕಭೇದವನ್ನು ಸಾಧಿಸಿದರೆ, ಸಕಲಪದಾರ್ಥಗಳಲ್ಲಿ ಮುಕ್ತನೂ ಸೇರಿದ್ದರಿಂದ, ಮುಕ್ತನಲ್ಲಿ ಇತರ ವಸ್ತುಗಳ ಭೇದ ಸಾಧಿಸಲು ಯೋಗ್ಯವಾದರೂ, ಮುಕ್ತನಲ್ಲಿ ಮುಕ್ತನ ಭೇದ ಬಾಧಿತವಾಗುವುದರಿಂದ ಸಾಧಿಸಲು ಯೋಗ್ಯವಲ್ಲ. ಅರ್ಥಾತ್ ಅಂಶೇ ಬಾಧ ಬರುತ್ತದೆ.

ಹಾಗಲ್ಲ, ಸಕಲಪ್ರತಿಯೋಗಿಕಭೇದ ಎಂದರೆ, ಸ್ವವ್ಯತಿರಿಕ್ತಸಕಲಪ್ರತಿಯೋಗಿಕ-ಭೇದ ಎಂದು ಹೇಳುತ್ತೇವೆ. ಮುಕ್ತನಲ್ಲಿ ಸ್ವವ್ಯತಿರಿಕ್ತಸಕಲಪ್ರತಿಯೋಗಿಕಭೇದವು ಸಂಭಾವಿತವೇ ಆದ್ದರಿಂದ ಬಾಧ ಬರುವುದಿಲ್ಲ ಎಂದರೆ, ಹೀಗೆ ಹೇಳಿದಾಗ ಬಾಧ ಬರದಿದ್ದರೂ ಅಪ್ರಸಿದ್ಧವಿಶೇಷಣತಾ ಬರುತ್ತದೆ. ಹೇಗೆಂದರೆ ಮುಕ್ತನಿಗೆ ಇತರವಸ್ತುಗಳಿಂದ ಭೇದ ಸಿದ್ಧವಾಗದ ಹೊರತು ಇತರವಸ್ತುಗಳಿಗೆ ಮುಕ್ತನಿಂದ ಭೇದ ಸಿದ್ಧವಾಗದ ಕಾರಣ, ಸ್ವವ್ಯತಿರಿಕ್ತತ್ವವಿಶೇಷಣವೇ ಅಸಿದ್ಧವಾದ್ದರಿಂದ ತದ್ವಿಶಿಷ್ಟವಾದ ಸ್ವವ್ಯತಿರಿಕ್ತಸಕಲಪ್ರತಿಯೋಗಿಕಭೇದ ಎಂಬ ಸಾಧ್ಯವು ಅಪ್ರಸಿದ್ಧವಾಗಿದೆಯಾದ್ದರಿಂದ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ.

ಹೀಗಾಗಿ ಅಂಶೇ ಬಾಧ ಹಾಗೂ ಅಪ್ರಸಿದ್ಧವಿಶೇಷಣತಾ ದೋಷಗಳು ಬರುವುದರಿಂದ ಸಕಲಪ್ರತಿಯೋಗಿಕಭೇದ ಸಾಧ್ಯ ಎಂಬ ನಾಲ್ಕನೇ ಪಕ್ಷವೂ ಸರಿಯಲ್ಲ.

ಅಂದಮೇಲೆ ಪರಮಾತ್ಮಪ್ರತಿಯೋಗಿಕಭೇದ, ಜೀವಪ್ರತಿಯೋಗಿಕಭೇದ, ಜಡಪ್ರತಿಯೋಗಿಕಭೇದ, ಸಕಲಪ್ರತಿಯೋಗಿಕಭೇದ ಎಂಬ ನಾಲ್ಕೂ ಪಕ್ಷಗಳು ಅನುಪಪನ್ನವಾಗುವುದರಿಂದ ಯಾವ ಭೇದವನ್ನು ಸಾಧ್ಯವನ್ನಾಗಿ ಮಾಡುತ್ತೀರಿ?

**ಟೀಕಾ: ಮೈವಮ್। ಅವಿವಕ್ಷಿತಪ್ರತಿಯೋಗಿವಿಶೇಷಭೇದಸ್ಯ ಸಾಧ್ಯತ್ವಾತ್। ನ ಚೈವಮರ್ಥಾಂತರತಾ । ಮುಕ್ತಸ್ಯ ಭೇದಮಾತ್ರಾನಂಗೀ-ಕಾರೇಣಾಕ್ಷಿಪಂತಂ ಪ್ರತಿ ತತ್ಸಾಧನಸ್ಯ ಸಂಗತತ್ವಾತ್ । ಈಶ್ವರಾ-ದ್ಭೇದಸ್ತ್ವಾಗಮಾದಿನಾ ಸಾಧಯಿಷ್ಯತೇ।**

**ಅಥವಾ ಪ್ರಾಗವಸ್ಥಾಯಾಂ ಯೇನ ಭೇದೇನ ವಿಶಿಷ್ಟಃ ತೇನೈವ ಮೋಕ್ಷೇऽಪೀತ್ಯಯಮತ್ರಾರ್ಥೋ ವಿವಕ್ಷಿತ ಇತಿ ನ ಕಶ್ಚಿದ್ದೋಷಃ।**

**ಅನುವಾದ :-** ಈ ವಿಧವಾದ ಶಂಕೆ ಸರಿಯಲ್ಲ. ಏಕೆಂದರೆ 'ಇಂತಹವರಿಂದ ಭೇದ' 'ಅಂತಹವರಿಂದ ಭೇದ' ಎಂಬುದಾಗಿ ಪ್ರತಿಯೋಗಿವಿಶೇಷವನ್ನು [೧]ವಿವಕ್ಷಿಸದೇ ಭೇದಮಾತ್ರವನ್ನು (ಕೇವಲ ಭೇದವನ್ನು) ಸಾಧ್ಯವನ್ನಾಗಿ ಮಾಡಿದ್ದೇವೆ.

ಹೀಗಾಗಿ ಹಿಂದೆ ನಾಲ್ಕು ಪಕ್ಷಗಳಲ್ಲಿ ಹೇಳಿದ ಯಾವ ದೋಷವೂ ನಮಗೆ ಬರುವುದಿಲ್ಲ.

ಹಾಗಾದರೆ ಅರ್ಥಾಂತರತಾ ಬರುತ್ತದೆಯಲ್ಲವೇ ? ಮುಕ್ತ-ಈಶ್ವರರ ಭೇದ ಶಂಕಿತವಾಗಿ ಪ್ರಸಕ್ತವಾಗಿದ್ದರಿಂದ ಅದನ್ನು ಸಾಧಿಸುವುದು ಬಿಟ್ಟು ಕೇವಲ ಭೇದವನ್ನು ಸಾಧಿಸಿದರೆ (ಉದ್ದೇಶ್ಯಸಿದ್ಧವಾಗದೇ ಸಾಧ್ಯಪರ್ಯವಸಾನ ಆಗುವುದರಿಂದ) ಅರ್ಥಾಂತರತಾ ಬರುತ್ತದೆಯಲ್ಲ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಯಾಕೆಂದರೆ- ''ನ ಚ ಮುಕ್ತಸ್ಯ ಕುತೋಽಪಿ ಭೇದೋಽಸ್ತಿ'' ಮುಕ್ತನಲ್ಲಿ ಯಾವ ಕಾರಣಕ್ಕೂ ಭೇದವೇ ಇಲ್ಲ ಎಂದು ಭೇದಮಾತ್ರವನ್ನೇ ಅಂಗೀಕರಿಸಿದೇ ಆಕ್ಷೇಪ ಮಾಡುತ್ತಿರುವ ಪ್ರತಿವಾದಿಗಳನ್ನು ಕುರಿತು ಭೇದಮಾತ್ರವನ್ನು (ಭೇದ ಇದೆ ಎಂಬುದನ್ನು) ಸಾಧಿಸುವುದು ಸಂಗತವೇ ಆಗಿದೆ.

ಅರ್ಥಾತ್ 'ಮುಕ್ತನಲ್ಲಿ ಭೇದ ಇದೆ' ಎಂದು ಸಾಧನ ಮಾಡುವುದೇ ನಮ್ಮ ಉದ್ದೇಶ್ಯವಾದ್ದರಿಂದ, ಉದ್ದೇಶ್ಯ ಸಿದ್ಧವಾಗುವ ಕಾರಣ ಅರ್ಥಾಂತರತಾಕ್ಕೆ ಅವಕಾಶವಿಲ್ಲ ಎಂದು ಭಾವ.

ಹಾಗಾದರೆ ಮುಕ್ತನಲ್ಲಿ ಭೇದ ಇದೆ ಎಂದಷ್ಟೇ ಸಿದ್ಧವಾಗುತ್ತದೆ. ಪರಮಾತ್ಮನಿಂದ ಭೇದ ಸಿದ್ಧವಾಗುವುದಿಲ್ಲವಲ್ಲ ? ಎಂಬ ಶಂಕೆ ಬೇಡ. ಕಾರಣ

**'ತಾನ್ಯಹಂ ವೇದ ಸರ್ವಾಣಿ'** ಇತ್ಯಾದಿ ಮುಂದೆ ಹೇಳಲಿರುವ ಆಗಮದಿಂದ ಹಾಗೂ **'ತತ ಏವಾಭ್ರಾಂತತ್ವಾನ್ನ ಮುಕ್ತಸ್ಯಾಪಿ ಭೇದನಿವೃತ್ತಿಃ'** ಎಂಬ ವಾಕ್ಯದಿಂದ ಮುಂದೆ ಹೇಳಲಿರುವ ಬೇರೆ ಅನುಮಾನ, ಭೇದಪ್ರತ್ಯಕ್ಷಗಳಿಂದಲೂ ಸಹ ಮುಕ್ತನಿಗೆ ಪರಮಾತ್ಮನಿಂದ ಭೇದವನ್ನು ಮುಂದೆ ಸಾಧಿಸುವವರಿದ್ದೇವೆ.

---

೧. ಅನ್ವುವುದಕ್ಕಾಗಿಯೇ 'ವಿಮತೋ ಭಿನ್ನಃ' ಎಂಬುದಾಗಿ ಸಾಮಾನ್ಯವಾಗಿ ಹೇಳಿದ್ದೇವೆ. ಹಾಗೆ ಪ್ರತಿಯೋಗಿವಿಶೇಷವನ್ನು ವಿವಕ್ಷಿಸಿದ್ದೇ ಆದರೆ 'ಅಸ್ಮಾತ್ ಭಿನ್ನಃ' ಎಂಬುದಾಗಿ ವಿಶೇಷನಿರ್ದೇಶ ಮಾಡುತ್ತಿದ್ದೆವು ಎಂದು ಭಾವ.

ಆದ್ದರಿಂದ ಪ್ರತಿಯೋಗಿವಿಶೇಷವನ್ನು ವಿವಕ್ಷಿಸದೇ ಭೇದಮಾತ್ರವನ್ನು ಸಾಧ್ಯವನ್ನಾಗಿ ಮಾಡಿದ್ದೇವೆ. ಹೀಗಾಗಿ ಹಿಂದೆ ನಾಲ್ಕು ಪಕ್ಷಗಳಲ್ಲಿ ಹೇಳಿದ ಯಾವ ದೋಷವೂ ಬರುವುದಿಲ್ಲ ಎಂದು ಅಭಿಪ್ರಾಯ.

ಅಥವಾ ಮುಕ್ತನು ಮೊದಲು ಸಂಸಾರಾವಸ್ಥೆಯಲ್ಲಿ ಯಾವ ಭೇದದಿಂದ ವಿಶಿಷ್ಟನಾಗಿದ್ದನೋ ಈಗ ಮೋಕ್ಷದಲ್ಲಿಯೂ ಸಹ ಅದೇ ಭೇದದಿಂದಲೇ ವಿಶಿಷ್ಟನಾಗಿದ್ದಾನೆ ಎಂಬ ಅರ್ಥ ಇಲ್ಲಿ ವಿವಕ್ಷಿತವಾಗಿದೆ.

ಪರರ ಮತದಲ್ಲಿ ಸಂಸಾರದಶಾದಲ್ಲಿನ ಭೇದವು ಮಾಯಾ ಮುಂತಾದ ಉಪಾಧಿಕೃತವಾದ ಭೇದವಾಗಿದ್ದರೂ ಸಹ, ಎಲ್ಲ ಉಪಾಧಿಗಳೂ ನಾಶ ಹೊಂದುವ ಮೋಕ್ಷದಲ್ಲಿಯೂ ಆ ಭೇದ ಇರುತ್ತದೆ ಎಂದು ಸಾಧಿಸಿದರೆ ಮೋಕ್ಷದಲ್ಲಿ ಸಾಧ್ಯವಾದ ಭೇದ ಅದು ಪಾರಮಾರ್ಥಿಕಭೇದವೇ ಆಗುತ್ತದೆ. ಮುಕ್ತ-ಪರಮಾತ್ಮರಲ್ಲಿ ಪಾರಮಾರ್ಥಿಕಭೇದವನ್ನೇ ಸಾಧಿಸಿದಂತಾಗುತ್ತದೆ. ಆದ್ದರಿಂದ ಯಾವುದೇ ವಿಧವಾದ ದೋಷಕ್ಕೆ ಅವಕಾಶವಿಲ್ಲ ಎಂದು ಭಾವ.

**ಅವತಾರಿಕೆ :-** 'ವಿಮತಃ' ಎಂದು ನಿರ್ದೇಶ ಮಾಡುವುದಕ್ಕೆ ಅಪ್ರಸಿದ್ಧ-ವಿಶೇಷ್ಯತ್ವಾದಿ ದೋಷಗಳ ಪರಿಹಾರಸೂಚನೆ ಎಂಬ ಪ್ರಯೋಜನವನ್ನು ಹೇಳಿ, ಪ್ರಕೃತ ಅದಕ್ಕೆ ಮತ್ತೊಂದು ಪ್ರಯೋಜನವನ್ನು ಹೇಳಲು ಶಂಕೆ ಮಾಡಿಕೊಳ್ಳುತ್ತಾರೆ.

### ಪೂರ್ವೋಕ್ತಾನುಮಾನದಲ್ಲಿ ಪರಮಾತ್ಮನು ಪಕ್ಷನಾಗುವುದಾದರೆ ಅನುಪಪತ್ತಿ, ಅದರ ನಿರಾಕರಣೆ

**ಟೀಕಾ: ನನು ಚಾತ್ರ ಪರಮಾತ್ಮಾ ಪಕ್ಷಃ ಸಪಕ್ಷೋ ವಿಪಕ್ಷೋ ವಾ ? ನಾದ್ಯಃ। ಪರೇಣ ಮುಕ್ತಪರಮಾತ್ಮಭೇದಸ್ಯಾನಂಗೀಕೃತತ್ವೇನ ದ್ವಯೋಃ ಪಕ್ಷೀಕರಣಾಸಂಭವಾತ್ । ಅಂಗೀಕೃತತ್ವೇ ಚಾನುಮಾನ-ವೈಯರ್ಥ್ಯಾತ್ । ನ ದ್ವಿತೀಯಃ। ತತ್ರ ಪರಸ್ಯ ಸಾಧ್ಯಾಸಂಮತೇಃ। ನ ತೃತೀಯಃ। ಭೇದಾಭಾವಸ್ಯ ವಾದಿನಾ ಕ್ವಾಪ್ಯನಭ್ಯುಪಗತತ್ವಾತ್।**

**ಮೈವಮ್ । ಪಕ್ಷತ್ವೇಽಪಿ ಪರಮಾತ್ಮನಃ ಮುಕ್ತಪರಮಾತ್ಮಾನೌ ಭಿನ್ನಾವಿತ್ಯಪಕ್ಷೀಕರಣಾತ್ । ಅತ ಏವ ಚ ವಿಮತೋ ಭಿನ್ನ ಇತಿ ವಿಮತಿವಿಷಯೋ ಯಾವಾನಿತಿ ಸಾಮಾನ್ಯೇನೋಕ್ತಮ್ ।**

**ಅನುವಾದ:-** 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬ ಈ ಅನುಮಾನದಲ್ಲಿ ಪರಮಾತ್ಮನು ಪಕ್ಷನಾಗಿದ್ದಾನೆಯೋ ? ಸಪಕ್ಷನಾಗಿದ್ದಾನೆಯೋ ? ವಿಪಕ್ಷನಾಗಿದ್ದಾನೆಯೋ ?

ಪಕ್ಷನಾಗಿದ್ದಾನೆ ಎನ್ನಲು ಬರುವುದಿಲ್ಲ. ಕಾರಣ- ಮುಕ್ತಾತ್ಮನು ಈಗಾಗಲೇ ಪಕ್ಷನಾಗಿದ್ದಾನೆ. ಜೊತೆಗೆ ಪರಮಾತ್ಮನೂ ಪಕ್ಷನಾಗುವುದಾದರೆ '**ಮುಕ್ತ-ಪರಮಾತ್ಮಾನೌ ಭಿನ್ನೌ**' ಎಂಬುದಾಗಿ ಪ್ರತಿಜ್ಞೆ ಮಾಡಬೇಕಾಗುತ್ತದೆ. 'ಮುಕ್ತ-ಪರಮಾತ್ಮಾನೌ' ಎಂಬುದಾಗಿ ಮುಕ್ತ-ಪರಮಾತ್ಮ ಇಬ್ಬರನ್ನೂ ಪಕ್ಷ ಮಾಡುವುದಾದರೆ, ಮುಕ್ತ-ಪರಮಾತ್ಮ ಇಬ್ಬರಲ್ಲಿಯೂ ಭೇದವನ್ನು ಹೇಳಿದಂತಾಗುತ್ತದೆ. ಆದರೆ ಮುಕ್ತ-ಪರಮಾತ್ಮ ಇಬ್ಬರಲ್ಲಿಯೂ ಭೇದವನ್ನು ಅಂಗೀಕರಿಸಿಲ್ಲವಾದ್ದರಿಂದ ಇಬ್ಬರನ್ನೂ ಪಕ್ಷ ಮಾಡಲು ಬರುವುದಿಲ್ಲ. ಒಂದುವೇಳೆ ಮುಕ್ತ-ಪರಮಾತ್ಮ ಇಬ್ಬರಲ್ಲಿಯೂ ಭೇದವನ್ನು ಅಂಗೀಕರಿಸುವುದಾದರೆ, ಮುಕ್ತ-ಪರಮಾತ್ಮರಲ್ಲಿ ಭೇದವನ್ನು ಸಾಧಿಸುವುದಕ್ಕಾಗಿಯೇ ಅನುಮಾನ ಹೊರಟಿದ್ದರಿಂದ, ಅನುಮಾನಕ್ಕಿಂತ ಮೊದಲೇ ಭೇದ ಅಂಗೀಕೃತವಾಗುವ ಕಾರಣ ಅನುಮಾನ ವ್ಯರ್ಥವಾಗಬೇಕಾಗುತ್ತದೆ. ಆದ್ದರಿಂದ ಪರಮಾತ್ಮನನ್ನು ಪಕ್ಷ ಮಾಡಲು ಬರುವುದಿಲ್ಲ.

ಇನ್ನು ಪರಮಾತ್ಮ ಸಪಕ್ಷನಾಗಿದ್ದಾನೆ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಕಾರಣ- 'ನಿಶ್ಚಿತಸಾಧ್ಯವಾನ್ ಸಪಕ್ಷಃ' ಎಂದು ಹೇಳಿದಂತೆ ಸಪಕ್ಷವಾಗಬೇಕಾದರೆ ಸಾಧ್ಯನಿಶ್ಚಯ ಅಲ್ಲಿರಬೇಕು. ಆದರೆ ಪರಮಾತ್ಮನಲ್ಲಿ ಸಾಧ್ಯವಾದ ಭೇದವನ್ನು ಪರರು ಅಂಗೀಕರಿಸಿಲ್ಲವಾದ್ದರಿಂದ (ಪರರೀತ್ಯಾ ಅಲ್ಲಿ ಸಾಧ್ಯನಿಶ್ಚಯ ಇಲ್ಲವಾದ್ದರಿಂದ) ಪರಮಾತ್ಮ ಸಪಕ್ಷನಾಗಲು ಸಾಧ್ಯವಿಲ್ಲ.

ಕೊನೆಯದಾಗಿ ಪರಮಾತ್ಮನನ್ನು ವಿಪಕ್ಷ ಎನ್ನಲೂ ಬರುವುದಿಲ್ಲ. ಏಕೆಂದರೆ 'ನಿಶ್ಚಿತಸಾಧ್ಯಾಭಾವವಾನ್ ವಿಪಕ್ಷಃ' ಎಂದು ಹೇಳಿದಂತೆ ಎಲ್ಲಿ ಸಾಧ್ಯಾಭಾವ ನಿಶ್ಚಿತವಾಗಿರುತ್ತದೆಯೋ ಅದು ವಿಪಕ್ಷ. ಪರಮಾತ್ಮ ವಿಪಕ್ಷನಾಗಬೇಕಾದರೆ, ಪರಮಾತ್ಮನಲ್ಲಿ ಸಾಧ್ಯಾಭಾವ ಅಂದರೆ ಭೇದಾಭಾವ ನಿಶ್ಚಿತವಾಗಿರಬೇಕು. ಆದರೆ ಮಾಯಾವಾದಿಗಳು ಭೇದಾಭಾವವನ್ನು ಅಂಗೀಕರಿಸಿದರೂ ಕೂಡ, ಭೇದವನ್ನು ಸಾಧಿಸಲು ಹೊರಟಿರುವ ನೀವು (ವಾದಿಗಳು) ಭೇದವನ್ನು ಕೇವಲಾನ್ವಯಿ ಎಂದು ಅಂಗೀಕರಿಸಿರುವುದರಿಂದ ಭೇದಸಾಮಾನ್ಯಾಭಾವವನ್ನು

ಎಲ್ಲಿಯೂ ಅಂಗೀಕರಿಸಿಲ್ಲ. ಅಂತೆಯೇ ಪರಮಾತ್ಮನಲ್ಲಿಯೂ ಭೇದಾಭಾವ ಅಂಗೀಕೃತವಾಗಿಲ್ಲ. ಹಾಗಾಗಿ ಪರಮಾತ್ಮನಲ್ಲಿ ಸಾಧ್ಯಾಭಾವ ನಿಶ್ಚಿತವಾಗಿಲ್ಲ-ವಾದ್ದರಿಂದ ಪರಮಾತ್ಮ ವಿಪಕ್ಷನಾಗಲೂ ಸಾಧ್ಯವಿಲ್ಲ.

ಆದ್ದರಿಂದ ಪರಮಾತ್ಮ ಪಕ್ಷನಲ್ಲ, ಸಪಕ್ಷನೂ ಅಲ್ಲ, ವಿಪಕ್ಷನೂ ಅಲ್ಲ ಎಂದರೆ ಅವನ ಸ್ಥಾನ ಏನು ?

ಈ ರೀತಿಯಾಗಿ ಶಂಕೆ ಮಾಡಿದರೆ, ಅದು ಸರಿಯಲ್ಲ. ಯಾಕೆಂದರೆ ಪರಮಾತ್ಮನನ್ನು ಪಕ್ಷದಲ್ಲಿಯೇ ಸೇರಿಸುತ್ತೇವೆ. ಪರಮಾತ್ಮನನ್ನು ಪಕ್ಷದಲ್ಲಿಯೇ ಸೇರಿಸಿದರೂ ಸಹ 'ಮುಕ್ತಪರಮಾತ್ಮಾನೌ' ಎಂಬುದಾಗಿ ದ್ವಿವಚನಾಂತವಾದ ಪದವನ್ನು ಇಟ್ಟು ಪಕ್ಷನಿರ್ದೇಶ ಮಾಡುವುದಿಲ್ಲ.

ಪರಂತು 'ವಿಮತೋ ಭಿನ್ನಃ...' ಎಂಬುದಾಗಿ ಸಾಮಾನ್ಯವಾಗಿ ವಿಮತಶಬ್ದವನ್ನು ಪ್ರಯೋಗಿಸುವ ಮೂಲಕವಾಗಿಯೇ ಪರಮಾತ್ಮನನ್ನೂ ಪಕ್ಷಕೋಟಿಪ್ರವಿಷ್ಟನಾಗುವಂತೆ ಮಾಡುತ್ತೇವೆ. ಅಂದರೆ - ಇಲ್ಲಿ 'ವಿಮತಃ' ಎಂದು ಸಾಮಾನ್ಯವಾಗಿ ಪಕ್ಷನಿರ್ದೇಶ. ಹೀಗಾಗಿ 'ಭಿನ್ನೋ ವಾ ಅಭಿನ್ನೋ ವಾ' ಎಂಬ ಸಂಶಯಕ್ಕೆ ಯಾವುದು ಯಾವುದು ವಿಷಯವಾಗುತ್ತದೆಯೋ ಅದೆಲ್ಲವೂ ಪಕ್ಷವೇ ಆಗುತ್ತದೆ. 'ಭಿನ್ನನೋ ಅಭಿನ್ನನೋ' ಎಂಬ ಸಂಶಯಕ್ಕೆ ಮುಕ್ತನು ವಿಷಯನಾದಂತೆ, ಪರಮಾತ್ಮನೂ ವಿಷಯನೇ ಆಗಿದ್ದಾನೆ. (ಮುಕ್ತನು ಪರಮಾತ್ಮನಿಂದ ಭಿನ್ನನೋ ಅಭಿನ್ನನೋ ಎಂದು ಸಂಶಯ ಬಂದರೆ, ಪರಮಾತ್ಮನು ಮುಕ್ತನಿಂದ ಭಿನ್ನನೋ ಅಭಿನ್ನನೋ ಎಂದು ಸಂಶಯ ಬಂದಂತೆಯೇ. ಹೀಗಾಗಿ ಭಿನ್ನನೋ ಅಭಿನ್ನನೋ ಎಂಬ ಸಂಶಯಕ್ಕೆ ಮುಕ್ತನು ವಿಷಯನಾದಂತೆ ಪರಮಾತ್ಮನೂ ವಿಷಯನಾದಂತೆಯೇ.) ಆದ್ದರಿಂದ ವಿಮತನಾದ ಮುಕ್ತನು ಪಕ್ಷನಾಗಿರುವಂತೆ, ವಿಮತನಾದ ಪರಮಾತ್ಮನೂ ಪಕ್ಷಕೋಟಿಯಲ್ಲಿಯೇ ಸೇರುತ್ತಾನೆ. ಹೀಗಾಗಿ ಅನುಮಾನವೈಯರ್ಥ್ಯ ಮೊದಲಾದ ಯಾವ ದೋಷಕ್ಕೂ ಅವಕಾಶವಿಲ್ಲ ಎಂದು ಭಾವ.

**ಅವತಾರಿಕೆ :-** ಈ ರೀತಿಯಾಗಿ ಶಂಕಾ-ಸಮಾಧಾನಗಳಿಂದ ಪ್ರತಿಜ್ಞೆಯ (ಪಕ್ಷ-ಸಾಧ್ಯಗಳ) ಪರಿಷ್ಕಾರವನ್ನು ಮಾಡಿ, ಪ್ರಕೃತ ಶಂಕಾಪೂರ್ವಕವಾಗಿ ಹೇತುವಿನ (ಮುಕ್ತತ್ವದ) ಪರಿಷ್ಕಾರವನ್ನು ಮಾಡುತ್ತಾರೆ -

## ಪೂರ್ವೋಕ್ತಾನುಮಾನದಲ್ಲಿ ಹೇತುಪರಿಷ್ಕಾರ

**ಟೀಕಾಃ ನನು ಮುಕ್ತತ್ವಂ ಸಂಸಾರಪ್ರಧ್ವಂಸೋ ವಾ ತತ್ಸಂಸರ್ಗಾಭಾವೋ ವಾ । ನಾದ್ಯಃ । ಪರಮಾತ್ಮನ್ಯಸಿದ್ಧೇಃ । ನಿಗಡಮುಕ್ತಾದಿದೃಷ್ಟಾಂತಸ್ಯ ಸಾಧನವೈಕಲ್ಯಾಪತ್ತೇಶ್ಚ । ಅತ ಏವ ನ ದ್ವಿತೀಯೋಽಪೀತಿ । ಮೈವಮ್ । ಅವಿವಕ್ಷಿತವಿಶೇಷಬಂಧಸಂಸರ್ಗಾಭಾವಸ್ಯ ಹೇತುತ್ವಾತ್ ।**

**ಅನುವಾದ :-** 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬ ಅನುಮಾನದಲ್ಲಿ ಮುಕ್ತತ್ವ ಹೇತುವಾಗಿದೆ. ಮುಕ್ತತ್ವ ಎಂದರೆ ಸಂಸಾರಪ್ರಧ್ವಂಸಾಭಾವವೋ ? ಸಂಸಾರಸಂಸರ್ಗಾಭಾವವೋ ?

ಸಂಸಾರಪ್ರಧ್ವಂಸಾಭಾವ ಎನ್ನಲು ಬರುವುದಿಲ್ಲ. ಕಾರಣ ಪಕ್ಷದ ಏಕದೇಶನಾದ ಪರಮಾತ್ಮನಲ್ಲಿ ಸಂಸಾರಪ್ರಧ್ವಂಸರೂಪಮುಕ್ತತ್ವ ಬರುವುದಿಲ್ಲ. ಯಾಕೆಂದರೆ- ಧ್ವಂಸವು ಪ್ರತಿಯೋಗಿಸಮಾನಾಧಿಕರಣವಾಗಿರುತ್ತದೆ. ಅರ್ಥಾತ್ ಪ್ರತಿಯೋಗಿ ಎಲ್ಲಿ ಇರುವುದೋ ಅದರ ಧ್ವಂಸವೂ ಅಲ್ಲಿಯೇ ಇರುತ್ತದೆ. ಪ್ರಕೃತ ಪರಮಾತ್ಮನಲ್ಲಿ ಸಂಸಾರಪ್ರಧ್ವಂಸ ಒಪ್ಪುವುದಾದರೆ ಪ್ರತಿಯೋಗಿಯಾದ ಸಂಸಾರವನ್ನೂ ಒಪ್ಪಬೇಕಾಗುತ್ತದೆ. ಪರಮಾತ್ಮನಿಗೆ ಸಂಸಾರ ಇಲ್ಲವಾದ್ದರಿಂದ ಸಂಸಾರಪ್ರಧ್ವಂಸವನ್ನೂ ಒಪ್ಪಲು ಬರುವುದಿಲ್ಲ. ಹೀಗೆ ಪಕ್ಷದ ಏಕದೇಶನಾದ ಪರಮಾತ್ಮನಲ್ಲಿ ಸಂಸಾರಪ್ರಧ್ವಂಸರೂಪ ಮುಕ್ತತ್ವಹೇತು ಬಾರದ ಕಾರಣ ಭಾಗಾಸಿದ್ಧಿ ಬರಬೇಕಾಗುತ್ತದೆ.

ಮತ್ತು ದೃಷ್ಟಾಂತನಾಗಿರುವ ನಿಗಡಮುಕ್ತನು ನಿಗಡಬಂಧದಿಂದ ಮುಕ್ತನಾಗಿದ್ದಾನೆಯೇ ಹೊರತು ಸಂಸಾರಬಂಧದಿಂದ ಮುಕ್ತನಾಗಿಲ್ಲ. ಹೀಗಾಗಿ ಸಂಸಾರಪ್ರಧ್ವಂಸರೂಪವಾದ ಮುಕ್ತತ್ವ ನಿಗಡಮುಕ್ತನಲ್ಲಿಯೂ ಇಲ್ಲ. ದೃಷ್ಟಾಂತದಲ್ಲಿ ಹೇತು ಬಾರದ ಕಾರಣ ಸಾಧನವೈಕಲ್ಯವೂ ಬರಬೇಕಾಗುತ್ತದೆ. ಆದ್ದರಿಂದ ಮುಕ್ತತ್ವ ಎಂದರೆ ಸಂಸಾರಪ್ರಧ್ವಂಸ ಎಂಬ ಮೊದಲನೇ ಪಕ್ಷ ಸರಿಯಲ್ಲ.

ಸಾಧನವೈಕಲ್ಯ ಬರುತ್ತದೆ ಎಂಬ ಕಾರಣಕ್ಕೇನೇ ಮುಕ್ತತ್ವ ಎಂದರೆ ಸಂಸಾರಸಂಸರ್ಗಾಭಾವ ಎಂಬ ಎರಡನೇ ಪಕ್ಷವೂ ಸರಿಯಲ್ಲ. ದೃಷ್ಟಾಂತನಾದ ನಿಗಡಮುಕ್ತನು ಇನ್ನೂ ಸಂಸಾರಬಂಧದಿಂದ ಮುಕ್ತನಾಗದ ಕಾರಣ,

ಸಂಸಾರಸಂಸರ್ಗವೇ ಅವನಲ್ಲಿ ಇರುವ ಕಾರಣ, ಸಂಸಾರಸಂಸರ್ಗಾಭಾವ ರೂಪ ಮುಕ್ತತ್ವಹೇತು ದೃಷ್ಟಾಂತದಲ್ಲಿ ಬರುವುದಿಲ್ಲವಾದ್ದರಿಂದ ಸಾಧನವೈಕಲ್ಯ ಬರುತ್ತದೆ. ಆದ್ದರಿಂದ ಮುಕ್ತತ್ವ ಎಂದರೆ ಸಂಸಾರಸಂಸರ್ಗಾಭಾವ ಎಂಬ ಎರಡನೇ ಪಕ್ಷವೂ ಸಮಂಜಸವಲ್ಲ ಎಂದು ಭಾವ.

ಅಂದಮೇಲೆ ಮುಕ್ತತ್ವ ಎಂದರೆ ಸಂಸಾರಪ್ರಧ್ವಂಸ ಎಂದಾಗಲೀ ಸಂಸಾರಸಂಸರ್ಗಾಭಾವ ಎಂದಾಗಲೀ ಹೇಳಲು ಬರುವುದಿಲ್ಲವಾದ್ದರಿಂದ ಮುಕ್ತತ್ವದ ಪರಿಷ್ಕಾರವೇನು?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಸಂಸಾರಬಂಧ ನಿಗಡಬಂಧ ಎಂಬುದಾಗಿ ಯಾವ ಬಂಧವಿಶೇಷವನ್ನೂ ವಿವಕ್ಷಿಸದೇ, ಕೇವಲ ಬಂಧಸಂಸರ್ಗಾಭಾವವನ್ನು ಮುಕ್ತತ್ವಹೇತುವನ್ನಾಗಿ ಮಾಡುತ್ತೇವೆ. ಮುಕ್ತತ್ವ ಎಂದರೆ ಬಂಧಸಂಸರ್ಗಾಭಾವ ಎಂದು ಹೇಳುತ್ತೇವೆ. ಆ ಬಂಧಸಂಸರ್ಗಾಭಾವವು ಬಂಧಪ್ರಧ್ವಂಸಾಭಾವರೂಪವೂ ಆಗಬಹುದು, ಬಂಧಾತ್ಯಂತಾಭಾವರೂಪವೂ ಆಗಬಹುದು.

೧) ಪ್ರಕೃತ ದೃಷ್ಟಾಂತನಾದ ನಿಗಡಮುಕ್ತನಲ್ಲಿ ನಿಗಡಬಂಧಪ್ರಧ್ವಂಸಾಭಾವವನ್ನು ತಂದು ಬಂಧಸಂಸರ್ಗಾಭಾವರೂಪ ಹೇತುಸಮನ್ವಯ ಮಾಡುವುದರಿಂದ ಸಾಧನವೈಕಲ್ಯಕ್ಕೆ ಅವಕಾಶವಿಲ್ಲ.

೨) ಪಕ್ಷದ ಏಕದೇಶನಾದ ಮುಕ್ತಾತ್ಮನಲ್ಲಿ ಸಂಸಾರಬಂಧಪ್ರಧ್ವಂಸಾಭಾವವನ್ನು ತಂದು ಬಂಧಸಂಸರ್ಗಾಭಾವರೂಪಹೇತುಸಮನ್ವಯ ಮಾಡುವುದರಿಂದ ಅಸಿದ್ಧಿಯೂ ಬರುವುದಿಲ್ಲ.

೩) ಮತ್ತೊಬ್ಬ ಪಕ್ಷೈಕದೇಶನಾದ ಪರಮಾತ್ಮನಲ್ಲಿ ಸಂಸಾರಬಂಧಾತ್ಯಂತಾಭಾವವನ್ನು ತಂದು ಬಂಧಸಂಸರ್ಗಾಭಾವರೂಪ ಹೇತುಸಮನ್ವಯ ಮಾಡುವುದರಿಂದ ಅಲ್ಲಿಯೂ ಅಸಿದ್ಧಿ ಬರುವುದಿಲ್ಲ.

ಹೀಗೆ ಯಾವ ಬಂಧವಿಶೇಷವನ್ನೂ ವಿವಕ್ಷಿಸದೇ ಕೇವಲ ಬಂಧಸಂಸರ್ಗಾಭಾವವನ್ನು ಮುಕ್ತತ್ವ ಹೇತುವನ್ನಾಗಿ ಮಾಡುವುದರಿಂದ ಯಾವ ದೋಷಕ್ಕೂ ಅವಕಾಶವಿಲ್ಲ ಎಂದು ಅಭಿಪ್ರಾಯ.

**ಟೀಕಾಃ ನನು ಚಾತ್ರ ಬಂಧಾಭಾವಾಧಿಕರಣತ್ವಂ ಹೇತುಃ । ಅಭಾವಾಧಿಕರಣತ್ವಮಾತ್ರೇಣಾಲಮ್ । ಕೇವಲಾನ್ವಯಿತ್ವೇನ ವಿಶೇಷಣವ್ಯಾವರ್ತ್ಯಾಭಾವಾತ್ । ಅಪಿ ಚಾಧಿಕರಣತ್ವಮಾತ್ರೇಣಾಲಮ್ । ಕಿಮಭಾವಗ್ರಹಣೇನ ।**

**ಕಿಂಚ ಅಧಿಕರಣಂ ಕಾರಕವಿಶೇಷಃ । ಕಾರಕತ್ವಮಾತ್ರೇಣಾಲಮ್ । ಕಿಂ ವಿಶೇಷಗ್ರಹಣೇನ । ಏವಂ ಕಾರಕಂ ಕಾರಣವಿಶೇಷಃ । ಕಾರಣತ್ವಮಾತ್ರೇಣಾಲಮ್ । ತತ್ಕಿಂ ವಿಶೇಷೇಣೇತಿ ।**

**ಮೈವಮ್ । ತಥಾ ಸತಿ ಪ್ರಮೇಯತ್ವಾದೀನಾಮಪಿ ಕೇವಲಾನ್ವಯಿತ್ವಭಂಗಪ್ರಸಂಗಾತ್ । ಪ್ರಮಾವಿಷಯತ್ವಂ ಪ್ರಮೇಯತ್ವಮ್ । ತತ್ರ ವಿಷಯತ್ವಮಾತ್ರೇಣಾಲಮ್ । ಕಿಂ ಪ್ರಮಾಗ್ರಹಣೇನೇತ್ಯಾದೇಸ್ತತ್ರಾಪಿ ಸುವಚತ್ವಾತ್ ।**

**ಅನುವಾದ :-** 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬ ಅನುಮಾನದಲ್ಲಿ ಮುಕ್ತತ್ವ ಎಂದರೆ ಬಂಧಸಂಸರ್ಗಾಭಾವ ಎಂಬುದಾಗಿ ಪರಿಷ್ಕಾರ ಮಾಡಿದಿರಿ. ಹಾಗಾದರೆ ಮುಕ್ತತ್ವ ಬಂಧಾಭಾವಾಧಿಕರಣತ್ವ ಹೇತುವಾಗಿದೆ ಎಂದಾಯಿತು. ಇಲ್ಲಿ ಅಭಾವಾಧಿಕರಣತ್ವ ಹೇತುವಾದರೆ ಸಾಕು. ಬಂಧ ಎಂಬ ವಿಶೇಷಣ ಯಾಕೆ ಬೇಕು ? ''ಬಂಧ ಎಂಬ ವಿಶೇಷಣ ಕೊಡದಿದ್ದರೆ ವ್ಯಭಿಚಾರ ಬರುತ್ತದೆ, ಆ ವ್ಯಭಿಚಾರಪರಿಹಾರಕ್ಕಾಗಿ ಬಂಧ ಎಂಬ ವಿಶೇಷಣ ಬೇಕು'' ಎಂದು ಉತ್ತರ ಹೇಳಲು ಸರಿಯಾಗುವುದಿಲ್ಲ. ಏಕೆಂದರೆ ಸಾಧ್ಯ ಇಲ್ಲದ ಸ್ಥಳದಲ್ಲಿ ಹೇತು ಬಂದರೆ ವ್ಯಭಿಚಾರ. ಪ್ರಕೃತ ಸಾಧ್ಯವಾದ ಭೇದವು ಕೇವಲಾನ್ವಯಿಯಾಗಿರುವುದರಿಂದ ಅದರ ಅಭಾವ ಎಲ್ಲೂ ಇರದ ಕಾರಣ ಸಾಧ್ಯವಿಲ್ಲದ ಸ್ಥಳವೇ ಇಲ್ಲ. ಅಂದಮೇಲೆ ವ್ಯಭಿಚಾರದ ಪ್ರಸಕ್ತಿಯೇ ಇಲ್ಲ. ಹೀಗಾಗಿ ವ್ಯಭಿಚಾರಪರಿಹಾರಕ್ಕಾಗಿ ಬಂಧ ಎಂಬ ವಿಶೇಷಣ ಬೇಕು ಎಂಬುದಾಗಿ ಉತ್ತರ ಹೇಳಲು ಬರುವುದಿಲ್ಲ. ಆದ್ದರಿಂದ ಬಂಧ ಎಂಬ ವಿಶೇಷಣ ವ್ಯರ್ಥ.

ಮತ್ತು ಅಭಾವಾಧಿಕರಣತ್ವ ಎನ್ನುವಲ್ಲಿಯೂ ಸಹ ಅಧಿಕರಣತ್ವ ಮಾತ್ರ ಹೇತುವಾಗಲಿ. ಅಭಾವ ಎಂಬ ವಿಶೇಷಣ ವ್ಯರ್ಥ. ಮತ್ತು

ಕರ್ತೃ-ಕರ್ಮ-ಕರಣ-ಸಂಪ್ರದಾನ-ಅಪಾದಾನ-ಅಧಿಕರಣ

ಎಂಬ ಆರು ಕಾರಕಗಳಲ್ಲಿ ಬೇರೆ ಕಾರಕಗಳಂತೆ ಅಧಿಕರಣವೂ ಒಂದು ಕಾರಕವಿಶೇಷವಾಗಿದೆ. ಅದರಲ್ಲಿ ಕಾರಕತ್ವ ಮಾತ್ರ ಹೇತುವಾಗಲಿ. ವಿಶೇಷಪದ ಏಕೆ ? ಅದೇ ರೀತಿಯಾಗಿ ''**ಕ್ರಿಯಾಂ ಕುರ್ವದ್ಧಿ ಕಾರಕಮ್**'' ಎಂದು ಹೇಳಿದಂತೆ ಕ್ರಿಯಾರೂಪಕಾರ್ಯವಿಶೇಷಜನಕವಾದದ್ದೇ ಕಾರಕವಾದ್ದರಿಂದ ಕಾರಕವು ಕಾರಣವಿಶೇಷವಾಗಿದೆ. ಅದರಲ್ಲಿ ಕಾರಣತ್ವ ಮಾತ್ರ ಹೇತುವಾಗಲಿ. ವಿಶೇಷಪದ ಏಕೆ ಬೇಕು ? ಸಾಧ್ಯವಾದ ಭೇದವು ಕೇವಲಾನ್ವಯಿಯಾಗಿರುವುದರಿಂದ ಸಾಧ್ಯವಿಲ್ಲದ ಸ್ಥಳ ಇಲ್ಲದ ಕಾರಣ ವ್ಯಭಿಚಾರಪ್ರಸಕ್ತಿ ಇಲ್ಲವಾದ್ದರಿಂದ ವಿಶೇಷಣಗಳು ವ್ಯರ್ಥ ಎನ್ನುವುದು ಶಂಕೆಯ ಅಭಿಪ್ರಾಯ.

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಹಾಗೆ ಶಂಕಿಸುತ್ತಾ ಹೋದರೆ- ''**ಶಬ್ದಃ ಅಭಿಧೇಯಃ ಪ್ರಮೇಯತ್ವಾತ್**' ಇತ್ಯಾದಿ ಪ್ರಸಿದ್ಧ ಕೇವಲಾನ್ವಯಿ ಅನುಮಾನಗಳೂ ಭಗ್ನವಾಗಬೇಕಾದ ಪ್ರಸಂಗ ಬರುತ್ತದೆ.

ಅದು ಹೇಗೆಂದರೆ :- ಇಲ್ಲಿಯೂ ಸಹ ಪ್ರಮೇಯತ್ವ ಹೇತುವಾಗಿದೆ. ಪ್ರಮೇಯತ್ವ ಎಂದರೆ ಪ್ರಮಾವಿಷಯತ್ವ. ಅದರಲ್ಲಿ ವಿಷಯತ್ವ ಮಾತ್ರ ಹೇತುವಾಗಲಿ. ಪ್ರಮಾ ಎಂಬ ವಿಶೇಷಣ ಏಕೆ ಬೇಕು ? ''ಪ್ರಮಾ ಎಂಬ ವಿಶೇಷಣ ಕೊಡದಿದ್ದರೆ ವ್ಯಭಿಚಾರ ಬರುತ್ತದೆ. ವ್ಯಭಿಚಾರಪರಿಹಾರಕ್ಕಾಗಿ ಪ್ರಮಾ ಎಂಬ ವಿಶೇಷಣ ಬೇಕು'' ಎಂಬುದಾಗಿ ಉತ್ತರ ಹೇಳಲು ಬರುವುದಿಲ್ಲ. ಏಕೆಂದರೆ - ಸಾಧ್ಯವಾದ ಅಭಿಧೇಯತ್ವವು ಕೇವಲಾನ್ವಯಿಯಾಗಿರುವುದರಿಂದ ಅದರ ಅಭಾವ (ಅಭಿಧೇಯತ್ವಾಭಾವ) ಎಲ್ಲಿಯೂ ಇಲ್ಲ. ಸಾಧ್ಯವಿಲ್ಲದ ಸ್ಥಳವೇ ಇಲ್ಲದ ಕಾರಣ ವ್ಯಭಿಚಾರಪ್ರಸಕ್ತಿಯೇ ಇಲ್ಲ. ಹಾಗಾಗಿ ವ್ಯಭಿಚಾರಪರಿಹಾರಕ್ಕಾಗಿ ಪ್ರಮಾ ವಿಶೇಷಣ ಬೇಕು ಎಂಬ ಉತ್ತರ ಸರಿಯಲ್ಲ. ಅಂದಮೇಲೆ ವಿಷಯತ್ವ ಮಾತ್ರ ಹೇತು ಮಾಡಿದರೆ ಸಾಕು. ಪ್ರಮಾ ಎಂಬ ವಿಶೇಷಣ ಬೇಡ (ವ್ಯರ್ಥ) ಎಂಬುದಾಗಿ ಅಲ್ಲಿಯೂ ಶಂಕಿಸಲು ಬಂದೇ ಬರುತ್ತದೆಯಾದ್ದರಿಂದ ಅಂತಹ ಪ್ರಸಿದ್ಧವಾದ ಕೇವಲಾನ್ವಯಿ ಅನುಮಾನಗಳೂ ಭಗ್ನವಾಗಬೇಕಾದ ಪ್ರಸಂಗ ಬರುತ್ತದೆ.

**ಅವತಾರಿಕೆ :-** ಮುಕ್ತತ್ವ (ಬಂಧಾಭಾವಾಧಿಕರಣತ್ವ) ಹೇತುವಿನಲ್ಲಿ ವಿಶೇಷಣವೈಯರ್ಥ್ಯದೋಷ ಹೇಳಿದಾಗ ನಾವು ಪ್ರತಿಯಾಗಿ ಪ್ರಮೇಯತ್ವಾದಿ ಹೇತುಗಳಲ್ಲಿ ವಿಶೇಷಣವೈಯರ್ಥ್ಯ ಹೇಳಿದೆವು. ಪ್ರಕೃತ ಪ್ರಮೇಯತ್ವಾದಿ

ಹೇತುಗಳಲ್ಲಿ ನಾವು ಹೇಳಿದ ವಿಶೇಷಣವೈಯರ್ಥ್ಯದೋಷವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ -

**ಟೀಕಾಃ ಯದ್ಧೇತುವ್ಯವಚ್ಛೇದಕತ್ವೇನ ಪೃಥಗುಪಾದೀಯತೇ ತದೇವ ವಿಶೇಷಣಂ ಪ್ರಯೋಜನಾಂತರಮಪೇಕ್ಷತೇ । ನ ಪುನಸ್ತ-ನ್ಮಾತ್ರಾಂತರ್ಗತಮಿತಿ ಚೇತ್ । ಸಮಂ ಪ್ರಕೃತೇऽಪಿ ।**

**ಅನುವಾದ :-** ಪ್ರಮೇಯತ್ವ ಹೇತುವಿನಲ್ಲಿ ''ವಿಷಯತ್ವ ಸಾಕು. ಪ್ರಮಾ ಎಂಬ ವಿಶೇಷಣ ಏಕೆ ಬೇಕು ?'' ಎಂಬುದಾಗಿ ವಿಶೇಷಣವೈಯರ್ಥ್ಯಶಂಕೆ ಮಾಡಲು ಬರುವುದಿಲ್ಲ. ಏಕೆಂದರೆ -

ಯಾವ ವಿಶೇಷಣವು ಹೇತುಶರೀರಮಾತ್ರದಲ್ಲಿ ಅಂತರ್ಗತವಾಗಿರುವುದಿಲ್ಲ, ಕಿಂತು ದೋಷನಿವಾರಣೆಗಾಗಿ ಪ್ರತ್ಯೇಕವಾಗಿ ಹೊರಗೆ ಇಡಲ್ಪಡುತ್ತದೆಯೋ ಅಂತಹ ವಿಶೇಷಣ ಮಾತ್ರವೇ ಆ ವಿಧವಾದ ದೋಷಪರಿಹಾರರೂಪ ಪ್ರಯೋಜನವನ್ನು ಅಪೇಕ್ಷಿಸುತ್ತದೆ.

ಯಾವ ವಿಶೇಷಣವು ಹೇತುಶರೀರಮಾತ್ರದಲ್ಲಿಯೇ ಅಂತರ್ಗತವಾಗಿರುತ್ತದೆ (ದೋಷಪರಿಹಾರಕ್ಕಾಗಿ ಪ್ರತ್ಯೇಕವಾಗಿ ಹೊರಗೆ ಇಡಲ್ಪಡುವುದಿಲ್ಲ.) ಅಂತಹ ವಿಶೇಷಣವು ದೋಷಪರಿಹಾರಾದಿ ಯಾವ ಪ್ರಯೋಜನವನ್ನೂ ಅಪೇಕ್ಷಿಸುವುದಿಲ್ಲ.

ಉದಾಹರಣೆಗೆ :- ''ಶಬ್ದಃ ಅನಿತ್ಯಃ ಸಾಮಾನ್ಯವತ್ವೇ ಸತಿ ಅಸ್ಮದಾದಿ-ಬಾಹ್ಯೇಂದ್ರಿಯಗ್ರಾಹ್ಯತ್ವಾತ್'' ಎನ್ನುವಲ್ಲಿ ಸಾಮಾನ್ಯವತ್ವೇ ಸತಿ ಎಂಬ ವಿಶೇಷಣವು ಹೇತುಶರೀರಮಾತ್ರಾಂತರ್ಗತವಾಗಿಲ್ಲ. ಕಿಂತು ದೋಷಪರಿಹಾರ-ಕ್ಕಾಗಿ ಪ್ರತ್ಯೇಕವಾಗಿ ಹೊರಗೆ ಕೊಟ್ಟಂತಹ ವಿಶೇಷಣವಾಗಿದೆ. ಆದ್ದರಿಂದ ಇಂತಹ ವಿಶೇಷಣವು ದೋಷಪರಿಹಾರರೂಪವಾದ ಪ್ರಯೋಜನವನ್ನು ಅಪೇಕ್ಷಿಸುತ್ತದೆ.

ಪ್ರಕೃತ ''ಶಬ್ದಃ ಅಭಿಧೇಯಃ ಪ್ರಮೇಯತ್ವಾತ್'' ಎನ್ನುವಲ್ಲಿ ಪ್ರಮಾ ಎಂಬ ವಿಶೇಷಣವು ಪ್ರಮಾವಿಷಯತ್ವರೂಪ ಹೇತುಶರೀರಮಾತ್ರಾಂತರ್ಗತವೇ ಆಗಿದೆ. ಕಾರಣ- ವ್ಯಾಪ್ತಿಯು ವಿಶಿಷ್ಟನಿಷ್ಠವಾದ್ದರಿಂದ. ಹೀಗಾಗಿ ಪ್ರಮಾ ವಿಶೇಷಣವು ಹೇತುಶರೀರಪ್ರವಿಷ್ಟವೇ ಆಗಿರುವುದರಿಂದ ದೋಷಪರಿಹಾರರೂ

ಪಪ್ರಯೋಜನಾಂತರವನ್ನು ಅಪೇಕ್ಷಿಸುವುದಿಲ್ಲ. ಅಂತೆಯೇ ಪ್ರಮಾವಿಶೇಷಣಕ್ಕೆ ವೈಯರ್ಥ್ಯ ಶಂಕೆಯೂ ಬರುವುದಿಲ್ಲ. ಆದ್ದರಿಂದ ''ಪ್ರಮೇಯತ್ವಾದಿಗಳಲ್ಲಿಯೂ ವಿಶೇಷಣವೈಯರ್ಥ್ಯ ಬರಬೇಕಾಗುತ್ತದೆ'' ಎಂಬುದಾಗಿ ನಮಗೆ ನೀವು ಅತಿಪ್ರಸಂಗ ಹೇಳಬೇಡಿ ಎನ್ನುವುದು ಶಂಕೆಯ ಅಭಿಪ್ರಾಯ.

ಈ ರೀತಿಯಾಗಿ ವಿಶೇಷಣವೈಯರ್ಥ್ಯವನ್ನು ನೀವು ಪರಿಹರಿಸಿ-ಕೊಳ್ಳುವುದಾದರೆ, ನಾವೂ ಸಹ ಅದೇ ರೀತಿಯಾಗಿ ಮುಕ್ತತ್ವ (ಬಂಧಾಭಾವಾಧಿ ಕರಣತ್ವ) ಹೇತುವಿನಲ್ಲಿಯೂ ವಿಶೇಷಣವೈಯರ್ಥ್ಯವನ್ನು ಪರಿಹರಿಸಿಕೊಳ್ಳುತ್ತೇವೆ.

ಅಂದರೆ- ಪ್ರಕೃತ ''ವಿಮತೋ ಭಿನ್ನೋ ಮುಕ್ತತ್ವಾತ್'' ಎಂಬ ನಮ್ಮ ಅನುಮಾನದಲ್ಲಿಯೂ ಸಹ ವ್ಯಾಪ್ತಿಯು ವಿಶಿಷ್ಟನಿಷ್ಠವಾದ್ದರಿಂದ ಮುಕ್ತತ್ವ ಬಂಧಾಭಾವಾಧಿಕರಣತ್ವ ಹೇತುವಿನಲ್ಲಿ ಬಂಧಾದಿವಿಶೇಷಣಗಳು ಹೇತು-ಶರೀರಮಾತ್ರಾಂತರ್ಗತವೇ ಆಗಿವೆ. ಹೊರತು ದೋಷಪರಿಹಾರಕ್ಕಾಗಿ ಪ್ರತ್ಯೇಕವಾಗಿ ಹೊರಗೆ ಕೊಟ್ಟಂತಹ ವಿಶೇಷಣಗಳಾಗಿಲ್ಲ. ಹೀಗೆ ಬಂಧಾದಿವಿಶೇಷಣಗಳು ಹೇತುಶರೀರಮಾತ್ರಾಂತರ್ಗತವಾದ್ದರಿಂದ ದೋಷಪ ರಿಹಾರರೂಪಪ್ರಯೋಜನಾಂತರವನ್ನು ಅಪೇಕ್ಷಿಸುವುದಿಲ್ಲ. ಆದ್ದರಿಂದ ''ಅಭಾವಾಧಿಕರಣತ್ವ ಮಾತ್ರ ಹೇತುವಾಗಲಿ. ಬಂಧ ವಿಶೇಷಣ ಏಕೆ ಬೇಕು?'' ಎಂಬುದಾಗಿ ವಿಶೇಷಣವೈಯರ್ಥ್ಯಶಂಕೆ ಮಾಡಲು ನಿಮಗೂ ಅವಕಾಶವಿಲ್ಲ ಎಂದು ಭಾವ.

**ಅವತಾರಿಕೆ :-** 'ಅವಿವಕ್ಷಿತವಿಶೇಷಬಂಧಸಂಸರ್ಗಾಭಾವಸ್ಯ ಹೇತುತ್ವಾತ್' ಯಾವ ಬಂಧವಿಶೇಷವನ್ನೂ ವಿವಕ್ಷಿಸದೇ ಬಂಧಸಂಸರ್ಗಾಭಾವವನ್ನು ಮುಕ್ತತ್ವಹೇತುವನ್ನಾಗಿ ಹೇಳುತ್ತೇವೆ ಎಂಬುದಾಗಿ ಹೇತುವಿನ ಪರಿಷ್ಕಾರ ಹಾಗೂ 'ಅವಿವಕ್ಷಿತಪ್ರತಿಯೋಗಿವಿಶೇಷಭೇದಸ್ಯ ಸಾಧ್ಯತ್ವಾತ್' ಯಾವ ಪ್ರತಿಯೋಗಿ-ವಿಶೇಷವನ್ನೂ ವಿವಕ್ಷಿಸದೇ ಭೇದಮಾತ್ರವನ್ನು ಸಾಧ್ಯವನ್ನಾಗಿ ಮಾಡುತ್ತೇವೆ ಎಂಬುದಾಗಿ ಸಾಧ್ಯದ ಪರಿಷ್ಕಾರ ಎರಡನ್ನೂ ಒಂದು ರೀತಿಯಿಂದ ಮಾಡಿ, ಪ್ರಕೃತ ಹೇತು-ಸಾಧ್ಯಗಳ ಪರಿಷ್ಕಾರವನ್ನು ಮತ್ತೊಂದು ರೀತಿಯಿಂದ ಮಾಡಿ ತೋರಿಸುತ್ತಾರೆ -

## ಮತ್ತೊಂದು ರೀತಿಯಿಂದ ಹೇತುಸಾಧ್ಯಗಳ ಪರಿಷ್ಕಾರ

**ಟೀಕಾ: ಅಥವಾ ಸಂಸಾರಸಂಸರ್ಗಾಭಾವೋ ಮುಕ್ತತ್ವಂ ತಥಾತ್ವೇ ಘಟೋ ದೃಷ್ಟಾಂತಃ । ಪರಮಾತ್ಮಪ್ರತಿಯೋಗಿಕೋ ವಾ ಭೇದೋಽತ್ರ ಸಾಧ್ಯಃ । ಬಂಧಪ್ರಧ್ವಂಸಾಧಿಕರಣತ್ವಂ ಚ ಮುಕ್ತತ್ವಮಿತಿ ನ ಪರಮಾತ್ಮನಿ ವ್ಯಭಿಚಾರಃ।**

**ಅನುವಾದ :-** ಅಥವಾ ಮುಕ್ತತ್ವ ಎಂದರೆ ಬಂಧಸಂಸರ್ಗಾಭಾವ ಎಂದು ವಿವಕ್ಷಿಸುತ್ತೇವೆ.

ಹಾಗಾದರೆ ದೃಷ್ಟಾಂತನಾದ ನಿಗಡಮುಕ್ತನಲ್ಲಿ ಬಂಧಸಂಸರ್ಗವೇ ಇನ್ನೂ ಇರುವ ಕಾರಣ 'ಬಂಧಸಂಸರ್ಗಾಭಾವ'ರೂಪವಾದ ಮುಕ್ತತ್ವಹೇತು ನಿಗಡ-ಮುಕ್ತನಲ್ಲಿ ಬಾರದ ಕಾರಣ ಸಾಧನವೈಕಲ್ಯ ಬರುತ್ತದೆಯಲ್ಲವೇ? ಎಂಬ ಶಂಕೆ ಬಂದರೆ, ಅದು ಸರಿಯಲ್ಲ.

ಯಾಕೆಂದರೆ- ಹಾಗೆ ಬಂಧಸಂಸರ್ಗಾಭಾವವನ್ನು ಮುಕ್ತತ್ವವನ್ನಾಗಿ ವಿವಕ್ಷಿಸಿದ ಪಕ್ಷದಲ್ಲಿ ನಿಗಡಮುಕ್ತನನ್ನು ದೃಷ್ಟಾಂತ ಮಾಡುವುದೇ ಇಲ್ಲ. ಕಿಂತು ಘಟವನ್ನು ದೃಷ್ಟಾಂತವನ್ನಾಗಿ ಮಾಡುತ್ತೇವೆ. ಜಡವಾದ ಘಟದಲ್ಲಿ ಬಂಧಸಂಸರ್ಗ ಎಂದೂ ಇಲ್ಲದ ಕಾರಣ ಬಂಧಸಂಸರ್ಗಾಭಾವ ರೂಪಮುಕ್ತತ್ವವು ಘಟದಲ್ಲಿ ಸಮನ್ವಯವಾಗುವುದರಿಂದ ಸಾಧನವೈಕಲ್ಯಕ್ಕೆ ಅವಕಾಶವಿಲ್ಲ.

ಅಥವಾ ಪರಮಾತ್ಮಪ್ರತಿಯೋಗಿಕಭೇದವನ್ನಾದರೂ ಸಾಧ್ಯವಾಗಿ ವಿವಕ್ಷಿಸುತ್ತೇವೆ.

ಹಾಗಾದರೆ ಪರಮಾತ್ಮಪ್ರತಿಯೋಗಿಕಭೇದವು ಪರಮಾತ್ಮನಲ್ಲಿ ಇಲ್ಲ, ಆದರೆ ಬಂಧಾತ್ಯಂತಾಭಾವಾಧಿಕರಣತ್ವ ರೂಪವಾದ ಮುಕ್ತತ್ವ ಪರಮಾತ್ಮನಲ್ಲಿ ಇರುವ ಕಾರಣ ಪರಮಾತ್ಮನಲ್ಲಿ ವ್ಯಭಿಚಾರ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕೆ ಬಂದರೆ ಅದು ಸರಿಯಲ್ಲ.

ಕಾರಣ- ಪರಮಾತ್ಮಪ್ರತಿಯೋಗಿಕಭೇದವನ್ನು ಸಾಧ್ಯವಾಗಿ ವಿವಕ್ಷಿಸಿದಾಗ, ಮುಕ್ತತ್ವ ಎಂದರೆ ಬಂಧಪ್ರಧ್ವಂಸಾಧಿಕರಣತ್ವ ಎಂದು ಹೇಳುತ್ತೇವೆ. ಪರಮಾತ್ಮನಲ್ಲಿ ಬಂಧ ಯಾವ ಕಾಲದಲ್ಲಿಯೂ ಇಲ್ಲದ ಕಾರಣ ಬಂಧಾತ್ಯಂತಾಭಾವಾಧಿ ಕರಣತ್ವ ರೂಪ ಮುಕ್ತತ್ವ ಬರಬಹುದಾದರೂ ಸಹ, ಬಂಧಪ್ರಧ್ವಂಸಾಧಿಕರಣತ್ವ ರೂಪವಾದ ಮುಕ್ತತ್ವ ಬರಲು ಸಾಧ್ಯವಿಲ್ಲ. ಪ್ರತಿಯೋಗಿ-ಧ್ವಂಸಗಳಲ್ಲಿ

ಸಾಮಾನಾಧಿಕರಣ್ಯನಿಯಮ ಇರುವುದರಿಂದ, ಸಂಸಾರ ಇದ್ದವರಲ್ಲಿಯೇ ಸಂಸಾರಪ್ರಧ್ವಂಸ ಇರಲು ಸಾಧ್ಯ. ಪರಮಾತ್ಮನಲ್ಲಿ ಎಂದಿಗೂ ಸಂಸಾರ ಇಲ್ಲವಾದ್ದರಿಂದ ಸಂಸಾರಪ್ರಧ್ವಂಸ ಪರಮಾತ್ಮನಲ್ಲಿ ಬರಲು ಸಾಧ್ಯವಿಲ್ಲ. ಹೀಗಾಗಿ ಪರಮಾತ್ಮನಲ್ಲಿ ಪರಮಾತ್ಮಪ್ರತಿಯೋಗಿಕಭೇದ ಎಂಬ ಸಾಧ್ಯ ಹೇಗೆ ಇಲ್ಲವೋ ಅದರಂತೆ ಬಂಧಪ್ರಧ್ವಂಸಾಧಿಕರಣತ್ವ ಎಂಬ ಹೇತುವೂ ಇಲ್ಲದ ಕಾರಣ ವ್ಯಭಿಚಾರ ಬರುವುದಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬ ಅನುಮಾನದಿಂದ ಭೇದವನ್ನು ಸಾಧಿಸಲು ಹೊರಟಾಗ, ಭೇದಸಾಧನೆಯ ಮೇಲೆ ಶಂಕೆ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

### 'ವಿಮತೋ ಭಿನ್ನಃ' ಎನ್ನುವಲ್ಲಿ ಸಾಧ್ಯಭೇದವಿಷಯದಲ್ಲಿ ಪಾರಮಾರ್ಥಿಕತ್ವಾದಿಪ್ರಶ್ನೆ, ಅದರ ನಿರಾಕರಣೆ

**ಟೀಕಾ : ಸ್ಯಾದೇತತ್ । ಕಿಮನಿರ್ವಚನೀಯೋ ಭೇದಃ ಸಾಧ್ಯತೇ । ಕಿಂ ವಾ ಪಾರಮಾರ್ಥಿಕಃ । ನಾದ್ಯಃ । ಅಪಸಿದ್ಧಾಂತಾತ್ । ನ ದ್ವಿತೀಯಃ । ಪರಂ ಪ್ರತಿ ದೃಷ್ಟಾಂತಸ್ಯ ಸಾಧ್ಯವೈಕಲ್ಯಾದಿತ್ಯತ ಆಹ -**

**ಮೂಲ :- ನ ಚ ಭೇದೇ ವಿಕಲ್ಪೋ ಯುಜ್ಯತೇ ।**

**ಚಶಬ್ದ ಏವಾರ್ಥೇ ವಿಕಲ್ಪ ಇತ್ಯನೇನ ಸಂಬಧ್ಯತೇ । ಸಮುಚ್ಚಯೇ ವಾ । ಏತದಾಶಂಕಾನಿರಾಸಸಮುಚ್ಚಿತಸ್ಯೈವಾನುಮಾನಸ್ಯ ಸಾಧಕತ್ವಾತ್ । ಏಕತ್ರ ಧರ್ಮಿಣಿ ವಿರುದ್ಧಾನೇಕಾಕಾರಕಲ್ಪನಂ ವಿಕಲ್ಪಃ । ಸಂಶಯ ಇತಿ ಯಾವತ್ । ತನ್ಮೂಲಃ ಪ್ರಶ್ನೋಽತ್ರ ವಿಕಲ್ಪಪದೇನ ಲಕ್ಷ್ಯತೇ । ಹೇತುಸೂಚನಂ ಲಾಕ್ಷಣಿಕಪದ-ಪ್ರಯೋಗೇ ಪ್ರಯೋಜನಮ್ ॥**

**ಅನುವಾದ :-** 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬುದಾಗಿ ಭೇದಸಾಧನೆ ಕೂಡುತ್ತಿತ್ತು. ಯಾವಾಗ ? ಸಾಧ್ಯವಾದ ಭೇದವನ್ನು ನಿರ್ವಚನ ಮಾಡಲು ಬರುತ್ತಿದ್ದರೆ. ಆದರೆ ಎಂತಹ ಭೇದವನ್ನು ಸಾಧಿಸುತ್ತೀರಿ ಎಂಬುದಾಗಿ ಪ್ರಶ್ನಿಸಿದಾಗ ಸಾಧ್ಯದ ನಿರ್ವಚನವನ್ನೇ ಮಾಡಲು ಬರುವುದಿಲ್ಲ. ಹೇಗೆಂದರೆ-

ಮುಕ್ತತ್ವಹೇತುವಿನಿಂದ ಅನಿರ್ವಚನೀಯವಾದ ಭೇದವನ್ನು ಸಾಧಿಸುತ್ತೀರೋ? ಅಥವಾ ಪಾರಮಾರ್ಥಿಕವಾದ ಭೇದವನ್ನು ಸಾಧಿಸುತ್ತೀರೋ ?

ಅನಿರ್ವಚನೀಯವಾದ ಭೇದವನ್ನು ಸಾಧಿಸಲು ಬರುವುದಿಲ್ಲ. ಏಕೆಂದರೆ ವಾದಿಗಳಾದ ನೀವು ಮುಕ್ತ-ಪರಮಾತ್ಮರ ಭೇದ ಪಾರ್ಮಾರ್ಥಿಕವೇ ಆಗಿದೆ ಎಂಬುದಾಗಿ ಅಂಗೀಕರಿಸುತ್ತೀರಿ. ಅರ್ಥಾತ್ ನಿಮ್ಮ ಪೂರ್ವಾಚಾರ್ಯರು ಮುಕ್ತ-ಪರಮಾತ್ಮರಲ್ಲಿ ಪಾರಮಾರ್ಥಿಕಭೇದವನ್ನೇ ಅಂಗೀಕರಿಸಿದ್ದಾರೆ. ಹೊರತು ಅನಿರ್ವಚನೀಯವಾದ ಭೇದವನ್ನು ಅಂಗೀಕರಿಸಿಲ್ಲ. ಈಗ ನೀವು ಅನಿರ್ವಚನೀಯವಾದ ಭೇದವನ್ನು ಸಾಧಿಸಹೊರಟರೆ, ನಿಮ್ಮ ಪೂರ್ವಾಚಾರ್ಯರ ಅಂಗೀಕಾರಕ್ಕೆ ವಿರುದ್ಧವಾಗಿ ಅಂಗೀಕರಿಸಿದಂತಾಗುವುದರಿಂದ ಅಪಸಿದ್ಧಾಂತ ಬರುತ್ತದೆ.

(ಅಥವಾ ವಾದಿಗಳಾದ ನಿಮ್ಮ ಮತದಲ್ಲಿ ಅನಿರ್ವಚನೀಯವಾದ ಭೇದವನ್ನೇ ಎಲ್ಲಿಯೂ ಅಂಗೀಕರಿಸಿಲ್ಲವಾದ್ದರಿಂದ, ಪ್ರಕೃತ ಅನಿರ್ವಚನೀಯ-ಭೇದವನ್ನು ಸಾಧಿಸಹೊರಟರೆ ಸಿದ್ಧಾಂತಕ್ಕೆ ವಿರುದ್ಧವಾಗಿ ಸಾಧಿಸಿ-ದಂತಾಗುವುದರಿಂದ ಅಪಸಿದ್ಧಾಂತ ಬರುತ್ತದೆ ಎಂದಾದರೂ ತಿಳಿಯಬಹುದು.)

ಮತ್ತು ಪ್ರತಿವಾದಿಗಳಾದ ಮಾಯಾವಾದಿಗಳು ಅನಿರ್ವಚನೀಯವಾದ ಭೇದವನ್ನು ಒಪ್ಪುವವರೇ ಆದ್ದರಿಂದ, ಅವರಿಗೆ ಸಿದ್ಧವಾದ ಅನಿರ್ವಚನೀಯ-ಭೇದವನ್ನೇ ಸಾಧಿಸಹೊರಟರೆ ಸಿದ್ಧಸಾಧನತಾ ದೋಷವೂ ಬರುತ್ತದೆ. ಆದ್ದರಿಂದ ಅನಿರ್ವಚನೀಯವಾದ ಭೇದವನ್ನು ಸಾಧಿಸುತ್ತೇವೆ ಎಂಬ ಮೊದಲನೇ ಪಕ್ಷ ಸರಿಯಲ್ಲ.

ಹಾಗಲ್ಲ, ಪಾರಮಾರ್ಥಿಕವಾದ ಭೇದವನ್ನು ಸಾಧಿಸುತ್ತೇವೆ. ವಾದಿಗಳಾದ ನಮ್ಮ ಸಿದ್ಧಾಂತದಲ್ಲಿ ಮುಕ್ತ-ಪರಮಾತ್ಮರಲ್ಲಿ ಹಾಗೂ ಎಲ್ಲೆಡೆ ಪಾರಮಾರ್ಥಿಕ ಭೇದವೇ ಅಂಗೀಕೃತವಾದ್ದರಿಂದ ಅಪಸಿದ್ಧಾಂತ ಬರುವುದಿಲ್ಲ. ಮತ್ತು ಪ್ರತಿವಾದಿಗಳಾದ ಮಾಯಾವಾದಿಗಳು ಪಾರಮಾರ್ಥಿಕಭೇದವನ್ನು ಒಪ್ಪುವುದಿಲ್ಲವಾದ್ದರಿಂದ (ಪಾರಮಾರ್ಥಿಕಭೇದವು ಅವರಿಗೆ ಸಿದ್ಧವಾಗಿಲ್ಲವಾದ್ದರಿಂದ) ಅದನ್ನು ಸಾಧಿಸಿದರೆ ಸಿದ್ಧಸಾಧನತಾ ದೋಷವೂ ಬರುವುದಿಲ್ಲ. ಆದ್ದರಿಂದ ಪಾರಮಾರ್ಥಿಕಭೇದವನ್ನು ಸಾಧಿಸುತ್ತೇವೆ ಎಂಬ ಎರಡನೇ ಪಕ್ಷವನ್ನು ಅವಲಂಬಿಸುತ್ತೇವೆ ಎಂದರೆ,

ಈ ಎರಡನೇ ಪಕ್ಷವೂ ಸರಿಯಲ್ಲ. ಏಕೆಂದರೆ- ಪ್ರತಿವಾದಿಗಳಾದ ಮಾಯಾವಾದಿಗಳು ಪಾರಮಾರ್ಥಿಕಭೇದವನ್ನು ಎಲ್ಲಿಯೂ ಅಂಗೀಕರಿಸಿಲ್ಲ. ಪ್ರಕೃತ ದೃಷ್ಟಾಂತನಾದ ನಿಗಡಮುಕ್ತನಲ್ಲಿ ಪಾರಮಾರ್ಥಿಕಭೇದ ಎಂಬ ಸಾಧ್ಯ ಪರರೀತ್ಯಾ ಬರುವುದಿಲ್ಲವಾದ್ದರಿಂದ ಸಾಧ್ಯವೈಕಲ್ಯ ಬರುತ್ತದೆ. ಆದ್ದರಿಂದ ಪಾರಮಾರ್ಥಿಕಭೇದವನ್ನು ಸಾಧಿಸುತ್ತೇವೆ ಎಂಬ ಎರಡನೇ ಪಕ್ಷವೂ ಸರಿಯಲ್ಲ.

ಅಂದಮೇಲೆ ಅನಿರ್ವಚನೀಯಭೇದವನ್ನು ಸಾಧಿಸುತ್ತೀರೋ ? ಪಾರಮಾರ್ಥಿಕಭೇದವನ್ನು ಸಾಧಿಸುತ್ತೀರೋ ? ಎರಡು ಪಕ್ಷಗಳೂ ಸರಿಯಾಗುವುದಿಲ್ಲವಲ್ಲ? ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಆಚಾರ್ಯರು ಹೇಳಿದರು -

**ಮೂಲ :- ನ ಚ ಭೇದೇ ವಿಕಲ್ಪೋ ಯುಜ್ಯತೇ ।**

**ಮೂಲಾರ್ಥ :- ಈ ರೀತಿಯಾಗಿ ಭೇದವಿಷಯದಲ್ಲಿ ಪ್ರಶ್ನೆಯೇ ಕೂಡುವುದಿಲ್ಲ. ಪ್ರಶ್ನೆ ಏಕೆ ಕೂಡುವುದಿಲ್ಲ ? ಎಂದರೆ, ಪ್ರಶ್ನೆಯು ಸಂಶಯಮೂಲಕವಾದ್ದರಿಂದ ಭೇದವಿಷಯದಲ್ಲಿ ಸಂಶಯವೇ ಕೂಡದ ಕಾರಣ ಪ್ರಶ್ನೆಯೂ ಕೂಡುವುದಿಲ್ಲ ಎಂದು ಅರ್ಥ.**

ಮೂಲದಲ್ಲಿರುವ ಚಶಬ್ದವು ಅವಧಾರಣಾರ್ಥಕವಾಗಿದೆ. (ಚಶಬ್ದಕ್ಕೆ ಏವ ಎಂದು ಅರ್ಥ.) ಇದು ವಿಕಲ್ಪಃ ಎಂಬ ಪದದ ಜೊತೆಗೆ ಅನ್ವಯ ಹೊಂದುತ್ತದೆ. ಅಂದರೆ 'ವಿಕಲ್ಪ ಏವ' ಎಂದು ಹೇಳಿದಂತಾಗುತ್ತದೆ.

ಅಥವಾ ಚಶಬ್ದವು ಸಮುಚ್ಚಯ ಎಂಬ ಅರ್ಥದಲ್ಲಿಯೇ ಇದೆ. ಹಾಗಾದರೆ ಏನನ್ನು ಸಮುಚ್ಚಯ ಮಾಡುತ್ತದೆ ಚಶಬ್ದ? ಎಂದರೆ, ಅನುಮಾನಕ್ಕೆ ಏತದಾಶಂಕಾನಿರಾಸವನ್ನು ಸಮುಚ್ಚಯ ಮಾಡುತ್ತದೆ.

ಅದರ ಅಭಿಪ್ರಾಯ :- ಎಲ್ಲಿಯವರೆಗೆ ಭೇದವಿಷಯಕವಿಕಲ್ಪನಿರಾಕರಣೆ ಮಾಡುವುದಿಲ್ಲವೋ ಅಲ್ಲಿಯವರೆಗೆ ಅಪಸಿದ್ಧಾಂತಾದಿದೋಷವಿಶಿಷ್ಟವಾಗುವ ಮುಕ್ತತ್ವಾನುಮಾನವು ಭೇದಸಾಧಕವಾಗುವುದಿಲ್ಲ. (ಭೇದವಿಷಯಕ ಅನುಮತಿಯನ್ನು ಹುಟ್ಟಿಸುವುದಿಲ್ಲ.) ಭೇದವಿಷಯಕವಿಕಲ್ಪನಿರಾಕರಣೆ ಮಾಡಿದರೆ ವಿಕಲ್ಪನಿರಾಸಸಮುಚ್ಚಿತವಾದ ಮುಕ್ತತ್ವಾನುಮಾನವು ಭೇದಸಾಧಕ-ವಾಗುತ್ತದೆ. (ಭೇದವಿಷಯಕ ಅನುಮತಿಯನ್ನು ಹುಟ್ಟಿಸುತ್ತದೆ.) ಆದ್ದರಿಂದ -

''ಮುಕ್ತತ್ವಾತ್ ಭೇದೇ ವಿಕಲ್ಪಾಯೋಗಾಚ್ಚ, ವಿಮತೋ ಭಿನ್ನಃ' (ಮುಕ್ತನಾದ್ದರಿಂದ ಹಾಗೂ ಭೇದವಿಷಯದಲ್ಲಿ ವಿಕಲ್ಪ ಕೂಡುವುದಿಲ್ಲವಾದ್ದರಿಂದಲೂ ಮುಕ್ತಾತ್ಮನು ಭಿನ್ನನಾಗಿದ್ದಾನೆ.)

ಎಂಬುದಾಗಿ ಮುಕ್ತತ್ವಾನುಮಾನಕ್ಕೆ ಭೇದವಿಕಲ್ಪನಿರಾಸವನ್ನು ಸಮುಚ್ಚಯ ಮಾಡುತ್ತದೆ ಚಶಬ್ದ ಎಂಬ ಭಾವ.

ಮೂಲದಲ್ಲಿ ವಿಕಲ್ಪ ಎಂದಿದೆ. ಅದರ ಅರ್ಥ :-

**[೧]ಏಕತ್ರ ಧರ್ಮಿಣಿ ವಿರುದ್ಧಾನೇಕಾಕಾರಕಲ್ಪನಂ ವಿಕಲ್ಪಃ।**

---

೧. ಶ್ರೀವೇದೇಶತೀರ್ಥರು ತಮ್ಮ ಟಿಪ್ಪಣಿಯಲ್ಲಿ ಈ ಸಂಶಯದ ಲಕ್ಷಣಕ್ಕೆ ದಳಕೃತ್ಯ ತೋರಿಸಿಕೊಟ್ಟಿದ್ದಾರೆ. ಅದು ಹೀಗಿದೆ -

೧) ಕಲ್ಪನಂ ವಿಕಲ್ಪಃ ಯಾವುದು ಜ್ಞಾನವೋ ಅದು ಸಂಶಯ ಎಂದು ಹೇಳಿದರೆ 'ಅಯಂ ಘಟಃ' ಎಂಬ ಜ್ಞಾನದಲ್ಲಿ ಅತಿವ್ಯಾಪ್ತಿ ಬರುತ್ತದೆ. ('ಅಯಂ ಘಟಃ' ಎಂಬ ಜ್ಞಾನವು ಸಂಶಯ ಅಲ್ಲ, ನಿಶ್ಚಯಜ್ಞಾನ, ಅರ್ಥಾತ್ ಅಲಕ್ಷ್ಯ. ಅಲ್ಲಿ ಜ್ಞಾನತ್ವ ಎಂಬ ಸಂಶಯಲಕ್ಷಣ ಬರುವುದರಿಂದ ಅತಿವ್ಯಾಪ್ತಿ ಬರುತ್ತದೆ.) ಅದಕ್ಕಾಗಿ ಅನೇಕಾಕಾರಜ್ಞಾನಂ ವಿಕಲ್ಪಃ ಅನೇಕ ಧರ್ಮಗಳನ್ನು ವಿಷಯೀಕರಿಸುವ ಜ್ಞಾನವು ವಿಕಲ್ಪ ಎಂದು ಹೇಳಬೇಕು. ಘಟಜ್ಞಾನವು ಘಟವಿಷಯಕವಾಗಿ ದೆಯೇ ಹೊರತು ಅನೇಕಧರ್ಮವಿಷಯಕವಾಗಿಲ್ಲ. ಹಾಗಾಗಿ ಅತಿವ್ಯಾಪ್ತಿ ಇಲ್ಲ.

೨) ಅನೇಕಾಕಾರಕಲ್ಪನಂ ವಿಕಲ್ಪಃ ಅನೇಕಧರ್ಮವಿಷಯಕಜ್ಞಾನ ಸಂಶಯ ಎಂದು ಹೇಳಿದರೆ 'ವೃಕ್ಷಃ ಶಿಂಶುಪಾ' ಎಂಬ ಸಮುಚ್ಚಯಾತ್ಮಕಜ್ಞಾನದಲ್ಲಿ ಅತಿವ್ಯಾಪ್ತಿ ಬರುತ್ತದೆ. (ವೃಕ್ಷತ್ವ-ಶಿಂಶುಪಾತ್ವ ಎಂಬ ಅನೇಕಧರ್ಮವಿಷಯಕಜ್ಞಾನವಾದ್ದರಿಂದ ಅತಿವ್ಯಾಪ್ತಿ.) ಅದಕ್ಕಾಗಿ ವಿರುದ್ಧ ಎಂದು ಹೇಳಬೇಕು. ವಿರುದ್ಧಧರ್ಮಗಳನ್ನು ವಿಷಯೀಕರಿಸಬೇಕು ಎಂದರ್ಥ. ವೃಕ್ಷತ್ವ-ಶಿಂಶುಪಾತ್ವಗಳು ಒಂದೇಕಡೆ ಇರುವಂತಹ ಧರ್ಮಗಳಾದ್ದರಿಂದ ವಿರುದ್ಧಧರ್ಮಗಳಾಗಿಲ್ಲ. ಹೀಗಾಗಿ 'ವೃಕ್ಷಃ ಶಿಂಶುಪಾ' ಎಂಬ ಜ್ಞಾನವು ವಿರುದ್ಧಾನೇಕಾಕಾರಜ್ಞಾನವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ.

೩) ವಿರುದ್ಧಾನೇಕಾಕಾರಕಲ್ಪನಂ ವಿಕಲ್ಪಃ ವಿರುದ್ಧವಾದ ಅನೇಕಧರ್ಮಗಳನ್ನು ವಿಷಯೀಕರಿಸುವ ಜ್ಞಾನ ಸಂಶಯ ಎಂದು ಹೇಳಿದರೆ 'ಘಟಪಟೌ' ಎಂಬ ಸಮೂಹಾಲಂಬನಜ್ಞಾನದಲ್ಲಿ ಅತಿವ್ಯಾಪ್ತಿ ಬರುತ್ತದೆ. ('ಘಟಪಟೌ' ಎಂಬ ಜ್ಞಾನ ಸಂಶಯ ಅಲ್ಲ, ಅಲಕ್ಷ್ಯ. ಆದರೆ ಘಟತ್ವ-ಪಟತ್ವ ಎಂಬ ವಿರುದ್ಧ ಅನೇಕಾಕಾರವಿಷಯಕವಾದ್ದರಿಂದ ಅತಿವ್ಯಾಪ್ತಿ.) ಅದಕ್ಕಾಗಿ 'ಏಕತ್ರ ಧರ್ಮಿಣಿ' ಎಂದು ಹೇಳಬೇಕು. ಒಂದೇ ಧರ್ಮಿಯಲ್ಲಿ ವಿರುದ್ಧಾನೇಕಾಕಾರವಿಷಯಕವಾಗಿರಬೇಕು ಎಂದರ್ಥ. ಘಟತ್ವ-ಪಟತ್ವಗಳು ವಿರುದ್ಧ ಅನೇಕಧರ್ಮಗಳಾಗಿದ್ದರೂ, 'ಘಟಪಟೌ' ಎಂಬ ಜ್ಞಾನವು ಒಂದೇ ಧರ್ಮಿಯಲ್ಲಿ ಇವುಗಳನ್ನು ವಿಷಯೀಕರಿಸುವ ಜ್ಞಾನವಾಗಿಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ.

ಒಂದೇ ಧರ್ಮಿಯಲ್ಲಿ ವಿರುದ್ಧವಾದ (ವಿರುದ್ಧವಾಗಿ ತೋರುವ) ಅನೇಕ ಆಕಾರಗಳ (ಧರ್ಮಗಳ) ಕಲ್ಪನೆ ಜ್ಞಾನ ವಿಕಲ್ಪ. ಅರ್ಥಾತ್ ಸಂಶಯ ಎಂದರ್ಥ.

ಇಲ್ಲಿ ವಿಕಲ್ಪ ಸಂಶಯ ಎಂದು ಹೇಳಿದ್ದರೂ ಸಹ, ವಿಕಲ್ಪಪದದಿಂದ ಲಕ್ಷಣಾವೃತ್ತಿಯಿಂದ ಸಂಶಯಜನ್ಯವಾಗುವ ಪ್ರಶ್ನೆ ಎಂಬ ಅರ್ಥವನ್ನು ಸ್ವೀಕರಿಸಲಾಗುತ್ತದೆ. (ವಿಕಲ್ಪ ಎಂಬ ಪದಕ್ಕೆ ರೂಢವೃತ್ತಿಯಿಂದ ಸಂಶಯ ಎಂದು ಅರ್ಥ ಇದ್ದರೂ, ಪ್ರಕೃತ ಲಕ್ಷಣಾ ಮಾಡಿ, ಲಕ್ಷಣಾವೃತ್ತಿಯಿಂದ ಪ್ರಶ್ನೆ ಎಂಬ ಅರ್ಥವನ್ನು ಸ್ವೀಕರಿಸುತ್ತೇವೆ ಎಂದು ಭಾವ.)

ಹೌದು ಹಾಗೆ ಪ್ರಶ್ನೆ ಎಂಬ ಅರ್ಥವನ್ನೇ ತೆಗೆದುಕೊಳ್ಳುವ ಉದ್ದೇಶವಿದ್ದರೆ, ಸಂಶಯಾರ್ಥವಾದ ವಿಕಲ್ಪ ಎಂಬ ಪದವನ್ನು ಇಟ್ಟು ಅದಕ್ಕೆ ಪ್ರಶ್ನೆ ಎಂಬ ಅರ್ಥದಲ್ಲಿ ಲಕ್ಷಣಾ ಮಾಡುವುದಕ್ಕಿಂತ, ನೇರವಾಗಿ ಪ್ರಶ್ನೆಶಬ್ದವನ್ನೇ ಇಡಬಹುದಿತ್ತಲ್ಲವೇ?

**'ನ ಚ ಭೇದೇ ಪ್ರಶ್ನೋ ಯುಜ್ಯತೇ'** ಎಂದೇ ಸ್ಪಷ್ಟವಾಗಿ ಹೇಳಲು ಬರುವಾಗ ಅದನ್ನು ಬಿಟ್ಟು **'ನ ಚ ಭೇದೇ ವಿಕಲ್ಪೋ ಯುಜ್ಯತೇ'** ಎಂಬುದಾಗಿ ಲಾಕ್ಷಣಿಕಶಬ್ದಪ್ರಯೋಗ ಮಾಡಿದ್ದು ಏಕೆ ?

ಈ ವಿಧವಾದ ಶಂಕೆಗೆ ಸಮಾಧಾನ ಇಷ್ಟು :- ನೇರವಾಗಿ ಪ್ರಶ್ನೆ ಶಬ್ದವನ್ನೇ ಇಟ್ಟು 'ನ ಚ ಭೇದೇ ಪ್ರಶ್ನೋ ಯುಜ್ಯತೇ' ಎಂಬುದಾಗಿಯೇ ಹೇಳಿಬಿಟ್ಟರೆ ಆಗ ಭೇದವಿಷಯದಲ್ಲಿ ಪ್ರಶ್ನೆ ಯಾಕೆ ಕೂಡುವುದಿಲ್ಲ? ಎಂದು ಕೇಳಿದಾಗ

---

೪) 'ಏಕಸ್ಮಿನ್ ಧರ್ಮಿಣಿ ವಿರುದ್ಧಾನೇಕಾಕಾರಕಲ್ಪನಂ ವಿಕಲ್ಪಃ' ಎಂದು ಹೇಳಿದರೂ 'ಇದಂ ರಜತಂ' ಎಂಬ ಭ್ರಮದಲ್ಲಿ ಅತಿವ್ಯಾಪ್ತಿ ಬರುತ್ತದೆ. ಇದಂತ್ವ-ರಜತತ್ವ ಎಂಬ ವಿರುದ್ಧಧರ್ಮಗಳನ್ನು ಪುರೋವೃತ್ತಿಯಾದ ಒಂದೇ ಧರ್ಮಿಯಲ್ಲಿ ವಿಷಯೀಕರಿಸುವ ಜ್ಞಾನವಾದ್ದರಿಂದ ಅತಿವ್ಯಾಪ್ತಿ . ಆದಕ್ಕಾಗಿ ವಿರೋಧದಲ್ಲಿ ಭಾಸಮಾನತ್ವವನ್ನೂ ವಿವಕ್ಷಿಸುತ್ತೇವೆ. ಅಂದರೆ ಧರ್ಮಗಳಲ್ಲಿ ವಿರೋಧ ತೋರುತ್ತಿರಬೇಕು ಎಂದರ್ಥ. ಪ್ರಕೃತ ಇದಂತ್ವ-ರಜತತ್ವಗಳಲ್ಲಿ ವಿರೋಧ ತೋರುತ್ತಿಲ್ಲವಾದ್ದರಿಂದ ಅತಿವ್ಯಾಪ್ತಿ ಇಲ್ಲ. ಹಾಗಾದರೆ -

''ಏಕಸ್ಮಿನ್ ಧರ್ಮಿಣಿ ಭಾಸಮಾನವಿರೋಧಾನೇಕಾಕಾರವೈಶಿಷ್ಟ್ಯಾವಗಾಹಿಜ್ಞಾನಂ ಸಂಶಯಃ''

(ವಿರುದ್ಧವಾಗಿ ತೋರುವ ಅನೇಕ ಧರ್ಮಗಳನ್ನು ಒಂದೇ ಧರ್ಮಿಯಲ್ಲಿ ವಿಷಯೀಕರಿಸುವ ಜ್ಞಾನವು ಸಂಶಯ)

ಎಂಬುದಾಗಿ ಸಂಶಯಜ್ಞಾನದ ಪರಿಷ್ಕೃತಲಕ್ಷಣವಾಗಿದೆ ಎಂದು ಅಭಿಪ್ರಾಯ.

'ಭೇದವಿಷಯದಲ್ಲಿ ಸಂಶಯ ಕೂಡುವುದಿಲ್ಲವಾದ್ದರಿಂದ ಸಂಶಯಜನ್ಯಪ್ರಶ್ನೆ ಕೂಡವುದಿಲ್ಲ' ಎಂಬುದಾಗಿ ಪ್ರತ್ಯೇಕವಾಗಿ ಉತ್ತರ ಹೇಳಬೇಕಾಗುತ್ತದೆ.

**ನ ಚ ಭೇದೇ ಪ್ರಶ್ನೋ ಯುಜ್ಯತೇ ।** (ಮೊದಲನೇ ಉತ್ತರ)
**ಕುತಃ ಪ್ರಶ್ನೋ ನ ಯುಜ್ಯತೇ? ಇತಿ ಚೇತ್**
**ನ ಚ ಭೇದೇ ಸಂಶಯೋ ಯುಜ್ಯತೇ ।** (ಎರಡನೇ ಉತ್ತರ)

ಹೀಗೆ ಪ್ರತ್ಯೇಕವಾಗಿ ಎರಡು ಉತ್ತರಗಳನ್ನು ಹೇಳಬೇಕಾಗುತ್ತದೆ ಎಂದು ಭಾವ.

ಅದೇ ವಿಕಲ್ಪ ಎಂಬ ಲಾಕ್ಷಣಿಕಶಬ್ದಪ್ರಯೋಗ ಮಾಡಿದರೆ ''**ನ ಚ ಭೇದೇ ವಿಕಲ್ಪೋ ಯುಜ್ಯತೇ**'' ಎಂಬ ಒಂದೇ ವಾಕ್ಯದಲ್ಲಿಯೇ

''ಭೇದವಿಷಯದಲ್ಲಿ ಪ್ರಶ್ನೆ ಕೂಡುವುದಿಲ್ಲ ಯಾಕೆ ? ಪ್ರಶ್ನೆಗೆ ಕಾರಣವಾದ ಸಂಶಯ ಕೂಡುವುದಿಲ್ಲವಾದ್ದರಿಂದ'' ಎಂಬುದಾಗಿ ಎರಡು ಉತ್ತರಗಳೂ ಸಿಗುತ್ತವೆ.

ಹೀಗೆ 'ಪ್ರಶ್ನೆ ಕೂಡುವುದಿಲ್ಲ' ಎನ್ನುವುದಕ್ಕೆ ಸಂಶಯಮೂಲಕತ್ವ ಎಂಬ ಹೇತು ಸೂಚಿತವಾಗುವ ಪ್ರಯೋಜನ ಇರುವುದರಿಂದ, ಪ್ರಶ್ನಪದವನ್ನು ಬಿಟ್ಟು ವಿಕಲ್ಪಪದವನ್ನು ಪ್ರಯೋಗಿಸಿರುವುದು ಸಮಂಜಸವೇ ಆಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** 'ಭೇದವಿಷಯದಲ್ಲಿ ಪ್ರಶ್ನೆಯೇ ಕೂಡುವುದಿಲ್ಲ' ಎಂದು ಹೇಳಿದರು. ಪ್ರಶ್ನೆ ಏಕೆ ಕೂಡುವುದಿಲ್ಲ ? ಎಂದು ಕೇಳಿದಾಗ, ಪ್ರಶ್ನೆಯು ಸಂದೇಹಮೂಲಕವಾಗಿರುತ್ತದೆಯಾದ್ದರಿಂದ ಪ್ರಕೃತ ಭೇದವಿಷಯದಲ್ಲಿ ಸಂಶಯ ಕೂಡುವುದಿಲ್ಲವಾದ್ದರಿಂದ ಸಂಶಯಮೂಲಕವಾದ ಪ್ರಶ್ನೆಯೂ ಕೂಡುವುದಿಲ್ಲ ಎಂದು ಉತ್ತರ ನೀಡಿದರು. ಇದರ ಮೇಲೆ ಭೇದವಿಷಯದಲ್ಲಿ ಸಂಶಯ ಏಕೆ ಕೂಡುವುದಿಲ್ಲ? ಎಂಬ ಪ್ರಶ್ನೆ ಬರುತ್ತದೆ.

ಹೀಗೆ ಈ ಎಲ್ಲ ವಿಷಯಗಳು ಅಸ್ಫುಟವಾಗಿದ್ದರಿಂದ, ಮುಂದಿನ ವಾಕ್ಯಗಳಲ್ಲಿ ಈ ಎಲ್ಲ ವಿಷಯಗಳನ್ನು ಸ್ಫುಟವಾಗಿ (ವಿಸ್ತಾರವಾಗಿ) ನಿರೂಪಿಸುತ್ತಾರೆ -

**ಟೀಕಾ : ಇದಮುಕ್ತಂ ಭವತಿ । ಆಸ್ತಾಮಿದಂ ದೂರೇ ದೂಷಣಾಭಿಧಾನಮ್ । ಪ್ರಶ್ನ ಏವ ತಾವದಯಂ ನ ಯುಜ್ಯತೇ । ಸಂದೇಹಮೂಲತ್ವಾತ್**

**ಪ್ರಶ್ನಸ್ಯ । ನ ಖಲು ಕಶ್ಚಿನ್ನಿಶ್ಚಿತಂ ಪೃಚ್ಛತಿ । ನಾಪ್ಯತ್ಯಂತಾವಿದಿತಮ್ । ನ ಚ ವಿಮತೋ ಭಿನ್ನ ಇತ್ಯುಕ್ತೇ ವಿನಾ ಪ್ರಶ್ನೇನಾಪಸಿದ್ಧಾಂತಾದ್ಯುದ್ಭಾವನಾವಸರೋಽಸ್ತಿ ।**

**ಅನುವಾದ :-** ಇಲ್ಲಿ ನಿರೂಪಿಸಿರುವ ವಿಷಯಗಳ ಅಭಿಪ್ರಾಯ ಇಷ್ಟು :- ''ಅನಿರ್ವಚನೀಯಭೇದವನ್ನು ಸಾಧಿಸುತ್ತೀರೋ ? ಪಾರಮಾರ್ಥಿಕಭೇದವನ್ನು ಸಾಧಿಸುತ್ತೀರೋ ?'' ಎಂಬುದಾಗಿ ಭೇದವಿಷಯದಲ್ಲಿ ಪ್ರಶ್ನೆಯೇ ಮೊದಲು ಕೂಡುವುದಿಲ್ಲ.

ಪ್ರಶ್ನೆ ಏಕೆ ಕೂಡುವುದಿಲ್ಲ ? ಎಂದರೆ, ಪ್ರಶ್ನೆ ಯಾವಾಗಲೂ ಸಂದೇಹಮೂಲಕವಾಗಿರುತ್ತದೆ. (ಮೊದಲು ಸಂದೇಹ ಬಂದು, ಆ ಮೂಲಕ ಪ್ರಶ್ನೆ ಬರುವುದಿರುತ್ತದೆ.) ಅದು ಯಾಕೆಂದರೆ - ಸಂದೇಹ ಇಲ್ಲದೇ ಯಾವ ವ್ಯಕ್ತಿಯೂ ಪ್ರಶ್ನೆ ಮಾಡುವುದಿಲ್ಲ. ಅಂದರೆ ಯಾವುದೇ ವ್ಯಕ್ತಿ ನಿಶ್ಚಿತವಾದದ್ದರ ಬಗ್ಗೆ ಪ್ರಶ್ನೆ ಕೇಳುವುದಿಲ್ಲ. ಮತ್ತು ಏನೂ ಗೊತ್ತಿಲ್ಲದ ವಿಚಾರದಲ್ಲಿಯೂ ಪ್ರಶ್ನೆ ಮಾಡುವುದಿಲ್ಲ. ಇದರಿಂದ ತಿಳಿದುಬರುವುದು ಜ್ಞಾನವಿದ್ದು ನಿಶ್ಚಯವಿಲ್ಲದಿದ್ದಾಗ ಅರ್ಥಾತ್ ಸಂಶಯ ಇದ್ದಾಗ ಮಾತ್ರ ಪ್ರಶ್ನೆ ಕೇಳುತ್ತಾನೆ. ಹೀಗಾಗಿ ಪ್ರಶ್ನೆಯು ಸಂಶಯಮೂಲಕವಾಗಿರುತ್ತದೆ. ಪ್ರಕೃತ ಭೇದವಿಷಯದಲ್ಲಿ ಸಂದೇಹ ಕೂಡುವುದಿಲ್ಲವಾದ್ದರಿಂದ ಪ್ರಶ್ನೆ ಕೂಡುವುದಿಲ್ಲ. 'ವಿಮತೋ ಭಿನ್ನಃ' ಎಂದು ಹೇಳಿದಾಗ ಪ್ರಶ್ನೆಯೇ ಕೂಡದಿದ್ದಮೇಲೆ ಅಪಸಿದ್ಧಾಂತಾದಿದೋಷಗಳು ಬರುವ ಅವಸರವೇ ಇಲ್ಲ.

**ಅವತಾರಿಕೆ :-** 'ಪ್ರಶ್ನೆಯು ಸಂಶಯಮೂಲಕವಾಗಿರುತ್ತದೆ' ಎಂಬುದನ್ನು ಇಟ್ಟುಕೊಂಡು ಭೇದವಿಷಯದಲ್ಲಿ ಸಂಶಯ ಕೂಡುವುದಿಲ್ಲವಾದ್ದರಿಂದ ಪ್ರಶ್ನೆಯೂ ಕೂಡುವುದಿಲ್ಲ ಎಂದು ಹೇಳುತ್ತಿದ್ದೀರಿ. ಆದರೆ 'ಪ್ರಶ್ನೆಯು ಸಂಶಯಮೂಲಕವಾಗಿರುತ್ತದೆ' ಎಂದೇ ಹೇಗೆ ಹೇಳುತ್ತೀರಿ ? ಎಂಬುದಾಗಿ ಆಕ್ಷೇಪ ಬಂದರೆ, ಸಂಶಯಮೂಲಕವಾಗಿಯೇ ಪ್ರಶ್ನೆ ಉದ್ಭವಿಸುತ್ತದೆ ಎಂಬುದನ್ನು ವಿಸ್ತಾರವಾಗಿ ನಿರೂಪಿಸುತ್ತಾರೆ -

### ಪ್ರಶ್ನೆಯು ಸಂಶಯಮೂಲಕವಾಗಿರುತ್ತದೆ ಎಂದು ಸಮರ್ಥನೆ

**ಟೀಕಾ : ನನು ವಿನಾಽಪಿ ಸಂದೇಹಾತ್ ಪ್ರಶ್ನೋ ಭವತಿ । ಯಥಾ ದೇವದತ್ತ ಕಿಯಂತಸ್ತನಯಾಸ್ತವೇತಿ । ಮೈವಮ್ । ತತ್ರಾಪಿ ಪುತ್ರತ್ವ-**

**ಸಾಮಾನ್ಯಸ್ಯ ಸಂಖ್ಯಾವಿಶೇಷಸಮಾನಾಧಿಕರಣತಯಾ ಅನುಭೂತತ್ವೇನ ತತ್ಪ್ರತಿಭಾಸೇ ಸತಿ ಸಂಸ್ಕಾರೋದ್ಬೋಧಾತ್ ಸಂಖ್ಯಾವಿಶೇಷಸ್ಮೃತೌ ತತ್ರಾನ್ಯತಮಜಿಜ್ಞಾಸಾಯಾಂ ನಿಶ್ಚಾಯಕಪ್ರಮಾಣಾಭಾವೇನ ಸಂಶಯೋದಯಸ್ಯ ನ್ಯಾಯಪ್ರಾಪ್ತತ್ವೇನ ತನ್ಮೂಲತ್ವಾತ್ ।**

**ಕೇವಲಂ ಸಂಖ್ಯಾಪ್ರಭೇದಾನಾಂ ಬಾಹುಲ್ಯಾದ್ಗೌರವಭಯೇನ ಏಕೋ ದ್ವೌ ವೇತ್ಯಾದಿವಿಶೇಷನಿರ್ದೇಶೇನ ವಿನಾ ಕಿಯಂತ ಇತಿ ಸಾಮಾನ್ಯೇನ ಪ್ರಶ್ನಃ ಕ್ರಿಯತೇ ।**

**ಅನುವಾದ :-** 'ಸಂಶಯಮೂಲಕವಾಗಿಯೇ ಪ್ರಶ್ನೆ ಉದ್ಭವಿಸುತ್ತದೆ' ಎಂದು ಹೇಳುವುದು ಸರಿಯಲ್ಲ. ಕಾರಣ- ಸಂದೇಹ ಇಲ್ಲದೆಯೇ ಪ್ರಶ್ನೆ ಉದ್ಭವಿಸುವುದು ಕಂಡಿದೆ. ಉದಾ- ಬಹಳ ದಿನಗಳ ಅನಂತರ ದೇವದತ್ತನನ್ನು ಭೇಟಿಯಾದ ವ್ಯಕ್ತಿ ದೇವದತ್ತನನ್ನು ಕುರಿತು ಹೇ ದೇವದತ್ತ ! ನಿನಗೆ ಎಷ್ಟು ಜನ ಮಕ್ಕಳು ? ಎಂದು ಕೇಳುತ್ತಾನೆ. ಇಲ್ಲಿ ಪ್ರಶ್ನೆ ಮಾಡುವ ಮುಂಚೆ ದೇವದತ್ತನಿಗೆ ಇಷ್ಟು ಮಕ್ಕಳೋ ? ಅಷ್ಟು ಮಕ್ಕಳೋ ? ಎಂಬುದಾಗಿ ಸಂಶಯ ಏನೂ ಇರುವುದಿಲ್ಲ. ಸಹಜವಾಗಿಯೇ ಎಷ್ಟುಜನ ಮಕ್ಕಳು ? ಎಂದು ಕೇಳಿದ್ದಾನೆ. ಅಂದಮೇಲೆ ಸಂಶಯ ಇಲ್ಲದೆಯೂ ಪ್ರಶ್ನೆ ಮಾಡುವುದು ಕಂಡಿದೆಯಾದ್ದರಿಂದ 'ಸಂಶಯಮೂಲಕವಾಗಿಯೇ ಪ್ರಶ್ನೆ ಉದ್ಭವಿಸುತ್ತದೆ' ಎಂದು ಹೇಳುವುದು ಸರಿಯಲ್ಲ.

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ- ಅಲ್ಲಿಯೂ ಸಹ ಸಂಶಯಮೂಲಕವಾಗಿಯೇ ಪ್ರಶ್ನೆ ಮಾಡಿರುವುದು.

ಅದು ಹೇಗೆಂದರೆ- ಪುತ್ರತ್ವ ಎಂಬ ಸಾಧಾರಣಧರ್ಮವು ಏಕತ್ವ-ದ್ವಿತ್ವ-ತ್ರಿತ್ವ ಮೊದಲಾದ ಸಂಖ್ಯಾವಿಶೇಷಸಮಾನಾಧಿಕರಣವಾಗಿ ಅನುಭೂತವಾಗಿದೆ. (ಒಬ್ಬ ಮಗ ಇದ್ದಲ್ಲಿ ಆ ಒಬ್ಬ ಮಗನಲ್ಲಿ ಪುತ್ರತ್ವ ಹಾಗೂ ಏಕತ್ವ ಎರಡೂ ಇದ್ದು ಪುತ್ರತ್ವವು ಏಕತ್ವಸಮಾನಾಧಿಕರಣವಾಗಿ, ಇಬ್ಬರು ಮಕ್ಕಳಿದ್ದಲ್ಲಿ ಆ ಮಕ್ಕಳಲ್ಲಿ ಪುತ್ರತ್ವ ಹಾಗೂ ದ್ವಿತ್ವ ಎರಡೂ ಇದ್ದು ಪುತ್ರತ್ವವು ದ್ವಿತ್ವಸಮಾನಾಧಿಕರಣವಾಗಿ ಹೀಗೆ ಅನುಭೂತವಾಗಿದೆ ಎಂದರ್ಥ.) ಹೀಗಾಗಿ ಇಲ್ಲಿ ಏಕತ್ವ-ದ್ವಿತ್ವ-ತ್ರಿತ್ವ ಮೊದಲಾದ ಸಂಖ್ಯಾವಿಶೇಷಗಳೇ ಕೋಟಿಗಳು. ಅಂತಹ ಬಹುಕೋಟಿ

ಸಹಚರಿತವಾಗಿ ಕಂಡಿದೆ ಪುತ್ರತ್ವಸಾಧಾರಣಧರ್ಮ. ಅಂತಹ ಪುತ್ರತ್ವದ ಪ್ರತಿಭಾಸವಾದಾಗ, ಸಂಸ್ಕಾರದ ಉದ್ಬೋಧವಾಗಿ, ಕೋಟಿಗಳಾದ ಸಂಖ್ಯಾವಿಶೇಷಗಳ ಸ್ಮರಣೆ ಬಂದು, ಒಂದೋ ಎರಡೋ, ಮೂರೋ ಎಂಬುದಾಗಿ ಜಿಜ್ಞಾಸೆ ಬಂದಾಗ, ನಿಶ್ಚಾಯಕವಾದ ಪ್ರಮಾಣ ಯಾವುದೂ ಉಪಲಬ್ಧವಾಗದ ಕಾರಣ 'ದೇವದತ್ತನಿಗೆ ಒಬ್ಬ ಮಗನೋ ? ಇಬ್ಬರು ಮಕ್ಕಳೋ ? ಮೂವರೋ' ಎಂಬುದಾಗಿ ಸಂಶಯ ಹುಟ್ಟುವುದು (ಕೋಟಿಗಳು ಬಹಳ ಇರುವ ಕಾರಣ 'ಕಿಂಸಂಜ್ಞಕೋಽಯಂ ವೃಕ್ಷಃ' ಇತ್ಯಾದಿಗಳಂತೆ ಅನಿರ್ದಿಷ್ಟಕೋಟಿಕವಾದ ಸಂಶಯ ಹುಟ್ಟುವುದು) ನ್ಯಾಯಪ್ರಾಪ್ತವೇ ಆಗಿದೆ. ಈ ವಿಧವಾದ ಸಂಶಯ ಬಂದ ನಂತರ 'ಎಷ್ಟು ಜನ ಮಕ್ಕಳು ?' ಎಂಬ ಪ್ರಶ್ನೆ ಕೇಳಿರುವುದು. ಆದ್ದರಿಂದ ಅಲ್ಲಿಯೂ ಸಂಶಯಮೂಲಕವಾಗಿಯೇ ಪ್ರಶ್ನೆ ಬಂದದ್ದು.

ಹಾಗಾದರೆ ಇತರ ಸಂಶಯಗಳು ಬರುವ ರೀತಿಯಲ್ಲಿಯೇ ಇಲ್ಲಿಯೂ ಸಂಶಯ ಬರುತ್ತದೆ ಎಂದಾದರೆ, ಇತರ ಸಂಶಯಗಳಲ್ಲಿ ಎರಡು ಕೋಟಿಗಳಿರುವುದರಿಂದ 'ಸ್ಥಾಣುರ್ವಾ ಪುರುಷೋ ವಾ' ಎಂದು ಸಂಶಯ ಬರುವಂತೆ, ಇಲ್ಲಿಯೂ ಎರಡು ಕೋಟಿಗಳಿದ್ದು 'ಏಕೋ ವಾ ದ್ವೌ ವಾ' ಎಂದೇ ಸಂಶಯ ಬರಬೇಕು. 'ದೇವದತ್ತ ! ಏಕಃ ಪುತ್ರೋ ವಾ ದ್ವೌ ಪುತ್ರೌ ವಾ' ಎಂದೇ ಪ್ರಶ್ನೆ ಕೇಳಬೇಕು. ಹಾಗೆ ಕೇಳದೇ 'ಕಿಯಂತಃ ತವ ಪುತ್ರಾಃ' ಎಂದೇಕೆ ಕೇಳುತ್ತಾರೆ ?

ನಿಜವೇ. ಇತರ ಸಂಶಯಗಳಲ್ಲಿ ಎರಡು ಕೋಟಿಗಳಿರುತ್ತವೆ ಎನ್ನುವುದು ಸತ್ಯವೇ. ಅಂತೆಯೇ ಕೋಟಿಗಳ ಉಲ್ಲೇಖದೊಂದಿಗೆ 'ಸ್ಥಾಣುರ್ವಾ ಪುರುಷೋ ವಾ' ಎಂದು ಸಂಶಯ ಬರುವುದು ನಿಜವೇ. ಆದರೆ ಸಂಶಯದಲ್ಲಿ ಎರಡೇ ಕೋಟಿಗಳಿರುತ್ತವೆ ಎನ್ನುವುದು ತಪ್ಪು. ಸಂಶಯದಲ್ಲಿ ಬಹಳ ಕೋಟಿಗಳೂ ಇರುತ್ತವೆ.

ಪ್ರಕೃತದಲ್ಲಿ ಏಕತ್ವ-ದ್ವಿತ್ವ-ತ್ರಿತ್ವ ಇತ್ಯಾದಿ ಸಂಖ್ಯಾಪ್ರಭೇದಗಳು(ಕೋಟಿಗಳು) ಬಹಳ ಇರುವ ಕಾರಣ, ಏಕೋ ವಾ ? ದ್ವೌ ವಾ ? ತ್ರೀಣಿ ವಾ ? ಚತ್ವಾರಿ ವಾ ? ಇತ್ಯಾದಿಯಾಗಿ ವಿಶೇಷನಿರ್ದೇಶ ಮಾಡುತ್ತಾ ಹೋದರೆ ಗೌರವ ಬರುವುದರಿಂದ (ಎಲ್ಲ ಕೋಟಿಗಳನ್ನೂ ಉಲ್ಲೇಖಿಸುತ್ತಾ ಹೋದರೆ ಗುರುಭೂತವಾಗುವುದರಿಂದ) ಏಕೋ ವಾ ? ದ್ವೌ ವಾ ? ಇತ್ಯಾದಿಯಾಗಿ

ವಿಶೇಷನಿರ್ದೇಶ ಮಾಡದೇ, 'ಕಿಯಂತಃ ?' ಎಂಬುದಾಗಿ ಸಾಮಾನ್ಯವಾಗಿ (ಅಭಿಪ್ರೇತವಾದ ಎಲ್ಲ ಅರ್ಥಗಳನ್ನೂ ಸಂಗ್ರಹಿಸುವ ಸಂಕುಚಿತಶಬ್ದದಿಂದ) ಪ್ರಶ್ನೆ ಮಾಡುವುದುಂಟು. ಆದ್ದರಿಂದ ಯಾವ ಅನುಪಪತ್ತಿ ಇಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ಸಂಶಯಮೂಲಕವಾಗಿಯೇ ಪ್ರಶ್ನೆ ಬರುತ್ತದೆ ಎಂಬ ನಿಯಮಕ್ಕೆ ಮತ್ತೊಂದು ಸ್ಥಲದಲ್ಲಿ ವ್ಯಭಿಚಾರಶಂಕೆ ಬಂದರೆ, ಅದಕ್ಕೂ ಸಮಾಧಾನ ಹೇಳುತ್ತಾರೆ -

**ಟೀಕಾಃ ಅಥಾತ್ರ, ಗಿರಿದರ್ಯಾಂ ಕಿಮಪ್ಯದ್ರಾಕ್ಷಮಿತ್ಯುಕ್ತೇ ಕಿಂಲಕ್ಷಣಕಂ ತದಿತಿ ಪೃಚ್ಛತಿ । ತದಾ ಕಥಂ ಸಂದೇಹಹೇತುಕತ್ವಮ್ । ವಿಶೇಷಸ್ಮರಣೋಪಾಯಾಭಾವಾದಿತಿ ಚೇನ್ನ । ತತ್ರಾಪಿ ವಸ್ತುತ್ವೇನ ಲಕ್ಷಣಸದ್ಭಾವಮನುಮಾಯ ತತಸ್ತದ್ವಿಶೇಷಸ್ಮೃತೌ ತತ್ಕಿಮನು- ಭೂತೇಷ್ವನ್ಯತಮಮನ್ಯದ್ವೇತಿ ಸಂದೇಹಾದೇವ ಪ್ರಶ್ನಾತ್ ।**

**ಅಸ್ತು ವಾ ಅನ್ಯತ್ರ ಪ್ರಶ್ನೋ ಯಥಾ ತಥಾ । ಅನೇಕಕೋಟ್ಯವಲಂಬೀ ಪ್ರಕೃತಸ್ತಾವತ್ ಸಂದೇಹಮೂಲ ಏವಾಂಗೀಕಾರ್ಯಃ ।**

**ಅನುವಾದ :-** 'ಗುಡ್ಡದ ಗುಹೆಯಲ್ಲಿ ಏನನ್ನೋ ನೋಡಿದೆ ನಾನು' ಎಂಬುದಾಗಿ ಹೇಳಿದಾಗ, 'ಕಿಂಲಕ್ಷಣಕಂ ತತ್' ಅದು ಎಂತಹ ಲಕ್ಷಣ-ವಿಶಿಷ್ಟವಾಗಿತ್ತು ? ಎಂದು ಪ್ರಶ್ನಿಸುತ್ತಾರೆ. ಇಲ್ಲಿ ಪ್ರಶ್ನೆಯು ಸಂದೇಹಮೂಲಕ ಹೇಗೆ ? ಯಾಕೆಂದರೆ- ಈ ಪ್ರಶ್ನೆಗೆ ಹೇತುವಾದ ಸಂಶಯದಲ್ಲಿ ಗಿರಿದರೀವಿವರವರ್ತಿವಸ್ತುವಿನಲ್ಲಿ (ಗುಡ್ಡದ ಗುಹೆಯಲ್ಲಿರುವ ಆ ವಸ್ತುವಿನಲ್ಲಿ) ಲಕ್ಷಣವತ್ತ್ವಜ್ಞಾನವು ಸಾಧಾರಣಧರ್ಮದರ್ಶನವಾಗಿದೆ. ಲಕ್ಷಣವಿಶೇಷಗಳು ಕೋಟಿಗಳಾಗಿವೆ. ಸಾಮಾನ್ಯವಾಗಿ ಸಾಧಾರಣಧರ್ಮದರ್ಶನವು ಕೋಟಿಸ್ಮರಣೆಗೆ ಉಪಾಯವಾಗಿರುತ್ತದೆಯಾದ್ದರಿಂದ ಪ್ರಕೃತ ಆ ಗಿರಿದರೀವಿವರವರ್ತಿಯಾದ ವಸ್ತುವಿನಲ್ಲಿ ಲಕ್ಷಣವತ್ತ್ವಜ್ಞಾನವು ಕೋಟಿಸ್ಮರಣೆಗೆ ಉಪಾಯವಾಗಬೇಕು. ಆದರೆ ಆ ಗಿರಿದರೀವಿವರವರ್ತಿಯಾದ ವಸ್ತು ವ್ಯವಹಿತವಾದ್ದರಿಂದ ಲಕ್ಷಣವತ್ತ್ವಜ್ಞಾನವೇ (ಸಾಧಾರಣಧರ್ಮದರ್ಶನವೇ) ಇಲ್ಲ. ಹೀಗಾಗಿ ಕೋಟಿಸ್ಮರಣೆಗೆ ಉಪಾಯ-ವಾದದ್ದು ಇಲ್ಲವಾದ್ದರಿಂದ (ಸಾಧಾರಣಧರ್ಮದರ್ಶನ ಲಕ್ಷಣವತ್ತ್ವಜ್ಞಾನವೇ ಇಲ್ಲವಾದ್ದರಿಂದ) ಸಂಶಯ ಹೇಗೆ ಬರಲು ಸಾಧ್ಯ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ ವಸ್ತು ವ್ಯವಹಿತವಾದ್ದರಿಂದ ಸಾಧಾರಣಧರ್ಮದರ್ಶನ ಲಕ್ಷಣವತ್ತ್ವಜ್ಞಾನವು ಪ್ರತ್ಯಕ್ಷರೂಪವಾದದ್ದು ಇಲ್ಲದಿದ್ದರೂ ಸಹ ಅನುಮಿತಿರೂಪವಾದದ್ದು ಇದೆ.

ಅಂದರೆ, ಒಂದು ವಸ್ತು ಎಂದಮೇಲೆ ಅದಕ್ಕೊಂದು ಲಕ್ಷಣ ಅಸಾಧಾರಣ-ಧರ್ಮ ಇರಲೇಬೇಕು ಎಂದು ನಿಯಮ. ಹೀಗಾಗಿ-

**ಗಿರಿದರೀವಿವರವರ್ತಿ ವಸ್ತು ಲಕ್ಷಣವಿಶಿಷ್ಟಂ ವಸ್ತುತ್ವಾತ್ ಘಟಾದಿವತ್ ।**

ಗಿರಿದರೀವಿವರವರ್ತಿಯಾದ ಆ ವಸ್ತುವೂ ಒಂದು ವಸ್ತುವಾದ್ದರಿಂದ ಅದಕ್ಕೊಂದು ಲಕ್ಷಣ ಇದೆ ಎಂಬುದಾಗಿ ಲಕ್ಷಣವತ್ತ್ವವನ್ನು ಅನುಮಾನದಿಂದ ಸಾಧಿಸಿ (ನಿಶ್ಚಯಿಸಿಕೊಂಡು), ಸಾಧಾರಣಧರ್ಮದರ್ಶನ ಲಕ್ಷಣವತ್ತ್ವಜ್ಞಾನ ಆಗಿದ್ದರಿಂದ ಅದರಿಂದ ಕೋಟಿಸ್ಮರಣೆ ಬಂದು, (ಆ ವಿಧವಾದ ಲಕ್ಷಣ, ಈ ವಿಧವಾದ ಲಕ್ಷಣಗಳ ಸ್ಮರಣೆ ಬಂದು), ಅನ್ಯತರಕೋಟಿನಿಶ್ಚಾಯಕವಾದ ಯಾವ ಪ್ರಮಾಣವೂ ಉಪಲಬ್ಧವಾಗದೇ

**ತತ್ ಕಿಂ ಅನುಭೂತೇಷು ಅನ್ಯತಮಮ್ ? ಅನ್ಯತ್ ವಾ ?**

ಆ ಗಿರಿದರೀವಿವರವರ್ತಿಯಾದ ವಸ್ತು ಅನುಭೂತಲಕ್ಷಣವಿಶಿಷ್ಟಪದಾರ್ಥ-ಗಳಲ್ಲಿ ಒಂದೋ ? ಅಥವಾ ಅನನುಭೂತಲಕ್ಷಣವಿಶಿಷ್ಟವಾದದ್ದೋ? ಎಂಬುದಾಗಿ ಸಂದೇಹ ಬಂದೇ ಆ ಮೂಲಕವಾಗಿ 'ಕಿಂಲಕ್ಷಣಕಂ ತತ್' (ಅದು ಎಂತಹ ಲಕ್ಷಣವಿಶಿಷ್ಟವಾದದ್ದು?) ಎಂದು ಪ್ರಶ್ನೆ ಮಾಡುವುದು. ಹೊರತು ಅಲ್ಲಿಯೂ ಸಂದೇಹವಿಲ್ಲದೇ ಪ್ರಶ್ನೆ ಬಂದದ್ದಲ್ಲ ಎಂದು ಅಭಿಪ್ರಾಯ.

ಆದರೂ ಎಲ್ಲ ಪ್ರಶ್ನೆಗಳೂ ಸಂಶಯಮೂಲಕವೇ ಆಗಿರುತ್ತವೆ ಎಂಬ ನಿಯಮ ಸರಿಯಲ್ಲ. ಯಾಕೆಂದರೆ- ಸರ್ವಜ್ಞನಾದ ಭಗವಂತನು ಮಾಡುವ ಪ್ರಶ್ನೆಗಳಲ್ಲಿ ಮೂಲಭೂತವಾಗಿ ಸಂಶಯ ಇರಲು ಸಾಧ್ಯವಿಲ್ಲ. (ಸರ್ವಜ್ಞನಾದ್ದರಿಂದ ಸಂಶಯ ಬರಲು ಸಾಧ್ಯವಿಲ್ಲ.)

ಹಾಗಿದ್ದರೆ ಪ್ರಶ್ನೆಯನ್ನಾದರೂ ಏಕೆ ಕೇಳುತ್ತಾನೆ ಭಗವಂತ ? ಎಂದರೆ,

**ಜಾನಂತೋಽಪಿ ವಿಶೇಷಾರ್ಥಜ್ಞಾನಾಯ ಸ್ಥಾಪನಾಯ ವಾ ।**
**ಪೃಚ್ಛಂತಿ ಸಾಧವಃ ........**

ಎಂಬುದಾಗಿ ಹೇಳಿದಂತೆ ಭಕ್ತರ ಪರವಾಗಿ ಪ್ರಶ್ನೆ ಮಾಡುತ್ತಾನೆ. ಅವರ ಮೂಲಕ ಜಗತ್ತಿಗೆ ತತ್ತ್ವೋಪದೇಶ ಮಾಡಿಸುವುದಕ್ಕೋಸ್ಕರ ಪ್ರಶ್ನೆ ಮಾಡುತ್ತಾನೆ. ಆದ್ದರಿಂದ ಪ್ರಶ್ನೆ ಉಪಪನ್ನ. ಆದರೆ ಸರ್ವಜ್ಞನಾದ ಭಗವಂತನ ಪ್ರಶ್ನೆಯ ಹಿನ್ನೆಲೆಯಲ್ಲಿ ಸಂಶಯ ಇರದ ಕಾರಣ, ಎಲ್ಲ ಪ್ರಶ್ನೆಗಳೂ ಸಂಶಯಮೂಲಕ ಬರುತ್ತವೆ ಎನ್ನುವುದು ಸರಿಯಲ್ಲ.

ಈ ವಿಧವಾಗಿ ಆಕ್ಷೇಪ ಬಂದರೆ, ಅನಾಸ್ಥೆಯಿಂದ ಸಮಾಧಾನ ಹೇಳುತ್ತಾರೆ- ''**ಅಸ್ತು ವಾ**'' ಎಂದು. ಬೇರೆ ಸ್ಥಲಗಳಲ್ಲಿ ಪ್ರಶ್ನೆಯು ಸಂಶಯಮೂಲಕವಾಗಿ ಇರಲಿ, ಇಲ್ಲದೆಯೂ ಇರಲಿ. ಆದರೆ ಶಿಷ್ಯರೇ ಮೊದಲಾದವರು ಮಾಡುವ ಪ್ರಶ್ನೆಯು ಮಾತ್ರ ಸಂದೇಹಮೂಲಕವೇ ಆಗಿರುತ್ತದೆ. ಹೀಗಾಗಿ ಪ್ರಕೃತ ಪ್ರತಿವಾದಿಗಳು ಭೇದವಿಷಯದಲ್ಲಿ ಮಾಡುತ್ತಿರುವ ಪ್ರಶ್ನೆಯೂ ಕೂಡ ಸಂಶಯಮೂಲಕವೇ ಆಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಪ್ರಶ್ನೆಯು ಸಂದೇಹಮೂಲಕವಾಗಿರುತ್ತದೆ ಎನ್ನುವುದನ್ನು ಈವರೆಗೆ ಸಮರ್ಥಿಸಿ, ಪ್ರಕೃತ ಭೇದವಿಷಯದಲ್ಲಿ ಸಂದೇಹ ಕೂಡದ ಕಾರಣ ಪ್ರಶ್ನೆಯು ಕೂಡುವುದಿಲ್ಲ ಎಂದು ಉತ್ತರಿಸಿ, ಭೇದವಿಷಯದಲ್ಲಿ ಸಂದೇಹ ಯಾಕೆ ಕೂಡುವುದಿಲ್ಲ ಎನ್ನುವುದನ್ನು ತೋರಿಸಿಕೊಡುತ್ತಾರೆ-

### ಭೇದವಿಷಯದಲ್ಲಿ ಪಾರಮಾರ್ಥಿಕತ್ವಾದಿಕೋಟಿಕಸಂಶಯ ಕೂಡುವುದಿಲ್ಲ ಎಂದು ಸಮರ್ಥನೆ

**ಟೀಕಾ : ಅಸ್ತು ಸಂದೇಹಮೂಲತ್ವಂ ಪ್ರಶ್ನಸ್ಯ । ತಥಾಪಿ ಕುತೋ ನ ಯುಜ್ಯತ ಇತ್ಯತ್ರಾಪಿ 'ನ ಚ ಭೇದೇ ವಿಕಲ್ಪೋ ಯುಜ್ಯತೇ' ಇತ್ಯೇವೋತ್ತರಮ್ । ಪ್ರಶ್ನೋ ಹಿ ಸಂದೇಹಹೇತುಕ ಇತ್ಯುಕ್ತಮ್ । ನ ಚ ಭೇದೇ ಭೇದವಿಷಯೇ 'ಕಿಮಯಮನಿರ್ವಚನೀಯೋಽಥವಾ ಪಾರಮಾರ್ಥಿಕಃ' ಇತ್ಯೇವಂರೂಪೋ ವಿಕಲ್ಪಃ ಸಂದೇಹೋ ಯುಜ್ಯತೇ । ನ ಚ ಕಾರಣಾಭಾವೇ ಕಾರ್ಯಮುತ್ಪತ್ತುಮರ್ಹತಿ । ಅತಿಪ್ರಸಂಗಾತ್ ।**

**ಅಥೈವಂವಿಧೋ ಭೇದೇ ಸಂದೇಹಃ ಕುತೋ ನ ಯುಜ್ಯತ ಇತ್ಯತ್ರಾಪಿ 'ನ ಚ ಭೇದೇ ವಿಕಲ್ಪೋ ಯುಜ್ಯತೇ' ಇತ್ಯೇವೋತ್ತರಮ್ । ಸಂಶಯೋ ಹಿ ಸ್ಥಾಣುಪುರುಷಾದ್ಯ-**

**ನೇಕವಿಶೇಷಸಂಬಂಧಿತಯಾ ಅನುಭೂತೇನೋರ್ಧ್ವತ್ವಾದಿ-ಸಾಧಾರಣಧರ್ಮೇಣಾಲಿಂಗಿತಸ್ಯ ಪುರೋವೃತ್ತಿವಸ್ತುನೋಽವ-ಭಾಸೇ ಸಂಸ್ಕಾರೋದ್ಬೋಧದ್ವಾರೇಣ ಪ್ರಾಗನುಭೂತಸ್ಥಾಣ್ವಾದಿ-ವಿಶೇಷವಿಷಯಸ್ಮೃತೌ ಪ್ರಯೋಜನಾನುಸಂಧಾನೇ ವಿಶೇಷ-ಜಿಜ್ಞಾಸಾಯಾಂ ಅನ್ಯತರನಿಶ್ಚಾಯಕಪ್ರಮಾಣಮನುಸರತೋಽಪಿ ತದಲಾಭೇ ಸತಿ 'ಕಿಮಯಂ ಸ್ಥಾಣುಸ್ಸ್ಯಾತ್ ಪುರುಷೋ ವಾ' ಇತಿ ಜಾಯತೇ ।**

**ನ ಚ ಭೇದೇಽನಿರ್ವಚನೀಯಃ ಪಾರಮಾರ್ಥಿಕ ಇತಿ ವಿಕಲ್ಪಃ ಪ್ರಭೇದೋ ಯುಜ್ಯತೇ । ಯೇನ ವಿಮತೋ ಭಿನ್ನ ಇತ್ಯುಕ್ತ್ಯಾ ಭೇದಪ್ರತೀತಾವನಿರ್ವಚನೀಯಾದಿಸ್ಮೃತಿಃ ಸ್ಯಾತ್ ।**

**ಅನುವಾದ :-** ಪ್ರಶ್ನೆಯು ಸಂದೇಹಮೂಲಕವಾಗಿರುತ್ತದೆ ಎಂದು ಹೇಳಿದಿರಿ, ಸಮರ್ಥಿಸಿದಿರಿ. ಒಪ್ಪೋಣ. ಸಂದೇಹಮೂಲಕವಾಗಿಯೇ ಪ್ರಶ್ನೆ ಬರುತ್ತದೆ ಎಂದು ಆಗಲಿ. ಆದರೂ ಪ್ರಕೃತ ಭೇದವಿಷಯದಲ್ಲಿ ಪ್ರಶ್ನೆ ಏಕೆ ಕೂಡುವುದಿಲ್ಲ? ಎಂಬ ಶಂಕೆಗೂ ''**ನ ಚ ಭೇದೇ ವಿಕಲ್ಪೋ ಯುಜ್ಯತೇ**'' ಎಂಬ ಮಾತೇ ಉತ್ತರವಾಗಿದೆ.

ಪ್ರಶ್ನೆಯು ಸಂದೇಹಮೂಲಕವಾಗಿರುತ್ತದೆ ಎಂದು ಹೇಳಲಾಗಿದೆ. **ಭೇದೇ** ಭೇದವಿಷಯದಲ್ಲಿ **ವಿಕಲ್ಪಃ** ''ಅನಿರ್ವಚನೀಯವಾದ ಭೇದವೋ ಪಾರಮಾರ್ಥಿಕವಾದ ಭೇದವೋ'' ಎಂದು ಈ ವಿಧವಾದ ಸಂದೇಹವು **ನ ಚ ಯುಜ್ಯತೇ** ಕೂಡುವುದಿಲ್ಲ. ಕಾರಣವಾದ ಸಂದೇಹವು ಕೂಡುವುದಿಲ್ಲವಾದ್ದರಿಂದ ಕಾರ್ಯವಾದ ಪ್ರಶ್ನೆಯು ಕೂಡುವುದಿಲ್ಲ ಎಂದು ಮೂಲಾರ್ಥ.

ಕಾರಣವಾದ ಸಂಶಯ ಇಲ್ಲದಿದ್ದರೇನು ? ಕಾರ್ಯವಾದ ಪ್ರಶ್ನೆ ಇರಲಿ ಎಂಬುದಾಗಿ ಹೇಳಲು ಬರುವುದಿಲ್ಲ. ಏಕೆಂದರೆ - ಹಾಗೆ ಹೇಳುವುದಾದರೆ ಎಲ್ಲಕಡೆಯೂ ಕಾರಣ ಇಲ್ಲದೆಯೇ ಕಾರಣ ಹುಟ್ಟಲಿ ಎಂಬ ಅತಿಪ್ರಸಂಗ ಬರಬೇಕಾಗುತ್ತದೆ. ಆದ್ದರಿಂದ ಭೇದವಿಷಯದಲ್ಲಿ 'ಅನಿರ್ವಚನೀಯವಾದ ಭೇದವೋ ? ಪಾರಮಾರ್ಥಿಕವಾದ ಭೇದವೋ ?' ಎಂಬುದಾಗಿ ಸಂದೇಹ ಕೂಡದ ಕಾರಣ ಪ್ರಶ್ನೆಯೂ ಕೂಡುವುದಿಲ್ಲ.

ಹೌದು, ಭೇದವಿಷಯದಲ್ಲಿ 'ಅನಿರ್ವಚನೀಯವಾದ ಭೇದವೋ ಪಾರಮಾರ್ಥಿಕವಾದ ಭೇದವೋ' ಎಂಬ ಸಂದೇಹ ಏಕೆ ಕೂಡುವುದಿಲ್ಲ? ಎಂಬ ಶಂಕೆಗೂ **''ನ ಚ ಭೇದೇ ವಿಕಲ್ಪೋ ಯುಜ್ಯತೇ''** ಎಂಬ ಮಾತೇ ಉತ್ತರವಾಗಿದೆ. ಅದು ಹೇಗೆಂದರೆ -

ಜಗತ್ತಿನಲ್ಲಿ ಯಾವುದೇ ಒಂದು ಸಂದೇಹ ಹೇಗೆ ಬರುತ್ತದೆ ? ಅದನ್ನು ಸ್ವಲ್ಪ ಗಮನಿಸಬೇಕು. ಸಂದೇಹ ಹೇಗೆ ಬರುತ್ತದೆ ಎಂದರೆ- ಊರ್ಧ್ವತಾ ಎಂಬ ಧರ್ಮವು ಸ್ಥಾಣುತ್ವ-ಪುರುಷತ್ವ ಎಂಬ ಕೋಟಿಗಳಿಂದ ಸಹಚರಿತವಾಗಿ ಅನುಭೂತವಾಗಿರುತ್ತದೆ. ಸ್ಥಾಣುತ್ವ ಇರುವ ಸ್ಥಾಣುವಿನಲ್ಲಿಯೂ ಊರ್ಧ್ವತಾ ಕಂಡಿರುತ್ತೇವೆ, ಪುರುಷತ್ವ ಇರುವ ಪುರುಷನಲ್ಲಿಯೂ ಊರ್ಧ್ವತಾವನ್ನು ಕಂಡಿರುತ್ತೇವೆ ಎಂದರ್ಥ. ಹೀಗೆ ಸ್ಥಾಣುತ್ವ-ಪುರುಷತ್ವ ಎಂಬ ಕೋಟಿದ್ವಯ-ಸಹಚರಿತವಾದ ಊರ್ಧ್ವತಾ ಎಂಬ ಸಾಧಾರಣಧರ್ಮವನ್ನು ಪುರೋವೃತ್ತಿಯಾದ ವಸ್ತುವಿನಲ್ಲಿ ಕಂಡಾಗ, ಸಂಸ್ಕಾರದ ಉದ್ಬೋಧವಾಗಿ, ಹಿಂದೆ ಅನುಭೂತವಾದ ಸ್ಥಾಣುತ್ವ-ಪುರುಷತ್ವ ಕೋಟಿಗಳ ಸ್ಮರಣೆ ಉಂಟಾಗಿ, ಪ್ರಯೋಜನಾನು-ಸಂಧಾನದಿಂದ ವಿಶೇಷಜಿಜ್ಞಾಸೆ ಉಂಟಾದಾಗ, ಸ್ಥಾಣು-ಪುರುಷ ಎರಡರಲ್ಲಿ ಯಾವುದೆಂದು ನಿಶ್ಚಯ ಮಾಡಿಕೊಳ್ಳಲು ನಿಶ್ಚಾಯಕಪ್ರಮಾಣವನ್ನು ಹುಡುಕಿದರೂ ಸಹ ಸ್ಥಾಣುತ್ವನಿಶ್ಚಾಯಕವಾದ ವಕ್ರಕೋಟರಾದಿಗಳಾಗಲೀ, ಪುರುಷತ್ವನಿಶ್ಚಾಯಕವಾದ ಕರಚರಣಾದಿಗಳಾಗಲೀ ಉಪಲಬ್ಧವಾಗದೇ

**ಕಿಮಯಂ ಸ್ಥಾಣುಃ ಸ್ಯಾತ್ ? ಪುರುಷೋ ವಾ ?**

(ಈ ಪುರೋವೃತ್ತಿ ಪದಾರ್ಥ ಸ್ಥಾಣುವಾಗಿದೆಯೋ? ಪುರುಷ ಇದ್ದಾನೋ?) ಎಂಬುದಾಗಿ ಸಂದೇಹ ಉಂಟಾಗುತ್ತದೆ.

ಹಾಗಾದರೆ ಇದರಿಂದ ತಿಳಿದುಬರುವುದೇನು? ಸಂದೇಹ ಬರಬೇಕಾದರೆ ಕೋಟಿಗಳು ಪ್ರಸಿದ್ಧವಾಗಿರಬೇಕು. ಅಂತಹ ಕೋಟಿದ್ವಯಸಹಚರಿತವಾದ ಸಾಧಾರಣಧರ್ಮಜ್ಞಾನ ಸಂದೇಹಕ್ಕೆ ಕಾರಣವಾಗುತ್ತದೆ.

ಪ್ರಕೃತದಲ್ಲಿ ಭೇದವಿಷಯದಲ್ಲಿ ಅನಿರ್ವಚನೀಯಭೇದ ಪಾರಮಾರ್ಥಿಕ-ಭೇದ ಎಂಬುದಾಗಿ ಪ್ರಭೇದವೇ ಇಲ್ಲ. ಹಾಗೆ ಒಂದುವೇಳೆ ಪ್ರಭೇದ ಇರುತ್ತಿದ್ದರೆ ಆಗ ಅನಿರ್ವಚನೀಯತ್ವ-ಪಾರಮಾರ್ಥಿಕತ್ವ ಎಂಬ ಎರಡು ಕೋಟಿಗಳಿಂದ ಸಹಚರಿತವಾಗುತ್ತಿತ್ತು ಭೇದತ್ವಧರ್ಮ. 'ವಿಮತೋ ಭಿನ್ನಃ'

ಎಂದು ಹೇಳಿದಾಗ, ಅಂತಹ ಕೋಟಿದ್ವಯಸಹಚರಿತವಾದ ಭೇದತ್ವರೂಪ-ಸಾಧಾರಣಧರ್ಮಜ್ಞಾನದಿಂದ ಅನಿರ್ವಚನೀಯತ್ವಾದಿಕೋಟಿಗಳ ಸ್ಮರಣೆ ಬರಲು ಸಾಧ್ಯವಿರುತ್ತಿತ್ತು.

ಆದರೆ ಭೇದವಿಷಯದಲ್ಲಿ ಅನಿರ್ವಚನೀಯಭೇದ ಪಾರಮಾರ್ಥಿಕಭೇದ ಎಂಬುದಾಗಿ ಪ್ರಭೇದವೇ ಇಲ್ಲವಾದ್ದರಿಂದ ಅನಿರ್ವಚನೀಯತ್ವಾದಿ ಕೋಟಿಗಳೇ ಅಪ್ರಸಿದ್ಧವಾದ ಕಾರಣ ಭೇದಪ್ರತೀತಿ ಉಂಟಾದರೂ ಕೋಟಿಸ್ಮರಣೆಯೇ ಬರುವುದಿಲ್ಲ. ಕೋಟಿಸ್ಮರಣೆಯೇ ಆಗದ ಕಾರಣ ''ಅನಿರ್ವಚನೀಯವಾದ ಭೇದವೋ? ಪಾರಮಾರ್ಥಿಕವಾದ ಭೇದವೋ?'' ಎಂಬುದಾಗಿ ಸಂದೇಹವೇ ಬರುವುದಿಲ್ಲ. ಸಂದೇಹವೇ ಬಾರದ ಕಾರಣ ಪ್ರಶ್ನೆಯೂ ಕೂಡುವುದಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ಅನಿರ್ವಚನೀಯತ್ವ ಎಂಬ ಕೋಟಿಯೇ ಅಪ್ರಸಿದ್ಧವಾಗಿದೆ ಎಂದು ಹೇಳಿದರು. ಅದು ಹೇಗೆ ? ಎನ್ನುವುದನ್ನು ತೋರಿಸಿಕೊಡುತ್ತಾರೆ -

**ಅನಿರ್ವಚನೀಯಭೇದವೇ ಅಪ್ರಸಿದ್ಧವಾದ್ದರಿಂದ ಅನಿರ್ವಚನೀಯತ್ವಾದಿಪ್ರಭೇದ ಕೂಡುವುದಿಲ್ಲ ಎಂದು ಸಮರ್ಥನೆ**

**ಟೀಕಾ : ಅಥ ಕಥಮನಿರ್ವಚನೀಯತ್ವಪಾರಮಾರ್ಥಿಕತ್ವಪ್ರಭೇದೋ ಭೇದೇ ನ ಯುಜ್ಯತ ಇತ್ಯತ ಆಹ -**

**ಮೂಲ :- ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವ ।**

**ಅನಿರ್ವಚನೀಯಸ್ಯ ಭೇದಸ್ಯೇತಿ ಶೇಷಃ । ಏವಕಾರೋಽ-ನಿರ್ವಚನೀಯಸ್ಯೇತ್ಯನೇನ ಸಂಬಧ್ಯತೇ । ಉಪಲಕ್ಷಣಂ ಚೈತತ್ । ಪಾರಮಾರ್ಥಿಕೋಽಪಿ ಭೇದೋ ನ ಪರಸ್ಯ ಸಿದ್ಧ ಇತ್ಯಪಿ ದ್ರಷ್ಟವ್ಯಮ್ ।**

**ನನು ನಾಯಮಸ್ತಿ ನಿಯಮಃ ಯತ್ಸಂದೇಹವಿಷಯಜಾತೀಯಮೇ ವಾರೋಪ್ಯಮಾಣಕೋಟಿಸಂಬಂಧಿತಯಾ ಪ್ರತಿಪತ್ತವ್ಯಮಿತಿ । ಆರೋಪ್ಯಮಾಣಕೋಟಿಪ್ರತಿಪತ್ತಿಮಾತ್ರೇಣಾಪಿ ಸಂದೇಹ-ದರ್ಶನಾದಿತಿ ಚೇತ್ ಸತ್ಯಮ್ । ತಥಾಪಿ ನಾಯಂ ಸಂದೇಹೋ ಯುಜ್ಯತೇ । ಆರೋಪ್ಯಮಾಣಾನಿರ್ವಚನೀಯಸ್ಯ ಕುತ್ರಾಪ್ಯ-**

**ಪ್ರತೀತತ್ವಾತ್ । ಏತದಪ್ಯುಕ್ತಂ ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವೇತಿ ।**

**ಅನುವಾದ :-** ಭೇದವಿಷಯದಲ್ಲಿ ಅನಿರ್ವಚನೀಯತ್ವ-ಪಾರಮಾರ್ಥಿಕತ್ವ ಎಂಬ ಪ್ರಭೇದ ಏಕೆ ಕೂಡುವುದಿಲ್ಲ ? ಎಂಬುದಾಗಿ ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸಿದರು -

ಮೂಲ - ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವ ।

ಮೂಲದಲ್ಲಿ ಅನಿರ್ವಚನೀಯಸ್ಯ ಎಂದಿದೆ. ಅದಕ್ಕೆ ಭೇದಸ್ಯ ಎಂಬ ಪದವನ್ನು ಶೇಷ ಮಾಡಿಕೊಳ್ಳಬೇಕು. ಮೂಲದಲ್ಲಿರುವ ಏವಕಾರವು ಅನಿರ್ವಚನೀಯಸ್ಯ ಎಂಬ ಪದದ ಜೊತೆ ಅನ್ವಯವಾಗುತ್ತದೆ. ಹಾಗಾದರೆ - **'ಅನಿರ್ವಚನೀಯಸ್ಯ ಭೇದಸ್ಯೈವ ಸರ್ವತ್ರ ಅಪ್ರಸಿದ್ಧತ್ವಾತ್'** ಅನಿರ್ವಚನೀಯ-ವಾದ ಭೇದವೇ ಸರ್ವತ್ರ ಅಪ್ರಸಿದ್ಧವಾದ್ದರಿಂದ ಎಂದು ಹೇಳಿದಂತಾಯಿತು. ಇದು ಉಪಲಕ್ಷಣವಾಗಿದೆ. ಪಾರಮಾರ್ಥಿಕವಾದ ಭೇದವೂ ಸಹ ಪರರಿಗೆ ಸಿದ್ಧವಾಗಿಲ್ಲ ಎನ್ನುವುದನ್ನೂ ಉಪಲಕ್ಷಣತಯಾ ಇಟ್ಟುಕೊಳ್ಳಬೇಕು.

**ಹಾಗಾದರೆ ಅನಿರ್ವಚನೀಯವಾದ ಭೇದವೇ ಸರ್ವತ್ರ ಅಪ್ರಸಿದ್ಧವಾದ್ದರಿಂದ, ಮತ್ತು ಪಾರಮಾರ್ಥಿಕವಾದ ಭೇದವು ಪರರಿಗೆ ಸಿದ್ಧವಾಗಿಲ್ಲವಾದ್ದರಿಂದಲೂ ಭೇದವಿಷಯದಲ್ಲಿ ಅನಿರ್ವಚನೀಯತ್ವ-ಪಾರಮಾರ್ಥಿಕತ್ವ ಎಂಬ ಪ್ರಭೇದ ಕೂಡುವುದಿಲ್ಲ ಎಂದು ಮೂಲದ ಅರ್ಥವಾಗುತ್ತದೆ.**

ಇಲ್ಲಿ ಈ ವಿಧವಾದ ಶಂಕೆ ಬರುತ್ತದೆ :- 'ಅನಿರ್ವಚನೀಯವಾದ ಭೇದವೇ ಅಪ್ರಸಿದ್ಧವಾದ್ದರಿಂದ ಸಂಶಯ ಕೂಡುವುದಿಲ್ಲ' ಎಂದು ಹೇಳಿದಿರಿ. ಆದರೆ ಅದು ಸರಿಯಲ್ಲ. ಏಕೆಂದರೆ- ಸಂದೇಹವಿಷಯಜಾತೀಯವಾದದ್ದೇ ಆರೋಪ್ಯಮಾಣಕೋಟಿಸಂಬಂಧಿಯಾಗಿ (ತೋರಬೇಕು) ತಿಳಿಯಲ್ಪಡಬೇಕು ಎಂದು ನಿಯಮ ಇಲ್ಲ. ಅಂದರೆ- ಸಂದೇಹಕ್ಕೆ ವಿಷಯವಾದದ್ದು (ಧರ್ಮಿ-ಯಾದದ್ದು) ಈಗ ಭೇದ. ತಜ್ಜಾತೀಯವಾದದ್ದು ಎಂದರೆ ಮತ್ತೊಂದು ಭೇದ. ಆರೋಪ್ಯಮಾಣವಾದ ಕೋಟಿಗಳು ಅನಿರ್ವಚನೀಯತ್ವ-ಪಾರಮಾರ್ಥಿಕತ್ವ-ಗಳು. ತತ್ಸಂಬಂಧಿಯಾಗಿ ತೋರುವುದು ಎಂದರೆ, ಅನಿರ್ವಚನೀಯವಾದ ಭೇದ ಪಾರಮಾರ್ಥಿಕವಾದ ಭೇದ ಎಂದು ತೋರುವುದು. ಹಾಗಾದರೆ ಸಂದೇಹವಿಷಯವಾದ ಭೇದಕ್ಕೆ ಸಜಾತೀಯವಾದ ಮತ್ತೊಂದು ಭೇದವೇ

ಅನಿರ್ವಚನೀಯವಾದ ಭೇದ-ಪಾರಮಾರ್ಥಿಕವಾದ ಭೇದ ಎಂಬುದಾಗಿ (ಅನಿರ್ವಚನೀಯತ್ವ-ಪಾರಮಾರ್ಥಿಕತ್ವ ಕೋಟಿದ್ವಯಸಂಬಂಧಿಯಾಗಿ) ತೋರಬೇಕು ಎಂದು ನಿಯಮವಿಲ್ಲ. ಕಿಂತು ಅನಿರ್ವಚನೀಯತ್ವ-ಪಾರಮಾರ್ಥಿಕತ್ವಗಳ ಪ್ರತೀತಿಮಾತ್ರದಿಂದಲೇ ಭೇದದಲ್ಲಿ ಅನಿರ್ವಚನೀಯತ್ವ-ಪಾರಮಾರ್ಥಿಕತ್ವಕೋಟಿಕಸಂದೇಹವು ಕೂಡುತ್ತದೆ. ಹೊರತು ಅನಿರ್ವಚನೀಯತ್ವ-ಪಾರಮಾರ್ಥಿಕತ್ವಗಳು ಭೇದಸಂಬಂಧಿಯಾಗಿಯೇ ಬೇರೆಡೆ ತೋರಬೇಕೆಂದು ಅಲ್ಲ.

ಉದಾಹರಣೆಗೆ :- 'ಇಂದ್ರಿಯಾಣಿ ಭೌತಿಕಾನಿ ಉತ ಅಭೌತಿಕಾನಿ' ಎಂದು ಸಂದೇಹ ಬರುತ್ತದೆ. ಇಲ್ಲಿ ಭೌತಿಕತ್ವ-ಅಭೌತಿಕತ್ವಗಳು ಇಂದ್ರಿಯಸಂಬಂಧಿಯಾಗಿಯೇ ಬೇರೆಡೆ ತೋರಿವೆಯೇ ? ಇಂದ್ರಿಯಗಳು ಒಂದು ಭೌತಿಕವಾಗಬೇಕು ಇಲ್ಲವೇ ಅಭೌತಿಕವಾಗಬೇಕು. ಹೊರತು ಭೌತಿಕವಾದ ಇಂದ್ರಿಯಗಳು ಹಾಗೂ ಅಭೌತಿಕವಾದ ಇಂದ್ರಿಯಗಳು ತೋರಿಲ್ಲ. ಪರಂತು ಭೌತಿಕವಾದ ಇತರ ವಸ್ತುಗಳಲ್ಲಿ ಭೌತಿಕತ್ವದ ಪ್ರತೀತಿ, ಅಭೌತಿಕವಾದ ಇತರ ವಸ್ತುಗಳಲ್ಲಿ ಅಭೌತಿಕತ್ವದ ಪ್ರತೀತಿ ಉಂಟಾಗಿ, ಭೌತಿಕತ್ವ-ಅಭೌತಿಕತ್ವಗಳನ್ನು ಇಂದ್ರಿಯಗಳಲ್ಲಿ ಆರೋಪಿಸಿ ಆ ಭೌತಿಕತ್ವ-ಅಭೌತಿಕತ್ವಗಳ ಪ್ರತೀತಿಮಾತ್ರ-ದಿಂದಲೇ 'ಇಂದ್ರಿಯಾಣಿ ಭೌತಿಕಾನಿ ವಾ ಅಭೌತಿಕಾನಿ ವಾ' ಎಂದು ಸಂದೇಹ ಬರುತ್ತದೆ.

ಅದರಂತೆಯೇ ಅನಿರ್ವಚನೀಯಭೇದ-ಪಾರಮಾರ್ಥಿಕಭೇದಗಳೇ ಇರಬೇಕಿಲ್ಲ. ಅನಿರ್ವಚನೀಯತ್ವ-ಪಾರಮಾರ್ಥಿಕತ್ವಗಳು ಭೇದಸಂಬಂಧಿಯಾಗಿಯೇ ತೋರಬೇಕೆಂದು ನಿಯಮವಿಲ್ಲ. ಕಿಂತು ಅನಿರ್ವಚನೀಯ-ಪದಾರ್ಥದಲ್ಲಿ ಅನಿರ್ವಚನೀಯತ್ವದ ಜ್ಞಾನ, ಪಾರಮಾರ್ಥಿಕಪದಾರ್ಥದಲ್ಲಿ ಪಾರಮಾರ್ಥಿಕತ್ವದ ಜ್ಞಾನ ಹೀಗೆ ಅನಿರ್ವಚನೀಯತ್ವ-ಪಾರಮಾರ್ಥಿಕತ್ವಗಳ ಜ್ಞಾನಮಾತ್ರದಿಂದ (ಅನಿರ್ವಚನೀಯತ್ವ- ಪಾರಮಾರ್ಥಿಕತ್ವಗಳನ್ನು ಭೇದದಲ್ಲಿ ಆರೋಪಿಸುವ ಮೂಲಕ) ಅನಿರ್ವಚನೀಯಭೇದವೋ ? ಪಾರಮಾರ್ಥಿಕ-ಭೇದವೋ ? ಎಂಬ ಸಂಶಯ ಬರಬಹುದು ಎನ್ನುವುದು ಶಂಕೆಯ ಆಶಯ.

ಈ ರೀತಿಯಾಗಿ ಶಂಕೆ ಬಂದರೆ, ನೀವು ಹೇಳುವುದು ಸತ್ಯವೇ ಆಗಿದೆ. ಕೋಟಿಗಳ ಜ್ಞಾನಮಾತ್ರದಿಂದ ಸಂದೇಹ ಬರಬಹುದು ಎನ್ನುವುದು ಸರಿಯೇ.

ಆದರೂ ಸಹ ಪ್ರಕೃತ ಅನಿರ್ವಚನೀಯಭೇದವೋ ? ಪಾರಮಾರ್ಥಿಕಭೇದವೋ? ಎಂಬ ಸಂಶಯ (ಬರಲು ಸಾಧ್ಯವಿಲ್ಲ) ಕೂಡುವುದಿಲ್ಲ.

ಯಾಕೆಂದರೆ :- ಭೌತಿಕತ್ವ-ಅಭೌತಿಕತ್ವಗಳು ಇಂದ್ರಿಯಸಂಬಂಧಿಯಾಗಿಯೇ ತೋರದಿದ್ದರೂ ಸಹ ಭೌತಿಕಪದಾರ್ಥಗಳು ಅಭೌತಿಕಪದಾರ್ಥಗಳು ಇರುವ ಕಾರಣ ಭೌತಿಕ-ಅಭೌತಿಕ ಪದಾರ್ಥಗಳಲ್ಲಿ ಭೌತಿಕತ್ವ-ಅಭೌತಿಕತ್ವ ಕೋಟಿಗಳ ಜ್ಞಾನವಾಗಲು ಸಾಧ್ಯತೆಯಿದೆ. ಹೀಗಾಗಿ ಕೋಟಿಜ್ಞಾನಮಾತ್ರದಿಂದ ಸಂಶಯ ಬರಬಹುದಾಗಿದೆ. ಪ್ರಕೃತ ಭೇದವಿಷಯದಲ್ಲಿ ಅನಿರ್ವಚನೀಯಭೇದ-ಪಾರಮಾರ್ಥಿಕಭೇದ ಎಂಬುದಾಗಿ ಎರಡು ಭೇದಗಳು ಇಲ್ಲದಿದ್ದರೂ ಅನಿರ್ವಚನೀಯಪದಾರ್ಥಗಳು ಪಾರಮಾರ್ಥಿಕಪದಾರ್ಥಗಳು ಇರುತ್ತಿದ್ದರೆ ಆಗ ಅನಿರ್ವಚನೀಯ-ಪಾರಮಾರ್ಥಿಕಪದಾರ್ಥಗಳಲ್ಲಿ ಅನಿರ್ವಚನೀಯತ್ವ - ಪಾರಮಾರ್ಥಿಕತ್ವ ಕೋಟಿಗಳ ಜ್ಞಾನವಾಗಲು ಸಾಧ್ಯತೆಯಿರುತ್ತಿತ್ತು. ಕೋಟಿಜ್ಞಾನದಿಂದ ಸಂಶಯ ಬರುವ ಸಾಧ್ಯತೆಯೂ ಇರುತ್ತಿತ್ತು. ಆದರೆ ಪಾರಮಾರ್ಥಿಕಪದಾರ್ಥದಂತೆ ಅನಿರ್ವಚನೀಯವಾದ ಪದಾರ್ಥ ಎನ್ನುವುದೇ ಇಲ್ಲ. ಅನಿರ್ವಚನೀಯಪದಾರ್ಥವೇ ಅಪ್ರಸಿದ್ಧವಾದ್ದರಿಂದ ಅನಿರ್ವಚ-ನೀಯತ್ವಕೋಟಿಯ ಜ್ಞಾನವೇ ಆಗಲು ಸಾಧ್ಯವಿಲ್ಲ. ಕೋಟಿಜ್ಞಾನವೇ ಆಗುವುದಿಲ್ಲವಾದ್ದರಿಂದ ಸಂಶಯ ಹುಟ್ಟಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಪೂರ್ವೋಕ್ತಸಂಶಯ ಕೂಡುವುದಿಲ್ಲ ಎನ್ನುವುದಕ್ಕೆ ದೃಷ್ಟಾಂತಪ್ರದರ್ಶನ**

**ಟೀಕಾ : ಅತ್ರ ದೃಷ್ಟಾಂತಮಾಹ -**

**ಮೂಲಃ- ಶಶವಿಷಾಣಂ ಗೋವಿಷಾಣಂ ವೋಚ್ಯತ ಇತಿವತ್ ।**

**ಯಥಾ ಕೇನಾಪಿ 'ತತ್ರ ವಿಷಾಣಮಸ್ತಿ' ಇತ್ಯುಕ್ತೇ ಕಿಂ ಭವತಾ ವಿಷಾಣಪದೇನ ಶಶವಿಷಾಣಮುಚ್ಯತೇ ಕಿಂ ವಾ ಗೋವಿಷಾಣಮಿತಿ ನ ಯುಜ್ಯತೇ ಪ್ರಶ್ನಃ । ಶಶವಿಷಾಣಸ್ಯೈವಾಪ್ರಸಿದ್ಧತ್ವೇನ ವಿಷಾಣತ್ವಸ್ಯ ತತ್ಸಂಬಂಧಿತಯಾ ಅನುಪಲಬ್ಧ್ಯ ವಿಷಾಣಪದಾತ್ ಪ್ರತಿಭಾಸೇ ಸತ್ಯಪಿ ತದನುಸ್ಮರಣಹೇತುತ್ವಾನುಪಪತ್ತ್ಯಾ ಜಿಜ್ಞಾಸೋದಯಾಭಾವೇನೈವಂವಿಧಸಂಶಯಾಯೋಗಾತ್ । ತಥಾ ಪ್ರಕೃತೇಽಪಿ ।**

**ಅನುವಾದ :-** ವಸ್ತು ಅಪ್ರಸಿದ್ಧವಾದರೆ ಕೋಟಿಜ್ಞಾನವೇ ಆಗದೇ ಸಂಶಯ ಬರಲು ಸಾಧ್ಯವಿಲ್ಲ ಎಂಬ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ -

**ಮೂಲ - ಶಶವಿಷಾಣಂ ಗೋವಿಷಾಣಂ ವೋಚ್ಯತ ಇತಿವತ್ |**

ಯಾವ ರೀತಿಯಾಗಿ 'ಅಲ್ಲಿ ವಿಷಾಣವಿದೆ' ಎಂಬುದಾಗಿ ಯಾರಾದರೂ ಹೇಳಿದರೆ 'ನೀವು ವಿಷಾಣಪದದಿಂದ ಶಶವಿಷಾಣವನ್ನು ಹೇಳುತ್ತಿದ್ದೀರೋ? ಅಥವಾ ಗೋವಿಷಾಣವನ್ನು ಹೇಳುತ್ತಿದ್ದೀರೋ?' ಎಂಬುದಾಗಿ ಪ್ರಶ್ನೆ ಮಾಡುವುದಿಲ್ಲ.

ಯಾಕೆಂದರೆ- ಶಶವಿಷಾಣ ಎನ್ನುವುದೇ ಅಪ್ರಸಿದ್ಧವಾದ್ದರಿಂದ ವಿಷಾಣತ್ವವು ಶಶವಿಷಾಣಸಂಬಂಧಿಯಾಗಿ ಅನುಪಲಬ್ಧವಾಗಿದೆ. (ಶಶವಿಷಾಣದಲ್ಲಿ ವಿಷಾಣತ್ವವು ಉಪಲಬ್ಧವಾಗಿಲ್ಲ.) ಹೀಗಾಗಿ ವಿಷಾಣಪದದಿಂದ ವಿಷಾಣತ್ವದ ಪ್ರತಿಭಾಸ (ಜ್ಞಾನ) ಆದರೂ ಸಹ ಆ ವಿಷಾಣತ್ವಪ್ರತಿಭಾಸವು ಶಶವಿಷಾಣದ ಸ್ಮರಣೆಗೆ (ಶಶವಿಷಾಣತ್ವ ಎಂಬ ಕೋಟಿಸ್ಮರಣೆಗೆ) ಹೇತುವಾಗುವದಿಲ್ಲವಾದ್ದರಿಂದ 'ವಿಷಾಣ ಎಂದರೆ ಶಶವಿಷಾಣವೋ ಗೋವಿಷಾಣವೋ' ಎಂಬ ಜಿಜ್ಞಾಸೆಯೇ ಹುಟ್ಟುವುದಿಲ್ಲವಾದ್ದರಿಂದ ಈ ವಿಧವಾದ ಸಂಶಯ ಬರುವುದಿಲ್ಲ. ಸಂಶಯ ಬಾರದ ಕಾರಣ ''ನೀವು ವಿಷಾಣಪದದಿಂದ ಶಶವಿಷಾಣವನ್ನು ಹೇಳುತ್ತಿದ್ದೀರೋ? ಗೋವಿಷಾಣವನ್ನು ಹೇಳುತ್ತಿದ್ದೀರೋ'' ಎಂಬುದಾಗಿ ಪ್ರಶ್ನೆಯನ್ನು ಯಾರೂ ಮಾಡುವುದಿಲ್ಲ.

ಅದು ಹೇಗೋ ಅದೇ ರೀತಿಯಾಗಿ ಅನಿರ್ವಚನೀಯವಾದ ಪದಾರ್ಥವೇ ಅಪ್ರಸಿದ್ಧವಾದ್ದರಿಂದ, ಭೇದತ್ವವು ಅನಿರ್ವಚನೀಯಸಂಬಂಧಿಯಾಗಿ ಅನುಪಲಬ್ಧವಾದ ಕಾರಣ (ಅನಿರ್ವಚನೀಯಭೇದದಲ್ಲಿ ಭೇದತ್ವವು ಉಪಲಬ್ಧ-ವಾಗದ ಕಾರಣ), ಭೇದಪದದಿಂದ ಭೇದತ್ವದ ಪ್ರತಿಭಾಸವಾದರೂ ಆ ಭೇದತ್ವಪ್ರತಿಭಾಸವು ಅನಿರ್ವಚನೀಯಭೇದಸ್ಮರಣೆಗೆ (ಅನಿರ್ವಚನೀಯತ್ವ ಎಂಬ ಕೋಟಿಸ್ಮರಣೆಗೆ) ಹೇತುವಾಗುವುದಿಲ್ಲವಾದ್ದರಿಂದ, ಭೇದ ಎಂದರೆ ಅನಿರ್ವಚನೀಯಭೇದವೋ ಪಾರಮಾರ್ಥಿಕಭೇದವೋ ಎಂಬ ಜಿಜ್ಞಾಸೆಯೇ ಹುಟ್ಟುವುದಿಲ್ಲ. ಈ ವಿಧವಾದ ಸಂಶಯವೂ ಬರುವುದಿಲ್ಲ. ಸಂಶಯವೇ ಬಾರದ ಕಾರಣ

''ನೀವು ಭೇದಪದದಿಂದ ಅನಿರ್ವಚನೀಯಭೇದವನ್ನು ಸಾಧಿಸುತ್ತೀರೋ? ಪಾರಮಾರ್ಥಿಕಭೇದವನ್ನು ಸಾಧಿಸುತ್ತೀರೋ ?''

ಎಂಬ ಪ್ರಶ್ನೆಯೂ ಉಪಪನ್ನವಾಗುವುದಿಲ್ಲ ಎಂದು ಭಾವ.

**ಅವತಾರಿಕೆ :-** 'ನ ಚ ಭೇದೇ ವಿಕಲ್ಪೋ ಯುಜ್ಯತೇ' 'ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವ' 'ಶಶವಿಷಾಣಂ ಗೋವಿಷಾಣಂ ವೋಚ್ಯತ ಇತಿವತ್' ಎಂಬ ಮೂರು ವಾಕ್ಯಗಳಿಂದ ಉಪಲಬ್ಧವಾದ ಅರ್ಥವನ್ನು ಅನುಮಾನಮೂಲಕ ಸಂಗ್ರಹಿಸಿ ಹೇಳುತ್ತಾರೆ -

**ಅನುಮಾನಮೂಲಕ ಪೂರ್ವೋಕ್ತಪ್ರಶ್ನೆ ಕೂಡುವುದಿಲ್ಲ ಎಂದು ಉಪಪಾದನೆ**

**ಟೀಕಾ : ಇದಮುಕ್ತಂ ಭವತಿ । ವಿಮತಃ ಪ್ರಶ್ನೋ ನ ಯುಜ್ಯತೇ । ಅಸಂದಿಗ್ಧವಿಷಯತ್ವಾತ್ । ಶಶವಿಷಾಣಂ ಗೋವಿಷಾಣಂ ವೋಚ್ಯತ ಇತಿ ಪ್ರಶ್ನವತ್ । ವಿಮತಃ ಸಂಶಯೋ ನ ಯುಜ್ಯತೇ । ಅನುಪಲಬ್ಧಾರೋಪ್ಯಮಾಣಕೋಟಿತ್ವಾತ್ । ಉಕ್ತಸಂಶಯವದಿತಿ।**

**ಅನುವಾದ :-** ಒಟ್ಟಿನಲ್ಲಿ ಇಷ್ಟು ಅನುಮಾನ ಮಾಡಿದಂತಾಗುತ್ತದೆ -

೧) **ವಿಮತಃ ಪ್ರಶ್ನಃ, ನ ಯುಜ್ಯತೇ, ಅಸಂದಿಗ್ಧವಿಷಯತ್ವಾತ್ । ಶಶವಿಷಾಣಂ ಗೋವಿಷಾಣಂ ವೋಚ್ಯತೇ ಇತಿ ಪ್ರಶ್ನವತ್ ॥**

ಯಾವುದೇ ಒಂದು ಪ್ರಶ್ನೆ ಸಂದಿಗ್ಧವಿಷಯಕವಾದರೆ ಯುಕ್ತವಾಗುತ್ತದೆ. ಅಸಂದಿಗ್ಧವಿಷಯಕವಾದರೆ ಯುಕ್ತವಾಗುವುದಿಲ್ಲ. ಉದಾ - 'ಶಶವಿಷಾಣಂ ವಾ ಗೋವಿಷಾಣಂ ವಾ ಉಚ್ಯತೇ' ಎಂಬ ಪ್ರಶ್ನೆ ಯುಕ್ತವಲ್ಲ. ಸಂದಿಗ್ಧವಿಷಯಕವಾಗಿಲ್ಲವಾದ್ದರಿಂದ. (ಶಶವಿಷಾಣ ಇಲ್ಲ ಎಂದೇ ನಿಶ್ಚಯ ಇರುವುದರಿಂದ, ಈ ಪ್ರಶ್ನೆ ಸಂದಿಗ್ಧವಿಷಯಕವಲ್ಲ.)

ಅದರಂತೆ ವಿಮತವಾದ ಪ್ರಶ್ನೆ (ಅನಿರ್ವಚನೀಯಭೇದ ಸಾಧ್ಯವೋ ಪಾರಮಾರ್ಥಿಕಭೇದ ಸಾಧ್ಯವೋ ಎಂಬ ಪ್ರಶ್ನೆ) ಯುಕ್ತವಲ್ಲ. ಸಂದಿಗ್ಧವಿಷಯಕವಾಗಿಲ್ಲವಾದ್ದರಿಂದ. (ಅನಿರ್ವಚನೀಯಭೇದ ಇಲ್ಲ ಎಂದೇ ನಿಶ್ಚಯ ಇರುವುದರಿಂದ, ಈ ಪ್ರಶ್ನೆ ಸಂದಿಗ್ಧವಿಷಯಕವಾಗಿಲ್ಲ.)

೨) **ವಿಮತಃ ಸಂಶಯಃ, ನ ಯುಜ್ಯತೇ, ಅನುಪಲಬ್ಧಾರೋಪ್ಯಮಾಣ-ಕೋಟಿತ್ವಾತ್ । ಉಕ್ತಸಂಶಯವತ್ ।**

ಯಾವುದೇ ಒಂದು ಸಂಶಯ ಕೂಡಬೇಕಾದರೆ ಉಪಲಬ್ಧವಾದ ಕೋಟಿ-ಗಳುಳ್ಳದ್ದಾಗಿರಬೇಕು. ಸ್ಥಾಣುತ್ವ-ಪುರುಷತ್ವ ಕೋಟಿಗಳು ಉಪಲಬ್ಧವಾದ್ದರಿಂದ 'ಸ್ಥಾಣುರ್ವಾ ಪುರುಷೋ ವಾ' ಎಂಬ ಸಂಶಯ ಕೂಡುತ್ತದೆ. ಕೋಟಿ ಉಪಲಬ್ಧವಾಗದಿದ್ದರೆ ಸಂಶಯ ಕೂಡುವುದಿಲ್ಲ. ಶಶವಿಷಾಣತ್ವ ಎಂಬ ಕೋಟಿ ಉಪಲಬ್ಧವಾಗದ ಕಾರಣ 'ಶಶವಿಷಾಣಂ ವಾ ಗೋವಿಷಾಣಂ ವಾ' ಎಂಬ ಸಂಶಯ ಕೂಡುವುದಿಲ್ಲ.

ಅದರಂತೆ ವಿಮತವಾದ ಸಂಶಯ (ಅನಿರ್ವಚನೀಯಭೇದವೋ ಪಾರ-ಮಾರ್ಥಿಕಭೇದವೋ ಎಂಬ ಸಂಶಯ) ಯುಕ್ತವಲ್ಲ. ಅನುಪಲಬ್ಧ ಕೋಟಿಕವಾದ್ದರಿಂದ. (ಅನಿರ್ವಚನೀಯತ್ವ ಎಂಬ ಕೋಟಿ ಉಪಲಬ್ಧ-ವಾಗಿಲ್ಲವಾದ್ದರಿಂದ.)

**ಅವತಾರಿಕೆ :-** 'ವಿಮತಃ ಪ್ರಶ್ನೋ ನ ಯುಜ್ಯತೇ' 'ವಿಮತಃ ಸಂಶಯೋ ನ ಯುಜ್ಯತೇ' ಎಂಬ ಹಿಂದಿನ ಅನುಮಾನಗಳಲ್ಲಿ 'ನ ಯುಜ್ಯತೇ ಕೂಡುವುದಿಲ್ಲ' ಎಂದು ಸಾಧ್ಯ ಮಾಡಲಾಗಿದೆ. ಶಂಕಾಪೂರ್ವಕವಾಗಿ ಆ ಸಾಧ್ಯದ ಪರಿಷ್ಕಾರ ಮಾಡಿಕೊಡುತ್ತಾರೆ -

### ಪೂರ್ವೋಕ್ತಾನುಮಾನದಲ್ಲಿ ಸಾಧ್ಯಪರಿಷ್ಕಾರ

**ಟೀಕಾ : ನನು ಪ್ರಶ್ನಃ ಸಂಶಯೋ ವಾ ನ ಯುಜ್ಯತ ಇತಿ ಕೋಽರ್ಥಃ । ಯದಿ ನೋತ್ಪನ್ನ ಇತಿ ತದಾ ಪ್ರತ್ಯಕ್ಷಬಾಧಃ । ಅಥೋತ್ಪನ್ನೋಽಪಿ ಕಾರಣಶೂನ್ಯ ಇತಿ ತದಾಽನುಮಾನಬಾಧಃ । ಕಾರ್ಯತ್ವಾದೇವ ಕಾರಣಾನುಮಾನಾತ್ । ಅಥಾತತ್ಕಾರಣೋತ್ಪನ್ನ ಇತಿ ತದಾ ವ್ಯಾಘಾತಃ । ತದುತ್ಪಾದಕಸ್ಯೈವ ತತ್ಕಾರಣತ್ವಾತ್ ।**

**ಮೈವಮ್ । ಶಶವಿಷಾಣಾದಿಪ್ರಶ್ನಾದ್ಯನುಪಪತ್ತೇರಪ್ಯೇವಂ ಪ್ರತ್ಯಾಖ್ಯಾನಪ್ರಸಂಗಾತ್ । ಕಾರಣಾದಿವಿಮರ್ಶವತೋ ನ ಶಶವಿಷಾಣಾದಿಪ್ರಶ್ನಾದ್ಯುತ್ಪತ್ತುಮರ್ಹತೀತಿ ತತ್ರಾರ್ಥ ಇತಿ ಚೇತ್ । ತರ್ಹ್ಯತ್ರಾಪಿ ಕಾರಣವಿಪರ್ಯಾಸಾದುತ್ಪದ್ಯತಾಂ ನಾಮ । ನ ಪುನಃ ಪ್ರೇಕ್ಷಾವತಾಮುತ್ಪದ್ಯತ ಇತಿ ಪ್ರತಿಜ್ಞಾರ್ಥೋಪಪತ್ತೇಃ ।**

**ಜ್ಞಾನಜನ್ಯೇಷು ಕಾರ್ಯೇಷು ಕಾರಣವಿಪರ್ಯಾಸಾದಪಿ ಭಯಾದಾವಿವ ಜನ್ಮೋಪಪತ್ತೇರಿತಿ ।**

**ಅನುವಾದ :-** ಹೌದು, ಪ್ರಶ್ನೆ ಅಥವಾ ಸಂಶಯ ಕೂಡುವುದಿಲ್ಲ ಎಂದರೆ ಅರ್ಥವೇನು ? ಒಂದುವೇಳೆ ಹುಟ್ಟುವುದೇ ಇಲ್ಲ ಎನ್ನುವುದಾದರೆ, ಪ್ರಶ್ನೆ-ಸಂಶಯ ಬಂದಿರುವುದು ಪ್ರತ್ಯಕ್ಷಸಿದ್ಧವಾದ್ದರಿಂದ ಪ್ರತ್ಯಕ್ಷಬಾಧ ಬರುತ್ತದೆ.

ಅಲ್ಲ. ಪ್ರತ್ಯಕ್ಷಸಿದ್ಧವಾದ್ದರಿಂದ ಹುಟ್ಟುವುದಿಲ್ಲ ಎನ್ನುವುದಿಲ್ಲ. ಕಿಂತು ಹುಟ್ಟಿದರೂ ಕಾರಣಶೂನ್ಯವಾಗಿದೆ (ಅದಕ್ಕೆ ಯಾವುದೂ ಕಾರಣ ಇಲ್ಲ) ಎಂದು ಹೇಳುವುದಾದರೆ ಅನುಮಾನಬಾಧ ಬರುತ್ತದೆ. ಹುಟ್ಟಿದೆ ಎಂದಮೇಲೆ ಅದಕ್ಕೊಂದು ಕಾರಣ ಇರಲೇಬೇಕು ಎಂದು ಅನುಮಾನದಿಂದ ಕಾರಣ ಸಿದ್ಧವಾಗುತ್ತದೆಯಾದ್ದರಿಂದ, 'ಹುಟ್ಟಿದೆ ಆದರೆ ಕಾರಣಶೂನ್ಯ' ಎಂದರೆ ಅನುಮಾನಬಾಧ ಬರುತ್ತದೆ.

ಹಾಗಲ್ಲ, ಪ್ರತ್ಯಕ್ಷಸಿದ್ಧವಾದ್ದರಿಂದ ಹುಟ್ಟಿಲ್ಲ ಎನ್ನಲು ಬರುವುದಿಲ್ಲ. ಹುಟ್ಟಿದೆ ಎಂದಮೇಲೆ ಕಾರಣಶೂನ್ಯ ಎನ್ನಲೂ ಬರುವುದಿಲ್ಲ. ಪರಂತು ''ಹುಟ್ಟಿದೆ, ಆದರೆ ಅದಕ್ಕೆ ಕಾರಣವಾದದ್ದರಿಂದ ಹುಟ್ಟಿಲ್ಲ. ಯಾವುದು ಕಾರಣ ಅಲ್ಲವೋ ಅದರಿಂದ ಹುಟ್ಟಿದೆ'' ಎಂದು ಹೇಳುತ್ತೇವೆ ಎಂದರೆ, ಹಾಗೆ ಹೇಳುವುದಾದರೆ ವ್ಯಾಹತಿ ಬರುತ್ತದೆ. ಯಾಕೆಂದರೆ - ಯಾವುದರಿಂದ ಅದು ಹುಟ್ಟಿದೆ ಅದೇ ಅದಕ್ಕೆ ಕಾರಣ. ಅದಕ್ಕೆ ಕಾರಣ ಅಲ್ಲ ಎಂದರೆ, ಅದರಿಂದ ಹುಟ್ಟಿಲ್ಲ ಎಂದೇ ಅರ್ಥ. ಹೀಗಾಗಿ ಅದರಿಂದ ಹುಟ್ಟಿದೆ ಎಂದು ಹೇಳುವ ಮೂಲಕ ಅದಕ್ಕೆ ಕಾರಣತ್ವವನ್ನು ಅಂಗೀಕರಿಸಿ, ಕಾರಣವಲ್ಲದ್ದರಿಂದ ಹುಟ್ಟಿದೆ ಎಂಬುದಾಗಿ ಅದಕ್ಕೇ ಕಾರಣತ್ವಾಭಾವವನ್ನು ಹೇಳಿದರೆ ವ್ಯಾಹತಿ ಬರುತ್ತದೆ. ಆದ್ದರಿಂದ ಕಾರಣವಲ್ಲದ್ದರಿಂದ ಹುಟ್ಟಿದೆ ಎನ್ನುವುದೂ ಸರಿಯಲ್ಲ.

ಅಂದಮೇಲೆ ಈ ಯಾವ ಪಕ್ಷಗಳೂ ಸರಿಯಾಗುವುದಿಲ್ಲವಾದ್ದರಿಂದ ''ಪ್ರಶ್ನೆ ಅಥವಾ ಸಂಶಯ ಕೂಡವುದಿಲ್ಲ'' ಎಂದರೆ ಅರ್ಥವೇನು ?

ಈ ರೀತಿಯಾಗಿ ಶಂಕಿಸಿದರೆ, ಅದು ಸರಿಯಲ್ಲ. ಯಾಕೆಂದರೆ - ಈ ಪ್ರಕಾರವಾಗಿ ವಿಕಲ್ಪಗಳನ್ನು ಮಾಡಿ ಅನುಪಪತ್ತಿಗಳನ್ನು ಹೇಳುವುದಾದರೆ ಶಶವಿಷಾಣಾದಿವಿಷಯಕ ಪ್ರಶ್ನಾದಿಗಳ ವಿಷಯದಲ್ಲಿಯೂ ಸಹ ಇದೇ ವಿಧವಾದ ಅನುಪಪತ್ತಿಗಳನ್ನು ಹೇಳಿ ಇದೇ ರೀತಿಯಾಗಿ ನಿರಾಕರಿಸಬೇಕಾದ ಪ್ರಸಂಗ ಬರುತ್ತದೆ.

ಅದರ ಅಭಿಪ್ರಾಯ :- ಅಲ್ಲಿ ವಿಷಾಣವಿದೆ ಎಂದು ಯಾರಾದರೂ ಹೇಳಿದರೆ 'ವಿಷಾಣಪದದಿಂದ ಶಶವಿಷಾಣವನ್ನು ಹೇಳುತ್ತೀರೋ ? ಗೋವಿಷಾಣವನ್ನು ಹೇಳುತ್ತೀರೋ ?' ಎಂಬುದಾಗಿ ಪ್ರಶ್ನೆ ಕೇಳುತ್ತಾರೆಯೇ ? ಇಲ್ಲ. ಈ ವಿಧವಾದ ಪ್ರಶ್ನೆ ಯುಕ್ತವಲ್ಲ ಎನ್ನುವುದನ್ನು ಎಲ್ಲರೂ ಒಪ್ಪಿದ್ದಾರೆ. ಆದರೆ ಈ ಶಶವಿಷಾಣಾದಿವಿಷಯಕಪ್ರಶ್ನಾದಿಗಳ ವಿಷಯದಲ್ಲಿಯೂ ಇದೇ ರೀತಿಯಾದ ವಿಕಲ್ಪಗಳನ್ನು ಮಾಡಿ ದೋಷಗಳನ್ನು ಹೇಳಲು ಬಂದೇ ಬರುತ್ತದೆ. ಅಂದರೆ :- ಶಶವಿಷಾಣಾದಿವಿಷಯಕಪ್ರಶ್ನೆ ಕೂಡುವುದಿಲ್ಲ ಎಂದರೆ ಏನರ್ಥ ? ಹುಟ್ಟುವುದೇ ಇಲ್ಲ ಎನ್ನುವುದಾದರೆ ಪ್ರತ್ಯಕ್ಷಬಾಧ, ಕಾರಣಶೂನ್ಯ ಎನ್ನುವುದಾದರೆ ಅನುಮಾನಬಾಧ, ಅತತ್ಕಾರಣಜನ್ಯ ಎನ್ನುವುದಾದರೆ ವ್ಯಾಹತಿ, ಹೀಗೆ ದೋಷಗಳು ಬರುತ್ತವೆ ಎಂಬುದಾಗಿ ಅಲ್ಲಿಯೂ ನಿರಾಕರಿಸಬೇಕಾದ ಪ್ರಸಂಗ ಬರುತ್ತದೆ ಎಂದು ಭಾವ.

ಹಾಗಲ್ಲ, ಕಾರಣಾದಿವಿಮರ್ಶೆ ಮಾಡುವವನಿಗೆ ಶಶವಿಷಾಣಾದಿ-ವಿಷಯಕಪ್ರಶ್ನಾದಿಗಳು ಹುಟ್ಟಲು ಸಾಧ್ಯವಾಗುವುದಿಲ್ಲ ಎನ್ನುವುದು ಅಲ್ಲಿಯ (ಶಶವಿಷಾಣಾದಿವಿಷಯಕಪ್ರಶ್ನೆ ಯುಕ್ತವಲ್ಲ ಎನ್ನುವುದರ) ಅರ್ಥ ಎನ್ನುವುದಾದರೆ, ಹಾಗಾದರೆ ಇಲ್ಲಿಯೂ ಸಹ ವಿಪರ್ಯಾಸರೂಪವಾದ ಕಾರಣದಿಂದ ಅನಿರ್ವಚನೀಯಭೇದವಿಷಯಕ ಸಂಶಯವು [೧]ಹುಟ್ಟಲಿ ! ಹೊರತು ಪ್ರೇಕ್ಷಾವಂತರಿಗೆ ಹುಟ್ಟುವುದಿಲ್ಲ ಎನ್ನುವುದು 'ವಿಮತೋ ಪ್ರಶ್ನಃ ಸಂಶಯೋ ವಾ ನ ಯುಜ್ಯತೇ' ಎಂಬ ಪ್ರತಿಜ್ಞೆಯ ಅರ್ಥವಾಗಬಹುದು.

ಅನಿರ್ವಚನೀಯಭ್ರಮದಿಂದ ಸಂಶಯ ಹುಟ್ಟುತ್ತದೆ ಎನ್ನುತ್ತಿದ್ದೀರಿ. ಇದು ಹೇಗೆ ಸಾಧ್ಯ ? ಏಕೆಂದರೆ- ಜ್ಞಾನಜನ್ಯವಾದ ಕಾರ್ಯದಲ್ಲಿ ಪ್ರಮಾವೇ (ಯಥಾರ್ಥಜ್ಞಾನಮಾತ್ರವೇ) ಜನಕವಾಗುವುದರಿಂದ ಕೋಟಿಭ್ರಮದಿಂದ ಸಂಶಯ ಹೇಗೆ ಹುಟ್ಟುತ್ತದೆ? ಎಂಬ ಶಂಕೆ ಬೇಡ. ಕಾರಣ ಜ್ಞಾನಜನ್ಯವಾದ

---

೧ ವಿಷಾಣ ಇದೆ ಎಂದು ಹೇಳಿದಾಗ, ಶಶವಿಷಾಣ ಇಲ್ಲವೇ ಇಲ್ಲ ಎಂಬ ನಿಶ್ಚಯ ಯಾರಿಗಿದೆ ಅವರಿಗೆ 'ಶಶವಿಷಾಣ ಇದೆಯೋ ? ಗೋವಿಷಾಣ ಇದೆಯೋ ?' ಎಂಬ ಸಂಶಯ ಬರದಿದ್ದರೂ, ಯಾರಿಗೆ ಶಶವಿಷಾಣವು ಸತ್ ಪದಾರ್ಥ ಎಂಬ ಭ್ರಮೆ ಇದೆ ಅವರಿಗೆ ವಿಷಾಣ ಇದೆ ಎಂದು ಕೇಳಿದಾಕ್ಷಣ 'ಶಶವಿಷಾಣ ಇದೆಯೋ ಗೋವಿಷಾಣ ಇದೆಯೋ' ಎಂಬ ಸಂಶಯ ಹೇಗೆ ಬರುತ್ತದೆಯೋ, ಅದರಂತೆಯೇ ಅನಿರ್ವಚನೀಯಪದಾರ್ಥ ಇದೆ ಎಂಬ ಭ್ರಮ ಉಳ್ಳ ವ್ಯಕ್ತಿಗೆ ಆ ಭ್ರಮರೂಪವಾದ ಕಾರಣದಿಂದ 'ಅನಿರ್ವಚನೀಯಭೇದವೋ ಪಾರಮಾರ್ಥಿಕ-ಭೇದವೋ' ಎಂಬ ಸಂಶಯ ಹುಟ್ಟಲಿ ಎಂದು ಭಾವ.

ಕಾರ್ಯದಲ್ಲಿ ಪ್ರಮಾಮಾತ್ರವೇ ಜನಕವಾಗುತ್ತದೆ ಎಂದು ನಿಯಮವಿಲ್ಲ. ಹಾಗೆ ಹೇಳುವುದಾದರೆ (ಪ್ರಮಾಮಾತ್ರವೇ ಜನಕವಾಗುವುದಾದರೆ) ಸರ್ಪ-ಜ್ಞಾನದಿಂದ ಉಂಟಾಗುವ ಭಯಾದಿಗಳು ಸರ್ಪಪ್ರಮಾದಿಂದ ಮಾತ್ರ ಸಾಧ್ಯ ಎಂದಾಗುವುದರಿಂದ, ಸರ್ಪಭ್ರಮದಿಂದ ಭಯಾದಿಗಳು ಉಂಟಾಗುವುದು ಅನುಭವಸಿದ್ಧವಾದದ್ದೂ ಅನುಪಪನ್ನವಾಗಬೇಕಾಗುತ್ತದೆ. ಆದ್ದರಿಂದ ಜ್ಞಾನ-ಜನ್ಯವಾದ ಕಾರ್ಯಗಳಲ್ಲಿ ಭ್ರಮರೂಪಕಾರಣದಿಂದ ಭಯಾದಿಗಳು ಹುಟ್ಟುವಂತೆ ಅನಿರ್ವಚನೀಯಭ್ರಮದಿಂದ ಅನಿರ್ವಚನೀಯಭೇದಸಂಶಯ ಹುಟ್ಟಬಹುದಾಗಿದೆ ಎಂದು ಅಭಿಪ್ರಾಯ.

## ಅನಿರ್ವಚನೀಯವಸ್ತುವಿಷಯದಲ್ಲಿ ಪ್ರಮಾಣಾಭಾವಸಮರ್ಥನ

**ಟೀಕಾಃ ಕಥಮನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಮಿತ್ಯತ ಆಹ -**

**ಮೂಲ :- ನ ಚಾನಿರ್ವಚನೀಯೇ ಕಿಂಚಿನ್ಮಾನಮ್ ।**

**ಚಶಬ್ದೋ ಯಸ್ಮಾದಿತ್ಯರ್ಥೇ ।**

**ಅನುವಾದ :-** ಅನಿರ್ವಚನೀಯವಾದ ಪದಾರ್ಥವೇ ಅಪ್ರಸಿದ್ಧವಾದ್ದರಿಂದ ಅನಿರ್ವಚನೀಯತ್ವಕೋಟಿಯೇ ಅಸಿದ್ಧವಾಗಿದೆ. ಕೋಟಿಜ್ಞಾನವೇ ಆಗುವುದಿಲ್ಲ. ಹೀಗಾಗಿ 'ಅನಿರ್ವಚನೀಯಭೇದವೋ ಪಾರಮಾರ್ಥಿಕಭೇದವೋ' ಎಂಬುದಾಗಿ ಸಂಶಯ ಬರಲು ಸಾಧ್ಯವಿಲ್ಲ ಎಂದು ಹೇಳಿದಿರಿ. ಆದರೆ ಅನಿರ್ವಚನೀಯವಾದ ಪದಾರ್ಥವೇ ಸರ್ವತ್ರ ಅಪ್ರಸಿದ್ಧ ಏಕೆ ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಹೇಳಿದರು -

ಮೂಲ :- ನ ಚಾನಿರ್ವಚನೀಯೇ ಕಿಂಚಿನ್ಮಾನಮ್ ।

ಮೂಲದಲ್ಲಿರುವ 'ಚ'ಶಬ್ದಕ್ಕೆ ಯಸ್ಮಾತ್ ಯಾವ ಕಾರಣ ಎಂದು ಅರ್ಥ. ಹಾಗಾದರೆ -

**ಮೂಲಾರ್ಥ :-** ಚ (ಯಸ್ಮಾತ್) ಯಾವ ಕಾರಣ ಅನಿರ್ವಚನೀಯೇ ಅನಿರ್ವಚನೀಯ ಪದಾರ್ಥ ಇದೆ ಎಂಬ ವಿಷಯದಲ್ಲಿ ಕಿಂಚಿತ್ ಮಾನಂ ನ ಯಾವ ಒಂದು ಪ್ರಮಾಣವೂ ಇಲ್ಲವೋ, ಆ ಕಾರಣ ಅನಿರ್ವಚನೀಯವಾದ ಪದಾರ್ಥ ಸರ್ವತ್ರ ಅಪ್ರಸಿದ್ಧ ಎಂದು ಮೂಲದ ಅರ್ಥವಾಗುತ್ತದೆ.

''ಮಾನಾಧೀನಾ ಮೇಯಸಿದ್ಧಿಃ' ಎಂದು ಹೇಳಿದಂತೆ ಯಾವುದೇ ಒಂದು ವಸ್ತು ಸಿದ್ಧವಾಗಬೇಕಾದರೆ ಅದರ ವಿಷಯದಲ್ಲಿ ಪ್ರಮಾಣ ಇರಬೇಕು. ಅಂದರೆ ಆ ವಸ್ತು ಸಿದ್ಧವಾಗುತ್ತದೆ. ಪ್ರಕೃತ ಅನಿರ್ವಚನೀಯವಾದ ಪದಾರ್ಥ ಸಿದ್ಧವಾಗಬೇಕಾದರೆ ಅದರ ವಿಷಯದಲ್ಲಿಯೂ ಪ್ರಮಾಣ ಇರಬೇಕು. ಆದರೆ ಅನಿರ್ವಚನೀಯಪದಾರ್ಥದ ವಿಷಯದಲ್ಲಿ ಯಾವುದೇ ಪ್ರಮಾಣ ಇಲ್ಲವಾದ್ದರಿಂದ ಅನಿರ್ವಚನೀಯವಾದ ಪದಾರ್ಥ ಸರ್ವತ್ರ ಅಪ್ರಸಿದ್ಧ ಎಂದು ತಾತ್ಪರ್ಯ.

**ಅವತಾರಿಕೆ :-** 'ಪ್ರಮಾಣ ಇಲ್ಲವಾದ್ದರಿಂದ ಅನಿರ್ವಚನೀಯವಸ್ತು ಅಪ್ರಸಿದ್ಧ' ಎಂಬುದಾಗಿ ಹೇಳಿದ್ದರ ಮೇಲೆ ಆಶಂಕಿಸಿಕೊಂಡು ಸಮಾಧಾನ ಹೇಳುತ್ತಾರೆ -

**ಟೀಕಾ : ನನು ಪ್ರಮಿತಿಃ ಪ್ರಮಾಣಮಪೇಕ್ಷತೇ ನ ಪ್ರಸಿದ್ಧಿಮಾತ್ರಮ್ । ನ ಚ ಸಂಶಯಸ್ಯ ಪ್ರಮಿತಿಸಾಪೇಕ್ಷತಾ । ಪ್ರತೀತಿಮಾತ್ರೇಣಾಪಿ ಸ್ಮರಣೋಪಪತ್ತ್ಯಾ ಸಂಶಯೋಪಪತ್ತೇಃ । ಯಥಾ ಖಲು ವಿಪ್ರಲಂಭಕವಾಕ್ಯಾಚ್ಛಶವಿಷಾಣಸದ್ಭಾವಂ ಮನ್ಯಮಾನಸ್ಯ ವಿಷಾಣಮಿತ್ಯುಕ್ತೇ ಭವತಿ ಸಂದೇಹಃ । ಅತೋಽನಿರ್ವಚನೀಯಪ್ರಸಿದ್ಧ್ಯಭಾವೋಪಪಾದನಾಯ ತತ್ಕಾರಣಾಭಾವೇ ವಕ್ತವ್ಯೇ ಕಥಂ ಪ್ರಮಿತಿಕಾರಣಾಭಾವಾಭಿಧಾನಮಿತಿ ।**

**ಸತ್ಯಮ್ । ಪ್ರತೀತಿರೇವ ಸಂದೇಹೋಪಯೋಗಿನೀತಿ ವಸ್ತುಗತಿಃ । ತಥಾಪಿ ಪ್ರಮಾಣವಿಷಯತಯೋಪಕ್ಷಿಪ್ತೇ ಭೇದೇಽನಿರ್ವಚನೀಯೋ ವೇತ್ಯಾದಿಸಂದಿಹಾನೇನ ಪ್ರತಿವಾದಿನಾಽತ್ಮನೋಽನಿರ್ವಚನೀಯಾದಿವಿಷಯಾ ಪ್ರಮಿತಿರೇವ ಸಂದೇಹಕಾರಣತಯಾ ವಕ್ತವ್ಯಾ । ತತ್ಪ್ರತೀತೇರಪ್ರಮಾತ್ವಾಂಗೀಕಾರೇ ಸ್ವಯಮೇವ ವಿಲೀನಂ ಸಂಶಯೇನ । ಅತಃ ಪ್ರಮಾಣಾಭಾವೇನ ಪ್ರಮಾಭಾವೇ ಸಾಧಿತೇಽಪ್ರಮಾಯಾಶ್ಚ ಸ್ವಯಮೇವಾನಂಗೀಕಾರೇ ಪ್ರತೀತ್ಯಭಾವ ಏವ ಸಾಧಿತೋ ಭವತೀತಿ ನ ಕಶ್ಚಿದ್ದೋಷಃ ।**

**ಅನುವಾದ :-** ಹೌದು, ಪ್ರಮಿತಿಯು ಪ್ರಮಾಣವನ್ನು ಅಪೇಕ್ಷಿಸುತ್ತದೆ ಹೊರತು ಕೇವಲ ಪ್ರಸಿದ್ಧಿಯು ಪ್ರಮಾಣವನ್ನು ಅಪೇಕ್ಷಿಸುವುದಿಲ್ಲ. (ಪ್ರಮಿತಿ

ಯಥಾರ್ಥಜ್ಞಾನ ಬರಬೇಕಾದರೆ ಅದು ಪ್ರಮಾಣದಿಂದಲೇ ಬರಬೇಕಾದ್ದರಿಂದ ಪ್ರಮಿತಿಯು ಪ್ರಮಾಣವನ್ನು ಅಪೇಕ್ಷಿಸುತ್ತದೆ. ಪ್ರಸಿದ್ಧಿ ಬರಬೇಕಾದರೆ ಪ್ರಮಾಣವೇ ಬೇಕಿಲ್ಲವಾದ್ದರಿಂದ ಕೇವಲ ಪ್ರಸಿದ್ಧಿಯು ಪ್ರಮಾಣವನ್ನು ಅಪೇಕ್ಷಿಸುವುದಿಲ್ಲ ಎಂದರ್ಥ.)

ಇನ್ನು ಸಂಶಯ ಬರಬೇಕಾದರೆ ಪ್ರಮಿತಿಯ ಅಗತ್ಯ ಇಲ್ಲ. ಕೇವಲ ಪ್ರತೀತಿಯಿಂದಲೂ ಕೋಟಿಸ್ಮರಣೆ ಉಂಟಾಗಿ ಸಂಶಯ ಬರಬಹುದು. ಹೇಗೆಂದರೆ - ಶಶವಿಷಾಣ ಅಸತ್ ಆದರೂ ವಿಪ್ರಲಂಭಕನ ಮಾತಿನಿಂದ ಗೋವಿಷಾಣಾದಿಗಳಂತೆ ಶಶವಿಷಾಣವೂ ಒಂದು ಸತ್ ಪದಾರ್ಥವೇ ಎಂಬುದಾಗಿ ತಿಳಿದುಕೊಂಡ ವ್ಯಕ್ತಿಗೆ ವಿಷಾಣಶಬ್ದವನ್ನು ಕೇಳಿದಾಗ ಶಶವಿಷಾಣವೋ ಗೋವಿಷಾಣವೋ ಎಂದು ಸಂದೇಹ ಉಂಟಾಗುತ್ತದೆ. (ಇಲ್ಲಿ ಶಶವಿಷಾಣದ ಪ್ರಮಿತಿಯಿಂದ ಸಂಶಯ ಉಂಟಾಗಿಲ್ಲ. ಕಿಂತು ಶಶವಿಷಾಣದ ಪ್ರತೀತಿಯಿಂದ ಸಂಶಯ ಉಂಟಾಗಿದೆ ಎಂದರ್ಥ.) ಹೀಗಾಗಿ ಸಂಶಯ ಬರುವುದಕ್ಕೆ ಪ್ರತೀತಿ ಇದ್ದರೆ ಸಾಕು.




ಅಂದಮೇಲೆ ಅನಿರ್ವಚನೀಯವಾದ ಪದಾರ್ಥ ಪ್ರಸಿದ್ಧವಾಗಿಲ್ಲ ಎಂಬುದಾಗಿ ಪ್ರಸಿದ್ಧ್ಯಭಾವವನ್ನು ಉಪಪಾದನೆ ಮಾಡುವುದಕ್ಕಾಗಿ, ''ಪ್ರಸಿದ್ಧಿಗೆ ಕಾರಣವಾದದ್ದು ಇಲ್ಲ ಆದ್ದರಿಂದ ಪ್ರಸಿದ್ಧಿ ಇಲ್ಲ'' ಎಂದು ಪ್ರಸಿದ್ಧಿ-ಕಾರಣಾಭಾವವನ್ನು ಹೇಳಬೇಕಿತ್ತು. ಅದನ್ನು ಬಿಟ್ಟು ಪ್ರಮಿತಿಗೆ ಕಾರಣವಾದ ಪ್ರಮಾಣ ಇಲ್ಲವಾದ್ದರಿಂದ ಪ್ರಸಿದ್ಧಿ ಇಲ್ಲ ಎಂದು ಪ್ರಮಿತಿಕಾರಣಾಭಾವವನ್ನು ಹೇಗೆ ಹೇಳಿದರು ಆಚಾರ್ಯರು ?

ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಸಮಾಧಾನ ಇಷ್ಟು.

ಸತ್ಯವೇ ಆಗಿದೆ. ಪ್ರತೀತಿಯೇ ಸಂದೇಹಕ್ಕೆ ಉಪಯೋಗಿಯಾದದ್ದು ಎನ್ನುವುದು ವಸ್ತುಸ್ಥಿತಿಯಾಗಿದೆ. (ಪ್ರತೀತಿ ಇದ್ದರೆ ಸಾಕು ಸಂಶಯ ಬರುತ್ತದೆ ಎನ್ನುವುದು ಸತ್ಯವೇ ಆಗಿದೆ.) ಆದರೂ ಸಹ ಭೇದವಿಷಯದಲ್ಲಿ ಏನು ಪ್ರಮಾಣ ? ಎಂಬುದಾಗಿ ಆಕ್ಷೇಪ ಬಂದಾಗ ಅನುಮಾನವನ್ನು ಪ್ರಮಾಣವಾಗಿ

ಉದಾಹರಿಸಿದ್ದೇವೆ. ಅಂತಹ ಪ್ರಮಾಣವಿಷಯತ್ವೇನ ಉಪಕ್ಷಿಪ್ತವಾದ ಭೇದ-ವಿಷಯದಲ್ಲಿ 'ಅನಿರ್ವಚನೀಯಭೇದವೋ? ಪಾರಮಾರ್ಥಿಕಭೇದವೋ?' ಎಂಬುದಾಗಿ (ಸಂದೇಹ ಉಳ್ಳವರಾಗಿದ್ದಾರೆ) ಸಂದೇಹವನ್ನು ವ್ಯಕ್ತಮಾಡುತ್ತಿದ್ದಾರೆ ಪ್ರತಿವಾದಿಗಳು. ಇಲ್ಲಿ ಈ ವಿಧವಾದ ಸಂದೇಹ ಬರಲು ಕಾರಣವೇನು ? ಎಂದು ಕೇಳಿದರೆ, ಅನಿರ್ವಚನೀಯಾದಿವಿಷಯಕ ಪ್ರಮಿತಿಯೇ[೧] (ಅನಿರ್ವಚನೀಯವಸ್ತು ವಿಷಯಕ ಯಥಾರ್ಥಜ್ಞಾನವೇ) ತಮಗೆ ಸಂದೇಹ ಬರಲು ಕಾರಣ ಎಂಬುದಾಗಿ ಪ್ರತಿವಾದಿಗಳು ಹೇಳಬೇಕು.

ಒಂದುವೇಳೆ ಅನಿರ್ವಚನೀಯಾದಿವಿಷಯಕವಾದ ಆ ಪ್ರತೀತಿಯು (ಅಪ್ರಮಾರೂಪವಾಗಿದೆ) ಅಯಥಾರ್ಥಜ್ಞಾನರೂಪ ಭ್ರಮರೂಪವಾಗಿದೆ ಎಂದು ಅಂಗೀಕರಿಸಿದರೆ, ಭ್ರಮದಲ್ಲಿ ವಿಷಯವಾದದ್ದು ಅಸತ್ ಆಗುವುದರಿಂದ (ಅನಿರ್ವಚನೀಯಮಸ್ತಿ ಎಂಬ ಅವರ ಜ್ಞಾನ ಭ್ರಮ ಎಂದಾದರೆ, ಅನಿರ್ವಚನೀಯವಾದ ವಸ್ತು ಇಲ್ಲ ಎಂದೇ ಆಗುವುದರಿಂದ) ಅನಿರ್ವಚನೀಯ-ವಾದ ವಸ್ತುವೇ ಇಲ್ಲ ಎಂದಮೇಲೆ ''ಅನಿರ್ವಚನೀಯಭೇದವೋ? ಪಾರಮಾರ್ಥಿಕಭೇದವೋ'' ಎಂಬುದಾಗಿ ಅವರಿಗೆ ಸಂಶಯವೇ ಬರಬಾರ-ದಾಗುತ್ತದೆ.

ಆದ್ದರಿಂದ ಪ್ರತಿವಾದಿಗಳು ತಮಗೆ ಇರುವ ಅನಿರ್ವಚನೀಯವಿಷಯಕ-ಪ್ರತೀತಿಯು ಪ್ರಮಾರೂಪವಾಗಿದೆ ಎಂದೇ ಹೇಳಬೇಕು. ಅನಿರ್ವಚನೀಯ-ವಿಷಯಕಪ್ರಮಾ ಬರಬೇಕಾದರೆ ಅನಿರ್ವಚನೀಯವಿಷಯದಲ್ಲಿ ಪ್ರಮಾಣ ಇರಬೇಕು. ಯಾಕೆ ? ಪ್ರಮಿತಿಯು ಪ್ರಮಾಣವನ್ನು ಅಪೇಕ್ಷಿಸುವುದರಿಂದ.

ಪ್ರಕೃತದಲ್ಲಿ- **'ನ ಚಾನಿರ್ವಚನೀಯೇ ಕಿಂಚಿತ್ ಮಾನಮ್'** ಎಂಬುದಾಗಿ ಅನಿರ್ವಚನೀಯವಿಷಯದಲ್ಲಿ ಪ್ರಮಾಣವನ್ನು ನಿರಾಕರಿಸಿದರೆ, ಪ್ರಮಾಣ ಇಲ್ಲವಾದ್ದರಿಂದ ಪ್ರಮಾ ಇಲ್ಲ (ಅನಿರ್ವಚನೀಯವಿಷಯಕಪ್ರಮಿತಿ ಇಲ್ಲ) ಎಂದು ಸಾಧಿಸಿದಂತಾಗುತ್ತದೆ.

---

೧ ಸಂದೇಹ ಬರಲು ಕೋಟಿಜ್ಞಾನ ಕಾರಣ. ಪ್ರಕೃತ ಭೇದವಿಷಯಕಸಂದೇಹದಲ್ಲಿ ಅನಿರ್ವಚನೀಯತ್ವಾದಿಗಳು ಕೋಟಿಗಳಾಗಿರುವುದರಿಂದ ಅನಿರ್ವಚನೀಯತ್ವಾದಿ ಕೋಟಿಜ್ಞಾನ ಒಪ್ಪಬೇಕು. ಆ ಅನಿರ್ವಚನೀಯತ್ವಾದಿಕೋಟಿಜ್ಞಾನ (ಪ್ರಮಾರೂಪವಾಗಿದೆ) ಯಥಾರ್ಥಜ್ಞಾನವಾಗಿದೆ ಎಂದೇ ಹೇಳಬೇಕು ಎಂದರ್ಥ.

ಸಂಶಯಕ್ಕೆ ಕೋಟಿಜ್ಞಾನ ಕಾರಣವಾದ್ದರಿಂದ, ಅನಿರ್ವಚನೀಯತ್ವ ಕೋಟಿಜ್ಞಾನ ಆಗಲೇಬೇಕು. ಆ ಕೋಟಿಜ್ಞಾನವು ಒಂದು ಪ್ರಮಾರೂಪವಾಗಬೇಕು, ಅಥವಾ ಅಪ್ರಮಾರೂಪವಾಗಬೇಕು. ಅನಿರ್ವಚನೀಯವಿಷಯದಲ್ಲಿ ಪ್ರಮಾಣ ಇಲ್ಲವಾದ್ದರಿಂದ ಅನಿರ್ವಚನೀಯವಿಷಯಕಪ್ರಮಾ ಇಲ್ಲ ಎಂದು ನಾವು ಸಾಧಿಸಿದರೆ, ಅನಿರ್ವಚನೀಯವಿಷಯಕ ಅಪ್ರಮಾವನ್ನು ಪ್ರತಿವಾದಿಗಳು ಸ್ವಯಂ ತಾವೇ ಒಪ್ಪದ ಕಾರಣ, ಅನಿರ್ವಚನೀಯವಿಷಯಕಪ್ರತೀತ್ಯಭಾವವನ್ನೇ (ಪ್ರಸಿದ್ಧ್ಯಭಾವವನ್ನೇ) ಸಾಧಿಸಿದಂತಾಗುತ್ತದೆ. ಸಂದೇಹ ಬರುವುದಕ್ಕೆ ಕೇವಲ ಪ್ರತೀತಿ ಉಪಯುಕ್ತ ಎನ್ನುವುದು ಸತ್ಯವಾದರೂ, ಪ್ರಕೃತ ಅನಿರ್ವಚನೀಯವಿಷಯದಲ್ಲಿ ಪ್ರತೀತಿಯೂ ಇಲ್ಲವಾದ್ದರಿಂದ ''ಅನಿರ್ವಚನೀಯ-ಭೇದವೋ? ಪಾರಮಾರ್ಥಿಕಭೇದವೋ?'' ಎಂಬ ಸಂಶಯ ಕೂಡುವುದಿಲ್ಲ. ಆದ್ದರಿಂದ **ನ ಚಾನಿರ್ವಚನೀಯೇ ಕಿಂಚಿನ್ಮಾನಮ್ ।** ಎಂಬ ವಾಕ್ಯದಿಂದ ಪ್ರಮಾಣಾಭಾವವನ್ನು ಹೇಳಿದ್ದರಲ್ಲಿ ಯಾವ ದೋಷವೂ ಇಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** 'ಅನಿರ್ವಚನೀಯಪದಾರ್ಥವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ' ಎಂದು ಆಚಾರ್ಯರು ಹೇಳಿದಾಗ, ಪ್ರತಿವಾದಿಗಳು ಅನಿರ್ವಚನೀಯಪದಾರ್ಥವಿಷಯದಲ್ಲಿ ಪ್ರತ್ಯಕ್ಷಪ್ರಮಾಣವನ್ನು ಶಂಕಿಸುತ್ತಾರೆ-

## ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷಪ್ರಮಾಣಶಂಕೆ

**ಟೀಕಾ : ಕಥಮನಿರ್ವಚನೀಯಾರ್ಥೇ ಪ್ರಮಾಣಾಭಾವಃ । ಯಾವತಾ ಪ್ರತ್ಯಕ್ಷಂ ಶುಕ್ತಿರಜತಾದೇರನಿರ್ವಚನೀಯತಾಮಾವೇದಯದಸ್ತಿ । ಬಾಧಕಜ್ಞಾನಸಮನಂತರಂ ಮಿಥ್ಯೈವ ರಜತಂ ಪ್ರತ್ಯಭಾದಿತ್ಯನುವಾದಾತ್ । ಯಾವದುಕ್ತಂ ಭವತ್ಯನಿರ್ವಚನೀಯಮಿತಿ ತಾವದುಕ್ತಂ ಮಿಥ್ಯೇತಿ । ನ ಚಾಪ್ರತೀತಮಾಪ್ತೇನಾನೂದ್ಯತೇ । ನ ಚ ಬಾಧಕಪ್ರತ್ಯಯೋ ಭ್ರಾಂತಿಃ । ನಾಪಿ ಲಿಂಗಾದಿಜನ್ಯ ಇತಿ ।**

**ಅನುವಾದ :-** 'ನ ಚಾನಿರ್ವಚನೀಯೇ ಕಿಂಚಿನ್ಮಾನಮ್'

''ಅನಿರ್ವಚನೀಯಪದಾರ್ಥವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ'' ಎಂದು ಹೇಳುವುದು ಸರಿಯಲ್ಲ. ಅನಿರ್ವಚನೀಯಪದಾರ್ಥವಿಷಯದಲ್ಲಿ ಪ್ರಮಾಣ ಇಲ್ಲ ಏಕೆ ?

ಯಾಕೆಂದರೆ- ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವನ್ನು ತಿಳಿಸುವ ಪ್ರತ್ಯಕ್ಷಪ್ರಮಾಣವೇ ಇದೆ. ಹೌದು, 'ಇದಂ ನೀಲಂ' ಎಂದು ಪ್ರತ್ಯಕ್ಷವಿರುವಂತೆ 'ಇದಂ ಅನಿರ್ವಚನೀಯಂ' ಎಂದು ಪ್ರತ್ಯಕ್ಷ ಇಲ್ಲವಾದ್ದರಿಂದ ಅನಿರ್ವಚನೀಯ-ಪದಾರ್ಥವಿಷಯದಲ್ಲಿ ಪ್ರತ್ಯಕ್ಷವನ್ನು ಹೇಗೆ ಪ್ರಮಾಣವಾಗಿ ಹೇಳುತ್ತೀರಿ? ಎಂದು ಶಂಕಿಸಬೇಡಿ.

ಬಾಧಕಜ್ಞಾನ ಬಂದ ನಂತರ 'ಮಿಥ್ಯೈವ ರಜತಂ ಪ್ರತ್ಯಭಾತ್' (ಮಿಥ್ಯಾಭೂತವಾದ ರಜತವು ತೋರಿತು) ಎಂಬುದಾಗಿ ಅನುವಾದ ಮಾಡುವುದರಿಂದ ಶುಕ್ತಿರಜತಭ್ರಮ ಉಳ್ಳ ವ್ಯಕ್ತಿಗೆ ಅಲ್ಲಿ ಉಂಟಾಗುವ 'ರಜತಂ ಮಿಥ್ಯಾ' ಎಂಬ ಬಾಧಕಜ್ಞಾನವೇ ರಜತವು ಅನಿರ್ವಚನೀಯವಾಗಿದೆ ಎಂಬ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಾಗಿದೆ ಎಂದು ತಿಳಿಯುತ್ತದೆ.

ಹೌದು, 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಅನುವಾದ ಮಾಡುವುದರಿಂದ 'ರಜತಂ ಮಿಥ್ಯಾ' ಎಂಬ ಪ್ರತ್ಯಕ್ಷವು ರಜತವು ಮಿಥ್ಯೆಯಾಗಿದೆ ಎಂಬ ವಿಷಯದಲ್ಲಿ ಪ್ರಮಾಣವಾಗಲಿ. ಆದರೆ ರಜತವು ಅನಿರ್ವಚನೀಯವಾಗಿದೆ ಎಂಬ ವಿಷಯದಲ್ಲಿ ಅದು ಹೇಗೆ ಪ್ರಮಾಣವಾಗುತ್ತದೆ? ಎಂಬ ಶಂಕೆ ಬೇಡ. ಏಕೆಂದರೆ - ಮಿಥ್ಯಾ ಎಂದರೆ ಅನಿರ್ವಚನೀಯ ಎಂದೇ ಅರ್ಥ, ಹೊರತು ಮಿಥ್ಯಾ-ಅನಿರ್ವಚನೀಯ ಎನ್ನುವುದು ಬೇರೆ ಬೇರೆ ಅರ್ಥಗಳಲ್ಲ. ಹೀಗಾಗಿ ಆ ಪ್ರತ್ಯಕ್ಷ ಮಿಥ್ಯಾತ್ವವಿಷಯದಲ್ಲಿ ಪ್ರಮಾಣವಾದರೆ ಅನಿರ್ವಚನೀಯತ್ವವಿಷಯದಲ್ಲಿ ಪ್ರಮಾಣವಾದಂತೆಯೇ.

'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಅನುವಾದ ಮಾಡಿದ ಮಾತ್ರಕ್ಕೆ ರಜತಮಿಥ್ಯಾತ್ವಪ್ರತೀತಿ ಇರಬೇಕೆಂದು ನಿಯಮವಿಲ್ಲ. ಏಕೆಂದರೆ - ಘಟಜ್ಞಾನ ಇಲ್ಲದೇ ಹೋದರೂ 'ಘಟೋಽಸ್ತಿ' ಎಂಬುದಾಗಿ ಬಾಲಕರು ಅನುವಾದ ಮಾಡುತ್ತಾರೆ. ಹಾಗೆ ರಜತಮಿಥ್ಯಾತ್ವಪ್ರತೀತಿ ಇಲ್ಲದೇ ಹೋದರೂ 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಅನುವಾದ ಮಾಡಬಹುದಲ್ಲವೇ ? ಎಂದು ಶಂಕೆ ಮಾಡುವುದು ಸರಿಯಲ್ಲ. ಪ್ರತೀತಿ ಇಲ್ಲದೇ ಬಾಲಕರು ಅನುವಾದ ಮಾಡಬಹುದಾದರೂ, ಆಪ್ತರು ಹಾಗೆ (ಪ್ರತೀತಿ ಇಲ್ಲದೇ) ಅನುವಾದ ಮಾಡಲು ಸಾಧ್ಯವಿಲ್ಲ. ಇದು ಆಪ್ತರ ಅನುವಾದವಾದ್ದರಿಂದ ರಜತಮಿಥ್ಯಾತ್ವಪ್ರತೀತಿ ಇರಲೇಬೇಕು.

ಹೌದು, ಬಾಧಕಜ್ಞಾನ ಭ್ರಮರೂಪವಾಗಿದೆ ಎಂದಾದರೂ ಸಹ ಅನುವಾದ ಕೂಡುತ್ತದೆಯಾದ್ದರಿಂದ, ಅದೇ ಮೂಲವಾಗಿ ಉಳ್ಳ ವ್ಯವಹಾರದಿಂದ ಪ್ರತ್ಯಕ್ಷಕಲ್ಪನೆ ಹೇಗೆ ಮಾಡುತ್ತೀರಿ ? ಎಂಬ ಶಂಕೆ ಸಮಂಜಸವಲ್ಲ. ಕಾರಣ 'ಅನ್ಯಥಾಜ್ಞಾತಸ್ಯ ಸಮ್ಯಗ್ ವಿಜ್ಞಾನ'ವೇ ಬಾಧಕಜ್ಞಾನವಾದ್ದರಿಂದ ಬಾಧಕಜ್ಞಾನ ಎಂದಿಗೂ ಭ್ರಮವಾಗಲು ಸಾಧ್ಯವಿಲ್ಲ. ಬಾಧಕಜ್ಞಾನ ಎಂದರೆ ಅದು ಯಾವಾಗಲೂ ಪ್ರಮಾರೂಪವೇ ಆಗಿರುತ್ತದೆ. ಹಾಗಾಗಿ ಅದರಿಂದ ಪ್ರತ್ಯಕ್ಷಕಲ್ಪನೆ ಮಾಡುವುದು ಸಮಂಜಸವೇ ಆಗಿದೆ.

ಆದರೂ ಸಹ, ಬಾಧಕಜ್ಞಾನ ಪ್ರಮಾ ಎಂದಾದರೂ ಸಹ ಅದು ಲಿಂಗಾದಿಜನ್ಯವಾಗಿದೆ ಎಂದು ಅಂಗೀಕರಿಸಿದರೂ ಅನುವಾದವು ಉಪಪನ್ನ-ವಾಗುವುದರಿಂದ, ಅದರಿಂದ ಪ್ರತ್ಯಕ್ಷಕಲ್ಪನೆ ಹೇಗೆ ಮಾಡುತ್ತೀರಿ? ಎಂದು ಶಂಕಿಸಲು ಅವಕಾಶವಿಲ್ಲ. ಕಾರಣ- ಲಿಂಗಶಬ್ದಾದಿಗಳ ಅನುಸಂಧಾನ ಇಲ್ಲದಿದ್ದರೂ ಸಹ ಹುಟ್ಟುವುದಾದ್ದರಿಂದ, ಇಂದ್ರಿಯ ಅನ್ವಯವ್ಯತಿರೇಕ ಅನುವಿಧಾಯಿಯಾದ್ದರಿಂದಲೂ ಸಹ 'ಬಾಧಕಜ್ಞಾನ ಲಿಂಗಾದಿಜನ್ಯವಲ್ಲ. ಕಿಂತು ಪ್ರತ್ಯಕ್ಷರೂಪವೇ ಆಗಿದೆ' ಎಂದು ತಿಳಿದುಬರುತ್ತದೆ.

ಅಂದಮೇಲೆ ಬಾಧಕಜ್ಞಾನ ಬಂದ ನಂತರ 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಅನುವಾದ ಮಾಡುವುದರಿಂದ, ಶುಕ್ತಿರಜತಭ್ರಮ ಉಳ್ಳ ವ್ಯಕ್ತಿಗೆ ಅಲ್ಲಿ ಉಂಟಾಗುವ 'ರಜತಂ ಮಿಥ್ಯಾ' ಎಂಬ ಬಾಧಕಜ್ಞಾನವೇ ರಜತವು ಅನಿರ್ವಚನೀಯವಾಗಿದೆ ಎಂಬ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಾಗಿದೆ. ಹೀಗೆ ಅನಿರ್ವಚನೀಯಪದಾರ್ಥವಿಷಯದಲ್ಲಿ ಪ್ರತ್ಯಕ್ಷಪ್ರಮಾಣ ಇರುವುದರಿಂದ ''ನ ಚಾನಿರ್ವಚನೀಯೇ ಕಿಂಚಿನ್ಮಾನಮ್'' ಎಂದು ಹೇಗೆ ಹೇಳುತ್ತೀರಿ ?

**ಅವತಾರಿಕೆ :-** ಈ ರೀತಿಯಾಗಿ ಪ್ರತಿವಾದಿಗಳು ಅನಿರ್ವಚನೀಯ-ಪದಾರ್ಥವಿಷಯದಲ್ಲಿ ಪ್ರತ್ಯಕ್ಷಪ್ರಮಾಣವನ್ನು ಶಂಕಿಸಿದಾಗ ಅದನ್ನು ವಿಕಲ್ಪಪೂರ್ವಕವಾಗಿ ನಿರಾಕರಿಸುತ್ತಾರೆ -

## ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷಪ್ರಮಾಣನಿರಾಕರಣೆ

**ಟೀಕಾ : ಅತ್ರೇದಂ ವಕ್ತವ್ಯಮ್ । ಕಿಂ ಮಿಥ್ಯಾಶಬ್ದೋಽನಿರ್ವಚನೀಯಸ್ಯ ವಾಚಕ ಇತಿ ಕೃತ್ವಾ ಭ್ರಾಂತ್ಯುತ್ಥಿತಸ್ಯ ತತ್ಪ್ರಯೋಗದರ್ಶನಾದ-ನಿರ್ವಚನೀಯವಿಷಯಃ ಪ್ರತ್ಯಯೋಽನುಮೀಯತೇ ।**

**ಉತಾವಾಚಕೇನಾಪಿ ತೇನ ಭ್ರಾಂತ್ಯುತ್ಥಿತೋಽನಿರ್ವಚನೀಯಂ ವ್ಯವಹರತೀತಿ ಕೃತ್ವಾ। ಆದ್ಯಂ ನಿರಾಕರೋತಿ-**

**ಮೂಲ :- ಮಿಥ್ಯಾಶಬ್ದೋಽನಿರ್ವಚನೀಯಂ ವದತೀತ್ಯತ್ರ ಚ ।**

**ನ ಕಿಂಚಿನ್ಮಾನಮಿತ್ಯಸ್ಯಾನುಕರ್ಷಣಾರ್ಥಶ್ಚಕಾರಃ ।**

**ಅನುವಾದ :-** 'ರಜತಂ ಮಿಥ್ಯಾ' ಎಂಬ ಬಾಧಕಪ್ರತ್ಯಯವೇ ರಜತವು ಅನಿರ್ವಚನೀಯವಾಗಿದೆ ಎಂಬ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಾಗಿದೆ ಎಂದು ಹೇಳುತ್ತಿದ್ದೀರಿ, ಇಲ್ಲಿ ನಿಮ್ಮ ಅಭಿಪ್ರಾಯವೇನು ?

ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಾಗಿದೆ ಎಂದು ಇಟ್ಟುಕೊಂಡು,

**''ಭ್ರಾಂತ್ಯುತ್ಥಿತಃ ಅನಿರ್ವಚನೀಯವಿಷಯಕಪ್ರತ್ಯಕ್ಷವಾನ್ ತದಾ ತದ್ವಾಚಕಶಬ್ದ-ಪ್ರಯೋಕ್ತೃತ್ವಾತ್ । ಯಥಾ ಸಂಪ್ರತಿಪನ್ನಃ ।''**

ಭ್ರಾಂತ್ಯುತ್ಥಿತನಾದ ವ್ಯಕ್ತಿ 'ರಜತಂ ಮಿಥ್ಯಾ' ಎಂಬುದಾಗಿ ಮಿಥ್ಯಾಶಬ್ದವನ್ನು ಪ್ರಯೋಗ ಮಾಡುವುದರಿಂದ ಭ್ರಾಂತ್ಯುತ್ಥಿತನಾದ ವ್ಯಕ್ತಿಗೆ ಅನಿರ್ವಚನೀಯ-ವಿಷಯಕ ಪ್ರತ್ಯಕ್ಷ ಇದೆ ಎಂದು ಅನುಮಾನದಿಂದ ಸಾಧಿಸುತ್ತೀರೋ ?

ಅಥವಾ ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಾಗದಿದ್ದರೂ ಸಹ, ಭ್ರಾಂತ್ಯುತ್ಥಿತನಾದ ವ್ಯಕ್ತಿ ಅನಿರ್ವಚನೀಯವಾಚಕವಲ್ಲದ ಮಿಥ್ಯಾ-ಶಬ್ದದಿಂದ ಅನಿರ್ಚವನೀಯವಸ್ತುವನ್ನು ವ್ಯವಹರಿಸುತ್ತಾನೆ ಎಂದು ಇಟ್ಟುಕೊಂಡು, ಮಿಥ್ಯಾಶಬ್ದಪ್ರಯೋಗದಿಂದ ಭ್ರಾಂತ್ಯುತ್ಥಿತನಾದ ವ್ಯಕ್ತಿಗೆ ಅನಿರ್ವಚನೀಯ-ವಿಷಯಕಪ್ರತ್ಯಕ್ಷ ಇದೆ ಎಂದು ಅನುಮಾನದಿಂದ ಸಾಧಿಸುತ್ತೀರೋ?

ಮೊದಲನೇ ಪಕ್ಷವನ್ನು ಆಚಾರ್ಯರು ನಿರಾಕರಿಸುತ್ತಾರೆ -

ಮೂಲ :- ಮಿಥ್ಯಾಶಬ್ದೋಽನಿರ್ವಚನೀಯಂ ವದತೀತ್ಯತ್ರ ಚ ।

ಮೂಲದಲ್ಲಿರುವ ಚಕಾರವು 'ನ ಚಾನಿರ್ವಚನೀಯೇ ಕಿಂಚಿನ್ಮಾನಮ್' ಎಂಬ ಹಿಂದಿನ ವಾಕ್ಯದಲ್ಲಿರುವ 'ನ ಕಿಂಚಿನ್ಮಾನಮ್' ಎಂಬುದನ್ನು ಅನುಕರ್ಷಣ ಮಾಡುತ್ತಿದೆ. ಹಾಗಾದರೆ -

**ಮೂಲಾರ್ಥ :-** ''ಮಿಥ್ಯಾಶಬ್ದೋಽನಿರ್ವಚನೀಯಂ ವದತೀತ್ಯತ್ರ ಚ ನ ಕಿಂಚಿನ್ಮಾನಮ್'' 'ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಾಗಿದೆ ಎಂಬ ವಿಷಯದಲ್ಲಿಯೂ ಸಹ ಯಾವ ಪ್ರಮಾಣ ಇಲ್ಲ' ಎಂದು ಮೂಲದ ಅರ್ಥವಾಗುತ್ತದೆ.

'ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಾಗಿದೆ' ಎಂಬ ವಿಷಯದಲ್ಲಿಯೂ ಯಾವ ಪ್ರಮಾಣ ಇಲ್ಲವಾದ್ದರಿಂದ ಮಿಥ್ಯಾಶಬ್ದವು ಅನಿರ್ವಚನೀಯವಾಚಕವಲ್ಲ. ಆದ್ದರಿಂದ ಮಿಥ್ಯಾಶಬ್ದವು ಅನಿರ್ವಚನೀಯ-ವಾಚಕವಾಗಿದೆ ಎಂದು ಇಟ್ಟುಕೊಂಡು, 'ಮಿಥ್ಯಾಶಬ್ದಪ್ರಯೋಗದಿಂದ ಭ್ರಾಂತ್ಯುತ್ಥಿತನಾದ ವ್ಯಕ್ತಿಗೆ ಅನಿರ್ವಚನೀಯವಿಷಯಕ ಪ್ರತ್ಯಕ್ಷ ಇದೆ' ಎಂದು ಅನುಮಾನದಿಂದ ಸಾಧಿಸಲು ಬರುವುದಿಲ್ಲ ಎಂದು ಭಾವ.

**ಅವತಾರಿಕೆ :-** 'ಮಿಥ್ಯಾಶಬ್ದವು ಅನಿರ್ವಚನೀಯವಾಚಕವಲ್ಲ' ಎಂಬುದಾಗಿ ನಾವು ಹೇಳಿದಾಗ, ಇದರಮೇಲೆ ಪ್ರತಿವಾದಿಗಳು ಆಕ್ಷೇಪ ಮಾಡುತ್ತಾರೆ. ಪ್ರತಿವಾದಿಗಳ ಆಕ್ಷೇಪಕ್ಕೆ ಟೀಕಾಕೃತ್ಪಾದರು ಸಮರ್ಪಕವಾಗಿ ಉತ್ತರ ನೀಡುತ್ತಾರೆ-

## ಮಿಥ್ಯಾಶಬ್ದದಿಂದ ಅಸತ್ ವಾಚ್ಯವಾಗಿದೆ ಎಂದು ಸಮರ್ಥನೆ

**ಟೀಕಾ : ನನು ವ್ಯಾಕರಣಾಭಿಧಾನಾದಿಪ್ರಮಾಣಾಭಾವಾದ್ವಾದಿಸಮಯ-ಮಾತ್ರಸ್ಯಾತಿ ಪ್ರಸಂಗೇನಾನಿಶ್ಚಾಯಕತ್ವಾದನಿರ್ವಚನೀಯಸ್ಯ ಯದಿ ನ ಮಿಥ್ಯಾಶಬ್ದೋ ವಾಚಕಸ್ತರ್ಹಿ ತದ್ವಾಚ್ಯಂ ವಾಚ್ಯಮ್ । ಸತ್ಯಮ್ । ಅಸದಿತಿ ಬ್ರೂಮಃ ।**

**ಏವಂ ತರ್ಹಿ ನಿರರ್ಥಕ ಇತಿ ಪ್ರಾಪ್ತಮ್ । ನ ಹ್ಯಸದಸ್ತೀತಿ ಸಂಭವತಿ । ವ್ಯಾಘಾತಾತ್ । ನಿರರ್ಥಕತ್ವೇ ಚ ಪದತ್ವವ್ಯಾಘಾತ ಇತಿ ಚೇತ್ ।**

**ಮೈವಮ್ । ಅತ್ಯಂತಾಭಾವಪ್ರತಿಯೋಗಿತ್ವಲಕ್ಷಣಸ್ಯಾಸತ್ತ್ವಸ್ಯ ವಿದ್ಯಮಾನತ್ವಾತ್ । ನ ಹಿ ಮಿಥ್ಯೇತ್ಯಸ್ಯ ಶಶವಿಷಾಣಾದಿಕಮರ್ಥಃ । ತಥಾ ಸತಿ ಶಶವಿಷಾಣಂ ಮಿಥ್ಯೇತಿ ನ ಸ್ಯಾತ್ । ಕಿನ್ನಾಮ ತನ್ನಾಸ್ತೀತಿ । ತಥಾ ಚ ಮಿಥ್ಯೈವ ರಜತಮಿತ್ಯಸ್ಯ ನಾಸ್ತಿ ರಜತಂ ರಜತಾತ್ಯಂತಾಭಾವೋಽಸ್ತೀತ್ಯರ್ಥಃ ।**

**ಸ್ವಯಮಸತಃ ಕಥಂ ಪ್ರತಿಯೋಗಿತ್ವಮಿತಿ ಚೇತ್ । ಕಿಮಿಹ ಕಥಮ್ । ನ ಹಿ ಪ್ರತಿಯೋಗಿತ್ವಂ ರೂಪಾದಿವದ್ಧರ್ಮಿಸತ್ತಾಸಾಪೇಕ್ಷಮ್ । ಅಭಾವಜ್ಞಾನೋಪಯೋಗಿಜ್ಞಾನವಿಷಯತಾಮಾತ್ರಸ್ಯ ಪ್ರತಿಯೋಗಿತ್ವಾತ್ । ಅಸತೋಽಪಿ ಪ್ರತೀತಿಮುಪಪಾದಯಿಷ್ಯಾಮಃ ।**

**ಅನುವಾದ :-** 'ಮಿಥ್ಯಾಶಬ್ದವು ಅನಿರ್ವಚನೀಯವಾಚಕವಾಗಿದೆ' ಎಂಬ ವಿಷಯದಲ್ಲಿ ವ್ಯಾಕರಣ-ಅಭಿಧಾನ ಮೊದಲಾದ ಯಾವ ಪ್ರಮಾಣವೂ ಸಾಧಕವಾಗಿ ಇಲ್ಲ. ಇನ್ನು 'ಮಿಥ್ಯಾಶಬ್ದವು ಅನಿರ್ಚವನೀಯವಾಚಕವಾಗಿದೆ' ಎಂಬುದಾಗಿ ವಾದಿಗಳಾದ ನಮ್ಮ ಸಿದ್ಧಾಂತದಲ್ಲಿ ಅಂಗೀಕರಿಸಿದ್ದರಿಂದ ಪ್ರಾಮಾಣಿಕವಾಗಬಹುದಲ್ಲ ? ಎಂಬ ಶಂಕೆಯೂ ಸರಿಯಲ್ಲ. ಕಾರಣ - ವಾದಿಸಿದ್ಧಾಂತದಲ್ಲಿ ಅಂಗೀಕರಿಸಲಾಗಿದೆ ಎಂದು ಅಂಗೀಕರಿಸುವುದಾದರೆ 'ಬ್ರಹ್ಮ ಒಬ್ಬನೇ ಸತ್ಯ. ಜಗತ್ತು ಮಿಥ್ಯಾ' ಎಂದೆಲ್ಲ ಅಂಗೀಕರಿಸಬೇಕಾದ ಅತಿಪ್ರಸಂಗ ಬರುತ್ತದೆ. ಆದ್ದರಿಂದ ಕೇವಲ ವಾದಿಸಮಯವೂ ನಿಶ್ಚಾಯಕವಲ್ಲ. ಹೀಗಾಗಿ ವ್ಯಾಕರಣ-ಅಭಿಧಾನಾದಿ ಯಾವ ಪ್ರಮಾಣವೂ ಇಲ್ಲವಾದ್ದರಿಂದ, ಅತಿಪ್ರಸಂಗ ಬರುವ ಕಾರಣ ಕೇವಲ ವಾದಿಸಮಯವೂ ನಿಶ್ಚಾಯಕ-ವಾಗುವುದಿಲ್ಲವಾದ್ದರಿಂದ ಮಿಥ್ಯಾಶಬ್ದವು ಅನಿರ್ವಚನೀಯವಾಚಕವಲ್ಲ ಎಂದು ಹೇಳುವುದಾದರೆ, ಹಾಗಾದರೆ ಮಿಥ್ಯಾಶಬ್ದದಿಂದ ವಾಚ್ಯವಾದದ್ದು ಯಾವುದು ಎಂದು ನೀವು ಹೇಳಿರಿ ?

ಈ ರೀತಿಯಾಗಿ ಪ್ರಶ್ನೆ ಬಂದರೆ, ಸತ್ಯವೇ. (ಮಿಥ್ಯಾಶಬ್ದದಿಂದ ವಾಚ್ಯವಾದದ್ದು ಯಾವುದೆಂದು ಹೇಳಬೇಕಾದದ್ದು ನಿಜವೇ.) ಮಿಥ್ಯಾಶಬ್ದದಿಂದ ವಾಚ್ಯವಾದದ್ದು ಅಸತ್ ಎಂದು ಹೇಳುತ್ತೇವೆ.

ಅಸತ್ ವಾಚ್ಯವಾಗುವುದಾದರೆ ಮಿಥ್ಯಾಶಬ್ದವು ನಿರರ್ಥಕ ಎಂದೇ ಆಗುತ್ತದೆಯಲ್ಲವೇ ? ಹೌದು ನಿರರ್ಥಕ ಏಕೆ ? ಅಸತ್ ಎಂಬ ಅರ್ಥ ಇದೆಯಲ್ಲ ಎಂಬ ಶಂಕೆಯೇ ಸರಿಯಲ್ಲ. ಕಾರಣ- ಅಸತ್ ಎಂದರೆ ಇಲ್ಲ ಎಂದರ್ಥ. ಹೀಗಾಗಿ ಅಸತ್ ಅಸ್ತಿ (ಅಸತ್ ಇದೆ) ಎನ್ನಲು ಬರುವುದಿಲ್ಲ. ಅದು ವ್ಯಾಹತವಾಗುತ್ತದೆ. ಅಂದಮೇಲೆ ಅಸತ್ ಎಂದರೆ ಇಲ್ಲ ಎಂದರ್ಥವಾದ್ದರಿಂದ, 'ಮಿಥ್ಯಾಶಬ್ದಕ್ಕೆ ಅಸತ್ ವಾಚ್ಯವಾದ ಅರ್ಥವಾಗಿದೆ'

ಎಂದು ಹೇಳಿದರೆ 'ಮಿಥ್ಯಾಶಬ್ದಕ್ಕೆ ವಾಚ್ಯವಾದ ಅರ್ಥ ಇಲ್ಲ ನಿರರ್ಥಕ' ಎಂದೇ ಹೇಳಿದಂತಾಗುತ್ತದೆ. ಆಗಲಿ ನಿರರ್ಥಕವಾಗಲಿ ಎನ್ನಲು ಬರುವುದಿಲ್ಲ. ಕಾರಣ-

**ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್ ।**

ಎಂದು ಹೇಳಿದಂತೆ ಅರ್ಥ ಉಳ್ಳ ಶಬ್ದವಾದರೇನೇ ಪ್ರಾತಿಪದಿಕಸಂಜ್ಞೆ ಬಂದು, ಅದಕ್ಕೆ ಸುಪ್ ಪ್ರತ್ಯಯ ಬಂದು, ಅದು ಪದ ಎನಿಸಿಕೊಳ್ಳುತ್ತದೆ. ಪ್ರಕೃತ ಮಿಥ್ಯಾಶಬ್ದಕ್ಕೆ ಅರ್ಥವೇ ಇಲ್ಲ ನಿರರ್ಥಕ ಎಂದಾದರೆ, ಪ್ರಾತಿಪದಿಕಸಂಜ್ಞೆ-ಸುಪ್‌ಪ್ರತ್ಯಯ ಯಾವುದೂ ಬರದೇ ಪದ ಎಂದೇ ಆಗುವುದಿಲ್ಲ ಅದು !

ಈ ವಿಧವಾಗಿ ಪ್ರಶ್ನೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ - ಮಿಥ್ಯಾಶಬ್ದಕ್ಕೆ ಅತ್ಯಂತಾಭಾವಪ್ರತಿಯೋಗಿತ್ವರೂಪವಾದ ಅಸತ್ವ ಎಂಬ ಅರ್ಥ ಇದೆ. ಕಾರಣ- ಮಿಥ್ಯಾ ಎಂಬ ಶಬ್ದಕ್ಕೇನೇ ಶಶವಿಷಾಣಾದಿಗಳು ಎಂದು ಅರ್ಥವಲ್ಲ. ಹಾಗೆ ಮಿಥ್ಯಾಶಬ್ದಕ್ಕೇನೇ ಶಶವಿಷಾಣಾದಿಗಳು ಎಂದು ಅರ್ಥವಾಗುವುದಾದರೆ 'ಶಶವಿಷಾಣಂ ಮಿಥ್ಯಾ' ಎಂದು[೧] ಪ್ರಯೋಗವನ್ನೇ ಯಾರೂ ಮಾಡದೇ ಹೋಗಬೇಕಾಗುತ್ತದೆ. ಹಾಗಾದರೆ ಮಿಥ್ಯಾ ಎಂಬ ಶಬ್ದಕ್ಕೆ ಏನು ಅರ್ಥ ? ತತ್ ನಾಸ್ತಿ ಅದು ಇಲ್ಲ ಎಂದೇ ಅರ್ಥ. ಹಾಗಾಗಿ 'ರಜತಂ ಮಿಥ್ಯೈವ' ಎನ್ನುವುದಕ್ಕೆ 'ರಜತಂ ನಾಸ್ತಿ' (ರಜತ ಇಲ್ಲ) 'ರಜತಾತ್ಯಂತಾ-ಭಾವೋಽಸ್ತಿ' (ರಜತಾತ್ಯಂತಾಭಾವ ಇದೆ) ಎಂದು ಅರ್ಥ. ಹೀಗಾಗಿ ಅಸತ್ ಎಂದರೆ ಅತ್ಯಂತಾಭಾವಪ್ರತಿಯೋಗಿ ಎಂದು ಅರ್ಥವಾಗಿದೆ. ಆದ್ದರಿಂದ ಮಿಥ್ಯಾಶಬ್ದಕ್ಕೆ ಅಸತ್ವ ಅತ್ಯಂತಾಭಾವಪ್ರತಿಯೋಗಿತ್ವ ಎಂದು ಅರ್ಥ ಇರುವುದರಿಂದ ಮಿಥ್ಯಾಶಬ್ದವು ಅರ್ಥವತ್ ಆಗಿದೆ, ನಿರರ್ಥಕ ಅಲ್ಲ.

ಹೌದು, ರಜತವು ಮಿಥ್ಯೆಯಾಗಿದೆ ಎಂದರೆ ರಜತವು ಅಸತ್ ಆಗಿದೆ ಅರ್ಥಾತ್ ಅತ್ಯಂತಾಭಾವಪ್ರತಿಯೋಗಿಯಾಗಿದೆ ಎಂದು ಅರ್ಥ ಹೇಳುತ್ತಿದ್ದೀರಿ. ಹೀಗೆ ಹೇಳಿದರೆ ಅಸತ್ ಆಗಿರುವ ರಜತಕ್ಕೆ ಅತ್ಯಂತಾಭಾವಪ್ರತಿಯೋಗಿತ್ವವನ್ನು

---

೧ ಶಶವಿಷಾಣಶಬ್ದಕ್ಕೂ ಶಶವಿಷಾಣ ಎಂದೇ ಅರ್ಥ. ಮಿಥ್ಯಾಶಬ್ದಕ್ಕೂ ಶಶವಿಷಾಣ ಎಂದೇ ಅರ್ಥವಾಗುವುದರಿಂದ ಎರಡೂ ಶಬ್ದಗಳು ಸಮಾನಾರ್ಥಕವಾಗಿ ಪರ್ಯಾಯಶಬ್ದ-ಗಳಾಗುತ್ತವೆ. ಎರಡು ಪರ್ಯಾಯಶಬ್ದಗಳನ್ನು ಒಂದೇಬಾರಿ ಪ್ರಯೋಗಿಸಲು ಬರುವುದಿಲ್ಲವಾದ್ದರಿಂದ 'ಶಶವಿಷಾಣಂ ಮಿಥ್ಯಾ' ಎಂದು ಶಬ್ದಪ್ರಯೋಗವನ್ನೇ ಮಾಡದೇ ಹೋಗಬೇಕಾಗುತ್ತದೆ ಎಂದು ಭಾವ.

ಹೇಳಿದಂತಾಗುತ್ತದೆ. ಆದರೆ ಸ್ವಯಂ ಅಸತ್ ಆಗಿರುವ ರಜತಕ್ಕೆ ಪ್ರತಿಯೋಗಿತ್ವ ಎಂಬ ಧರ್ಮ ಹೇಗೆ ಉಪಪನ್ನವಾಗುತ್ತದೆ?

ಈ ವಿಧವಾದ ಪ್ರಶ್ನೆಯೇ ಸರಿಯಲ್ಲ. ಯಾಕೆಂದರೆ ರೂಪ-ರಸ ಮೊದಲಾದ ಧರ್ಮಗಳು ಧರ್ಮಿಸತ್ತಾಸಾಪೇಕ್ಷವಾದ ಧರ್ಮಗಳು. ಅಂದರೆ ಧರ್ಮಿಯು (ರೂಪ-ರಸಗಳಿಗೆ ಆಶ್ರಯವಾದದ್ದು) ಸತ್ ಆಗಿದ್ದರೆ ಮಾತ್ರ ರೂಪ-ರಸಗಳು ಇರುತ್ತವೆ. ಧರ್ಮಿಯೇ ಅಸತ್ ಆದರೆ ಅಲ್ಲಿ ರೂಪ-ರಸಗಳು ಇರುವುದಿಲ್ಲ. ಉದಾ- ಗಗನಕುಸುಮದಲ್ಲಿ ರೂಪ ಇರಲು ಸಾಧ್ಯವಿಲ್ಲ. ಪ್ರಕೃತದಲ್ಲಿ ಪ್ರತಿಯೋಗಿತ್ವ-ಭಿನ್ನತ್ವ ಮೊದಲಾದ ಧರ್ಮಗಳು ರೂಪ-ರಸಾದಿಗಳಂತೆ ಧರ್ಮಿಸತ್ತಾಸಾಪೇಕ್ಷವಾದ ಧರ್ಮಗಳಲ್ಲ. ಕಿಂತು ಧರ್ಮಿಸತ್ತಾನಿರಪೇಕ್ಷವಾದ ಧರ್ಮಗಳಾಗಿವೆ. ಅಂದರೆ ಧರ್ಮಿಯು ಸತ್ ಆಗದಿದ್ದರೂ ಇರಬಹುದಾದ ಧರ್ಮಗಳಾಗಿವೆ. ಯಾಕೆಂದರೆ -

**''ಅಭಾವಜ್ಞಾನೋಪಯೋಗಿಜ್ಞಾನವಿಷಯತ್ವಂ ಪ್ರತಿಯೋಗಿತ್ವಮ್ ।''**

ಪ್ರತಿಯೋಗಿತ್ವ ಎಂದರೆ ಅಭಾವಜ್ಞಾನೋಪಯೋಗಿಜ್ಞಾನವಿಷಯತ್ವ. ಅಂದರೆ ಅಭಾವಜ್ಞಾನ ಆಗಬೇಕಾದರೆ ಪ್ರತಿಯೋಗಿಜ್ಞಾನ ಆಗಲೇಬೇಕು. ಘಟಜ್ಞಾನವಾದಾಗ ಮಾತ್ರ ಘಟಾಭಾವಜ್ಞಾನ ಆಗಲು ಸಾಧ್ಯ. ಹಾಗಾಗಿ ಅಭಾವಜ್ಞಾನಕ್ಕೆ ಉಪಯೋಗಿಯಾದ ಜ್ಞಾನ ಅದು ಪ್ರತಿಯೋಗಿಜ್ಞಾನ. ಆ ಜ್ಞಾನಕ್ಕೆ ವಿಷಯವಾದದ್ದೇ ಪ್ರತಿಯೋಗಿ. ಅಭಾವಜ್ಞಾನೋಪಯೋಗಿಜ್ಞಾನಕ್ಕೆ ಸತ್ ಪದಾರ್ಥ ವಿಷಯವಾಗುವಂತೆ ಅಸತ್ ಪದಾರ್ಥವೂ ವಿಷಯವಾಗ-ಬಹುದಾಗಿದೆ. ಶಶವಿಷಾಣ ಇಲ್ಲ ಎಂದು ಜ್ಞಾನವಾಗಬೇಕಾದರೆ ಮೊದಲು ಶಶವಿಷಾಣಜ್ಞಾನ ಬೇಕೇಬೇಕು. ಹಾಗಾಗಿ ಅಭಾವಜ್ಞಾನ ಶಶವಿಷಾಣಾ-ಭಾವಜ್ಞಾನ. ಅದಕ್ಕೆ ಉಪಯೋಗಿಯಾದ ಜ್ಞಾನ ಶಶವಿಷಾಣಜ್ಞಾನ. ಅದಕ್ಕೆ ವಿಷಯವಾದದ್ದು ಶಶವಿಷಾಣ. ಶಶವಿಷಾಣದಲ್ಲಿ ಅಭಾವಜ್ಞಾನೋಪಯೋಗಿ-ಜ್ಞಾನವಿಷಯತ್ವ ಇದೆ, ಇದೇ ಪ್ರತಿಯೋಗಿತ್ವ. ಆದ್ದರಿಂದ ಧರ್ಮಿಯಾದ ಶಶವಿಷಾಣವು ಅಸತ್ ಆಗಿದ್ದರೂ ಅದರಲ್ಲಿ ಪ್ರತಿಯೋಗಿತ್ವ ಎಂಬ ಧರ್ಮವು ಉಪಪನ್ನವೇ ಆಗುವುದರಿಂದ ಯಾವ ಅನುಪಪತ್ತಿ ಇಲ್ಲ.

ಹೌದು ಅಭಾವಜ್ಞಾನೋಪಯೋಗಿಜ್ಞಾನವಿಷಯತ್ವ ಎನ್ನುವುದು ಅಸತ್‌ಗೆ ಹೇಗೆ ಕೂಡುತ್ತದೆ ? ಯಾಕೆಂದರೆ - ಹೀಗೆ ಹೇಳಿದಾಗ ಅಸತ್‌ಗೆ ಜ್ಞಾನವಿಷಯತ್ವವನ್ನು ಹೇಳಿದಂತಾಗುತ್ತದೆ. ಆದರೆ -

**'ಅಸಚ್ಚೇನ್ನ ಪ್ರತಿಯೇತ'**

ಎಂದು ನಿಯಮವಿರುವ ಕಾರಣ ಅಸತ್‌ಗೆ ಪ್ರತೀತಿಯೇ ಇಲ್ಲವಾದ್ದರಿಂದ ಅಸತ್‌ಗೆ ಜ್ಞಾನವಿಷಯತ್ವ ಕೂಡುವುದಿಲ್ಲ. ಅರ್ಥಾತ್ ಅಸತ್‌ಗೆ ಅಭಾವಜ್ಞಾನೋಪಯೋಗಿಜ್ಞಾನವಿಷಯತ್ವ ಹೇಳಲು ಬರುವುದಿಲ್ಲ ಎಂದು ಶಂಕೆ ಬಂದರೆ, ಅದು ಸಮಂಜಸವಲ್ಲ. ಕಾರಣ -

**''ಅಸತೋಽಪ್ರತೀತಾವಸದ್ವೈಲಕ್ಷಣ್ಯಜ್ಞಾನಾನುಪಪತ್ತಿಃ''**
**(ಅಸತಃ ಪ್ರತೀತಿಂ ವಿನಾಽಸದ್ವೈಲಕ್ಷಣ್ಯಜ್ಞಾನಾನುಪಪತ್ತೇಃ।)**

ಇತ್ಯಾದಿಯಾಗಿ ಮುಂದೆ ಅಸತ್‌ಗೂ ಪ್ರತೀತಿಯನ್ನು ಉಪಪಾದನೆ ಮಾಡುವವರಿದ್ದೇವೆ. ಅಸತ್‌ಗೂ ಪ್ರತೀತಿಯನ್ನು ಸಮರ್ಥಿಸುವುದರಿಂದ ಅಸತ್‌ಗೆ ಜ್ಞಾನವಿಷಯತ್ವ ಅಭಾವಜ್ಞಾನೋಪಯೋಗಿಜ್ಞಾನವಿಷಯತ್ವ ಕೂಡಿಯೇ ಕೂಡುತ್ತದೆ. ಯಾವ ಅನುಪಪತ್ತಿ ಇಲ್ಲ ಎಂದು ಭಾವ.

**ಅವತಾರಿಕೆ :-** 'ಮಿಥ್ಯಾಶಬ್ದೋಽನಿರ್ವಚನೀಯಂ ವದತೀತ್ಯತ್ರ ಚ' ಎಂಬ ಆಚಾರ್ಯರ ವಾಕ್ಯಪ್ರಯೋಗ ಹೇಗೆ ಸಮಂಜಸ ? (ಸಮಂಜಸವಾಗುವುದಿಲ್ಲ) ಎಂಬುದಾಗಿ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

**'ಮಿಥ್ಯಾಶಬ್ದೋಽನಿರ್ವಚನೀಯಂ ವದತಿ'**
**ಎಂಬ ಆಚಾರ್ಯರ ಪ್ರಯೋಗ ಸಮಂಜಸ**

**ಟೀಕಾ : ನನು ವದತಿರತ್ರ ಯದಿ ವದನಕ್ರಿಯಾವಾಚೀ ತದಾ ಶಬ್ದಸ್ಯ ಕರ್ಮತೈವ। ಅಥ ಶಾಬ್ದಪ್ರತೀತಿವಾಚೀ ತದಾ ಕರಣತೈವ। ತತ್ಕಥಂ ಶಬ್ದೋ ವದತೀತಿ ವ್ಯಪದೇಶಃ ? ಇತ್ಥಮ್ । ಅವಾಂತರವ್ಯಾಪಾರವತೋ ಹಿ ಕಾರಣಸ್ಯ ಕರಣತ್ವಮ್। ಅನ್ಯಥಾ ಅತಿಪ್ರಸಂಗಾತ್। ತತ್ರ ಸ್ವಕ್ರಿಯಾಂ ಪ್ರತಿ ಸರ್ವಸ್ಯ ಪ್ರಾಧಾನ್ಯೇನ ಕರ್ತೃತ್ವಾತ್ ಕರಣೇಽಪಿ ಶಬ್ದೇ ತದ್ವಿವಕ್ಷಯಾ ವದತೀತಿ ವ್ಯಪದೇಶೋ ಯುಜ್ಯತೇ।**

**ಪ್ರಧಾನಕ್ರಿಯಾಂ ಪ್ರತಿ ಕರಣತ್ವಮುಲ್ಲಂಘ್ಯ ಕಿಮವಾಂತರ-ವ್ಯಾಪಾರೇ ಕರ್ತೃತ್ವಂ ವಿವಕ್ಷ್ಯತ ಇತಿ ಚೇತ್, ಪ್ರಾಧ್ಯಾನ್ಯ-ನಿರ್ದೇಶೇನ ವಾಚಕತ್ವಪಕ್ಷಕಕ್ಷೀಕರಣಸೂಚನಾರ್ಥಮ್ ।**

**ಮಿಥ್ಯಾಶಬ್ದೇನಾನಿರ್ವಚನೀಯಂ ದೇವದತ್ತೋ ವದತೀತ್ಯಸ್ಯ ವಾಚಕಾವಾಚಕಪಕ್ಷಸಾಧಾರಣ್ಯಾತ್ ।**

**ವದತಿರ್ವಾಚಕತ್ವೇ ಪ್ರಯುಜ್ಯತ ಇತಿ ಚೇತ್, ಸತ್ಯಮ್ । ನ ತು ತನ್ನಿಯಮಃ । ಶಾಬ್ದಪ್ರತೀತಿಮಾತ್ರೇಽಪಿ ಪ್ರಯೋಗದರ್ಶನಾತ್ ।**

**ಅನುವಾದ :-** 'ಮಿಥ್ಯಾಶಬ್ದೋಽನಿರ್ವಚನೀಯಂ ವದತಿ' ಎಂಬ ಪ್ರಯೋಗದಲ್ಲಿ ವದ ಧಾತುವಿಗೆ ವದನಕ್ರಿಯಾ (ಉಚ್ಚಾರಣಕ್ರಿಯಾ) ಎಂದು ಅರ್ಥ ವಿವಕ್ಷಿತವೋ ? ಅಥವಾ ಶಾಬ್ದಪ್ರತೀತಿ (ಶಾಬ್ದಬೋಧ) ಎಂದು ಅರ್ಥ ವಿವಕ್ಷಿತವೋ ?

ವದನಕ್ರಿಯಾ (ಉಚ್ಚಾರಣಕ್ರಿಯಾ) ಎಂದು ಅರ್ಥ ಹೇಳುವುದಾದರೆ, ಆ ಉಚ್ಚಾರಣಕ್ರಿಯೆಯಲ್ಲಿ ಶಬ್ದವು ಕರ್ಮವಾಗುವುದರಿಂದ 'ಕರ್ಮಣಿ ದ್ವಿತೀಯಾ' ಎಂಬ ನಿಯಮಾನುಸಾರವಾಗಿ ಕರ್ಮವಾಚಕಪದವನ್ನು ದ್ವಿತೀಯಾವಿಭಕ್ತಿಯಲ್ಲಿ ಪ್ರಯೋಗಿಸಬೇಕಾದ್ದರಿಂದ ಪ್ರಕೃತ 'ಶಬ್ದಂ' ಎಂದು ದ್ವಿತೀಯಾವಿಭಕ್ತಿಪ್ರಯೋಗ ಮಾಡಬೇಕಾಗುತ್ತದೆ. 'ಚೈತ್ರೋ ಮಿಥ್ಯಾಶಬ್ದಂ ಅನಿರ್ವಚನೀಯಪರತ್ವೇನ ವದತಿ (ಉಚ್ಚಾರಯತಿ)' ಎಂಬುದಾಗಿ ಪ್ರಯೋಗ ಮಾಡಬೇಕಾಗುತ್ತದೆ ಎಂದು ಭಾವ.

ಇನ್ನು ಶಾಬ್ದಪ್ರತೀತಿ (ಶಾಬ್ದಬೋಧ) ಎಂದು ಅರ್ಥ ಹೇಳುವುದಾದರೆ, ಶಾಬ್ದಬೋಧವನ್ನು ಕುರಿತು ಶಬ್ದವು ಕರಣವಾಗುತ್ತದೆ. ಕರಣವಾದರೆ 'ಕರ್ತೃಕರಣಯೋಸ್ತೃತೀಯಾ' ಎಂಬ ನಿಯಮಾನುಸಾರವಾಗಿ ಕರಣವಾಚಕ-ಪದವನ್ನು ತೃತೀಯಾವಿಭಕ್ತಿಯಲ್ಲಿ ಪ್ರಯೋಗಿಸಬೇಕಾದ್ದರಿಂದ ಪ್ರಕೃತ ಶಬ್ದವು ಕರಣವಾದ್ದರಿಂದ 'ಮಿಥ್ಯಾಶಬ್ದೇನ' ಎಂದು ತೃತೀಯಾವಿಭಕ್ತಿಪ್ರಯೋಗ ಮಾಡಬೇಕಾಗುತ್ತದೆ. ''ಚೈತ್ರೋ ಮಿಥ್ಯಾಶಬ್ದೇನ ಅನಿರ್ವಚನೀಯಂ ವದತಿ (ಬೋಧಯತಿ)'' ಎಂಬುದಾಗಿ ಪ್ರಯೋಗ ಮಾಡಬೇಕಾಗುತ್ತದೆ.

ಅಂದಮೇಲೆ ವದ ಧಾತುವಿಗೆ ವದನಕ್ರಿಯಾ (ಉಚ್ಚಾರಣಕ್ರಿಯಾ) ಎಂದು ಅರ್ಥ ವಿವಕ್ಷಿಸಿದರೆ 'ಮಿಥ್ಯಾಶಬ್ದಂ' ಎಂದು ದ್ವಿತೀಯಾವಿಭಕ್ತಿಪ್ರಯೋಗ ಮಾಡಬೇಕು. ಇನ್ನು ಶಾಬ್ದಬೋಧ ಎಂದು ಅರ್ಥ ವಿವಕ್ಷಿಸಿದರೆ 'ಮಿಥ್ಯಾಶಬ್ದೇನ' ಎಂದು ತೃತೀಯಾವಿಭಕ್ತಿಪ್ರಯೋಗ ಮಾಡಬೇಕು. ಆದರೆ ಪ್ರಕೃತ ದ್ವಿತೀಯಾ-ತೃತೀಯಾ ಎರಡೂ ಪ್ರಯೋಗಿಸದೇ 'ಮಿಥ್ಯಾಶಬ್ದಃ' ಎಂದು ಪ್ರಥಮಾ ವಿಭಕ್ತಿಪ್ರಯೋಗ ಹೇಗೆ ಮಾಡಿದರು ಆಚಾರ್ಯರು ?

ಈ ವಿಧವಾದ ಆಕ್ಷೇಪಕ್ಕೆ ಸಮಾಧಾನ ಇಷ್ಟು :- ವದ ಧಾತುವಿಗೆ ಶಾಬ್ದಬೋಧ ಎಂಬ ಅರ್ಥವನ್ನೇ ವಿವಕ್ಷಿಸುತ್ತೇವೆ. ಹಾಗಾದರೆ 'ಮಿಥ್ಯಾಶಬ್ದೇನ' ಎಂದು ತೃತೀಯಾವಿಭಕ್ತಿಪ್ರಯೋಗ ಮಾಡಬೇಕಿತ್ತು ? ಎಂಬ ಪ್ರಶ್ನೆಗೆ ಉತ್ತರ ಇಂತಿದೆ :- ಅವಾಂತರವ್ಯಾಪಾರ ಉಳ್ಳ ಕಾರಣಕ್ಕೆ ಕರಣ ಎನ್ನುತ್ತಾರೆ. ಉದಾ- 'ಕುಠಾರೇಣ ದಾರು ಛಿನತ್ತಿ' (ಕೊಡಲಿಯಿಂದ ಕಟ್ಟಿಗೆಯನ್ನು ಕತ್ತರಿಸುತ್ತಾನೆ) ಎನ್ನುವಲ್ಲಿ ಕುಠಾರವು ಛೇದನಕ್ರಿಯಾವನ್ನು ಕುರಿತು ಕರಣವಾಗಿದೆ. ಕುಠಾರದಿಂದ ಛೇದನಕ್ರಿಯಾ ಉಂಟಾಗಬೇಕಾದರೆ ದಾರುಸಂಯೋಗ ಆಗಲೇಬೇಕಾದ್ದರಿಂದ ಅಲ್ಲಿ ದಾರುಸಂಯೋಗವು ಅವಾಂತರವ್ಯಾಪಾರವಾಗಿದೆ. ಹೀಗಾಗಿ ದಾರುಸಂಯೋಗ ಎಂಬ ಅವಾಂತರವ್ಯಾಪಾರ ಉಳ್ಳದ್ದಾಗಿ ಛೇದನಕ್ರಿಯೆಗೆ ಕಾರಣವಾದ್ದರಿಂದ ಕುಠಾರವು ಛೇದನಕ್ರಿಯಾವನ್ನು ಕುರಿತು ಕರಣವಾಗಿದೆ. ಇಲ್ಲಿ ಕುಠಾರವು ಛೇದನರೂಪವಾದ ಪ್ರಧಾನಕ್ರಿಯೆಯನ್ನು ಕುರಿತು ಕರಣವಾಗಿದ್ದರೂ ಸಹ ದಾರುಸಂಯೋಗ ಎಂಬ ಅವಾಂತರ ವ್ಯಾಪಾರವನ್ನು ಕುರಿತು ಕರ್ತೃವೇ ಆಗಿರುತ್ತದೆ. ಅನ್ನುವುದಕ್ಕಾಗಿಯೇ

''**ಕುಠಾರಃ ದಾರುಣಾ ಸಂಯುಜ್ಯತೇ**''

ಇತ್ಯಾದಿ ಪ್ರಯೋಗಗಳು ಕೂಡುತ್ತವೆ. ಅದರಂತೆಯೇ ಪ್ರಕೃತದಲ್ಲಿಯೂ ಸಹ ಶಬ್ದದಿಂದ ಶಾಬ್ದಬೋಧವು ಉಂಟಾಗಬೇಕಾದರೆ ಶಬ್ದವು ಶಕ್ತಿವಿಷಯ-ವಾಗಲೇಬೇಕಾದ್ದರಿಂದ ಶಕ್ತಿವಿಷಯತ್ವ(ಶಕ್ತಿಜ್ಞಾನವಿಷಯತ್ವ)ವು ಅವಾಂತರ-ವ್ಯಾಪಾರವಾಗಿದೆ. ಇಲ್ಲಿ ಶಬ್ದವು ಶಾಬ್ದಬೋಧ ಎಂಬ ಪ್ರಧಾನಕ್ರಿಯೆಯನ್ನು ಕುರಿತು ಕರಣವಾಗಿದ್ದರೂ ಶಕ್ತಿವಿಷಯತ್ವ ಎಂಬ ಅವಾಂತರವ್ಯಾಪಾರವನ್ನು ಕುರಿತು ಕರ್ತೃವೇ ಆಗಿದೆ. ಹೀಗಾಗಿ ಶಬ್ದನಿಷ್ಠವಾದ ಶಕ್ತಿಜ್ಞಾನವಿಷಯತ್ವ-ರೂಪವಾದ ಅವಾಂತರವ್ಯಾಪಾರವನ್ನು ವಿವಕ್ಷಿಸಿ (ಅವಾಂತರವ್ಯಾಪಾರವನ್ನು ಕುರಿತು ಕರ್ತೃತ್ವವನ್ನು ವಿವಕ್ಷಿಸಿ)

''**ಮಿಥ್ಯಾಶಬ್ದಃ ವದತಿ**'' ಎಂಬುದಾಗಿ ಪ್ರಥಮಾವಿಭಕ್ತಿಪ್ರಯೋಗ ಮಾಡಿರುವುದು ಉಪಪನ್ನವೇ ಆಗಿದೆ ಎಂದು ಭಾವ.

ಹೌದು, ಶಬ್ದದಲ್ಲಿ ಶಾಬ್ದಬೋಧರೂಪಪ್ರಧಾನಕ್ರಿಯೆಯನ್ನು ಕುರಿತು ಕರಣತ್ವವೂ ಇದೆ, ಶಕ್ತಿವಿಷಯತ್ವರೂಪ ಅವಾಂತರಕ್ರಿಯೆಯನ್ನು ಕುರಿತು ಕರ್ತೃತ್ವವೂ ಇದೆ. ಹೀಗೆ ಕರಣತ್ವ-ಕರ್ತೃತ್ವ ಎರಡೂ ಇರುವಾಗ ಪ್ರಧಾನ-

ಕ್ರಿಯೆಯನ್ನು ಕುರಿತು ಇರುವ ಕರಣತ್ವವನ್ನು ತಿರಸ್ಕರಿಸಿ, ಅವಾಂತರವ್ಯಾಪಾರವನ್ನು ಕುರಿತು ಇರುವ ಕರ್ತೃತ್ವವನ್ನು ಏಕೆ ವಿವಕ್ಷಿಸುತ್ತೀರಿ?

ಈ ಪ್ರಶ್ನೆಗೆ ಸಮಾಧಾನ ಹೀಗೆ. ಮಿಥ್ಯಾಶಬ್ದವು ಅನಿರ್ವಚನೀಯಪದಾರ್ಥಕ್ಕೆ ವಾಚಕವಾಗಿದೆ ಎನ್ನುವುದು ಪರರ ಮನಸ್ಸಿನಲ್ಲಿ ಇದೆ. ಅದನ್ನು ಇಲ್ಲಿ ತಿಳಿಸಬೇಕಿದೆ. ಮತ್ತು ಅದನ್ನು ನಿರಾಕರಿಸಬೇಕಿದೆ. ಅದಕ್ಕಾಗಿ 'ಮಿಥ್ಯಾಶಬ್ದಃ' ಎಂದು ಪ್ರಥಮಾವಿಭಕ್ತಿಪ್ರಯೋಗ ಮಾಡಿದ್ದಾರೆ.

ಒಂದುವೇಳೆ 'ಮಿಥ್ಯಾಶಬ್ದೇನ' ಎಂಬುದಾಗಿ ತೃತೀಯಾವಿಭಕ್ತಿಯಲ್ಲಿ ಪ್ರಯೋಗಿಸಿದ್ದಾದರೆ ಆಗ ಮಿಥ್ಯಶಬ್ದವು ಅನಿರ್ವಚನೀಯಪದಾರ್ಥಕ್ಕೆ ವಾಚಕವಾಗಿದೆ ಎನ್ನುವುದು ತಿಳಿಯುತ್ತಿರಲಿಲ್ಲ. ಕಾರಣ -

'**ದೇವದತ್ತಃ ಘಟಶಬ್ದೇನ ಘಟಂ ವದತಿ**' ಎಂಬುದಾಗಿ ವಾಚಕಪಕ್ಷದಲ್ಲಿಯೂ ತೃತೀಯಾಪ್ರಯೋಗ ಮಾಡಿದ್ದು ಕಂಡಿದೆ.

**ದೇವದತ್ತಃ ಗಂಗಾಶಬ್ದೇನ ತೀರಂ ವದತಿ**
**ದೇವದತ್ತಃ ಸಿಂಹಶಬ್ದೇನ ಕ್ರೂರಂ ವದತಿ**

ಇತ್ಯಾದಿಯಾಗಿ ವಾಚಕವಾಗದ ಪಕ್ಷದಲ್ಲಿಯೂ ತೃತೀಯಾಪ್ರಯೋಗ ಮಾಡುವುದು ಕಂಡಿದೆ. ಆದ್ದರಿಂದ ಈ ವಿಧವಾದ (ವ್ಯವಹಾರವು) ತೃತೀಯಾಪ್ರಯೋಗವು ವಾಚಕ-ಅವಾಚಕ ಉಭಯಪಕ್ಷಸಾಧಾರಣವಾಗಿದೆ. ಹೀಗಾಗಿ ಪ್ರಕೃತ 'ಮಿಥ್ಯಾಶಬ್ದೇನ' ಎಂಬುದಾಗಿ ತೃತೀಯಾಪ್ರಯೋಗ ಮಾಡಿದ್ದರೆ ಮಿಥ್ಯಾಶಬ್ದವು ಅನಿರ್ವಚನೀಯಪದಾರ್ಥಕ್ಕೆ ವಾಚಕವೇ ಆಗಿದೆ ಎನ್ನುವುದು ತಿಳಿಯುತ್ತಿರಲಿಲ್ಲ. ಅದೇ 'ಮಿಥ್ಯಾಶಬ್ದಃ' ಎಂದು ಪ್ರಥಮಾ-ಪ್ರಯೋಗ ಮಾಡಿದರೆ ಮಿಥ್ಯಾಶಬ್ದವು ಅನಿರ್ವಚನೀಯಪದಾರ್ಥಕ್ಕೆ ವಾಚಕವೇ ಆಗಿದೆ ಎಂದು ತಿಳಿದುಬರುತ್ತದೆ.

ಆದ್ದರಿಂದ ಮಿಥ್ಯಾಶಬ್ದವು ಅನಿರ್ವಚನೀಯಪದಾರ್ಥಕ್ಕೆ ವಾಚಕವಾಗಿದೆ ಎನ್ನುವುದು ಪರರ ಮನಸ್ಸಿನಲ್ಲಿ ಇದೆ ಎಂದು ತಿಳಿಸಿ, ಅದನ್ನು ನಿರಾಕರಿಸುವುದಕ್ಕಾಗಿ ಶಬ್ದದಲ್ಲಿರುವ (ಪ್ರಧಾನಕ್ರಿಯೆಯನ್ನು ಕುರಿತು) ಕರಣತ್ವವನ್ನು ತಿರಸ್ಕರಿಸಿ (ಅವಾಂತರವ್ಯಾಪಾರವನ್ನು ಕುರಿತು) ಕರ್ತೃತ್ವವನ್ನು ವಿವಕ್ಷಿಸಿ 'ಮಿಥ್ಯಾಶಬ್ದಃ ಅನಿರ್ವಚನೀಯಂ ವದತಿ' ಎಂಬುದಾಗಿ ಪ್ರಥಮಾಪ್ರಯೋಗ ಮಾಡಿದ್ದಾರೆ ಎಂದು ಭಾವ.

ವದ ಧಾತುವು ವಾಚಕವಾಗಿದ್ದಲ್ಲಿ ಮಾತ್ರ ('ವದತಿ' ಎಂಬುದಾಗಿ) ಪ್ರಯೋಗಿಸಲ್ಪಡುತ್ತದೆ, ವಾಚಕವಾಗದಿದ್ದ ಪಕ್ಷದಲ್ಲಿ 'ವದತಿ' ಎಂದು ಪ್ರಯೋಗಿಸುವುದಿಲ್ಲ ಎಂದು ಶಂಕೆ ಬಂದರೆ,

ಸತ್ಯವೇ. ಆದರೆ ವಾಚಕವಾಗಿದ್ದ ಪಕ್ಷದಲ್ಲಿ ಮಾತ್ರ 'ವದತಿ' ಎಂದು ವದ ಧಾತುವನ್ನು ಪ್ರಯೋಗಿಸುತ್ತಾರೆ ಎಂಬುದಾಗಿ ನಿಯಮವೇನಿಲ್ಲ.

**ದೇವದತ್ತಃ ಘಟಶಬ್ದೇನ ಘಟಂ ವದತಿ** **ಶಕ್ತಿವೃತ್ತಿ**
**ದೇವದತ್ತಃ ಗಂಗಾಶಬ್ದೇನ ತೀರಂ ವದತಿ** **ಲಕ್ಷಣಾವೃತ್ತಿ**
**ದೇವದತ್ತಃ ಸಿಂಹಶಬ್ದೇನ ಕ್ರೂರಂ ವದತಿ** **ಗೌಣೀವೃತ್ತಿ**

ಇತ್ಯಾದಿಯಾಗಿ ವಾಚಕವಾದ-ವಾಚಕವಾಗದ ಉಭಯಪಕ್ಷಗಳಲ್ಲಿಯೂ ವದಧಾತುವಿನ ಪ್ರಯೋಗ ಕಂಡಿದೆ. ಶಕ್ತಿವೃತ್ತಿಯಿಂದ ಬರುವ ಬೋಧ, ಲಕ್ಷಣಾವೃತ್ತಿಯಿಂದ ಬರುವ ಬೋಧ, ಗೌಣೀವೃತ್ತಿಯಿಂದ ಬರುವ ಬೋಧ ಹೀಗೆ ಎಲ್ಲವಿಧ ಶಾಬ್ದಬೋಧಗಳಲ್ಲಿಯೂ ವದಧಾತುವಿನ ಪ್ರಯೋಗ ಕಂಡಿದೆಯಾದ್ದರಿಂದ 'ಮಿಥ್ಯಾಶಬ್ದೇನ' ಎಂದು ತೃತೀಯಾಪ್ರಯೋಗ ಮಾಡಿದ್ದರೆ ''ಮಿಥ್ಯಾಶಬ್ದವು ಅನಿರ್ವಚನೀಯಾರ್ಥಕ್ಕೆ ವಾಚಕವೇ ಆಗಿದೆ ಎಂದು ಪರರ ಮನಸ್ಸಿನಲ್ಲಿ ಇದೆ'' ಎನ್ನುವುದು ತಿಳಿಯುತ್ತಿರಲಿಲ್ಲ. ಅದನ್ನು ತಿಳಿಸಿ ಅದನ್ನು ನಿರಾಕರಿಸುವುದಕ್ಕಾಗಿ ಪ್ರಯೋಗವ್ಯತ್ಯಾಸ ಮಾಡಿ 'ಮಿಥ್ಯಾಶಬ್ದಃ' ಎಂಬುದಾಗಿ ಪ್ರಥಮಾಪ್ರಯೋಗ ಮಾಡಿದ್ದಾರೆ ಆಚಾರ್ಯರು ಎಂದು ಭಾವ.

**ಅವತಾರಿಕೆ :-** ''ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಾಗಿದೆ ಎಂದು ಇಟ್ಟುಕೊಂಡು, ಭ್ರಾಂತ್ಯುತ್ಥಿತನಾದ ವ್ಯಕ್ತಿ 'ರಜತಂ ಮಿಥ್ಯಾ' ಎಂಬುದಾಗಿ ಮಿಥ್ಯಾಶಬ್ದವನ್ನು ಪ್ರಯೋಗ ಮಾಡುವುದರಿಂದ ಭ್ರಾಂತ್ಯುತ್ಥಿತನಾದ ವ್ಯಕ್ತಿಗೆ ಅನಿರ್ವಚನೀಯವಿಷಯಕ ಪ್ರತ್ಯಕ್ಷ ಇದೆ ಎಂದು ಅನುಮಾನದಿಂದ ಸಾಧಿಸುತ್ತೇವೆ''

ಎಂಬ ಮೊದಲನೇ ಪಕ್ಷವನ್ನು ಈವರೆಗೆ ನಿರಾಕರಿಸಿ, ಪ್ರಕೃತದಲ್ಲಿ ''ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಲ್ಲದಿದ್ದರೂ ಸಹ ಭ್ರಾಂತ್ಯುತ್ಥಿತನಾದ ವ್ಯಕ್ತಿ ಅನಿರ್ವಚನೀಯವಾಚಕವಲ್ಲದ ಮಿಥ್ಯಾಶಬ್ದದಿಂದ ಅನಿರ್ವಚನೀಯವಸ್ತುವನ್ನು ವ್ಯವಹರಿಸುತ್ತಾನೆ ಎಂದು ಇಟ್ಟುಕೊಂಡು, ಮಿಥ್ಯಾಶಬ್ದಪ್ರಯೋಗದಿಂದ ಭ್ರಾಂತ್ಯುತ್ಥಿತನಾದ ವ್ಯಕ್ತಿಗೆ ಅನಿರ್ವಚನೀಯವಿಷಯಕ ಪ್ರತ್ಯಕ್ಷ ಇದೆ ಎಂಬುದಾಗಿ ಅನುಮಾನದಿಂದ ಸಾಧಿಸುತ್ತೇವೆ''

ಎಂಬ ಎರಡನೇ ಪಕ್ಷವನ್ನು ನಿರಾಕರಿಸುತ್ತಾರೆ -

**ಟೀಕಾ : ದ್ವಿತೀಯಪಕ್ಷೇಽಪಿ ಮಿಥ್ಯಾಶಬ್ದ ಇತ್ಯೇವೋತ್ತರಮ್ । ನ ಹಿ ತೀರಪುರುಷಾದೇರವಾಚಕೇನಾಪಿ ನದೀಸಿಂಹಾದಿಶಬ್ದೇನ ದೇವದತ್ತಸ್ತದ್ವದತೀತಿ ವಿನಾ ಪ್ರಮಾಣೇನ ಕಲ್ಪ್ಯತೇ । ಅಪಿ ತು ವಕ್ತುರಾಪ್ತತ್ವನಿಶ್ಚಯೇ ಸತಿ ವಾಚ್ಯಾರ್ಥಾನುಪಪತ್ತ್ಯಾದಿದರ್ಶನೇನೈವ ।**

**ನ ಚ ತಥಾ ಮಿಥ್ಯೇತಿಶಬ್ದೋ ಯಸ್ಯಾಸೌ ಮಿಥ್ಯಾಶಬ್ದೋ ಭ್ರಾಂತೇರುತ್ಥಿತೋಽನಿರ್ವಚನೀಯಂ ತೇನ ವದತೀತ್ಯತ್ರ ಕಿಂಚಿನ್ಮಾನಮಸ್ತಿ ।**

**ಅನಿರ್ವಚನೀಯತ್ವಾದ್ರಜತಸ್ಯ ಮುಖ್ಯಾರ್ಥಾನುಪಪತ್ತಾವಮುಖ್ಯಾ ವೃತ್ತಿರಾಶ್ರೀಯತ ಇತಿ ಚೇನ್ನ । ಪರಸ್ಪರಾಶ್ರಯಪ್ರಸಂಗಾತ್ । ಸಿದ್ಧೇ ಶುಕ್ತಿರಜತಾದೇರನಿರ್ವಚನೀಯತ್ವೇ ಮಿಥ್ಯಾಶಬ್ದಸ್ಯ ತತ್ಪರತ್ವಕಲ್ಪನಂ ತೇನೈವ ಚಾನಿರ್ವಚನೀಯತ್ವಕಲ್ಪನಮಿತಿ ।**

**ಪ್ರಮಾಣಾಂತರೇಣಾನಿರ್ವಚನೀಯತಾಪ್ರತಿಪತ್ತೌ ತು ಕಿಮನೇನ । ತಚ್ಚ ನಿರಸಿಷ್ಯತೇ ।**

**ಅನುವಾದ :-** ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಲ್ಲದಿದ್ದರೂ ಸಹ, ಭ್ರಾಂತ್ಯುತ್ಥಿತನಾದ ಪುರುಷನು ಅನಿರ್ವಚನೀಯವಾಚಕವಲ್ಲದ ಮಿಥ್ಯಾಶಬ್ದದಿಂದ ಅನಿರ್ವಚನೀಯವಸ್ತುವನ್ನು ವ್ಯವಹರಿಸುತ್ತಾನೆ ಎಂದು ಹೇಳುವುದು ಸರಿಯಲ್ಲ. ಏಕೆಂದರೆ- ನದೀಶಬ್ದವು ತೀರಕ್ಕೆ ವಾಚಕವಲ್ಲದಿದ್ದರೂ ಸಹ, ಸಿಂಹಶಬ್ದವು ಪುರುಷನಿಗೆ ವಾಚಕವಲ್ಲದಿದ್ದರೂ ಸಹ, ದೇವದತ್ತನು ತೀರ-ಪುರುಷಾದಿಗಳಿಗೆ ವಾಚಕವಲ್ಲದ ನದೀ-ಸಿಂಹಾದಿಶಬ್ದಗಳಿಂದ ತೀರ-ಪುರುಷಾದಿಗಳನ್ನು ವ್ಯವಹರಿಸುತ್ತಾನೆ ಎಂದು ಹೇಳಬೇಕಾದರೆ ಅದಕ್ಕೆ ಸರಿಯಾದ ಪ್ರಮಾಣ (ಆಧಾರ) ಇರಬೇಕು. ಪ್ರಮಾಣ (ಆಧಾರ) ಇಲ್ಲದೇ ಹಾಗೆ ಕಲ್ಪನೆ ಮಾಡಲು ಬರುವುದಿಲ್ಲ.

ಹಾಗೆ ಕಲ್ಪನೆ ಮಾಡಲು ಏನು ಪ್ರಮಾಣ ಇರಬೇಕು ? ವಾಕ್ಯಪ್ರಯೋಗ

ಮಾಡುವ ವ್ಯಕ್ತಿ ಆಪ್ತ ಎಂದು ನಿಶ್ಚಯ ಇದ್ದು, ವಾಚ್ಯಾರ್ಥಾನುಪಪತ್ತಿ ಮೊದಲಾದವು ಕಂಡಾಗ ಮಾತ್ರ ಹಾಗೆ ಕಲ್ಪನೆ ಮಾಡಲು ಬರುತ್ತದೆ.

ಪ್ರಕೃತದಲ್ಲಿ ಮಿಥ್ಯಾಶಬ್ದಃ ಮಿಥ್ಯಾ ಎಂಬ ಶಬ್ದವನ್ನು ಪ್ರಯೋಗಿಸುವ (ರಜತಂ ಮಿಥ್ಯಾ ಎಂದು ವಾಕ್ಯಪ್ರಯೋಗ ಮಾಡಿದ) ಭ್ರಾಂತ್ಯುತ್ಥಿತನಾದ ಪುರುಷನು ಅನಿರ್ವಚನೀಯವಾಚಕವಲ್ಲದ ಮಿಥ್ಯಾಶಬ್ದದಿಂದ ಅನಿರ್ವಚನೀಯವಸ್ತುವನ್ನು ವ್ಯವಹರಿಸುತ್ತಾನೆ ಎಂದು ಕಲ್ಪನೆ ಮಾಡುವುದಕ್ಕೆ ಆ ವಿಧವಾದ ಪ್ರಮಾಣ (ವಕ್ತೃವಿನಲ್ಲಿ ಆಪ್ತತ್ವನಿಶ್ಚಯ, ವಾಚ್ಯಾರ್ಥಾನುಪಪತ್ತಿ) ಏನೂ ಇಲ್ಲ. ಆದ್ದರಿಂದ ವಾಚ್ಯಾರ್ಥಾನುಪಪತ್ತ್ಯಾದಿಗಳು ಇಲ್ಲವಾದ್ದರಿಂದ ಹಾಗೆ ಕಲ್ಪನೆ ಮಾಡುವುದು ಸರಿಯಲ್ಲ.

ವಾಚ್ಯಾರ್ಥಾನುಪಪತ್ತಿ ಇಲ್ಲ ಎಂದು ಏಕೆ ಹೇಳುತ್ತಿದ್ದೀರಿ ? ಪ್ರಕೃತದಲ್ಲಿ ವಾಚ್ಯಾರ್ಥಾನುಪಪತ್ತಿ ಇದೆ. ಹೇಗೆಂದರೆ - ಮಿಥ್ಯಾಶಬ್ದಕ್ಕೆ ಅಸತ್ ಎನ್ನುವುದು ವಾಚ್ಯಾರ್ಥವಾಗಿದೆ. ರಜತವು ಅಸತ್ ಅಲ್ಲ. ಕಿಂತು ಅನಿರ್ವಚನೀಯವಾಗಿದೆ. ಅಂತಹ ಅಸತ್ ಆಗದ ರಜತವನ್ನು ''ಮಿಥ್ಯೈವ ರಜತಂ ಪ್ರತ್ಯಭಾತ್'' ಎಂಬುದಾಗಿ ಮಿಥ್ಯಾಶಬ್ದದಿಂದ ವ್ಯವಹರಿಸುತ್ತಿದ್ದಾನೆ ಭ್ರಾಂತ್ಯುತ್ಥಿತಪುರುಷ. ಹೀಗಾಗಿ ಮಿಥ್ಯಾಶಬ್ದಕ್ಕೆ ವಾಚ್ಯಾರ್ಥಾನುಪಪತ್ತಿ (ಮಿಥ್ಯಾಶಬ್ದದ ವಾಚ್ಯಾರ್ಥ ಅಸತ್ವವು ರಜತಕ್ಕೆ ಇಲ್ಲವಾದ್ದರಿಂದ ವಾಚ್ಯಾರ್ಥಾನುಪಪತ್ತಿ) ಇದ್ದೇ ಇದೆ. ಈ ರೀತಿ ವಾಚ್ಯಾರ್ಥಾನುಪಪತ್ತಿ ಇರುವ ಕಾರಣ ಅನಿರ್ವಚನೀಯತ್ವ ಎಂಬ ಅಮುಖ್ಯಾರ್ಥದಲ್ಲಿ ಲಕ್ಷಣಾವೃತ್ತಿಯನ್ನು ಆಶ್ರಯಿಸುತ್ತೇವೆ (ಮಿಥ್ಯಾಶಬ್ದಕ್ಕೆ ಲಕ್ಷಣಯಾ ಅನಿರ್ವಚನೀಯತ್ವ ಎಂಬ ಅರ್ಥವನ್ನು ಹೇಳುತ್ತೇವೆ) ಎಂಬುದಾಗಿ ಶಂಕೆ ಬಂದರೆ,

ಅದು ಸರಿಯಲ್ಲ. ಕಾರಣ - ಹಾಗೆ ಹೇಳಿದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಹೇಗೆಂದರೆ :- ಶುಕ್ತಿರಜತಾದಿಗಳು ಅನಿರ್ವಚನೀಯವಾಗಿವೆ ಎಂದು ಸಿದ್ಧವಾದರೆ (ಅಂತಹ ಅನಿರ್ವಚನೀಯವಾದ ಶುಕ್ತಿರಜತಾದಿಗಳನ್ನು ಮಿಥ್ಯಾ ಎಂದು ಕರೆಯುವ ಕಾರಣ) ಮಿಥ್ಯಾಶಬ್ದವು ಅನಿರ್ವಚನೀಯಪರವಾಗಿದೆ (ಅನಿರ್ವಚನೀಯತ್ವ ಎಂಬ ಅರ್ಥ ಉಳ್ಳದ್ದಾಗಿದೆ) ಎಂದು ಸಿದ್ಧವಾಗುತ್ತದೆ. ಇನ್ನು ಮಿಥ್ಯಾಶಬ್ದವು ಅನಿರ್ವಚನೀಯಪರವಾಗಿದೆ (ಅನಿರ್ವಚನೀಯತ್ವ ಎಂಬ ಅರ್ಥ ಉಳ್ಳದ್ದಾಗಿದೆ) ಎಂದು ಸಿದ್ಧವಾದರೆ ಅಂತಹ ''ಮಿಥ್ಯೈವ ರಜತಂ ಪ್ರತ್ಯಭಾತ್'' ಎಂಬ ವ್ಯವಹಾರಕ್ಕೆ ಮೂಲವಾದ ಪ್ರತ್ಯಕ್ಷವನ್ನು ಕಲ್ಪಿಸಿ

ಆದರಿಂದ ಶುಕ್ತಿರಜತಾದಿಗಳು ಅನಿರ್ವಚನೀಯವಾಗಿವೆ ಎಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುವುದರಿಂದ ಮಿಥ್ಯಾಶಬ್ದಕ್ಕೆ ಅನಿರ್ವಚನೀಯತ್ವ ಎಂಬ ಅಮುಖ್ಯಾರ್ಥದಲ್ಲಿ ಲಕ್ಷಣಾವನ್ನು ಆಶ್ರಯಿಸುವುದು ಸರಿಯಲ್ಲ.

ಹಾಗಲ್ಲ ''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್'' ಎಂಬ ಅನುಮಾನಪ್ರಮಾಣದಿಂದ ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವು ಸಿದ್ಧವಾಗುವುದರಿಂದ 'ರಜತಂ ಮಿಥ್ಯಾ' ಎನ್ನುವಲ್ಲಿ ವಾಚ್ಯಾರ್ಥಾನುಪಪತ್ತಿ ಇದೆ. ಹೀಗಾಗಿ ಮಿಥ್ಯಾಶಬ್ದಕ್ಕೆ ಅಮುಖ್ಯ (ಲಕ್ಷಣಾ) ವೃತ್ತಿಯನ್ನು ಆಶ್ರಯಿಸುತ್ತೇವೆ ಎಂದು ಶಂಕೆ ಬಂದರೆ,

ಹಾಗೆ ಅನುಮಾನಪ್ರಮಾಣದಿಂದ ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವ ಸಿದ್ಧವಾಗುವುದಾದರೆ, ರಜತ ಅನಿರ್ವಚನೀಯವಾಗಿದೆ ಎಂಬ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವನ್ನು ಯಾಕೆ ಉದಾಹರಿಸುತ್ತಿದ್ದೀರಿ ?

ಮತ್ತು ''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್'' ಎಂಬ ಆ ಅನುಮಾನಪ್ರಮಾಣವನ್ನು ಈ ಮುಂದೆಯೇ ನಿರಾಕರಿಸುವವರಿದ್ದೇವೆ ಕೂಡ.

ಆದ್ದರಿಂದ ಮಿಥ್ಯಾಶಬ್ದವು ಅನಿರ್ವಚನೀಯವಸ್ತುವಿಗೆ ವಾಚಕವಾಗಿದೆ ಎಂಬ ಪಕ್ಷದಲ್ಲಿ ಯಾವ ಪ್ರಮಾಣವೂ ಇಲ್ಲ. ವಾಚಕವಲ್ಲ ಎಂಬ ಪಕ್ಷದಲ್ಲಿ ಯಾವ ವಾಚ್ಯಾರ್ಥಾನುಪಪತ್ತಿಯೂ ಇಲ್ಲ. ಹೀಗಾಗಿ ''ಬಾಧಕಜ್ಞಾನ ಬಂದ ನಂತರ 'ಮಿಥ್ಯೈವ ರಜತಂ ಪ್ರತ್ಯಭಾತ್' ಎಂದು ಅನುವಾದ ಮಾಡುವುದರಿಂದ ರಜತಭ್ರಮ ಉಳ್ಳ ವ್ಯಕ್ತಿಗೆ ಅಲ್ಲಿ ಉಂಟಾಗುವ 'ರಜತಂ ಮಿಥ್ಯಾ' ಎಂಬ ಬಾಧಕಜ್ಞಾನವೇ 'ರಜತವು ಅನಿರ್ವಚನೀಯವಾಗಿದೆ' ಎಂಬ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಾಗಿದೆ'' ಎಂಬುದಾಗಿ ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷಪ್ರಮಾಣವನ್ನು ಶಂಕಿಸುವುದು ಸರಿಯಲ್ಲ (ಪ್ರತ್ಯಕ್ಷವು ಪ್ರಮಾಣವಾಗುವುದಿಲ್ಲ) ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷಪ್ರಮಾಣವು ನಿರಾಕೃತವಾದಾಗ ಅನುಮಾನಪ್ರಮಾಣವನ್ನು ಶಂಕಿಸುತ್ತಾರೆ -

**ಅನಿರ್ವಚನೀಯವಸ್ತುವಿಷಯದಲ್ಲಿ ಅನುಮಾನಪ್ರಮಾಣ ನಿರಾಕರಣೆ**

**ಟೀಕಾ : ಮಾ ಭೂತ್ ಪ್ರತ್ಯಕ್ಷೇಣಾನಿರ್ವಚನೀಯಾರ್ಥಸಿದ್ಧಿಃ । ವಿವಾದಪದಮನಿರ್ವಚನೀಯಂ ಬಾಧ್ಯತ್ವಾತ್ । ಯನ್ನಾನಿರ್ವಚನೀಯಂ ನ ತದ್ಬಾಧ್ಯಂ ಯಥಾ ಆತ್ಮೇತ್ಯನುಮಾನೇನ ಭವಿಷ್ಯತೀತ್ಯತ ಆಹ -**

**ಮೂಲ :- ಅನುಮಾನಸ್ಯ ಚಾಪ್ರಸಿದ್ಧವಿಶೇಷಣಃ ಪಕ್ಷಃ ।**

**ಚಶಬ್ದಃ ಪ್ರತ್ಯಕ್ಷನಿರಾಕರಣೇನಾನುಮಾನನಿರಾಕರಣಸಮುಚ್ಚಯೇ ವರ್ತತೇ ।**

**ಅನುವಾದ :-** 'ರಜತಂ ಮಿಥ್ಯಾ' ಎಂಬ ಪ್ರತ್ಯಕ್ಷಪ್ರಮಾಣದಿಂದ ಅನಿರ್ವಚನೀಯವಸ್ತು (ಸಿದ್ಧವಾಗುವುದು ಬೇಡ. ಪರಂತು) ಸಿದ್ಧವಾಗದಿದ್ದರೂ ಸಹ ಅನುಮಾನಪ್ರಮಾಣದಿಂದ ಸಿದ್ಧವಾಗುತ್ತದೆ. ಹೇಗೆಂದರೆ -

**ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್ ।**
**ಯತ್ ಅನಿರ್ವಚನೀಯಂ ನ, ತತ್ ಬಾಧ್ಯಂ ನ । ಯಥಾ ಆತ್ಮಾ ।**

[೧]ವಿವಾದಾಸ್ಪದವಾದ (ಸಂದಿಗ್ಧವಾದ) ಶುಕ್ತಿರಜತಾದಿಗಳು, ಅನಿರ್ವಚನೀಯ-ವಾಗಿವೆ, ಬಾಧ್ಯವಾದ್ದರಿಂದ. ಯಾವುದು ಅನಿರ್ವಚನೀಯವಲ್ಲವೋ ಅದು ಬಾಧ್ಯವಲ್ಲ. ಇದು ವ್ಯತಿರೇಕವ್ಯಾಪ್ತಿ. ದೃಷ್ಟಾಂತ :- ಆತ್ಮನಂತೆ. ಆತ್ಮನು (ಪಾರಮಾರ್ಥಿಕಸತ್ ಆಗಿದ್ದಾನೆ) ಅನಿರ್ವಚನೀಯ ಅಲ್ಲ. ಸತ್ ಆದ್ದರಿಂದ ಬಾಧ್ಯನೂ ಅಲ್ಲ. ಅರ್ಥಾತ್ ಆತ್ಮನಲ್ಲಿ ಅನಿರ್ವಚನೀಯತ್ವ ಎಂಬ ಸಾಧ್ಯವೂ ಇಲ್ಲ (ಸಾಧ್ಯಾಭಾವವೂ ಇದೆ) ಬಾಧ್ಯತ್ವ ಎಂಬ ಹೇತುವೂ ಇಲ್ಲ (ಹೇತ್ವಭಾವವೂ ಇದೆ). ಪ್ರಕೃತದಲ್ಲಿ ಪಕ್ಷವಾದ ಶುಕ್ತಿರಜತಾದಿಗಳು 'ನೇದಂ ರಜತಂ' ಇತ್ಯಾದಿಯಾಗಿ ಬಾಧ್ಯವಾಗುವುದರಿಂದ ಅನಿರ್ವಚನೀಯವಾಗಿವೆ.

ಹೀಗೆ ಬಾಧ್ಯತ್ವಹೇತುವಿನಿಂದ ಶುಕ್ತಿರಜತಾದಿಗಳು ಅನಿರ್ವಚನೀಯ ಎಂದು ಸಿದ್ಧವಾಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ- (ಅನುಮಾನವನ್ನು ಆಚಾರ್ಯರು ನಿರಾಕರಿಸುತ್ತಾರೆ -)

ಮೂಲ :- ಅನುಮಾನಸ್ಯ ಚಾಪ್ರಸಿದ್ಧವಿಶೇಷಣಃ ಪಕ್ಷಃ ।

**ಮೂಲಾರ್ಥ :-** ಅನುಮಾನದ ಪಕ್ಷವು ಅಪ್ರಸಿದ್ಧವಾದ ವಿಶೇಷಣ ಉಳ್ಳದ್ದಾಗಿದೆ. ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ಸಾಧ್ಯಾಪ್ರಸಿದ್ಧಿ ದೋಷ ಬರುತ್ತದೆ.

---

೧. ಶುಕ್ತಿರಜತಾದಿಗಳು ಅದ್ವೈತಮತದ ಪ್ರಕಾರ ಅನಿರ್ವಚನೀಯವಾಗಿವೆ. ದ್ವೈತಮತದ ಪ್ರಕಾರ ಅನಿರ್ವಚನೀಯ ಅಲ್ಲ. (ಅಸತ್ ಆಗಿವೆ.) ಹಾಗಾಗಿ 'ಅನಿರ್ವಚನೀಯವಾಗಿವೆಯೋ ? ಇಲ್ಲವೋ ?' ಎಂಬ ವಿವಾದಕ್ಕೆ ಶುಕ್ತಿರಜತಾದಿಗಳು ಆಸ್ಪದವಾದ್ದರಿಂದ (ಸಂಶಯಕ್ಕೆ ಧರ್ಮಿಯಾದ್ದರಿಂದ) ಅಂತಹ ಶುಕ್ತಿರಜತಾದಿಗಳು ಪ್ರಕೃತ 'ವಿವಾದಪದಂ' ಎಂಬ ಪದದಿಂದ ವಿವಕ್ಷಿತವಾಗಿವೆ.

ಹೌದು, ಆಚಾರ್ಯರು ಮೂಲದಲ್ಲಿ 'ಅನುಮಾನಸ್ಯ ಚ' ಎಂಬುದಾಗಿ ಚ ಶಬ್ದ ಇಟ್ಟಿದ್ದಾರೆ. ಚಶಬ್ದವು ಸಮುಚ್ಚಾಯಕವಾಗಿರುತ್ತದೆ. ಪ್ರಕೃತ ಅನುಮಾನಕ್ಕೂ ಅಪ್ರಸಿದ್ಧವಿಶೇಷಣತಾ ಬರುತ್ತದೆ ಎಂದು ಹೇಳಿದರೆ, ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ಹೇಳಿದಂತೆ ಬೇರೆಯದಕ್ಕೂ ಅಪ್ರಸಿದ್ಧವಿಶೇಷಣತಾ ಹೇಳಿದಂತಾಗುತ್ತದೆ. ಆದರೆ ಅನುಮಾನ ಬಿಟ್ಟು ಬೇರೆಯದಕ್ಕೆ ಅಪ್ರಸಿದ್ಧ ವಿಶೇಷಣತಾ ಹೇಳಿಲ್ಲವಾದ್ದರಿಂದ ಸಮುಚ್ಚಾಯಕವಾದ ಚಶಬ್ದವನ್ನು ಆಚಾರ್ಯರು ಹೇಗೆ ಇಟ್ಟರು ?

ಈ ಪ್ರಶ್ನೆಗೆ ಸಮಾಧಾನ ಇಷ್ಟುಃ- ಚಶಬ್ದವು ಸಮುಚ್ಚಾಯಕವಾಗಿದೆ ಎನ್ನುವುದು ನಿಜವೇ. ಆದರೆ ಅದು ಅನುಮಾನ ಬಿಟ್ಟು ಬೇರೆಯದಕ್ಕೆ ಅಪ್ರಸಿದ್ಧವಿಶೇಷಣತಾವನ್ನು ಸಮುಚ್ಚಯ ಮಾಡುತ್ತಿಲ್ಲ. ಕಿಂತು ಅನಿರ್ವಚನೀಯ ವಸ್ತುವಿಷಯದಲ್ಲಿ ಅನುಮಾನಪ್ರಮಾಣವನ್ನು ನಿರಾಕರಿಸುವ ಈ ಪ್ರಸಂಗದಲ್ಲಿ ಪ್ರತ್ಯಕ್ಷಪ್ರಮಾಣದ ನಿರಾಕರಣೆಯನ್ನು ಸಮುಚ್ಚಯ ಮಾಡುತ್ತಿದೆ.

ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗುವುದಿಲ್ಲ ಎಂದಷ್ಟೇ ಅಲ್ಲ. ಕಿಂತು ಅಪ್ರಸಿದ್ಧವಿಶೇಷಣತಾ ಬರುವುದರಿಂದ ಅನುಮಾನವೂ ಪ್ರಮಾಣವಾಗುವುದಿಲ್ಲ ಎಂಬುದಾಗಿ ಸಮುಚ್ಚಯ ಮಾಡುತ್ತಿದೆ ಚಶಬ್ದ ಎಂದು ಅಭಿಪ್ರಾಯ.

**ಅವತಾರಿಕೆ :-** ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷವನ್ನು ಉಪಪಾದನೆ ಮಾಡುತ್ತಾರೆ -

**ಟೀಕಾ : ಏತದನುಮಾನಪ್ರವೃತ್ತೇಃ ಪ್ರಾಗನಿರ್ವಚನೀಯಸ್ಯ ಕ್ವಾಪ್ಯಪ್ರಸಿದ್ಧತ್ವೇನಾಯಮನುಮಾನಸ್ಯ ಪಕ್ಷೋಽಪ್ರಸಿದ್ಧವಿಶೇಷಣೋ ಭವತಿ ।**

**ನನು ವಿಶಿಷ್ಟಸ್ಯ ಪಕ್ಷತ್ವಮ್ । ತತ್ಕಥಮಪ್ರಸಿದ್ಧವಿಶೇಷಣಃ ಪಕ್ಷ ಇತಿ ನಿರ್ದೇಶಃ ಸ್ಯಾತ್ । ನ ಹಿ ತದ್ವಿಶಿಷ್ಟಸ್ಯ ತದ್ವಿಶೇಷಣಂ ಭವತಿ । ಆತ್ಮಾಶ್ರಯಪ್ರಸಂಗಾತ್ ।**

**ಸತ್ಯಮ್ । ಪಕ್ಷಪದೇನ ತದೇಕದೇಶೋ ಧರ್ಮೀ ಲಕ್ಷ್ಯತ ಇತ್ಯದೋಷಃ । ಯದ್ವಿಶೇಷಣೇನಾಯಂ ಪಕ್ಷಸ್ತದಪ್ರಸಿದ್ಧಮಿತಿ ವಾ ।**

**ಅನುವಾದ :-** ಪಕ್ಷದಲ್ಲಿ ಸಾಧ್ಯವನ್ನು ಸಾಧಿಸುವಾಗ ಪಕ್ಷದಲ್ಲಿ ಸಾಧ್ಯವು ಸಂದಿಗ್ಧವಾಗಿರಬೇಕು, ಅನ್ಯತ್ರ ಪ್ರಸಿದ್ಧವಾಗಿರಬೇಕು ಅನುಮಾನವು ಪ್ರವೃತ್ತವಾಗುವುದಕ್ಕಿಂತ ಪೂರ್ವದಲ್ಲಿ ಸಪಕ್ಷದಲ್ಲಿ ಸಿದ್ಧವಾಗಿರಬೇಕು ಎಂದು ನಿಯಮ. ಉದಾ- ಪರ್ವತದಲ್ಲಿ ವಹ್ನಿಯನ್ನು ಸಾಧಿಸುವಾಗ ವಹ್ನಿಯು ಪರ್ವತದಲ್ಲಿ ಸಂದಿಗ್ಧವಾಗಿದೆ. ಮತ್ತು ಅನುಮಾನ ಮಾಡುವ ಮುಂಚೆ ಅನ್ಯತ್ರ ಸಪಕ್ಷವಾದ ಮಹಾನಸದಲ್ಲಿ ಸಿದ್ಧವಾಗಿದೆ. ಅನ್ಯತ್ರ ಪ್ರಸಿದ್ಧವಾದ ವಹ್ನಿಯನ್ನೇ ಪಕ್ಷದಲ್ಲಿ ಸಾಧಿಸಲು ಹೊರಟಿರುತ್ತಾರೆ ಎಂದು ಭಾವ.

ಪ್ರಕೃತದಲ್ಲಿ ಪಕ್ಷವಾದ ಶುಕ್ತಿರಜತಾದಿಗಳಲ್ಲಿ ಬಾಧ್ಯತ್ವಹೇತುವಿನಿಂದ ಅನಿರ್ವಚನೀಯತ್ವವನ್ನು ಸಾಧಿಸಬೇಕಾದರೆ, ಅನಿರ್ವಚನೀಯತ್ವ ಸಾಧ್ಯವು ಅನುಮಾನಕ್ಕಿಂತ ಪೂರ್ವದಲ್ಲಿ ಅನ್ಯತ್ರ ಪಕ್ಷ ಬಿಟ್ಟು ಬೇರೆ ಎಲ್ಲಿಯಾದರೂ ಪ್ರಸಿದ್ಧವಾಗಿರಬೇಕು. ಆದರೆ ಅನುಮಾನಕ್ಕಿಂತ ಪೂರ್ವದಲ್ಲಿ ಅನಿರ್ವಚನೀಯತ್ವ-ಸಾಧ್ಯವು ಬೇರೆ ಎಲ್ಲಿಯೂ ಪ್ರಸಿದ್ಧವಾಗಿಲ್ಲವಾದ್ದರಿಂದ, ಅನುಮಾನದ ಪಕ್ಷವು ಅಪ್ರಸಿದ್ಧವಾದ ವಿಶೇಷಣ ಸಾಧ್ಯ ಉಳ್ಳದ್ದಾಗಿದೆ. (ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ.)

ಹೌದು, 'ಸಾಧ್ಯಧರ್ಮವಿಶಿಷ್ಟಃ ಪಕ್ಷಃ' ಎಂದು ಹೇಳಿದ್ದರಿಂದ ಸಾಧ್ಯದಿಂದ ವಿಶಿಷ್ಟವಾದ ಧರ್ಮಿಗೆ ಪಕ್ಷ ಎಂದು ಕರೆಯುತ್ತಾರೆ. ಅಂದಮೇಲೆ ಪಕ್ಷವು ಅಪ್ರಸಿದ್ಧವಾದ ವಿಶೇಷಣ ಉಳ್ಳದ್ದಾಗಿದೆ ಎಂದು ಹೇಳುವುದು ಹೇಗೆ? ಸಾಧ್ಯವಿಶಿಷ್ಟವಾದ ಧರ್ಮಿಗೆ ಸಾಧ್ಯವು ವಿಶೇಷಣ ಆಗಲು ಸಾಧ್ಯವಿಲ್ಲ. ಉದಾಃ- ದಂಡವಿಶಿಷ್ಟನಾದ ದೇವದತ್ತನಿಗೆ ದಂಡವು ವಿಶೇಷಣವಾಗಲು ಸಾಧ್ಯವಿಲ್ಲ. ಹಾಗಾಗುವುದಾದರೆ ಆತ್ಮಾಶ್ರಯದೋಷ ಬರುತ್ತದೆ. ಏಕೆಂದರೆ - ದಂಡವು ವಿಶೇಷಣ. ಯಾರಿಗೆ ವಿಶೇಷಣ? ದಂಡವಿಶಿಷ್ಟದೇವದತ್ತನಿಗೆ. ವಿಶೇಷಣಕ್ಕಿಂತ ಪೂರ್ವದಲ್ಲಿ ವಿಶೇಷ್ಯ ಇರಬೇಕು. ಹೀಗಾಗಿ ದಂಡಕ್ಕಿಂತ ಪೂರ್ವದಲ್ಲಿ ದೇವದತ್ತ ಇರಬೇಕು. ಪ್ರಕೃತ ದಂಡವು ಕೇವಲ ದೇವದತ್ತನಿಗೆ ವಿಶೇಷಣ ಅಲ್ಲ, ಕಿಂತು ದಂಡವಿಶಿಷ್ಟದೇವದತ್ತನಿಗೆ ವಿಶೇಷಣ. ಹಾಗಾಗಿ ವಿಶೇಷಣವಾದ ದಂಡಕ್ಕಿಂತ ಪೂರ್ವದಲ್ಲಿ ವಿಶೇಷ್ಯ ದಂಡವಿಶಿಷ್ಟದೇವದತ್ತ ಇರಬೇಕು. ಅರ್ಥಾತ್ (ದೇವದತ್ತ ದಂಡವಿಶಿಷ್ಟನಾಗಬೇಕಾದರೆ ದಂಡವು ಇರಲೇಬೇಕಾದ್ದರಿಂದ) ದಂಡಕ್ಕಿಂತ ಪೂರ್ವದಲ್ಲಿ ದಂಡ ಇರಬೇಕಾಗುವುದರಿಂದ

**''ಸ್ವಾಪೇಕ್ಷಯಾ ಸ್ವಸ್ಯ ಪೂರ್ವವೃತ್ತಿತ್ವ''**

ತನಗಿಂತ ಮೊದಲು ತಾನು ಇರಬೇಕಾದ ಕಾರಣ ಆತ್ಮಾಶ್ರಯದೋಷ ಬರುತ್ತದೆ. ಅಂದಮೇಲೆ ''ಪಕ್ಷವು ಸಾಧ್ಯವಿಶಿಷ್ಟಧರ್ಮಿಯು ಅಪ್ರಸಿದ್ಧಸಾಧ್ಯ ಉಳ್ಳದ್ದಾಗಿದೆ'' ಎಂಬುದಾಗಿ ಹೇಳುವುದು ಹೇಗೆ ? 'ಅಪ್ರಸಿದ್ಧವಿಶೇಷಣಃ ಪಕ್ಷಃ' ಎಂಬ ಆಚಾರ್ಯರ ವಾಕ್ಯಪ್ರಯೋಗ ಸರಿ ಅಲ್ಲ ಅಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಎರಡು ರೀತಿಯಿಂದ ಸಮಾಧಾನ ಹೇಳುತ್ತಾರೆ -

**ಸಮಾಧಾನ 1)**

ನಿಜವೇ. 'ಸಾಧ್ಯಧರ್ಮವಿಶಿಷ್ಟಃ ಪಕ್ಷಃ' ಎಂದು ಹೇಳಿದಂತೆ ಸಾಧ್ಯವಿಶಿಷ್ಟಧರ್ಮಿಗೇ ಪಕ್ಷ ಎಂದು ಹೆಸರು. ಪಕ್ಷಪದಕ್ಕೆ ರೂಢಿವೃತ್ತಿಯಿಂದ ಸಾಧ್ಯವಿಶಿಷ್ಟಧರ್ಮಿ ಎಂದು ಅರ್ಥ ಇರುವುದು ಸತ್ಯವೇ. ಆದರೆ ಪ್ರಕೃತದಲ್ಲಿ ಪಕ್ಷಶಬ್ದದಿಂದ ಸಾಧ್ಯವಿಶಿಷ್ಟಧರ್ಮಿ ಎಂಬ ವಿಶಿಷ್ಟಭಾಗದಲ್ಲಿ ಏಕದೇಶವಾದ ಧರ್ಮಿಯನ್ನು ಮಾತ್ರ ಲಕ್ಷಣಾವೃತ್ತಿಯಿಂದ ವಿವಕ್ಷಿಸುತ್ತೇವೆ. ಅಂತಹ ಕೇವಲ ಧರ್ಮಿಗೆ ಸಾಧ್ಯವು ವಿಶೇಷಣವಾಗಬಹುದಾದ್ದರಿಂದ (ಕೇವಲ ಧರ್ಮಿಗೆ ಸಾಧ್ಯವು ವಿಶೇಷಣವಾಗಿದೆ ಎಂದು ಹೇಳಿದರೆ ಆತ್ಮಾಶ್ರಯ ಬರುವುದಿಲ್ಲ-ವಾದ್ದರಿಂದ) **''ಅಪ್ರಸಿದ್ಧವಿಶೇಷಣಃ ಪಕ್ಷಃ''** ಎಂಬ ಪ್ರಯೋಗ (''ಅಪ್ರಸಿದ್ಧಂ ವಿಶೇಷಣಂ ಸಾಧ್ಯಂ, ಯಸ್ಯ ಧರ್ಮಿಣಃ ಸಃ ಅಪ್ರಸಿದ್ಧವಿಶೇಷಣಃ'' ಎಂಬುದಾಗಿ ಷಷ್ಠೀಬಹುವ್ರೀಹಿ ಸಮಾಸವು) ಸಮಂಜಸವೇ ಆಗಿದೆ.

**ಸಮಾಧಾನ 2)**

ಅಥವಾ, ಪಕ್ಷಶಬ್ದಕ್ಕೆ ರೂಢಿವೃತ್ತಿಯಿಂದ ಸಾಧ್ಯವಿಶಿಷ್ಟಧರ್ಮಿ ಎಂದು ಮುಖ್ಯಾರ್ಥವನ್ನೇ ಇಟ್ಟುಕೊಳ್ಳುತ್ತೇವೆ. ಆದರೆ ''ಅಪ್ರಸಿದ್ಧಂ ವಿಶೇಷಣಂ ಯಸ್ಯ'' ಎಂಬುದಾಗಿ ಷಷ್ಠೀಬಹುವ್ರೀಹಿಯನ್ನು ಮಾಡುವುದಿಲ್ಲ.

ಕಿಂತು ''ಅಪ್ರಸಿದ್ಧಂ ವಿಶೇಷಣಂ ಸಾಧ್ಯಂ, ಯಸ್ಮಿನ್ ವಿಶಿಷ್ಟೇ ಸಃ ಅಪ್ರಸಿದ್ಧವಿಶೇಷಣಃ'' ಎಂಬುದಾಗಿ ಸಪ್ತಮೀಬಹುವ್ರೀಹಿಯನ್ನು ಮಾಡುತ್ತೇವೆ. ಅಂದರೆ ಸಾಧ್ಯವಿಶಿಷ್ಟಧರ್ಮಿ ಎಂಬ ಯಾವ ವಿಶಿಷ್ಟಭಾಗದಲ್ಲಿ ವಿಶೇಷಣವಾದ ಸಾಧ್ಯವು ಅಪ್ರಸಿದ್ಧವಾಗಿದೆಯೋ ಅಂತಹ ವಿಶಿಷ್ಟಭಾಗವು ಅಪ್ರಸಿದ್ಧವಿಶೇಷಣ-ವಾಗಿದೆ (ಅಪ್ರಸಿದ್ಧವಾದ ವಿಶೇಷಣ ಉಳ್ಳದ್ದಾಗಿದೆ) ಎಂದು ವಿವಕ್ಷಿಸುತ್ತೇವೆ.

ಈ ರೀತಿಯಾಗಿಯೂ "**ಅಪ್ರಸಿದ್ಧವಿಶೇಷಣಃ ಪಕ್ಷಃ**" ಎಂಬ ಪ್ರಯೋಗ ಸಮಂಜಸ ಎಂದು ಅಭಿಪ್ರಾಯ.

**ಅವತಾರಿಕೆ :-** "ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್" ಎಂಬ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾದೋಷ ಹೇಳಿದ್ದರ ಮೇಲೆ ಶಂಕೆ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

**ಟೀಕಾ : ಅಥ ಕಥಮಪ್ರಸಿದ್ಧವಿಶೇಷಣತ್ವಮಸಾಧಕತ್ವೇ ಹೇತುಃ । ವ್ಯಾಪ್ತಿ-ಪಕ್ಷಧರ್ಮತಾವಿರಹಾತ್ । ನ ಹ್ಯಪ್ರತೀತೇನ ಕಸ್ಯಾಪಿ ವ್ಯಾಪ್ತಿಶ್ಶಕ್ಯಗ್ರಹಾ । ಸಂದಿಗ್ಧಸಾಧ್ಯಧರ್ಮವಾಂಶ್ಚ ಪಕ್ಷಃ । ನ ಚಾಪ್ರಸಿದ್ಧವಿಶೇಷಣೋಲ್ಲೇಖೀ ಸಂದೇಹೋ ಯುಜ್ಯತೇ ।**

**ಅನುವಾದ :-** ಅನಿರ್ವಚನೀಯಸಾಧಕವಾದ ಅನುಮಾನಕ್ಕೆ 'ಅನುಮಾನಸ್ಯ ಚಾಪ್ರಸಿದ್ಧವಿಶೇಷಣಃ ಪಕ್ಷಃ' ಎಂಬುದಾಗಿ ಅಪ್ರಸಿದ್ಧವಿಶೇಷಣತಾ ದೋಷವನ್ನು ಹೇಳಿದಿರಿ. ಆದರೆ ಈ ಅಪ್ರಸಿದ್ಧವಿಶೇಷಣತಾ ಎನ್ನುವುದು ವ್ಯಭಿಚಾರ-ಅಸಿದ್ಧಿ ಮೊದಲಾದ ಹೇತ್ವಾಭಾಸಗಳಂತೆ ಪ್ರತ್ಯೇಕ ಹೇತ್ವಾಭಾಸವಾಗಿಲ್ಲವಾದ್ದರಿಂದ ಇದು ಅಸಾಧಕತ್ವಕ್ಕೆ ಹೇಗೆ ಕಾರಣವಾಗುತ್ತದೆ ?

ಇದಕ್ಕೆ ಸಮಾಧಾನ ಇಷ್ಟು :- ಅನುಮಾನದಲ್ಲಿ ಸಾಧ್ಯವು ಅಪ್ರಸಿದ್ಧವಾದರೆ (ಅಪ್ರಸಿದ್ಧವಿಶೇಷಣತಾ ಬಂದರೆ) ವ್ಯಾಪ್ತಿ-ಪಕ್ಷಧರ್ಮತಾಗಳು ಸಿದ್ಧಿಸುವುದಿಲ್ಲ. ಅರ್ಥಾತ್ ವ್ಯಾಪ್ತಿ-ಪಕ್ಷಧರ್ಮತಾವಿಘಟಕವಾಗಿ ಅಪ್ರಸಿದ್ಧವಿಶೇಷಣತಾ ದೋಷವಾಗುತ್ತದೆ.

ಅದು ಹೇಗೆಂದರೆ :- ಹೇತುವು ವ್ಯಾಪ್ಯವಾಗಿರುತ್ತದೆ ವ್ಯಾಪ್ತಿ ಉಳ್ಳದ್ದಾಗಿರುತ್ತದೆ. ಅರ್ಥಾತ್ ಸಾಧ್ಯನಿರೂಪಿತವ್ಯಾಪ್ತಿ (ಸಾಧ್ಯದ ಜೊತೆಗೆ ವ್ಯಾಪ್ತಿ) ಉಳ್ಳದ್ದಾಗಿರುತ್ತದೆ. ಪ್ರಕೃತ ಸಾಧ್ಯವು ಅಪ್ರಸಿದ್ಧವಾದ್ದರಿಂದ ಸಾಧ್ಯದ ಜೊತೆಗೆ ವ್ಯಾಪ್ತಿಯನ್ನು ಹೇತುವಿಗೆ ಹೇಳಲು ಸಾಧ್ಯವಿಲ್ಲ. ಅಂದರೆ ಸಾಧ್ಯನಿರೂಪಿತವ್ಯಾಪ್ತಿಜ್ಞಾನ ಆಗುವುದಿಲ್ಲ. ಹೀಗೆ ವ್ಯಾಪ್ತಿವಿಘಟಕವಾಗಿ ಅಪ್ರಸಿದ್ಧವಿಶೇಷಣತಾ ದೋಷವಾಗುತ್ತದೆ.

ಮತ್ತು ಸಂದಿಗ್ಧವಾದ ಸಾಧ್ಯಧರ್ಮ ಉಳ್ಳದ್ದು ಪಕ್ಷ. ಹಾಗಾಗಿ ಸಾಧ್ಯವು ಸಂದಿಗ್ಧವಾಗಿರಬೇಕು. ಅಂದರೆ ಸಾಧ್ಯ-ತದಭಾವಕೋಟಿಕವಾದ (ಸಾಧ್ಯ-ಸಾಧ್ಯಾಭಾವಗಳು ಕೋಟಿಗಳಾಗಿ ಉಳ್ಳ) ಸಂಶಯಕ್ಕೆ ಸಾಧ್ಯವು ವಿಷಯವಾಗಿರ-

ಬೇಕು (ಕೋಟಿಯಾಗಿರಬೇಕು). ಸಂಶಯ ಬರಬೇಕಾದರೆ ಎರಡು ಕೋಟಿಗಳೂ ಪ್ರಸಿದ್ಧವಾಗಿರಬೇಕು. ಪ್ರಕೃತ ಸಾಧ್ಯವು ಅಪ್ರಸಿದ್ಧವಾದರೆ ಒಂದು ಕೋಟಿಯು ಅಪ್ರಸಿದ್ಧವಾಗುವುದರಿಂದ ಸಂಶಯ ಬರುವುದಿಲ್ಲ. ಸಂಶಯ ಬರದಿದ್ದರೆ ಸಾಧ್ಯವು ಸಂದಿಗ್ಧವಾಗದ ಕಾರಣ ಧರ್ಮಿಗೆ ಪಕ್ಷತ್ವ ಕೂಡುವುದಿಲ್ಲ. ಪಕ್ಷತ್ವ ಕೂಡದಿದ್ದರೆ ಪಕ್ಷಧರ್ಮತ್ವ ಕೂಡುವುದಿಲ್ಲ. ಹೀಗೆ ಪಕ್ಷಧರ್ಮತಾ ವಿಘಟಕವಾಗಿ ಅಪ್ರಸಿದ್ಧವಿಶೇಷಣತಾ ದೋಷವಾಗುತ್ತದೆ.

**ಅವತಾರಿಕೆ :-** ಅನುಮಾನಕ್ಕೆ ಹೇಳಿದ ಅಪ್ರಸಿದ್ಧವಿಶೇಷಣತಾ ದೋಷವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ -

### ಕೇವಲವ್ಯತಿರೇಕಿ ಅನುಮಾನದಲ್ಲಿ ಅಪ್ರಸಿದ್ಧವಿಶೇಷಣತ್ವವು ದೋಷವಾಗುವುದಿಲ್ಲ ಎಂಬ ಶಂಕೆ, ಅದರ ನಿರಾಕರಣೆ

**ಟೀಕಾ : ನ ಚ ವಾಚ್ಯಂ ಕೇವಲವ್ಯತಿರೇಕಿಣೋ ನಾಪ್ರಸಿದ್ಧವಿಶೇಷಣತ್ವಂ ದೂಷಣಮಿತಿ । ತಥಾ ಸತ್ಯನ್ಯತ್ರಾಸಂಭವೇನ ತತ್ಕಥಾಯಾ ಏವ ವೃಥಾತ್ವಾಪಾತಾತ್ । ದೂಷಣತ್ವೋಪಯುಕ್ತಪ್ರಕಾರಾನಿರಾಸೇ ಚ ಕೇವಲವ್ಯತಿರೇಕಿತಾಮಾತ್ರಸ್ಯಾನುಪಯೋಗಿತ್ವಾತ್ ।**

**ವ್ಯತಿರೇಕವ್ಯಾಪ್ತಿಸ್ತತ್ರ ಗೃಹೀಷ್ಯತ ಇತಿ ಚೇನ್ನ । ಪ್ರತಿಯೋಗಿ-ಪ್ರತೀತಿಮಂತರೇಣ ವ್ಯತಿರೇಕಸ್ಯಾಪಿ ಪ್ರತ್ಯೇತುಮಶಕ್ಯತ್ವಾತ್ ।**

**ಏವಂ ಸತಿ ಕೇವಲವ್ಯತಿರೇಕಿಭಂಗಃ ಸ್ಯಾದಿತಿ ಚೇನ್ನ । ಸಾಮಾನ್ಯ-ಪ್ರಸಿದ್ಧ್ಯಾ ತತ್ಪ್ರವೃತ್ತಿಸಂಭವಾತ್ । ತದಭಾವೇ ತದ್ಭಂಗಸ್ಯೇಷ್ಟ-ತ್ವಾತ್ ।**

**ಅನುವಾದ :-** ಹಿಂದೆ ಹೇಳಿದಂತೆ 'ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್' ಎಂಬ ಅನುಮಾನದಲ್ಲಿ ಅನ್ವಯವ್ಯಾಪ್ತಿ ಇಲ್ಲದ ಕಾರಣ (ಅನ್ವಯವ್ಯಾಪ್ತಿಗೆ ದೃಷ್ಟಾಂತ ಇಲ್ಲದ ಕಾರಣ) ಆತ್ಮನನ್ನು ದೃಷ್ಟಾಂತ ಮಾಡಿಕೊಂಡು ವ್ಯತಿರೇಕವ್ಯಾಪ್ತಿಯನ್ನು ಮಾತ್ರ ಹೇಳುತ್ತಿದ್ದೇವೆ. ಅರ್ಥಾತ್ ಈ ಅನುಮಾನವು ಕೇವಲವ್ಯತಿರೇಕಿ ಆಗಿದೆ. ಈ ಬಾಧ್ಯತ್ವಾನುಮಾನವು ಕೇವಲವ್ಯತಿರೇಕಿಯಾದ್ದರಿಂದ, ಕೇವಲವ್ಯತಿರೇಕಿ ಅನುಮಾನದಲ್ಲಿ ಸಾಧ್ಯವು ಅಪ್ರಸಿದ್ಧವೇ ಆಗಿರುವ ಕಾರಣ ನಮ್ಮ ಈ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾವು ದೋಷವಾಗುವುದಿಲ್ಲ ಅಲ್ಲವೇ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ಕೇವಲವ್ಯತಿರೇಕಿ ಬಿಟ್ಟು ಬೇರೆ ಅನುಮಾನ ಅಂದರೆ ಅನ್ವಯವ್ಯತಿರೇಕಿ ಹಾಗೂ ಕೇವಲಾನ್ವಯಿ ಅನುಮಾನಗಳಲ್ಲಿ ಸಪಕ್ಷ ಇರುತ್ತದೆಯಾದ್ದರಿಂದ ('ಯತ್ರ ಹೇತುಃ ತತ್ರ ಸಾಧ್ಯಂ' ಎಂಬ ಅನ್ವಯವ್ಯಾಪ್ತಿ ಹೇಳಲು ದೃಷ್ಟಾಂತ ಇರುತ್ತದೆಯಾದ್ದರಿಂದ) ಸಾಧ್ಯವು ಪ್ರಸಿದ್ಧವೇ ಆಗಿರುತ್ತದೆ. ಹೀಗಾಗಿ ಅನ್ವಯವ್ಯತಿರೇಕಿ - ಕೇವಲಾನ್ವಯಿ ಅನುಮಾನಗಳಲ್ಲಿ ಅಪ್ರಸಿದ್ಧವಿಶೇಷಣತಾ ದೋಷವಾಗುವುದಿಲ್ಲ. ಕೇವಲ-ವ್ಯತಿರೇಕಿ ಅನುಮಾನದಲ್ಲಿ ಮಾತ್ರವೇ ಅಪ್ರಸಿದ್ಧವಿಶೇಷಣತಾ ದೋಷವಾಗಲು ಪ್ರಸಕ್ತಿ ಇರುವುದು. ಆದರೆ ಪ್ರಕೃತ ಕೇವಲವ್ಯತಿರೇಕಿ ಅನುಮಾನದಲ್ಲಿಯೂ ಅಪ್ರಸಿದ್ಧವಿಶೇಷಣತಾ ದೋಷವಾಗುವುದಿಲ್ಲ ಎಂದು ಹೇಳುವುದಾದರೆ, ಅಪ್ರಸಿದ್ಧವಿಶೇಷಣತಾ ಎಂಬ ದೋಷವೇ ಜಗತ್ತಿನಲ್ಲಿ ಇಲ್ಲ ಎಂದಾಗಿ ಅಪ್ರಸಿದ್ಧವಿಶೇಷಣತಾ ದೋಷವನ್ನೇ ಕೈಬಿಡಬೇಕಾದ ಅತಿಪ್ರಸಂಗ ಬರುತ್ತದೆ.

ಮತ್ತು ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾದೋಷ ಬಂದರೆ ವ್ಯಾಪ್ತಿ-ಪಕ್ಷಧರ್ಮತಾಗಳು ಉಪಪನ್ನವಾಗುವುದಿಲ್ಲ ಎಂದು ಹೇಳಿದ್ದೇವೆ. ಕೇವಲ-ವ್ಯತಿರೇಕಿ ಅನುಮಾನದಲ್ಲಿ ಅಪ್ರಸಿದ್ಧವಿಶೇಷಣತಾ ದೋಷವಾಗುವುದಿಲ್ಲ ಎಂದು ಹೇಳುತ್ತಿರುವ ನೀವು ದೂಷಣತ್ವಕ್ಕೆ ಉಪಯುಕ್ತವಾದ ವ್ಯಾಪ್ತ್ಯಾದಿರಾಹಿತ್ಯ ಎಂಬ ಪ್ರಕಾರವನ್ನು ನಿರಾಕರಿಸಬೇಕು. ವ್ಯಾಪ್ತ್ಯಾದಿಗಳು ಇವೆ ಎಂಬುದಾಗಿ ಉಪಪಾದನೆ ಮಾಡಬೇಕು ಎಂದರ್ಥ. ಆದರೆ ಅದನ್ನು ಮಾಡದೇ 'ಕೇವಲವ್ಯತಿರೇಕಿ ಆದ್ದರಿಂದ ದೋಷವಲ್ಲ' ಎಂದಷ್ಟೇ ಹೇಳುವುದು ಪ್ರಕೃತ ಅನುಪಯುಕ್ತವೂ ಆಗಿದೆ.

ಹೌದು, ದೂಷಣತ್ವಕ್ಕೆ ಉಪಯುಕ್ತವಾದ ವ್ಯಾಪ್ತ್ಯಾದಿರಾಹಿತ್ಯ ಎನ್ನುವುದು ಅಸಿದ್ಧವಾಗಿದೆ. ಅರ್ಥಾತ್ ವ್ಯಾಪ್ತ್ಯಾದಿಗಳು ಇವೆ. ಹೇಗೆಂದರೆ - ಸಾಧ್ಯವು ಅಪ್ರಸಿದ್ಧವಾದ್ದರಿಂದ 'ಯತ್ರ ಹೇತುಃ ತತ್ರ ಸಾಧ್ಯಂ' ಎಂದು ಅನ್ವಯವ್ಯಾಪ್ತಿ ತಿಳಿಯಲು ಅಶಕ್ಯವಾದರೂ ಸಹ, 'ಯತ್ರ ಸಾಧ್ಯಾಭಾವಃ ತತ್ರ ಹೇತ್ವಭಾವಃ' ಎಂದು ವ್ಯತಿರೇಕವ್ಯಾಪ್ತಿಯನ್ನು ತಿಳಿಯಬಹುದಾಗಿದೆ. ಅಂದರೆ ಆತ್ಮನು ದೃಷ್ಟಾಂತನಾಗಿ ಇರುವುದರಿಂದ ವ್ಯತಿರೇಕವ್ಯಾಪ್ತಿಯನ್ನು ಹೇಳಲು ಬರುತ್ತದೆ. ಈ ವ್ಯತಿರೇಕವ್ಯಾಪ್ತಿಯಲ್ಲಿ ಸಾಧ್ಯಾಭಾವ-ಸಾಧನಾಭಾವಗಳು ಮಾತ್ರವೇ ಸಂಬಂಧಿಸುವುದರಿಂದ ವ್ಯಾಪ್ತಿಜ್ಞಾನವು ಸಾಧ್ಯಾಭಾವ-ಸಾಧನಾಭಾವಗಳ ಜ್ಞಾನಾಧೀನವಾದರೂ, ಸಾಧ್ಯ-ಸಾಧನಗಳು ಸಂಬಂಧಿಸದ ಕಾರಣ

ವ್ಯಾಪ್ತಿಜ್ಞಾನವು ಸಾಧ್ಯ-ಸಾಧನಗಳ ಜ್ಞಾನಾಧೀನವಾಗುವುದಿಲ್ಲವಾದ್ದರಿಂದ, ಸಾಧ್ಯವು ಅಪ್ರಸಿದ್ಧವಾದರೂ ಸಹ ವ್ಯತಿರೇಕವ್ಯಾಪ್ತಿಜ್ಞಾನ ಆಗಬಹುದಾಗಿದೆ. ಹೀಗಾಗಿ ವ್ಯಾಪ್ತಿ ಇಲ್ಲ ಎಂದು ಹೇಳುವುದು ಸರಿಯಲ್ಲ.

ಮತ್ತು ಸಾಧ್ಯವು ಸಂದೇಹಘಟಿತವಾದ್ದರಿಂದ ಸಾಧ್ಯವು ಅಪ್ರಸಿದ್ಧವಾದರೆ ಸಾಧ್ಯಕೋಟಿಕಸಂದೇಹ ಬರಲು ಸಾಧ್ಯವಿಲ್ಲದಿದ್ದರೂ ಸಹ, ಪಕ್ಷಧರ್ಮತಾ ಎನ್ನುವುದು ಸಂದೇಹಘಟಿತವಾಗದ ಕಾರಣ, ಸಾಧ್ಯ ಅಪ್ರಸಿದ್ಧವಾಗಿ ಸಂದೇಹ ಬರದಿದ್ದರೂ ಪಕ್ಷಧರ್ಮತಾ ಉಪಪನ್ನವಾಗಬಹುದಾಗಿದೆ. ಆದ್ದರಿಂದ ವ್ಯಾಪ್ತಿ-ಪಕ್ಷಧರ್ಮತಾಗಳು ಇಲ್ಲ ಎಂದು ಹೇಳುವುದು ಸರಿಯಲ್ಲ?

ಈ ರೀತಿಯಾಗಿ ಶಂಕಿಸಿದರೆ, ಅದು ಸಮಂಜಸವಲ್ಲ. ಏಕೆಂದರೆ ವ್ಯತಿರೇಕವ್ಯಾಪ್ತಿ ಎಂದರೆ 'ಯತ್ರ ಸಾಧ್ಯಾಭಾವಃ ತತ್ರ ಸಾಧನಾಭಾವಃ' ಎಂಬುದಾಗಿ ಸಾಧ್ಯಾಭಾವದಲ್ಲಿ ಸಾಧನಾಭಾವದಿಂದ ವ್ಯಾಪ್ತಿ ಎಂದರ್ಥ. ಸಾಧ್ಯಾಭಾವದಲ್ಲಿ ಸಾಧನಾಭಾವನಿರೂಪಿತವ್ಯಾಪ್ತಿಯ ಜ್ಞಾನ ಯಾವಾಗ ಆಗುತ್ತದೆ ? ಸಾಧ್ಯಾಭಾವದ ಜ್ಞಾನ ಆಗುತ್ತಿದ್ದರೆ, ಆಗ ಸಾಧ್ಯಾಭಾವದಲ್ಲಿ ಸಾಧನಾಭಾವದಿಂದ ವ್ಯಾಪ್ತಿಯ ಜ್ಞಾನ ಆಗಲು ಸಾಧ್ಯ. ಆದರೆ ಸಾಧ್ಯವು ಅಪ್ರಸಿದ್ಧವಾದರೆ ಸಾಧ್ಯದ ಜ್ಞಾನವೇ ಆಗದ ಕಾರಣ

**'ಸದ್ಭ್ಯಾಂ ಅಧಿಕರಣಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತೇ'**

ಎಂಬ ನಿಯಮಾನುಸಾರ ಪ್ರತಿಯೋಗಿಜ್ಞಾನವೇ ಇಲ್ಲದೇ ಸಾಧ್ಯಾಭಾವ-ಜ್ಞಾನವೇ ಆಗುವುದಿಲ್ಲ. ಸಾಧ್ಯಾಭಾವಜ್ಞಾನವೇ ಆಗದ ಕಾರಣ ಸಾಧ್ಯಾಭಾವ-ದಲ್ಲಿ ಸಾಧನಾಭಾವನಿರೂಪಿತವ್ಯಾಪ್ತಿಯ ಜ್ಞಾನವೂ ಆಗುವುದಿಲ್ಲವಾದ್ದರಿಂದ ವ್ಯತಿರೇಕವ್ಯಾಪ್ತಿಯನ್ನು ಹೇಳಲು ಬರುವುದಿಲ್ಲ.

ಹಾಗಾದರೆ ಕೇವಲವ್ಯತಿರೇಕಿ ಅನುಮಾನದಲ್ಲಿ ಸಪಕ್ಷ ಇರುವುದಿಲ್ಲವಾದ್ದರಿಂದ ಅಪ್ರಸಿದ್ಧವಿಶೇಷಣತಾ ದೋಷ ಬಂದೇ ಬರುವ ಕಾರಣ ಎಲ್ಲ ಕೇವಲವ್ಯತಿರೇಕಿ ಅನುಮಾನಗಳಲ್ಲಿಯೂ ವ್ಯಾಪ್ತಿ-ಪಕ್ಷಧರ್ಮತಾಗಳ ಅಭಾವ ನಿಶ್ಚಿತವಾಗಿರುತ್ತದೆ. ಹೀಗಾಗಿ ಎಲ್ಲ ಕೇವಲವ್ಯತಿರೇಕಿ ಅನುಮಾನಗಳೂ ಭಗ್ನವಾಗಬೇಕಾದ ಅತಿಪ್ರಸಂಗ ಬರುತ್ತದೆಯಲ್ಲವೇ ?

ಈ ವಿಧವಾದ ಶಂಕೆ ಸರಿಯಲ್ಲ. ಏಕೆಂದರೆ- ಕೇವಲವ್ಯತಿರೇಕಿ ಅನುಮಾನಗಳಲ್ಲಿ ಸಾಧ್ಯವು ಸಾಮಾನ್ಯತಃ ಪ್ರಸಿದ್ಧವಾಗಿರುತ್ತದೆ. ಉದಾ :-

**''ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ತ್ವಾತ್''**

ಎಂಬ ಅನುಮಾನವು ಕೇವಲವ್ಯತಿರೇಕಿ ಅನುಮಾನಕ್ಕೆ ಪ್ರಸಿದ್ಧ ದೃಷ್ಟಾಂತ. ಇಲ್ಲಿ ಸಾತ್ಮಕತ್ವಸಾಧ್ಯವು ಪಕ್ಷವಾದ ಜೀವಚ್ಛರೀರ ಬಿಟ್ಟು ಬೇರೆಡೆ ಇಲ್ಲ. ಅಂತೆಯೇ ಅದು ಅಪ್ರಸಿದ್ಧ. ಆದರೆ ಅದು ಪೂರ್ಣವಾಗಿ ಅಪ್ರಸಿದ್ಧವಾಗಿಲ್ಲ. ಕಿಂತು

**''ನಿರಾತ್ಮಕತ್ವಂ ಕಿಂಚಿನ್ನಿಷ್ಠಾತ್ಯಂತಾಭಾವಪ್ರತಿಯೋಗಿ ವ್ಯತಿರೇಕಿಧರ್ಮತ್ವಾತ್ ಘಟವತ್''**

ಎಂಬ ಅನುಮಾನದಿಂದ ಸಾಮಾನ್ಯತಃ [೧]ಪ್ರಸಿದ್ಧವಾಗಿದೆ. ಸಾತ್ಮಕತ್ವವು ಸಾಮಾನ್ಯತಃ ಪ್ರಸಿದ್ಧವಾದ್ದರಿಂದ ಸಾತ್ಮಕತ್ವದ ಜ್ಞಾನ ಆಗಬಹುದಾಗಿದೆ. ಪ್ರತಿಯೋಗಿಜ್ಞಾನ ಇರುವ ಕಾರಣ ಸಾತ್ಮಕತ್ವಾಭಾವ(ಸಾಧ್ಯಾಭಾವ)ಜ್ಞಾನವೂ ಆಗಬಹುದಾಗಿದೆ. ಹೀಗಾಗಿ

**'ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ತ್ವಾತ್'**

ಎಂಬ ಅನುಮಾನದಲ್ಲಿ 'ಯತ್ರ ಸಾತ್ಮಕತ್ವಾಭಾವಃ ತತ್ರ ಪ್ರಾಣಾದಿಮತ್ತ್ವಾಭಾವಃ' ಎಂದು ವ್ಯತಿರೇಕವ್ಯಾಪ್ತಿ ಹೇಳಲು ಬರುತ್ತದೆ.

ಹೀಗೆ ಉಳಿದ ಕೇವಲವ್ಯತಿರೇಕಿ ಅನುಮಾನಗಳಲ್ಲಿ ಸಾಧ್ಯವು ಸಾಮಾನ್ಯತಃ ಪ್ರಸಿದ್ಧವಾಗಿರುತ್ತದೆಯಾದ್ದರಿಂದ ವ್ಯಾಪ್ತಿಜ್ಞಾನ ಉಪಪನ್ನ. ಇನ್ನು ಎಲ್ಲಿ (ಯಾವ ಅನುಮಾನದಲ್ಲಿ) ಸಾಧ್ಯವು ಸಾಮಾನ್ಯತಃವೂ ಪ್ರಸಿದ್ಧವಾಗಿರುವುದಿಲ್ಲ ಅಂತಹ ಅನುಮಾನಗಳಲ್ಲಿ ಕೇವಲವ್ಯತಿರೇಕಿತ್ವಭಂಗ ಇಷ್ಟವೇ ಆಗಿದೆ. ಅನ್ನುವುದಕ್ಕಾಗಿಯೇ

**'ಭೂಃ ಶಶವಿಷಾಣೋಲ್ಲಿಖಿತಾ ……… .'**

ಇತ್ಯಾದಿಗಳಲ್ಲಿ ಸಾಧ್ಯವು ಸಾಮಾನ್ಯತಃವೂ ಪ್ರಸಿದ್ಧವಾಗಿಲ್ಲವಾದ್ದರಿಂದ ಅಲ್ಲಿ ಕೇವಲವ್ಯತಿರೇಕಿತ್ವ ಅಂಗೀಕೃತವಾಗಿಲ್ಲ ಎಂದು ಅಭಿಪ್ರಾಯ.

---

೧ ಘಟವು ವ್ಯತಿರೇಕಿಧರ್ಮವಾದ್ದರಿಂದ ಅದರ ಅಭಾವವು ಒಂದು ಕಡೆ ಇದೆ ಎಂದು ಹೇಳುವಂತೆ, ನಿರಾತ್ಮಕತ್ವವೂ ವ್ಯತಿರೇಕಿಧರ್ಮವಾದ್ದರಿಂದ ಅದರ ಅಭಾವವೂ ಒಂದು ಕಡೆ ಇದೆ ಎಂದು ಈ ಅನುಮಾನದಿಂದ ಹೇಳಿದಂತಾಗುತ್ತದೆ. ನಿರಾತ್ಮಕತ್ವದ ಅಭಾವ ಎಂದರೆ ಸಾತ್ಮಕತ್ವ. ಆ ಸಾತ್ಮಕತ್ವವು ಒಂದು ಕಡೆ ಇದೆ ಎಂಬುದಾಗಿ ಸಾಧಿಸಿದಂತಾಗುತ್ತದೆ. ಹೀಗೆ ಈ ಅನುಮಾನದಿಂದ ಸಾತ್ಮಕತ್ವವು ಸಾಮಾನ್ಯತಃ ಪ್ರಸಿದ್ಧವಾಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** 'ಸಾಧ್ಯವು ಅಪ್ರಸಿದ್ಧವಾದ್ದರಿಂದ ವ್ಯಾಪ್ತಿಗ್ರಹ ಸಾಧ್ಯವಿಲ್ಲ' ಎಂಬುದಾಗಿ ನಾವು ದೋಷ ಹೇಳಿದ್ದರ ಮೇಲೆ 'ಕೇವಲವ್ಯತಿರೇಕಿ ಅನುಮಾನದಲ್ಲಿ ವ್ಯಾಪ್ತಿಗ್ರಹ ಸುಶಕವಾಗಿದೆ' ಎಂಬುದಾಗಿ ಕೆಲವರು ಅಭಿಪ್ರಾಯಪಡುತ್ತಾರೆ. ಅವರ ಅಭಿಪ್ರಾಯವನ್ನು ಅನುವಾದ ಮಾಡಿ, ಟೀಕಾಕೃತ್ಪಾದರು ಅದನ್ನು ನಿರಾಕರಿಸುತ್ತಾರೆ -

**ಟೀಕಾ : ಅಭಾವಃ ಕೇವಲವ್ಯತಿರೇಕಿಣಾ ಸಾಧ್ಯಃ। ತಥಾ ಸತ್ಯಭಾವಾಭಾವೋ ಭಾವ ಏವೇತಿ ಸುಶಕೋ ವ್ಯಾಪ್ತಿಗ್ರಹ ಇತಿ ಕಶ್ಚಿತ್ ।**

**ತದಸತ್ । ಅಭಾವಾಭಾವಸ್ಯ ಭಾವತ್ವೇಽಪಿ ಪ್ರತಿಷೇಧಾಕಾರ-ಬುದ್ಧೇರನಿವಾರಣಾತ್ । ಪ್ರತಿಷೇಧಸ್ಯ ಚ ಪ್ರತಿಯೋಗಿ-ಸಾಪೇಕ್ಷತಾನಿಯಮಾತ್ ।**

**ಅನುವಾದ :-** ಭಾವಸಾಧ್ಯಕವಾದದ್ದು ಅಭಾವಸಾಧ್ಯಕವಾದದ್ದು ಎಂಬುದಾಗಿ ಕೇವಲವ್ಯತಿರೇಕಿ ಅನುಮಾನ ಎರಡುವಿಧವಾಗಿದೆ. (ಕೆಲವು ಕೇವಲವ್ಯತಿರೇಕಿ ಅನುಮಾನಗಳಲ್ಲಿ ಭಾವಪದಾರ್ಥ ಸಾಧ್ಯವಾಗಿರುತ್ತದೆ. ಇನ್ನು ಕೆಲವು ಕೇವಲವ್ಯತಿರೇಕಿ ಅನುಮಾನಗಳಲ್ಲಿ ಅಭಾವಪದಾರ್ಥ ಸಾಧ್ಯವಾಗಿರುತ್ತದೆ ಎಂದು ಭಾವ.) ಭಾವಸಾಧ್ಯಕಸ್ಥಳದಲ್ಲಿ ಸಾಧ್ಯಪ್ರಸಿದ್ಧಿ ಇಲ್ಲದೇ ವ್ಯಾಪ್ತಿಗ್ರಹ ಸಾಧ್ಯವಿಲ್ಲದ ಕಾರಣ ಅಲ್ಲಿ (ಸಾಧ್ಯಪ್ರಸಿದ್ಧಿ ಆವಶ್ಯಕ) ಸಾಧ್ಯಾಪ್ರಸಿದ್ಧಿ ದೋಷವಾಗುತ್ತದೆ. ಆದರೆ ಅಭಾವಸಾಧ್ಯಕಸ್ಥಳದಲ್ಲಿ ಮಾತ್ರ 'ಅಭಾವಾಭಾವಃ ಭಾವ ಏವ' ಎಂಬ ನಿಯಮದಂತೆ ಸಾಧ್ಯಾಭಾವವು ಭಾವರೂಪವೇ ಆಗುವುದರಿಂದ ಅಂತಹ ಸಾಧ್ಯಾಭಾವಕ್ಕೆ ಭಾವಪದಾರ್ಥಕ್ಕೆ ಹೇತ್ವಭಾವದಿಂದ ವ್ಯಾಪ್ತಿಯು ಸುಲಭವಾಗಿ ಗ್ರಾಹ್ಯವಾಗಿದೆ.

ಉದಾಹರಣೆಗೆ :-

**''ಇದಂ ಜ್ಞಾನಂ ಅಪ್ರಮಾಣಂ ಅಸಮರ್ಥಪ್ರವೃತ್ತಿಜನಕತ್ವಾತ್''**

ಎನ್ನುವಲ್ಲಿ ಅಪ್ರಾಮಾಣ್ಯವು ಸಾಧ್ಯವಾಗಿದೆ. ಇದು ಅಭಾವರೂಪ. (ಪ್ರಾಮಾಣ್ಯಾಭಾವರೂಪ.) ಸಾಧ್ಯಾಭಾವ ಎಂದರೆ (ಅಪ್ರಾಮಾಣ್ಯಾಭಾವ) ಪ್ರಾಮಾಣ್ಯ. ಇದು ಭಾವಪದಾರ್ಥ. ಅಭಾವಜ್ಞಾನವಾಗುವುದಕ್ಕೆ ಪ್ರತಿಯೋಗಿ-ಜ್ಞಾನ ಅಪೇಕ್ಷಿತ. ಹೊರತು ಭಾವಜ್ಞಾನಕ್ಕಾಗಿ ಪ್ರತಿಯೋಗಿಜ್ಞಾನ ಅಪೇಕ್ಷಿತವಲ್ಲ.

ಹಾಗಾಗಿ ಪ್ರಾಮಾಣ್ಯಜ್ಞಾನಕ್ಕಾಗಿ ಪ್ರತಿಯೋಗಿಜ್ಞಾನ ಅಪೇಕ್ಷಿತವಲ್ಲವಾದ್ದರಿಂದ ಇಂತಹ ಅಭಾವಸಾಧ್ಯಕಸ್ಥಳದಲ್ಲಿ ಸಾಧ್ಯಾಭಾವಕ್ಕೆ ಪ್ರಾಮಾಣ್ಯಕ್ಕೆ ಹೇತ್ವಭಾವ-ದಿಂದ ವ್ಯಾಪ್ತಿಯು ಸುಲಭಗ್ರಾಹ್ಯವೇ ಆಗಿದೆ.

ಅದರಂತೆ 'ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್' ಎಂಬ ಪ್ರಕೃತ ಅನುಮಾನದಲ್ಲಿಯೂ ಸಹ ಸಾಧ್ಯವಾದ ಅನಿರ್ವಚನೀಯತ್ವವು ಅಭಾವರೂಪ-ವಾಗಿದೆ. ಸದಸದ್ವೈಲಕ್ಷಣ್ಯ ಸದಸದ್ಭೇದ ರೂಪವಾಗಿದೆ. ಸಾಧ್ಯಾಭಾವ ಎಂದರೆ ಸದಸದ್ಭೇದಾಭಾವ ಸದಸತ್ವ ಸತ್ವಾಸತ್ವ. ಇದು ಭಾವರೂಪವಾಗಿದೆ. ಹೀಗಾಗಿ ಸಾಧ್ಯವು ಅಪ್ರಸಿದ್ಧವಾದರೂ ಸಹ (ಸಾಧ್ಯಜ್ಞಾನವಾಗದಿದ್ದರೂ ಸಹ) ಭಾವಜ್ಞಾನಕ್ಕೆ ಪ್ರತಿಯೋಗಿಜ್ಞಾನ ಆವಶ್ಯಕವಲ್ಲವಾದ್ದರಿಂದ ಭಾವರೂಪವಾದ ಸಾಧ್ಯಾಭಾವಕ್ಕೆ ಸತ್ವಾಸತ್ವಗಳಿಗೆ ಹೇತ್ವಭಾವದಿಂದ ವ್ಯಾಪ್ತಿಯು ಸುಲಭವಾಗಿ ಗ್ರಾಹ್ಯವಾಗಿದೆ.

ಆದ್ದರಿಂದ ಅಭಾವಸಾಧ್ಯಕವಾದ ಕೇವಲವ್ಯತಿರೇಕಿ ಅನುಮಾನದಲ್ಲಿ ಅಪ್ರಸಿದ್ಧವಿಶೇಷಣತಾ ದೋಷವಾಗುವುದಿಲ್ಲ ಎಂಬುದಾಗಿ ಕೆಲವರು ಅಭಿಪ್ರಾಯಪಡುತ್ತಾರೆ.

ಆದರೆ ಅದು ಸರಿಯಲ್ಲ. ಏಕೆಂದರೆ- ಅಭಾವಸಾಧ್ಯಕಸ್ಥಳದಲ್ಲಿ ''ಅಭಾವಾಭಾವಃ ಭಾವ ಏವ'' ಎಂಬ ನಿಯಮದಂತೆ ಸಾಧ್ಯಾಭಾವವು ಭಾವರೂಪವೇ ಆಗುತ್ತದೆ ಸತ್ಯವೇ. ಆದರೆ ಘಟ-ಘಟಾಭಾವಾಭಾವ ಎರಡೂ ಒಂದೇ ಆದರೂ ಸಹ ಘಟತ್ವೇನ ಘಟಜ್ಞಾನವಾಗಬೇಕಾದರೆ ಪ್ರತಿಯೋಗಿಜ್ಞಾನ ಆವಶ್ಯಕವಾಗದಿದ್ದರೂ ಸಹ ಘಟಾಭಾವಾಭಾವತ್ವೇನ ಘಟಜ್ಞಾನವಾಗಬೇಕಾದರೆ ಪ್ರತಿಯೋಗಿಜ್ಞಾನ (ಘಟಾಭಾವಜ್ಞಾನ) ಆವಶ್ಯಕವೇ ಆಗುತ್ತದೆ. ಅದರಂತೆ ಪ್ರಕೃತದಲ್ಲಿಯೂ ಸಹ ಸಾಧ್ಯಾಭಾವವು ಭಾವರೂಪವಾದರೂ, ಭಾವತ್ವೇನ ಸಾಧ್ಯಾಭಾವಜ್ಞಾನವಾಗಬೇಕಾದರೆ ಪ್ರತಿಯೋಗಿಜ್ಞಾನ ಆವಶ್ಯಕವಾಗದಿದ್ದರೂ ಸಾಧ್ಯಾಭಾವತ್ವೇನ ಸಾಧ್ಯಾಭಾವಜ್ಞಾನವಾಗಬೇಕಾದರೆ ಪ್ರತಿಯೋಗಿಜ್ಞಾನ ಆವಶ್ಯಕವೇ. ಪ್ರಕೃತ ಸಾಧ್ಯ ಅಪ್ರಸಿದ್ಧವಾದ್ದರಿಂದ ಸಾಧ್ಯಾಭಾವಜ್ಞಾನ ಆಗದ ಕಾರಣ ಸಾಧ್ಯಾಭಾವಕ್ಕೆ ಹೇತ್ವಭಾವನಿರೂಪಿತವ್ಯಾಪ್ತಿ ಹೇಳಲು ಬರುವುದಿಲ್ಲ. ಆದ್ದರಿಂದ ''ವ್ಯಾಪ್ತಿವಿಘಟಕವಾಗಿ ಅಪ್ರಸಿದ್ಧವಿಶೇಷಣತಾ ದೋಷವಾಗುತ್ತದೆ'' ಎಂಬುದಾಗಿ ಹೇಳಿದ್ದು ಸಮಂಜಸವೇ ಆಗಿದೆ ಎಂದು ಭಾವ.

**ಅವತಾರಿಕೆ :-** ''ಕೇವಲವ್ಯತಿರೇಕಿ ಅನುಮಾನಗಳಲ್ಲಿ ಸಾಧ್ಯವು ಅಪ್ರಸಿದ್ಧವೇ ಆಗಿರುವುದರಿಂದ (ಎಲ್ಲ ಕೇವಲವ್ಯತಿರೇಕಿ ಅನುಮಾನಗಳಲ್ಲಿಯೂ ಅಪ್ರಸಿದ್ಧ-ವಿಶೇಷಣತಾದೋಷ ಬರುವುದರಿಂದ) ಕೇವಲವ್ಯತಿರೇಕಿ ಅನುಮಾನಗಳೇ ಭಗ್ನವಾಗಬೇಕಾಗುತ್ತದೆ'' ಎಂಬ ಆಕ್ಷೇಪಕ್ಕೆ ಟೀಕಾಕೃತ್ಪಾದರು ಸಮಾಧಾನ ಹೇಳಿದರು- ''ಸಾತ್ಮಕತ್ವಸಾಧ್ಯದಂತೆ ಬಹಳ ಕೇವಲವ್ಯತಿರೇಕಿ ಅನುಮಾನಗಳಲ್ಲಿ ಸಾಧ್ಯವು ಸಾಮಾನ್ಯತಃ ಪ್ರಸಿದ್ಧವೇ ಆಗಿರುವುದರಿಂದ ಅಲ್ಲೆಲ್ಲ ದೋಷವಾಗುವು-ದಿಲ್ಲ. ಎಲ್ಲಿ ಸಾಧ್ಯವು ಸಾಮಾನ್ಯತಃನೂ ಪ್ರಸಿದ್ಧವಾಗಿರುವುದಿಲ್ಲ ಅಲ್ಲಿ ಅಪ್ರಸಿದ್ಧವಿಶೇಷಣತಾ ದೋಷವಾಗುತ್ತದೆ'' ಎಂದು.

ಇಲ್ಲಿ ಸಾತ್ಮಕತ್ವಸಾಧ್ಯದಂತೆ ಅನಿರ್ವಚನೀಯತ್ವಸಾಧ್ಯವೂ ಸಾಮಾನ್ಯತಃ ಪ್ರಸಿದ್ಧವೇ ಆಗಿರುವುದರಿಂದ ನಮ್ಮ ಈ ಬಾಧ್ಯತ್ವಾನುಮಾನದಲ್ಲಿಯೂ ಅಪ್ರಸಿದ್ಧವಿಶೇಷಣತಾ ದೋಷವಾಗುವುದಿಲ್ಲ ಎಂಬುದಾಗಿ ಪ್ರತಿವಾದಿಗಳು ಶಂಕಿಸುತ್ತಾರೆ -

### ಸಾಮಾನ್ಯತಃ ಅನಿರ್ವಚನೀಯತ್ವಸಾಧಕಾನುಮಾನನಿರಾಕರಣೆ

**ಟೀಕಾ: ಸತ್ತ್ವಾಸತ್ತ್ವೇ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿನೀ ಧರ್ಮತ್ವಾತ್ ರೂಪರಸವದಿತ್ಯನುಮಾನೇನ ಸಾಮಾನ್ಯತೋಽ-ನಿರ್ವಚನೀಯತ್ವಪ್ರಸಿದ್ಧೌ ಶುಕ್ತಿರಜತಾದಿಧರ್ಮಿವಿಶೇಷಾಶ್ರಯತಾ ತಸ್ಯ ಕೇವಲವ್ಯತಿರೇಕಿಣಾ ಸಾಧ್ಯತೇ । ಅತೋ ನ ದೋಷ ಇತಿ ಚೇನ್ನ।**

**ಅಭಿಧೇಯತ್ವಾದೌ ವ್ಯಭಿಚಾರಾತ್ । ತಸ್ಯಾಪಿ ಪಕ್ಷತುಲ್ಯತ್ವೇ ವ್ಯಾಘಾತಾತ್ । ಅಭಿಧೇಯತ್ವಾದಿಕಂ ಕಿಂಚಿನ್ನಿಷ್ಠಾತ್ಯಂತಾಭಾವ-ಪ್ರತಿಯೋಗೀತ್ಯತ್ರ ತಸ್ಯ ಕಿಂಚಿದಾದಿಶಬ್ದಾಭಿಧೇಯತ್ವಾತ್।**

**ಅನುವಾದ :-** 'ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್' ಎಂಬ ಅನುಮಾನದಲ್ಲಿ ಅನಿರ್ವಚನೀಯತ್ವ ಸಾಧ್ಯವು ಪೂರ್ಣವಾಗಿ ಅಪ್ರಸಿದ್ಧವಾಗಿದೆ ಎಂದು ಹೇಳುವುದಿಲ್ಲ. ಕಿಂತು -

**ಸತ್ತ್ವಾಸತ್ತ್ವೇ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿನೀ ಧರ್ಮತ್ವಾತ್ ರೂಪರಸವತ್ ।**

ರೂಪ-ರಸಗಳು ಧರ್ಮವಾದ್ದರಿಂದ ಅವುಗಳ ಅಭಾವ ಒಂದುಕಡೆ ವಾಯುವಿನಲ್ಲಿ ಇದೆ. (ಅರ್ಥಾತ್ ರೂಪರಸಗಳು ವಾಯುನಿಷ್ಠಾಭಾವಕ್ಕೆ ಪ್ರತಿಯೋಗಿಗಳಾಗಿವೆ.) ಅದರಂತೆ ಸತ್ತ್ವ-ಅಸತ್ತ್ವಗಳೂ ಧರ್ಮವಾದ್ದರಿಂದ ಅವುಗಳ ಅಭಾವವೂ ಒಂದುಕಡೆ ಇದೆ. ಯಾವ ಧರ್ಮಿಯಲ್ಲಿ ಸತ್ತ್ವ-ಅಸತ್ತ್ವಗಳ ಅಭಾವ ಇದೆಯೋ ಅದೇ ಅನಿರ್ವಚನೀಯ ಪದಾರ್ಥ.

ಈ ವಿಧವಾದ ಅನುಮಾನದಿಂದ ಅನಿರ್ವಚನೀಯತ್ವವು ಸಾಮಾನ್ಯತಃ ಪ್ರಸಿದ್ಧವಾಗಿದೆ. (ಅನಿರ್ವಚನೀಯತ್ವವು ಒಂದು ವಸ್ತುವಿನಲ್ಲಿ ಇದೆ ಎಂದು ಸಾಮಾನ್ಯತಃ ಸಿದ್ಧವಾಗಿದೆ.)

ಅನಿರ್ವಚನೀಯತ್ವವು ಯಾವ ವಸ್ತುವಿನಲ್ಲಿ ಇದೆ ? ಎಂಬುದಾಗಿ ಜಿಜ್ಞಾಸೆ ಬಂದಾಗ, **''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್''** ಎಂಬ ಕೇವಲ-ವ್ಯತಿರೇಕಿ ಅನುಮಾನದಿಂದ ಶುಕ್ತಿರಜತಾದಿಧರ್ಮಿವಿಶೇಷದಲ್ಲಿ ಅನಿರ್ವಚ-ನೀಯತ್ವ ಇದೆ ಎಂದು ಸಾಧಿಸುತ್ತೇವೆ.

ಆದ್ದರಿಂದ ಸಾತ್ಮಕತ್ವಸಾಧ್ಯವು ''ನಿರಾತ್ಮಕತ್ವಂ ಕಿಂಚಿನ್ನಿಷ್ಠ...'' ಎಂಬ ಅನುಮಾನದಿಂದ ಸಾಮಾನ್ಯತಃ ಸಿದ್ಧವಾಗುವಂತೆ, ಪ್ರಕೃತ ಅನಿರ್ವಚನೀಯತ್ವ-ಸಾಧ್ಯವೂ ''ಸತ್ತ್ವಾಸತ್ತ್ವೇ ಏಕಧರ್ಮಿನಿಷ್ಠ....'' ಎಂಬ ಅನುಮಾನದಿಂದ ಸಾಮಾನ್ಯತಃ ಸಿದ್ಧವಾಗುವುದರಿಂದ ನಮ್ಮ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷವಾಗುವುದಿಲ್ಲ ಎಂಬುದಾಗಿ ಪ್ರತಿವಾದಿಗಳ ಆಕ್ಷೇಪ.

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ ಅನಿರ್ವ-ಚನೀಯತ್ವವನ್ನು ಸಾಮಾನ್ಯತಃ ಸಾಧಿಸುವ ''ಸತ್ತ್ವಾಸತ್ತ್ವೇ ಏಕಧರ್ಮಿನಿಷ್ಠ...'' ಎಂಬ ಅನುಮಾನ ನಿರ್ದುಷ್ಟವಾಗಿದ್ದರೆ ಆಗ ಈ ಅನುಮಾನದಿಂದ ಅನಿರ್ವಚನೀಯತ್ವವು ಸಾಮಾನ್ಯತಃ ಸಿದ್ಧವಾಗುತ್ತಿತ್ತು. ಆದರೆ ಈ ಅನುಮಾನವೇ ನಿರ್ದುಷ್ಟವಾಗಿಲ್ಲ.

ಕಾರಣ ಈ ಅನುಮಾನಕ್ಕೆ ಅಭಿಧೇಯತ್ವಾದಿಗಳಲ್ಲಿ ವ್ಯಭಿಚಾರ ಬರುತ್ತದೆ. ಅಭಿಧೇಯತ್ವಾದಿಗಳು ಧರ್ಮವಾದ್ದರಿಂದ ಧರ್ಮತ್ವಹೇತು ಅಲ್ಲಿ ಇದೆ. ಆದರೆ ಅಭಿಧೇಯತ್ವಾದಿಗಳು ಕೇವಲಾನ್ವಯಿಧರ್ಮವಾದ್ದರಿಂದ ಅವುಗಳ ಅಭಾವ ಎಲ್ಲೂ ಇಲ್ಲದ ಕಾರಣ ಅಲ್ಲಿ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ಸಾಧ್ಯ ಇಲ್ಲ. ಸಾಧ್ಯ ಇಲ್ಲದೇ ಹೇತು ಇರುವ ಕಾರಣ ಅನುಮಾನಕ್ಕೆ ಅಭಿಧೇಯತ್ವಾದಿಗಳಲ್ಲಿ ವ್ಯಭಿಚಾರ ಬರುತ್ತದೆ.

ಹಾಗಲ್ಲ, ಸತ್ತ್ವಾಸತ್ತ್ವಗಳಲ್ಲಿ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವವನ್ನು ಸಾಧಿಸುವಂತೆ ಅಭಿಧೇಯತ್ವಾದಿಗಳಲ್ಲಿಯೂ ಏಕಧರ್ಮಿನಿಷ್ಠಾತ್ಯಾಂತಾಭಾವ-ಪ್ರತಿಯೋಗಿತ್ವವನ್ನು ಸಾಧಿಸುವ ಉದ್ದೇಶವಿದೆ. ಅರ್ಥಾತ್ ಸತ್ತ್ವಾಸತ್ತ್ವಗಳು ಪಕ್ಷವಾದಂತೆ ಅಭಿಧೇಯತ್ವಾದಿಗಳೂ ಪಕ್ಷತುಲ್ಯವಾಗಿವೆ. 'ನ ಹಿ ಪಕ್ಷೇ ಪಕ್ಷಸದೃಶೇ ವಾ ವ್ಯಭಿಚಾರಃ' ಎಂಬ ನಿಯಮದಂತೆ ಪಕತುಲ್ಯದಲ್ಲಿ ವ್ಯಭಿಚಾರ ಹೇಳಲು ಬರುವುದಿಲ್ಲ. ಆದ್ದರಿಂದ ನಮ್ಮ ಅನುಮಾನಕ್ಕೆ ಅಭಿಧೇಯತ್ವಾದಿಗಳಲ್ಲಿ ವ್ಯಭಿಚಾರ ಬರುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಏಕೆಂದರೆ- ಅಭಿಧೇಯತ್ವಾದಿಗಳಲ್ಲಿ ಏಕಧರ್ಮಿನಿಷ್ಠಾತ್ಯಾಂತಾಭಾವ-ಪ್ರತಿಯೋಗಿತ್ವವನ್ನು ಸಾಧಿಸಲು ಹೊರಟರೆ ವ್ಯಾಹತಿ ಬರುತ್ತದೆ. ಅಭಿಧೇಯ-ತ್ವಾದಿಗಳು ಕಿಂಚಿನ್ನಿಷ್ಠಾತ್ಯಂತಾಭಾವಪ್ರತಿಯೋಗಿಯಾಗಿವೆ (ಅಭಿಧೇಯತ್ವಾದಿ-ಗಳು ಕಿಂಚಿತ್(ಒಂದು)ಪದಾರ್ಥದಲ್ಲಿ ಇಲ್ಲ) ಎಂದು ಹೇಳಿದರೆ ಆ ಕಿಂಚಿತ್ ಪದಾರ್ಥಗಳು ಕಿಂಚಿತ್ಪದಾರ್ಥಶಬ್ದದಿಂದಲೇ ಅಭಿಧೇಯ (ವಾಚ್ಯ) ವಾಗಿರುವುದರಿಂದ, ಕಿಂಚಿತ್ಪದಾರ್ಥಶಬ್ದದಿಂದಲೇ ಅಭಿಧೇಯತ್ವವನ್ನು ಒಪ್ಪಿ ಮತ್ತೆ ಅಲ್ಲಿ ಅಭಿಧೇಯತ್ವ ಇಲ್ಲ ಎನ್ನುವುದಾದರೆ ವ್ಯಾಹತಿ ಬರುತ್ತದೆ.

ಆದ್ದರಿಂದ ಅಭಿಧೇಯತ್ವಾದಿಗಳಲ್ಲಿ ಏಕಧರ್ಮಿನಿಷ್ಠಾತ್ಯಂತಾಭಾವ-ಪ್ರತಿಯೋಗಿತ್ವವನ್ನು ಸಾಧಿಸಲು ಬರುವುದಿಲ್ಲ. ಅಂದರೆ ಅಭಿಧೇಯತ್ವಾದಿಗಳು ಪಕ್ಷತುಲ್ಯ ಎನ್ನಲು ಬರುವುದಿಲ್ಲ. ಹೀಗಾಗಿ ಅಭಿಧೇಯತ್ವಾದಿಗಳಲ್ಲಿ ಹೇಳಿದ ವ್ಯಭಿಚಾರ ಅಪರಿಹಾರ್ಯ ಎಂದು ಭಾವ.

**ಅವತಾರಿಕೆ :-** 'ಸತ್ತ್ವಾಸತ್ತ್ವೇ ಏಕಧರ್ಮಿನಿಷ್ಠ.....' ಎಂಬ ಅನುಮಾನಕ್ಕೆ ವ್ಯಭಿಚಾರದೋಷವನ್ನು ಹೇಳಿ ನಿರಾಕರಿಸಿ, ಪ್ರಕೃತ ಇನ್ನೂ ಅನೇಕ ದೋಷಗಳನ್ನು ಹೇಳಿ ನಿರಾಕರಿಸುತ್ತಾರೆ -

**ಟೀಕಾ: ಕಿಂಚ ಸಕಲಧರ್ಮಾಣಾಂ ಯತ್ಕಿಂಚನ್ನಿಷ್ಠಾತ್ಯಂತಾಭಾವ-ಪ್ರತಿಯೋಗಿತಾಸಾಧನೇ ಸಕಲಧರ್ಮಾತ್ಯಂತಾಭಾವಾಧಿಕರಣತ್ವೇ ವ್ಯಭಿಚಾರಃ। ತಸ್ಯಾಪಿ ಪಕ್ಷತ್ವೇ ಸಕಲಧರ್ಮವತ್ತ್ವಂ ಕಸ್ಯಚಿದ್ವಿರುದ್ಧ-ಮಾಪದ್ಯೇತ।**

**ಅವಿರುದ್ಧತ್ವಂ ಚೋಪಾಧಿಃ। ನ ಚ ಸತ್ತ್ವಾಸತ್ತ್ವೇ ಅಪಿ ನ ವಿರುದ್ಧೇ। ಅನಿರ್ವಚನೀಯಾರ್ಥಪ್ರತೀತೇಃ ಪ್ರಾಗವಿರೋಧಾಪ್ರತೀತೇಃ ॥**

**ಅನುವಾದ :-** ಘಟತ್ವ-ಪಟತ್ವ ಮೊದಲಾದ ವ್ಯತಿರೇಕಿಧರ್ಮಗಳಂತೂ ಏಕಧರ್ಮಿನಿಷ್ಠಾಭಾವಪ್ರತಿಯೋಗಿಗಳಾಗಿವೆ, ಜೊತೆಗೆ ಈ ಹಿಂದೆ ಶಂಕಿಸಿದಂತೆ ಅಭಿಧೇಯತ್ವಾದಿ ಕೇವಲಾನ್ವಯಿಧರ್ಮಗಳೂ ಏಕಧರ್ಮಿನಿಷ್ಠಾಭಾವ-ಪ್ರತಿಯೋಗಿ ಆಗಲಿ ಎಂಬ ಪಕ್ಷದಲ್ಲಿ ವ್ಯತಿರೇಕಿ-ಕೇವಲಾನ್ವಯಿ ಹೀಗೆ ಸಕಲ-ಧರ್ಮಗಳಿಗೂ ಏಕಧರ್ಮಿನಿಷ್ಠಾಭಾವಪ್ರತಿಯೋಗಿತ್ವವನ್ನು ಸಾಧಿಸಿದಂತಾಗುತ್ತದೆ. ಹಾಗೆ ಸಕಲಧರ್ಮಗಳಲ್ಲಿಯೂ ಏಕಧರ್ಮಿನಿಷ್ಠಾಭಾವಪ್ರತಿಯೋಗಿತ್ವವನ್ನು ಸಾಧಿಸುವಾಗ (ಅಭಿಧೇಯತ್ವಾದಿ ಕೇವಲಾನ್ವಯಿಧರ್ಮಗಳೂ ಪಕ್ಷವೇ ಆಗುವುದರಿಂದ) ಅಭಿಧೇಯತ್ವಾದಿಗಳಲ್ಲಿ ಹೇಗೆ ವ್ಯಭಿಚಾರ ಹೇಳುತ್ತೀರಿ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸಮಂಜಸವಲ್ಲ. ಏಕೆಂದರೆ :-

**ಸರ್ವೇ ಧರ್ಮಾಃ ಕಿಂಚಿನ್ನಿಷ್ಠಾತ್ಯಂತಾಭಾವಪ್ರತಿಯೋಗಿನಃ ಧರ್ಮತ್ವಾತ್ ।**

ಎಂಬುದಾಗಿ ಸಕಲಧರ್ಮಗಳಿಗೂ ಏಕಧರ್ಮಿನಿಷ್ಠಾಭಾವಪ್ರತಿಯೋಗಿತ್ವ-ವನ್ನು ಸಾಧಿಸುವುದಾದರೆ, (ಸಕಲಧರ್ಮಗಳ ಅಭಾವವನ್ನು ಒಂದು ಧರ್ಮಿಯಲ್ಲಿ ಹೇಳುವುದಾದರೆ) ಯಾವ ಧರ್ಮಿಯಲ್ಲಿ ಸಕಲಧರ್ಮಗಳ ಅಭಾವ ಹೇಳುತ್ತೀರಿ ಅಲ್ಲಿ ಸರ್ವಧರ್ಮಾಭಾವಾಧಿಕರಣತ್ವ ಎಂಬ ಧರ್ಮ ಇರುವುದರಿಂದ, ಆ ಸರ್ವಧರ್ಮಾಭಾವಾಧಿಕರಣತ್ವ ಎಂಬ ಧರ್ಮದಲ್ಲಿಯೇ ಧರ್ಮತ್ವಾನುಮಾನಕ್ಕೆ ವ್ಯಭಿಚಾರ ಬರುತ್ತದೆ. ಸರ್ವಧರ್ಮಾಭಾವಾಧಿಕರಣತ್ವ ಏನಿದೆ ಅದರ ಅಭಾವ ಇಲ್ಲವಾದ್ದರಿಂದ, ಆ ಸರ್ವಧರ್ಮಾಭಾವಾಧಿ ಕರಣತ್ವದಲ್ಲಿ ಸಾಧ್ಯ ಏಕಧರ್ಮಿನಿಷ್ಠಾಭಾವಪ್ರತಿಯೋಗಿತ್ವ ಇಲ್ಲ. ಆದರೆ ಧರ್ಮತ್ವ ಹೇತು ಇದೆ. ಹೀಗಾಗಿ ಸರ್ವಧರ್ಮಾಭಾವಾಧಿಕರಣತ್ವದಲ್ಲಿಯೇ ವ್ಯಭಿಚಾರ ಬರುತ್ತದೆ.

ಹಾಗಲ್ಲ, ಘಟತ್ವ-ಪಟತ್ವ ಮೊದಲಾದ ಧರ್ಮಗಳು ಪಕ್ಷವಾಗಿರುವಂತೆ ಸರ್ವಧರ್ಮಾಭಾವಾಧಿಕರಣತ್ವ ಎಂಬ ಧರ್ಮವೂ ಪಕ್ಷವೇ ಆಗಿದೆ. ಅರ್ಥಾತ್ ಘಟತ್ವದ ಅಭಾವ, ಪಟತ್ವದ ಅಭಾವ ಒಂದುಕಡೆ ಇದೆ ಎಂದು ಸಾಧಿಸುವಂತೆ ಸರ್ವಧರ್ಮಾಭಾವಾಧಿಕರಣತ್ವದ ಅಭಾವವೂ ಒಂದುಕಡೆ ಇದೆ ಎಂದು ಸಾಧಿ ಸುತ್ತೇವೆ. ಆದ್ದರಿಂದ (ಸರ್ವಧರ್ಮಾಭಾವಾಧಿಕರಣತ್ವವೂ ಪಕ್ಷವೇ ಆದ್ದರಿಂದ) ಸರ್ವಧರ್ಮಾಭಾವಾಧಿಕರಣತ್ವದಲ್ಲಿ ವ್ಯಭಿಚಾರ ಬರುವುದಿಲ್ಲ ಎಂಬುದಾಗಿ ಶಂಕಿಸಿದರೆ ಅದೂ ಸರಿಯಲ್ಲ.

ಏಕೆಂದರೆ - ಸರ್ವಧರ್ಮಾಭಾವಾಧಿಕರಣತ್ವದ ಅಭಾವವನ್ನು ಒಂದುಕಡೆ ಹೇಳುವುದಾದರೆ 'ಅಭಾವಾಭಾವಃ ಭಾವ ಏವ' ಎಂಬ ನಿಯಮಾನುಸಾರವಾಗಿ ಸರ್ವಧರ್ಮಾಧಿಕರಣತ್ವವನ್ನು ಅಲ್ಲಿ ಹೇಳಿದಂತಾಗುತ್ತದೆ. ಅಂದರೆ ಭಾವತ್ವ-ಅಭಾವತ್ವ, ನಿತ್ಯತ್ವ-ಅನಿತ್ಯತ್ವ, ಚೇತನತ್ವ-ಅಚೇತನತ್ವ ಮೊದಲಾದ ಎಲ್ಲ ವಿರುದ್ಧ ಧರ್ಮಗಳನ್ನೂ ಒಂದುಕಡೆ ಅಂಗೀಕರಿಸಬೇಕಾಗುತ್ತದೆ. ಅದು ವಿರುದ್ಧ. ಆದ್ದರಿಂದ ಸರ್ವಧರ್ಮಾಭಾವಾಧಿಕರಣತ್ವದ ಅಭಾವವನ್ನು ಸಾಧಿಸಲು ಬರುವುದಿಲ್ಲ. ಅದು ಪಕ್ಷಭಿನ್ನವೇ. ಹಾಗಾಗಿ ಅಂತಹ ಸರ್ವಧರ್ಮಾಭಾವಾಧಿ ಕರಣತ್ವದಲ್ಲಿ ಹೇಳಿದ ವ್ಯಭಿಚಾರ ಅಪರಿಹಾರ್ಯ ಎಂದು ಭಾವ.

ಹಾಗಲ್ಲ, 'ಧರ್ಮತ್ವಾತ್' ಎಂಬುದಾಗಿ ಕೇವಲ ಧರ್ಮತ್ವವನ್ನು ಹೇತು ಮಾಡುವುದಾದರೆ ಆಗ ಅಭಿಧೇಯತ್ವಾದಿಗಳಲ್ಲಿ ವ್ಯಭಿಚಾರ ಬರಬಹುದು. ಆದರೆ ನಾವು ಕೇವಲ ಧರ್ಮತ್ವವನ್ನು ಹೇತು ಮಾಡುವುದಿಲ್ಲ. ಕಿಂತು 'ವ್ಯತಿರೇಕಿಧರ್ಮತ್ವಾತ್' ಎಂಬುದಾಗಿ ಹೇತು ಮಾಡುತ್ತೇವೆ. ಅಭಿಧೇಯತ್ವಾದಿ-ಗಳು ಕೇವಲಾನ್ವಯಿಧರ್ಮವಾದ್ದರಿಂದ ಅಲ್ಲಿ ವ್ಯತಿರೇಕಿಧರ್ಮತ್ವ ಎಂಬ ಹೇತು ಇಲ್ಲದ ಕಾರಣ ಅಭಿಧೇಯತ್ವಾದಿಗಳಲ್ಲಿ ವ್ಯಭಿಚಾರ ಬರುವುದಿಲ್ಲ ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಟೀಕಾಕೃತ್ಪಾದರು ಉಪಾಧಿದೋಷವನ್ನು ಹೇಳಿ ನಿರಾಕರಿಸುತ್ತಾರೆ.

**ಸತ್ತ್ವಾಸತ್ತ್ವೇ ಏಕಧರ್ಮಿನಿಷ್ಠಾಭಾವಪ್ರತಿಯೋಗಿನೀ ವ್ಯತಿರೇಕಿಧರ್ಮತ್ವಾತ್**

ಎಂಬುದಾಗಿ ವ್ಯತಿರೇಕಿಧರ್ಮತ್ವವನ್ನು ಹೇತು ಮಾಡಿ ವ್ಯಭಿಚಾರ ಪರಿಹರಿಸಿಕೊಳ್ಳುವುದಾದರೆ ನಿಮ್ಮ ಅನುಮಾನಕ್ಕೆ ಅವಿರುದ್ಧತ್ವ ಎಂಬ ಉಪಾಧಿ ದೋಷ ಬರುತ್ತದೆ.

ಉಪಾಧಿ ಆಗಬೇಕಾದರೆ ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕವಾಗಬೇಕು. ಪ್ರಕೃತ 'ಯತ್ರ ಯತ್ರ ಏಕಧರ್ಮಿನಿಷ್ಠಾತ್ಯಂತಾಭಾವಪ್ರತಿಯೋಗಿತ್ವಂ ತತ್ರ ತತ್ರ ಅವಿರುದ್ಧತ್ವಂ' ಎಂಬ ವ್ಯಾಪ್ತಿಯು ದೃಷ್ಟಾಂತವಾದ ರೂಪ-ರಸಗಳಲ್ಲಿ ಕಂಡಿದೆ. ರೂಪ-ರಸಗಳ ಅಭಾವ ವಾಯುವಿನಲ್ಲಿ ಇರುವುದರಿಂದ ರೂಪ-ರಸಗಳಲ್ಲಿ ಏಕಧರ್ಮಿ(ವಾಯು)ನಿಷ್ಠಾತ್ಯಂತಾಭಾವಪ್ರತಿಯೋಗಿತ್ವ ಇದೆ. ಮತ್ತು ಒಂದೇ ಹಣ್ಣಿನಲ್ಲಿ ರೂಪ-ರಸ ಎರಡೂ ಇರುವುದರಿಂದ ಅವು ವಿರುದ್ಧವಲ್ಲ, ಅವುಗಳಲ್ಲಿ ಅವಿರುದ್ಧತ್ವವೂ ಇದೆ. ಹೀಗಾಗಿ ಅವಿರುದ್ಧತ್ವವು ಸಾಧ್ಯವ್ಯಾಪಕವಾಗಿದೆ.

ಇನ್ನು 'ಯತ್ರ ಯತ್ರ ವ್ಯತಿರೇಕಿಧರ್ಮತ್ವಂ ತತ್ರ ತತ್ರ ಅವಿರುದ್ಧತ್ವಂ' ಎಂಬ ವ್ಯಾಪ್ತಿಯು ಇಲ್ಲ. ಪಕ್ಷವಾದ ಸತ್ತ್ವಾಸತ್ತ್ವಗಳಲ್ಲಿ ವ್ಯತಿರೇಕಿಧರ್ಮತ್ವವಿದ್ದರೂ ಅವಿರುದ್ಧತ್ವ ಇಲ್ಲ. (ಸತ್ತ್ವಾಸತ್ತ್ವಗಳು ಒಂದು ಕಡೆ ಇಲ್ಲದ ಕಾರಣ ವಿರುದ್ಧವಾಗಿವೆ. ವಿರುದ್ಧವಾದ್ದರಿಂದ ವಿರುದ್ಧತ್ವವೇ ಇದೆ, ಅವಿರುದ್ಧತ್ವ ಇಲ್ಲ.) ಹೀಗಾಗಿ ಅವಿರುದ್ಧತ್ವವು ಸಾಧನಾವ್ಯಾಪಕವಾಗಿದೆ. ಹೀಗೆ ಸಾಧ್ಯವ್ಯಾಪಕವಾಗಿ ಸಾಧನಾ-ವ್ಯಾಪಕವಾದ್ದರಿಂದ ನಿಮ್ಮ ಅನುಮಾನಕ್ಕೆ ಅವಿರುದ್ಧತ್ವವು ಉಪಾಧಿಯಾಗುತ್ತದೆ.

ಹಾಗಲ್ಲ, ರೂಪ-ರಸಗಳು ಒಂದೇ ಹಣ್ಣಿನಲ್ಲಿ ಇರುವ ಕಾರಣ ಅವು ಅವಿರುದ್ಧ ಹೇಗೋ ಅದರಂತೆ ಅನಿರ್ವಚನೀಯವಸ್ತು ಅಂಗೀಕರಿಸುವ ನನ್ನ ಮತದಲ್ಲಿ ಸತ್ತ್ವ-ಅಸತ್ತ್ವಗಳು ಪರಸ್ಪರವಿರಹರೂಪವಾಗಿಲ್ಲ. ಅಂದರೆ - ಅನಿರ್ವಚನೀಯ ಎಂಬ ಮೂರನೇ ಕೋಟಿಯನ್ನು ಒಪ್ಪಿದ್ದರಿಂದ ಸತ್ತ್ವದ ಅಭಾವವೇ ಅಸತ್ತ್ವ, ಅಸತ್ತ್ವದ ಅಭಾವವೇ ಸತ್ತ್ವ ಅಲ್ಲ. (ಅನಿರ್ವಚನೀಯದಲ್ಲಿ ಸತ್ತ್ವದ ಅಭಾವ ಇದ್ದರೂ ಅದು ಅಸತ್ ಅಲ್ಲ. ಅಸತ್ತ್ವದ ಅಭಾವ ಇದ್ದರೂ ಅದು ಸತ್ ಅಲ್ಲ.) ಹೀಗೆ ಸತ್ತ್ವ-ಅಸತ್ತ್ವಗಳು ವಿರುದ್ಧವಲ್ಲ. ಅವಿರುದ್ಧವೇ ಆಗಿವೆ. ಅರ್ಥಾತ್ ಪಕ್ಷವಾದ ಸತ್ತ್ವಾಸತ್ತ್ವಗಳಲ್ಲಿ ವ್ಯತಿರೇಕಿಧರ್ಮತ್ವಹೇತು ಹಾಗೂ ಅವಿರುದ್ಧತ್ವ ಉಪಾಧಿ ಎರಡೂ ಇರುವುದರಿಂದ (ಯತ್ರ ವ್ಯತಿರೇಕಿ-ಧರ್ಮತ್ವಂ ತತ್ರ ಅವಿರುದ್ಧತ್ವಂ ಎಂಬ ವ್ಯಾಪ್ತಿಯೇ ಸಮನ್ವಯವಾಗುವುದರಿಂದ) ಅವಿರುದ್ಧತ್ವವು ಸಾಧನವ್ಯಾಪಕವೇ ಆಗುತ್ತದೆ. ಹೊರತು ಸಾಧನಾವ್ಯಾಪಕ-ವಾಗುವುದಿಲ್ಲ. ಆದ್ದರಿಂದ ಅವಿರುದ್ಧತ್ವವು ಉಪಾಧಿಯಾಗುವುದಿಲ್ಲ ಎಂಬುದಾಗಿ ಶಂಕಿಸಿದರೆ, ಅದು ಸಮಂಜಸವಲ್ಲ.

ಏಕೆಂದರೆ- ಈ ರೀತಿಯಾಗಿ ಯಾವಾಗ ಶಂಕಿಸಬಹುದಿತ್ತು? ಅನಿರ್ವಚನೀಯವಾದ ವಸ್ತು ಸಿದ್ಧವಾಗಿದ್ದರೆ ಆಗ ಈ ರೀತಿ ಶಂಕಿಸಬಹುದಿತ್ತು. ಆದರೆ ಈವರೆಗೂ ಅನಿರ್ವಚನೀಯವಾದ ವಸ್ತುವೇ ಸಿದ್ಧವಾಗಿಲ್ಲವಾದ್ದರಿಂದ, ಅನಿರ್ವಚನೀಯವಸ್ತು ಸಿದ್ಧವಾಗುವ ಮುನ್ನ ಸತ್ತ್ವಾಸತ್ತ್ವಗಳು ವಿರುದ್ಧವೇ (ಪರಸ್ಪರವಿರಹರೂಪವೇ) ಆಗಿದ್ದರಿಂದ, ಪಕ್ಷವಾದ ಸತ್ತ್ವಾಸತ್ತ್ವಗಳಲ್ಲಿ ವ್ಯತಿರೇಕಿಧರ್ಮತ್ವಹೇತು ಇದ್ದರೂ ಅವಿರುದ್ಧತ್ವ ಇಲ್ಲದ ಕಾರಣ ಅವಿರುದ್ಧತ್ವವು ಸಾಧನಾವ್ಯಾಪಕವೇ ಆಗುತ್ತದೆ. ಸಾಧ್ಯವ್ಯಾಪಕವಾಗಿ ಸಾಧನಾವ್ಯಾಪಕ ಆಗುವುದರಿಂದ ನಿಮ್ಮ ಅನುಮಾನಕ್ಕೆ ಅವಿರುದ್ಧತ್ವ ಉಪಾಧಿ ಬಂದೇ ಬರುತ್ತದೆ. ಸೋಪಾಧಿಕವಾದ್ದರಿಂದ ನಿಮ್ಮ ಅನುಮಾನ ಅಸಾಧಕ.

''ಸತ್ವಾಸತ್ತ್ವೇ ಏಕಧರ್ಮಿನಿಷ್ಠ... .'' ಎಂಬ ಅನುಮಾನ ದುಷ್ಟ(ಅಸಾಧಕ) ವಾದ್ದರಿಂದ, ಈ ಅನುಮಾನದಿಂದ ಅನಿರ್ವಚನೀಯತ್ವಸಾಧ್ಯವು ಸಾಮಾನ್ಯತಃನೂ ಪ್ರಸಿದ್ಧವಾಗದ ಕಾರಣ

''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್'' ಎಂಬ ನಿಮ್ಮ ಮೂಲ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾದೋಷ ಬಂದೇ ಬರುತ್ತದೆ. ಹೀಗೆ ಅಪ್ರಸಿದ್ಧವಿಶೇಷಣತಾದೋಷ ಬರುವುದರಿಂದ ಈ ಬಾಧ್ಯತ್ವಾನುಮಾನವು ಅನಿರ್ವಚನೀಯವಸ್ತುವಿಷಯದಲ್ಲಿ ಪ್ರಮಾಣವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

**ಟೀಕಾ : ತದಿದಮಪ್ರಸಿದ್ಧವಿಶೇಷಣತ್ವಂ ಪರಸಿದ್ಧಮಿತಿ ಜ್ಞಾತವ್ಯಮ್ ।**
**ಅನ್ಯತ್ರ ತದದೂಷಣತ್ವಸ್ಯಾಚಾರ್ಯೈರೇವೋಪಪಾದಿತತ್ವಾತ್ ।**
**ಸ್ವಮತೇನ ತು ಸ್ವವ್ಯಾಘಾತಾದಿದೂಷಣಮೂಹನೀಯಮ್ ।**

**ಅನುವಾದ :-** ಅನಿರ್ವಚನೀಯವಸ್ತುವನ್ನು ಸಾಧಿಸಲು ಉದಾಹರಿಸಿದ 'ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್' ಎಂಬ ಅನುಮಾನಕ್ಕೆ

**''ಅನುಮಾನಸ್ಯ ಚಾಪ್ರಸಿದ್ಧವಿಶೇಷಣಃ ಪಕ್ಷ:''**

ಎಂಬುದಾಗಿ ಅಪ್ರಸಿದ್ಧವಿಶೇಷಣತಾದೋಷವನ್ನು ಹೇಳಿ ನಿರಾಕರಿಸಿದರು ಆಚಾರ್ಯರು. ಬಾಧ್ಯತ್ವಾನುಮಾನಕ್ಕೆ ಈ ಅಪ್ರಸಿದ್ಧವಿಶೇಷಣತಾ ಎಂಬ ದೋಷವನ್ನು ಏನು ಹೇಳಿದ್ದಾರೆ ಅದು ಪರಮತರೀತ್ಯಾ ಹೇಳಿದ್ದು. ಅಂದರೆ ಅಪ್ರಸಿದ್ಧವಿಶೇಷಣತಾವನ್ನು ದೋಷವನ್ನಾಗಿ ಪರರು ಅಂಗೀಕರಿಸಿದ್ದರಿಂದ, ಪರಮತಪ್ರಕಾರವಾಗಿ ಅಪ್ರಸಿದ್ಧವಿಶೇಷಣತಾದೋಷ ಹೇಳಿದ್ದು ಎಂದು ತಿಳಿಯಬೇಕು.

ಈ ಅಪ್ರಸಿದ್ಧವಿಶೇಷಣತಾ ಸ್ವಮತರೀತ್ಯಾ ದೋಷವಲ್ಲವೇ ? ಎಂದರೆ,

**ಆಶ್ರಯವ್ಯಾಶ್ರಾಯಾಸಿದ್ಧೀ ಸಾಧ್ಯಾಸಿದ್ಧಿಶ್ಚ ದೂಷಣಮ್ ।**
**ಕೇಷಾಂಚಿನ್ನ ಚ ತೇ ದೋಷಾ ವ್ಯಾಪ್ತೌ ಸತ್ಯಾಂ ಕಥಂಚನ ।।**

ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹಾಗೂ

**''ಆಶ್ರಯಸಾಧ್ಯವ್ಯಧಿಕರಣಾಸಿದ್ಧಯೋ ನ ದೂಷಣಮ್''**

ಎಂಬುದಾಗಿ ಪ್ರಮಾಣಲಕ್ಷಣದಲ್ಲಿ ಆಚಾರ್ಯರೇ 'ಅಪ್ರಸಿದ್ಧವಿಶೇಷಣತಾ ದೋಷವಲ್ಲ' ಎಂದು ಸ್ಪಷ್ಟಪಡಿಸಿದ್ದಾರೆ. ಹಾಗಾಗಿ ಅಪ್ರಸಿದ್ಧವಿಶೇಷಣತಾ ಸ್ವಮತರೀತ್ಯಾ ಹೇಳಿದ ದೋಷವಲ್ಲ.

ಹಾಗಾದರೆ ಬಾಧ್ಯತ್ವಾನುಮಾನಕ್ಕೆ ಸ್ವಮತರೀತ್ಯಾ ದೋಷವೇನು ? ಎಂದರೆ, ಸ್ವಮತರೀತ್ಯಾ ಸ್ವವ್ಯಾಘಾತ ಮೊದಲಾದ ದೋಷಗಳನ್ನು ತಿಳಿಯಬೇಕು.

ಅದು ಹೇಗೆಂದರೆ - ಅನಿರ್ವಚನೀಯತ್ವ ಎಂದರೆ ನಿರ್ವಚನಾನರ್ಹತ್ವ ಎಂದು ಅರ್ಥವೋ ? ಅಥವಾ ಸದಸದ್ವಿಲಕ್ಷಣತ್ವ ಎಂದು ಅರ್ಥವೋ ?

ಅನಿರ್ವಚನೀಯತ್ವ ಎಂದರೆ ನಿರ್ವಚನಾನರ್ಹತ್ವ ಎಂದು ಹೇಳುವುದಾದರೆ ಆಗ 'ವಿವಾದಪದಂ' ಎಂಬ ಪದದಿಂದಲೇ ಶುಕ್ತಿರೂಪ್ಯವನ್ನು ನಿರ್ವಚನ ಮಾಡುತ್ತಿರುವುದರಿಂದ, 'ವಿವಾದಪದ'ಪದದಿಂದ ನಿರ್ವಚನ ಮಾಡಿ ಪುನಃ ನಿರ್ವಚನಾನರ್ಹ ಎನ್ನುವುದಾದರೆ ವ್ಯಾಘಾತದೋಷ ಬರುತ್ತದೆ. ಒಂದುವೇಳೆ ಶುಕ್ತಿರೂಪ್ಯವು ವಿವಾದಪದ ಎಂಬ ಪದದಿಂದಲೂ ನಿರ್ವಚನ ಮಾಡಲು ಅನರ್ಹ ಎಂದರೆ 'ವಿವಾದಪದಂ ಅನಿರ್ವಚನೀಯಂ.....' ಎಂದು ಅನುಮಾನವನ್ನೂ ಪ್ರಯೋಗಿಸದೇ ಮೂಕರಾಗಿ ಇರಬೇಕಾದೀತು !

ಅನಿರ್ವಚನೀಯತ್ವ ಎಂದರೆ ಸದಸದ್ವಿಲಕ್ಷಣತ್ವ ಎಂದು ಹೇಳುವುದಾದರೆ, ಸದ್ವಿಲಕ್ಷಣ ಎಂದು ಹೇಳಿದಾಗ ಅಸತ್ವವು ಸ್ವತಃ ಪ್ರಾಪ್ತವಾಗಿ ಪುನಃ ಅಸದ್ವಿಲಕ್ಷಣ ಎಂದು ಹೇಳಿದರೆ ವ್ಯಾಘಾತ ಬರುತ್ತದೆ. ಇದರಂತೆಯೇ ಅಸದ್ವಿಲಕ್ಷಣ ಎಂದು ಹೇಳಿದಾಗ ಸತ್ವವು ಸ್ವತಃ ಪ್ರಾಪ್ತವಾಗಿ ಪುನಃ ಸದ್ವಿಲಕ್ಷಣ ಎಂದು ಹೇಳಿದರೆ ವ್ಯಾಘಾತ ಬರುತ್ತದೆ. ಹೀಗೆ ಅನಿರ್ವಚನೀಯತ್ವ ಸಾಧ್ಯ ಮಾಡಿದರೆ ಸ್ವಮತರೀತ್ಯಾ ವ್ಯಾಘಾತದೋಷ ಬರುತ್ತದೆ ಎಂದು ತಿಳಿಯಬೇಕು.

ಆದಿಶಬ್ದದಿಂದ ಸಿದ್ಧಸಾಧನತಾದೋಷವನ್ನು ಸಂಗ್ರಹಿಸಬೇಕು. ಅನಿರ್ವಚನೀಯತ್ವ ಎಂದರೆ ಸದಸದ್ವಿಲಕ್ಷಣತ್ವ ಎಂದು ಹೇಳಿದಾಗ, ದೃಷ್ಟಾಂತವಾದ ಶುಕ್ತಿರಜತಾದಿಗಳಲ್ಲಿ ಸದ್ವಿಲಕ್ಷಣತ್ವ ಸಾಧ್ಯವು ನಮಗೆ ಸಿದ್ಧವೇ ಆಗಿರುವುದರಿಂದ ಸಿದ್ಧವಾದದ್ದನ್ನೇ ಸಾಧಿಸಿದರೆ ಸಿದ್ಧಸಾಧನತಾದೋಷ ಬರುತ್ತದೆ ಎಂಬುದಾಗಿ ಸಿದ್ಧಸಾಧನತಾ ದೋಷವನ್ನು ಆದಿಪದದಿಂದ ತೆಗೆದುಕೊಳ್ಳಬೇಕು.

**ಅವತಾರಿಕೆ :-** ಅನಿರ್ವಚನೀಯತ್ವವನ್ನೇ ಸಾಧ್ಯ ಮಾಡಿಕೊಂಡು ಬಾಧ್ಯತ್ವ-ಹೇತುವಿನಿಂದ ಅನಿರ್ವಚನೀಯವಸ್ತುವನ್ನು ಸಾಧಿಸಲು ಹೊರಟಾಗ ಅಪ್ರಸಿದ್ಧ-

ವಿಶೇಷಣತಾ ಮೊದಲಾದ ದೋಷಗಳನ್ನು ಹೇಳಿ ಅನುಮಾನವನ್ನು ನಿರಾಕರಿಸಿದರು. ಪ್ರಕೃತ ಬೇರೊಂದು ಅನುಮಾನದಿಂದ (ಅನಿರ್ವಚನೀಯತ್ವವನ್ನು ಸಾಧ್ಯ ಮಾಡದೇ ಮಿಥ್ಯಾತ್ವವನ್ನು ಸಾಧ್ಯ ಮಾಡಿಕೊಂಡು ಬಾಧ್ಯತ್ವ ಹೇತುವಿನಿಂದ) ಅನಿರ್ವಚನೀಯವಸ್ತುವನ್ನು ಸಾಧಿಸುತ್ತೇವೆ ಎಂದು ಶಂಕಿಸಿಕೊಂಡು, ಆ ಬೇರೊಂದು ಅನುಮಾನವನ್ನೂ ನಿರಾಕರಿಸುತ್ತಾರೆ -

**ಅನಿರ್ವಚನೀಯವಸ್ತುವಿಷಯದಲ್ಲಿ ಬಾಧ್ಯತ್ವಾನುಮಾನನಿರಾಕರಣೆ**

**ಟೀಕಾ : ಅಸ್ತು ತರ್ಹಿ ವಿವಾದಪದಂ ಮಿಥ್ಯಾ ಬಾಧ್ಯತ್ವಾದಿತ್ಯನುಮಾನಂ ಶುಕ್ತಿರಜತಾದೇರನಿರ್ವಚನೀಯತ್ವೇ ಮಾನಮ್ । ಮಿಥ್ಯಾತ್ವಸ್ಯಾಸತಿ ಪ್ರಸಿದ್ಧತ್ವೇನಾಪ್ರಸಿದ್ಧವಿಶೇಷಣತಾನವಕಾಶಾತ್ । ನ ಚೈವಮ-ನಿರ್ವಚನೀಯತ್ವಾಸಿದ್ಧಿಃ । ಸಮಾನಂ ಖಲು ಸತ್ಯವಿವೇಕಲಕ್ಷಣಂ ಮಿಥ್ಯಾತ್ವಮಸತ್ಯನಿರ್ವಚನೀಯೇ ಚ । ತಸ್ಮಿನ್ನನೇನಾನುಮಾನೇನ ಸಿದ್ಧೇ ನಿರ್ವಿಶೇಷಸ್ಯ ಸಾಮಾನ್ಯಸ್ಯ ಪ್ರತಿಪತ್ತುಮಶಕ್ಯತ್ವೇನ ನೇದಮಸತ್ ಪ್ರತೀತತ್ವಾದಿತ್ಯನೇನಾಸತ್ವೇ ಪ್ರತಿಕ್ಷಿಪ್ತೇಽನಿರ್ವಚ-ನೀಯತ್ವಸ್ಯ ಪ್ರಸಿದ್ಧೇರಿತ್ಯತ ಆಹ -**

**ಮೂಲಃ- ನ ಚ ಧೂಮತ್ವವನ್ಮಿಥ್ಯಾತ್ವಮಿತ್ಯುಭಯಸಂಪ್ರತಿಪನ್ನಂ ಸಾಮಾನ್ಯಮಸ್ತಿ ।**

**ಚಶಬ್ದೋಽನುಮಾನಾಂತರದೂಷಣಸಮುಚ್ಚಯಾರ್ಥಃ । ಇತಿ-ಶಬ್ದೋ ನಿರ್ದೇಶಾರ್ಥೋ ಮಿಥ್ಯಾತ್ವಾಖ್ಯಮಿತಿ ।**

**ಅನುವಾದ :-** ''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್'' ಎಂಬ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾದೋಷ ಬರುವುದರಿಂದ ಅನಿರ್ವಚನೀಯ -ವಸ್ತುವಿಷಯದಲ್ಲಿ ಈ ಅನುಮಾನವು ಪ್ರಮಾಣವಾಗದೇ ಹೋದರೂ ಸಹ, **'ವಿವಾದಪದಂ ಮಿಥ್ಯಾ ಬಾಧ್ಯತ್ವಾತ್'** (ವಿವಾದಗ್ರಸ್ತವಾದ ಶುಕ್ತಿರಜತಾದಿಗಳು, ಮಿಥ್ಯೆಯಾಗಿವೆ, 'ನೇದಂ ರಜತಂ' ಎಂಬ ಬಾಧಜ್ಞಾನದಿಂದ ಬಾಧ್ಯವಾದ್ದರಿಂದ)

ಎಂಬ ಅನುಮಾನವು 'ಶುಕ್ತಿರಜತಾದಿಗಳು ಅನಿರ್ವಚನೀಯವಾಗಿವೆ' ಎಂಬ ವಿಷಯದಲ್ಲಿ ಪ್ರಮಾಣವಾಗುತ್ತದೆ.

ಹಿಂದಿನ ಅನುಮಾನದಲ್ಲಿ ಅನಿರ್ವಚನೀಯತ್ವವನ್ನೇ ಸಾಧ್ಯ ಮಾಡಿದ್ದರಿಂದ ಅನುಮಾನಕ್ಕಿಂತಲೂ ಪೂರ್ವದಲ್ಲಿ ಅನಿರ್ವಚನೀಯತ್ವವು ಸಿದ್ಧವಾಗದ ಕಾರಣ ಅಪ್ರಸಿದ್ಧವಿಶೇಷಣತಾದೋಷ ಬರುತ್ತದೆ ಎಂಬುದಾಗಿ ಶಂಕಿಸಿದಂತೆ, ಈ ಅನುಮಾನದಲ್ಲಿ ಅಪ್ರಸಿದ್ಧವಿಶೇಷಣತಾದೋಷಶಂಕೆಗೆ ಅವಕಾಶವಿಲ್ಲ. ಏಕೆಂದರೆ- ಈ ಅನುಮಾನದಲ್ಲಿ ಅನಿರ್ವಚನೀಯತ್ವವನ್ನು ಸಾಧ್ಯ ಮಾಡದೇ ಮಿಥ್ಯಾತ್ವವನ್ನು ಸಾಧ್ಯವನ್ನಾಗಿ ಮಾಡಿದ್ದೇವೆ. ಆ ಸಾಧ್ಯವಾದ ಮಿಥ್ಯಾತ್ವವು (ಸದ್ವಿವಿಕ್ತತ್ವವು) ಪ್ರತಿವಾದಿಗಳಾದ ನಿಮ್ಮ ಮತಪ್ರಕಾರ ಅತ್ಯಂತಾಸತ್ ಆದ ಶಶವಿಷಾಣಾದಿಗಳಲ್ಲಿ ಪ್ರಸಿದ್ಧ(ಅಂಗೀಕೃತ)ವೇ ಆಗಿದ್ದರಿಂದ ಅಪ್ರಸಿದ್ಧ-ವಿಶೇಷಣತಾದೋಷಕ್ಕೆ ಅವಕಾಶವಿಲ್ಲ.

ಹಾಗಾದರೆ ಇಲ್ಲಿ ಮಿಥ್ಯಾತ್ವವನ್ನು ಸಾಧ್ಯ ಮಾಡಿದ್ದರಿಂದ ಶುಕ್ತಿರಜತಾದಿಗಳು ಮಿಥ್ಯೆಯಾಗಿವೆ ಎಂದಷ್ಟೇ ಈ ಅನುಮಾನದಿಂದ ಸಿದ್ಧವಾಗುತ್ತದೆ, ಹೊರತು ಶುಕ್ತಿರಜತಾದಿಗಳು ಅನಿರ್ವಚನೀಯವಾಗಿವೆ ಎಂದು ಸಿದ್ಧವಾಗುವುದಿಲ್ಲ ಅಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಶುಕ್ತಿರಜತಾದಿಗಳಿಗೆ ಅನಿರ್ವಚನೀಯತ್ವವು ಪರಿಶೇಷಪ್ರಮಾಣದಿಂದ ಸಿದ್ಧವಾಗುತ್ತದೆ. ಅದು ಹೇಗೆಂದರೆ :- ಸತ್ಯವಿವೇಕ ಸದ್ವಿವಿಕ್ತತ್ವ (ಸತ್ಪದಾರ್ಥಭಿನ್ನತ್ವ) ರೂಪವಾದ ಮಿಥ್ಯಾತ್ವವು ಅಸತ್ ಹಾಗೂ ಅನಿರ್ವಚನೀಯ ಎರಡರಲ್ಲಿಯೂ ಅಂಗೀಕೃತವಾಗಿದೆ. ಅರ್ಥಾತ್ ಮಿಥ್ಯಾತ್ವವು ಅಸತ್-ಅನಿರ್ವಚನೀಯ ಎರಡರಲ್ಲಿಯೂ ಸಾಧಾರಣ(ಸಮಾನ)ವಾಗಿದೆ.




'ವಿವಾದಪದಂ ಮಿಥ್ಯಾ ಬಾಧ್ಯತ್ವಾತ್' ಎಂಬ ಈ ಅನುಮಾನದಿಂದ ಅಸತ್-ಅನಿರ್ವಚನೀಯ ಎರಡರಲ್ಲಿ ಸಾಧಾರಣವಾದ ಮಿಥ್ಯಾತ್ವವು ಶುಕ್ತಿರೂಪ್ಯಾದಿಗಳಿಗೆ ಸಿದ್ಧವಾಯಿತೆಂದರೆ, ಧರ್ಮಿವಿಶೇಷವಿಲ್ಲದೇ ಸಾಧಾರಣ-ಧರ್ಮ ಇರಲು ಸಾಧ್ಯವಿಲ್ಲವಾದ್ದರಿಂದ (ಸಾಧಾರಣಧರ್ಮವು ಯಾವುದಾದರೂ ಒಂದು ಧರ್ಮಿಯಲ್ಲಿ ಇರಲೇಬೇಕಾದ್ದರಿಂದ) ಶುಕ್ತಿರೂಪ್ಯಾದಿಗಳು ಮಿಥ್ಯೆಯಾಗಿವೆ ಎಂದರೆ ಒಂದು ಅಸತ್ ಆಗಬೇಕು ಅಥವಾ ಅನಿರ್ವಚನೀಯವಾಗಬೇಕು.

''ಇದಂ (ಶುಕ್ತಿರೂಪ್ಯಾದಿಕಂ) ನ ಅಸತ್ ಪ್ರತೀತತ್ವಾತ್'' ಎಂಬ ಅನುಮಾನದಿಂದ 'ಶುಕ್ತಿರೂಪ್ಯಾದಿಗಳು ಪ್ರತೀತವಾಗುವ ಕಾರಣ ಅಸತ್ ಅಲ್ಲ' ಎಂಬುದಾಗಿ ಶುಕ್ತಿರೂಪ್ಯಾದಿಗಳಿಗೆ ಅಸತ್ವ ಎಂಬ ಒಂದುಕೋಟಿ ನಿಷಿದ್ಧವಾದಾಗ ಪರಿಶೇಷತಃ ಅನಿರ್ವಚನೀಯತ್ವವೇ ಸಿದ್ಧಿಸುತ್ತದೆ.

ಆದ್ದರಿಂದ ಶುಕ್ತಿರೂಪ್ಯಾದಿಗಳು ಅನಿರ್ವಚನೀಯವಾಗಿವೆ ಎಂಬ ವಿಷಯದಲ್ಲಿ ಪರಿಶೇಷದ ಮೂಲಕ '**ವಿವಾದಪದಂ ಮಿಥ್ಯಾ ಬಾಧ್ಯತ್ವಾತ್**' ಎಂಬ ಅನುಮಾನ ಪ್ರಮಾಣವಾಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದಕ್ಕಾಗಿ ಆಚಾರ್ಯರು ಹೇಳುತ್ತಾರೆ (ಅದನ್ನು ಆಚಾರ್ಯರು ನಿರಾಕರಿಸುತ್ತಾರೆ) -

**ಮೂಲಃ ನ ಚ ಧೂಮತ್ವವನ್ಮಿಥ್ಯಾತ್ವಮಿತ್ಯುಭಯಸಂಪ್ರತಿಪನ್ನಂ ಸಾಮಾನ್ಯಮಸ್ತಿ ।**

**ಮೂಲಾರ್ಥ :-** ಭಾಷ್ಪಾರೋಪಿತಧೂಮ-ಮಹಾನಸೀಯಧೂಮ ಇವುಗಳಲ್ಲಿ ಅನುಗತವಾದ, ಇಬ್ಬರಿಗೂ ಸಮ್ಮತವಾದ ಧೂಮತ್ವ ಎಂಬ ಧರ್ಮ ಹೇಗೆ ಇಲ್ಲವೋ ಅದರಂತೆಯೇ ಅಸತ್-ಅನಿರ್ವಚನೀಯ ಎರಡರಲ್ಲಿಯೂ ಅನುಗತವಾದ, ಇಬ್ಬರಿಗೂ ಸಮ್ಮತವಾದ ಮಿಥ್ಯಾತ್ವ ಎಂಬ ಧರ್ಮವೂ ಇಲ್ಲ.

'ವಿವಾದಪದಂ ಅನಿರ್ವಚನೀಯಂ ಬಾಧ್ಯಾತ್ವಾತ್' ಎಂಬ ಹಿಂದಿನ ಅನುಮಾನ ಮಾತ್ರ ದುಷ್ಟ ಎಂದಲ್ಲ. ಕಿಂತು 'ವಿವಾದಪದಂ ಮಿಥ್ಯಾ ಬಾಧ್ಯತ್ವಾತ್' ಎಂಬ ಈ ಅನುಮಾನವೂ ದುಷ್ಟವೇ ಆಗಿದೆ ಎಂಬುದನ್ನು ಸಮುಚ್ಚಯ ಮಾಡುವುದಕ್ಕಾಗಿ 'ನ ಚ ಧೂಮತ್ವವತ್ ....' ಎಂಬುದಾಗಿ ಮೂಲದಲ್ಲಿ 'ಚ'ಶಬ್ದ ಇಟ್ಟಿದ್ದಾರೆ ಆಚಾರ್ಯರು.

'ಮಿಥ್ಯಾತ್ವಮಿತಿ' ಎಂಬುದಾಗಿ ಮೂಲದಲ್ಲಿ 'ಇತಿ'ಶಬ್ದವು ನಿರ್ದೇಶಾರ್ಥ-ವಾಗಿದೆ. 'ಮಿಥ್ಯಾತ್ವ ಎಂಬ ಸಾಧಾರಣಧರ್ಮ' ಎಂಬುದಾಗಿ ನಿರ್ದೇಶ ಮಾಡುತ್ತಿದ್ದಾರೆ ಎಂದರ್ಥ.

**ಅವತಾರಿಕೆ :-** ಆಚಾರ್ಯರ (ಮೂಲದ) ಅಭಿಪ್ರಾಯವನ್ನು ಟೀಕಾಕೃತ್ಪಾದರು ವಿವರಿಸುತ್ತಾರೆ -

**ಟೀಕಾ : ಸ್ಯಾದೇತದೇವಮ್ । ಯದಿ ಮಿಥ್ಯಾತ್ವಂ ನಾಮ ಸಾಮಾನ್ಯಮ-ಸದನಿರ್ವಚನೀಯಯೋರುಭಯವಾದಿಸಂಪ್ರತಿಪನ್ನಂ ಸ್ಯಾತ್ ।**

**ನೈತದಸ್ತಿ । ಪ್ರಾಗಿತೋಽನಿರ್ವಚನೀಯಸ್ಯೈವಾಪ್ರಸಿದ್ಧತ್ವಾತ್ । ನ ಚಾಶ್ರಯಾಸಿದ್ಧೌ ಸಾಮಾನ್ಯಂ ಸಿದ್ಧಂ ಭವತಿ । ಭಾಷ್ಪಾರೋಪಿತ-ಧೂಮಸ್ಯೈವಾಪ್ರಸಿದ್ಧತ್ವೇನ ತತ್ರ ಧೂಮಾಂತರೇ ಚ ಧೂಮತ್ವ-ಸಾಮಾನ್ಯಸಿದ್ಧಿವತ್ । ಅನ್ಯಥಾ ತತ್ರಾಪಿ ಪ್ರಸಜ್ಯೇತ । ಅತೋ ಮಿಥ್ಯಾತ್ವೇ ಸಾಧಿತೇಽಸತ್ತ್ವಸ್ಯೈವ ಪ್ರತಿಪತ್ತೌ ಸತ್ತ್ವಾಂ ಪುನಸ್ತನ್ನಿಷೇಧೇ ಸತ್ಪ್ರತಿಪಕ್ಷತಯಾ ದ್ವಯೋರಪ್ರಾಮಾಣ್ಯಾಪತ್ತಿಃ । ಅಸತ್ಪ್ರತೀತೇರುಪಪಾದಯಿಷ್ಯಮಾಣತ್ವಾದಸತ್ತ್ವಪ್ರತಿಕ್ಷೇಪಾ-ನುಪಪತ್ತಿಶ್ಚ ।**

**ಅನುವಾದ :-** ಈ ರೀತಿಯಾಗಿ ಪರಿಶೇಷದ ಮೂಲಕ 'ವಿವಾದಪದಂ ಮಿಥ್ಯಾ ಬಾಧ್ಯತ್ವಾತ್' ಎಂಬ ಅನುಮಾನದಿಂದ ಶುಕ್ತಿರೂಪ್ಯಾದಿಗಳಿಗೆ ಅನಿರ್ವಚನೀಯತ್ವವು ಸಿದ್ಧವಾಗುತ್ತಿತ್ತು. ಯಾವಾಗ ? ಅಸತ್-ಅನಿರ್ವಚನೀಯ ಎರಡರಲ್ಲಿ ಅನುಗತವಾದ, ಉಭಯವಾದಿಸಮ್ಮತವಾದ ಮಿಥ್ಯಾತ್ವ ಎಂಬ ಸಾಧಾರಣಧರ್ಮ ಇರುತ್ತಿದ್ದರೆ ಆಗ ನೀವು ಹೇಳಿದಂತೆ ಬಾಧ್ಯತ್ವಾನುಮಾನದಿಂದ ಸಾಧಾರಣವಾದ ಮಿಥ್ಯಾತ್ವ ಸಿದ್ಧವಾಗಿ ಪ್ರತೀತತ್ವಯುಕ್ತಿಯಿಂದ ಅಸತ್ವ ನಿಷಿದ್ಧವಾದಾಗ ಪರಿಶೇಷತಃ ಅನಿರ್ವಚನೀಯತ್ವವು ಸಿದ್ಧವಾಗಬಹುದಿತ್ತು. ಆದರೆ ಅಸತ್-ಅನಿರ್ವಚನೀಯ ಎರಡರಲ್ಲಿ ಅನುಗತವಾದ ಮಿಥ್ಯಾತ್ವ ಎಂಬ ಸಾಧಾರಣಧರ್ಮವೇ ಇಲ್ಲ. ಏಕೆಂದರೆ, ಎರಡರಲ್ಲಿ ಅನುಗತವಾದ ಸಾಧಾರಣಧರ್ಮ ಇರಬೇಕಾದರೆ ಆ ಸಾಧಾರಣಧರ್ಮಕ್ಕೆ ಆಶ್ರಯವಾದ ಎರಡು ಧರ್ಮಿಗಳು ಇರಬೇಕು. ಪ್ರಕೃತ ಅಸತ್-ಅನಿರ್ವಚನೀಯ ಎರಡು ಧರ್ಮಿಗಳೂ ಇರಬೇಕು. ಆದರೆ ಈ ಅನುಮಾನಕ್ಕಿಂತಲೂ ಪೂರ್ವದಲ್ಲಿ ಅನಿರ್ವಚನೀಯವಸ್ತುವೇ ಸಿದ್ಧವಾಗಿಲ್ಲವಾದ್ದರಿಂದ, ಮಿಥ್ಯಾತ್ವಕ್ಕೆ ಆಶ್ರಯ-ವಾಗಬೇಕಾದ ಅಸತ್-ಅನಿರ್ವಚನೀಯ ಎಂಬ ಎರಡು ಧರ್ಮಿಗಳೇ ಇಲ್ಲ. ಧರ್ಮಿಗಳೇ ಇಲ್ಲದೇ ಸಾಧಾರಣಧರ್ಮ ಸಿದ್ಧವಾಗಲು ಸಾಧ್ಯವಿಲ್ಲ.

ಭಾಷ್ಪಾರೋಪಿತಧೂಮ-ಮಹಾನಸೀಯಧೂಮ ಇವುಗಳಲ್ಲಿ ಅನುಗತವಾದ ಧೂಮತ್ವ ಎಂಬ ಸಾಧಾರಣಧರ್ಮವೇ ಇಲ್ಲ. ಯಾಕೆ ? ಅಲ್ಲಿ ಧೂಮತ್ವ ಎಂಬ ಸಾಧಾರಣಧರ್ಮಕ್ಕೆ ಆಶ್ರಯವಾಗಬೇಕಾದ (ಮಹಾನಸೀಯಧೂಮ ಪ್ರಸಿದ್ಧವಾಗಿದ್ದರೂ) ಭಾಷ್ಪಾರೋಪಿತಧೂಮ ಎಂಬ ಧರ್ಮಿಯೇ ಅಪ್ರಸಿದ್ಧ-ವಾದ್ದರಿಂದ, ಭಾಷ್ಪಾರೋಪಿತಧೂಮ-ಮಹಾನಸೀಯಧೂಮಗಳಲ್ಲಿ

ಸಾಧಾರಣವಾದ ಧೂಮತ್ವ ಇಲ್ಲ. ಅದರಂತೆಯೇ ಪ್ರಕೃತ ಮಿಥ್ಯಾತ್ವಕ್ಕೆ ಆಶ್ರಯವಾಗಬೇಕಾದ (ಅಸತ್ ಪ್ರಸಿದ್ಧವಾಗಿದ್ದರೂ) ಅನಿರ್ವಚನೀಯ ಎಂಬ ಧರ್ಮಿಯೇ ಅಪ್ರಸಿದ್ಧವಾದ್ದರಿಂದ, ಅಸತ್-ಅನಿರ್ವಚನೀಯಗಳಲ್ಲಿ ಅನುಗತವಾದ ಮಿಥ್ಯಾತ್ವ ಎಂಬ ಸಾಧಾರಣಧರ್ಮವೇ ಇಲ್ಲ.

ಧರ್ಮಿ ಅಪ್ರಸಿದ್ಧವಾದರೂ ಸಾಧಾರಣಧರ್ಮ ಇರಬಹುದು ಎನ್ನುವುದಾದರೆ ಭಾಷ್ಪಾರೋಪಿತಧೂಮ ಅಪ್ರಸಿದ್ಧವಾದರೂ ಭಾಷ್ಪಾರೋಪಿತಧೂಮ-ಮಹಾನಸೀಯಧೂಮಗಳಲ್ಲಿ ಅನುಗತವಾದ ಧೂಮತ್ವ ಎಂಬ ಸಾಧಾರಣಧರ್ಮವನ್ನು ಅಂಗೀಕರಿಸಬೇಕಾದ ಅತಿಪ್ರಸಂಗ ಬರುತ್ತದೆ.

ಆದ್ದರಿಂದ ಮಿಥ್ಯಾತ್ವವು ಅಸತ್-ಅನಿರ್ವಚನೀಯಗಳಲ್ಲಿ ಅನುಗತ ಸಾಧಾರಣಧರ್ಮ ಅಲ್ಲ ಎಂದಮೇಲೆ, ಕೇವಲ ಅಸತ್‌ನಲ್ಲಿ ಮಾತ್ರ ಇರುವ ಧರ್ಮ ಎಂದೇ ಸಿದ್ಧವಾಗಿ, ''ವಿವಾದಪದಂ ಮಿಥ್ಯಾ ಬಾಧ್ಯತ್ವಾತ್'' ಎಂಬ ಅನುಮಾನದಿಂದ ಶುಕ್ತಿರೂಪ್ಯಾದಿಗಳಿಗೆ ಮಿಥ್ಯಾತ್ವ ಸಾಧಿಸಿದರೆ ಅಸತ್ವವನ್ನೇ ಸಾಧಿಸಿದಂತಾಗುತ್ತದೆ. ''ವಿವಾದಪದಂ ಅಸತ್ ಬಾಧ್ಯತ್ವಾತ್'' ಎಂಬುದಾಗಿ ಅಸತ್ವವನ್ನು ಸಾಧಿಸುವಾಗ ''ವಿವಾದಪದಂ ನ ಅಸತ್ ಪ್ರತೀತತ್ವಾತ್'' ಎಂಬುದಾಗಿ ಮತ್ತೆ ಪ್ರತೀತತ್ವಯುಕ್ತಿಯಿಂದ ಅಸತ್ವವನ್ನು ನಿಷೇಧಿಸಿದರೆ, ''ವಿವಾದಪದಂ ಮಿಥ್ಯಾ(ಅಸತ್) ಬಾಧ್ಯತ್ವಾತ್'' ಎಂಬ ಅನುಮಾನಕ್ಕೆ ''ವಿವಾದಪದಂ ನ ಅಸತ್ ಪ್ರತೀತತ್ವಾತ್'' ಎಂಬ ಅನುಮಾನವು ಪ್ರತಿಪಕ್ಷಾನುಮಾನವಾಗುವುದರಿಂದ ಬಾಧ್ಯತ್ವಾನುಮಾನವು ಸತ್ಪ್ರತಿಪಕ್ಷವಾಗುತ್ತದೆ. ಇದೇ ರೀತಿ ಬಾಧ್ಯತ್ವಾನುಮಾನಕ್ಕೆ ಪ್ರತೀತತ್ವಾನುಮಾನ ಪ್ರತಿಪಕ್ಷಾನುಮಾನವಾದರೆ, ಪ್ರತೀತತ್ವಾನುಮಾನಕ್ಕೆ ಬಾಧ್ಯತ್ವಾನುಮಾನ ಪ್ರತಿಪಕ್ಷಾನುಮಾನವಾಗುತ್ತದೆ. ಹೀಗೆ ಎರಡು ಅನುಮಾನಗಳೂ ಸತ್ಪ್ರತಿಪಕ್ಷಾನುಮಾನವಾಗುವುದರಿಂದ ಎರಡು ಅನುಮಾನಗಳೂ ಅಪ್ರಮಾಣವಾಗಬೇಕಾಗುತ್ತದೆ. ಆದ್ದರಿಂದ ಬಾಧ್ಯತ್ವಾನುಮಾನದಿಂದ ಶುಕ್ತಿರೂಪ್ಯಾದಿಗಳಿಗೆ ಅನಿರ್ವಚನೀಯತ್ವವನ್ನು ಸಾಧಿಸಲು ಬರುವುದಿಲ್ಲ.

ಮತ್ತು, ಮಿಥ್ಯಾತ್ವವು ಅಸತ್-ಅನಿರ್ವಚನೀಯಗಳಲ್ಲಿ ಸಾಧಾರಣಧರ್ಮ ಎಂದಾದಾಗ ''ವಿವಾದಪದಂ ನ ಅಸತ್ ಪ್ರತೀತತ್ವಾತ್'' ಎಂದು ಪ್ರತೀತತ್ವಯುಕ್ತಿಯಿಂದ ಅಸತ್ವವನ್ನು ನಿಷೇಧಿಸಿದಾಗ ಅನಿರ್ವಚನೀಯತ್ವವೇ ಸಿದ್ಧಿಸುತ್ತದೆ

ಎಂಬುದಾಗಿ ನೀವು ಹೇಳುವುದೂ ಸರಿಯಲ್ಲ. ಅರ್ಥಾತ್ ಪ್ರತೀತತ್ವಯುಕ್ತಿಯಿಂದ ಅಸತ್ವವನ್ನು ನಿಷೇಧಿಸುವ ಅಭಿಪ್ರಾಯವೇ ಸರಿಯಲ್ಲ. ಏಕೆಂದರೆ- ''ಅಸಚ್ಚೇನ್ನ ಪ್ರತೀಯೇತ'' ಅಸತ್‌ಗೆ ಪ್ರತೀತಿ ಇಲ್ಲ ಎಂಬ ನಿಯಮವನ್ನು ಇಟ್ಟುಕೊಂಡು, ಶುಕ್ತಿರೂಪ್ಯಾದಿಗಳು ಪ್ರತೀತವಾಗುತ್ತಿವೆಯಾದ್ದರಿಂದ ಅಸತ್ ಅಲ್ಲ ಎಂಬುದಾಗಿ ಅಭಿಪ್ರಾಯಪಡುತ್ತಿದ್ದೀರಿ. ಆದರೆ ''ಅಸಚ್ಚೇನ್ನ ಪ್ರತೀಯೇತ'' (ಅಸತ್‌ಗೆ ಪ್ರತೀತಿ ಇಲ್ಲ) ಎಂಬ ನಿಮ್ಮ ನಿಯಮವೇ ಸರಿಯಲ್ಲ. ಮುಂದೆ -

**''ಅಸತಃ ಪ್ರತೀತಿಂ ವಿನಾಽಸದ್ವೈಲಕ್ಷಣ್ಯಜ್ಞಾನಾನುಪಪತ್ತೇಃ''**

ಎಂಬುದಾಗಿ ಅಸತ್‌ಗೂ ಪ್ರತೀತಿಯನ್ನು ಸಮರ್ಥಿಸುತ್ತಿರುವುದರಿಂದ, ಪ್ರತೀತವಾಗುವ ಕಾರಣ ಅಸತ್ ಅಲ್ಲ ಎಂಬುದಾಗಿ ಪ್ರತೀತತ್ವಯುಕ್ತಿಯಿಂದ ಅಸತ್ವವನ್ನು ನಿಷೇಧಿಸುವುದೂ ಅನುಪಪನ್ನವಾಗಿದೆ.

ಆದ್ದರಿಂದ ''ವಿವಾದಪದಂ ಮಿಥ್ಯಾ ಬಾಧ್ಯತ್ವಾತ್'' ಎಂಬ ಅನುಮಾನವೂ ಅನಿರ್ವಚನೀಯವಸ್ತುವಿಷಯದಲ್ಲಿ ಪ್ರಮಾಣವಾಗುವುದಿಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ಅಸತ್-ಅನಿರ್ವಚನೀಯಗಳಲ್ಲಿ ಅನುಗತವಾದ ಮಿಥ್ಯಾತ್ವ ಎಂಬ ಸಾಧಾರಣಧರ್ಮವೇ ಇಲ್ಲವಾದ್ದರಿಂದ 'ವಿವಾದಪದಂ ಮಿಥ್ಯಾ' ಎಂಬುದಾಗಿ ಶುಕ್ತಿರೂಪ್ಯಾದಿಗಳಿಗೆ ಮಿಥ್ಯಾತ್ವವನ್ನು ಹೇಳಿದರೆ ಅಸತ್ವವನ್ನೇ ಹೇಳಿದಂತಾಗಿ **''ವಿವಾದಪದಂ ನ ಅಸತ್ ಪ್ರತೀತತ್ವಾತ್''** ಎಂಬುದಾಗಿ ಪುನಃ ಅಸತ್ವವನ್ನು ನಿಷೇಧಿಸಿದರೆ ಸತ್ಪ್ರತಿಪಕ್ಷವಾಗುವುದರಿಂದ, ಬಾಧ್ಯತ್ವಹೇತುವಿನಿಂದ ಅನಿರ್ವಚನೀಯ(ತ್ವವು)ವಸ್ತು ಸಿದ್ಧವಾಗುವುದಿಲ್ಲ ಎಂಬ ನಮ್ಮ ಅಭಿಪ್ರಾಯದ ಮೇಲೆ ಅತಿಪ್ರಸಂಗವನ್ನು ಶಂಕಿಸುತ್ತಾರೆ -

**ಟೀಕಾ : ನನು ಸರ್ವಜ್ಞಾಸರ್ವಜ್ಞಕರ್ತ್ರೋಃ ಕರ್ತೃತ್ವಸಾಮಾನ್ಯಸ್ಯ ಪ್ರಾಗಸಿದ್ಧೇಃಕಾರ್ಯತ್ವಾದಿನಾಕ್ಷಿತ್ಯಾದಿಕರ್ತೃಮಾತ್ರಸಿದ್ಧಾವೀಶ್ವರ-ಸಿದ್ಧಿರೇವಂ ಸತಿ ದುರ್ಲಭಾ ಸ್ಯಾತ್ । ನ ಸ್ಯಾತ್ । ನ ಹಿ ಕ್ಷಿತ್ಯಾದಿ-ಕರ್ತೃತಾವ್ಯತಿರಿಕ್ತಮೀಶ್ವರತ್ವಂ ಸಿಷಾಧಯಿಷಿತಮ್ । ಯದರ್ಥಂ ಪುನರಾರಂಭೋ ಭವಿಷ್ಯತಿ । ಸರ್ವಜ್ಞತ್ವಾದೇರಪಿ ತದಂತರ್ಭಾವಾತ್ ।**

**ಅನುವಾದ :-** ನೀವು ಈ ರೀತಿಯಾಗಿ ಹೇಳುವುದಾದರೆ ಈಶ್ವರನೂ ಸಿದ್ಧನಾಗದೇ ಹೋಗಬೇಕಾದ ಅತಿಪ್ರಸಂಗ ಬರುತ್ತದೆ. ಹೇಗೆಂದರೆ -

**''ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್''**

ಎಂಬ ಅನುಮಾನದಿಂದ ಕ್ಷಿತ್ಯಾದಿಗಳಿಗೆ ಒಬ್ಬ ಕರ್ತಾ ಇದ್ದಾನೆ ಎಂದಷ್ಟೇ ಸಿದ್ಧವಾದಾಗ, ಕರ್ತೃತ್ವವು ಸರ್ವಜ್ಞಕರ್ತಾ-ಅಸರ್ವಜ್ಞಕರ್ತಾ ಇಬ್ಬರಲ್ಲಿಯೂ ಅನುಗತವಾದ್ದರಿಂದ (ಈಶ್ವರರೂಪಸರ್ವಜ್ಞಕರ್ತೃವಿನಲ್ಲಿಯೂ ಕರ್ತೃತ್ವವಿದೆ, ಕುಲಾಲಾದಿ ಅಸರ್ವಜ್ಞಕರ್ತೃವಿನಲ್ಲಿಯೂ ಕರ್ತೃತ್ವವಿದೆ, ಹೀಗೆ ಕರ್ತೃತ್ವವು ಸರ್ವಜ್ಞಕರ್ತಾ-ಅಸರ್ವಜ್ಞಕರ್ತಾ ಇಬ್ಬರಲ್ಲಿಯೂ ಸಾಧಾರಣವಾಗಿದ್ದರಿಂದ) ಈ ಕ್ಷಿತ್ಯಾದಿಕರ್ತಾ ಸರ್ವಜ್ಞನೋ ? ಅಸರ್ವಜ್ಞನೋ ? ಎಂದು ವಿವಾದ ಉಂಟಾದಾಗ,

**''ಅಯಂ ಕರ್ತಾ, ಸರ್ವಜ್ಞಃ (ನ ಅಸರ್ವಜ್ಞಃ), ಕ್ಷಿತ್ಯಾದಿಸರ್ವಕರ್ತೃತ್ವಾತ್, ವ್ಯತಿರೇಕೇಣ ದೇವದತ್ತವತ್''**

ಎಂಬುದಾಗಿ ಪರಿಶೇಷದಿಂದ ಆ ಕ್ಷಿತ್ಯಾದಿಕರ್ತಾ ಈಶ್ವರ ಸರ್ವಜ್ಞನಾಗಿದ್ದಾನೆ ಎಂದು ಈ ರೀತಿಯಾಗಿ ಈಶ್ವರಸಿದ್ಧಿಯನ್ನು ಹೇಳಬೇಕು. ಆದರೆ ಈ ರೀತಿಯಾಗಿ ಹೇಳಲು ಬರುವುದಿಲ್ಲ. ಏಕೆಂದರೆ - ಈಶ್ವರ ಸಿದ್ಧನಾಗುವುದಕ್ಕಿಂತ ಪೂರ್ವದಲ್ಲಿ ಸರ್ವಜ್ಞಕರ್ತೃವೇ ಅಪ್ರಸಿದ್ಧನಾಗಿದ್ದಾನೆಯಾದ್ದರಿಂದ ಕರ್ತೃತ್ವವು ಸರ್ವಜ್ಞಕರ್ತಾ -ಅಸರ್ವಜ್ಞಕರ್ತಾ ಇಬ್ಬರಲ್ಲಿ ಅನುಗತವೇ ಆಗಿಲ್ಲ. (ಸರ್ವಜ್ಞಕರ್ತಾ- ಅಸರ್ವಜ್ಞಕರ್ತಾ ಇಬ್ಬರಲ್ಲಿ ಅನುಗತವಾದ ಕರ್ತೃತ್ವ ಸಾಮಾನ್ಯವೇ ಸಿದ್ಧವಾಗಿಲ್ಲ.) ಅಂದಮೇಲೆ

**''ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್''** ಎಂಬ ಅನುಮಾನದಿಂದ ಕ್ಷಿತ್ಯಾದಿಗಳಿಗೆ ಒಬ್ಬ ಕರ್ತಾ ಇದ್ದಾನೆ ಎಂದು ಹೇಳಿದರೆ, ಅಸರ್ವಜ್ಞಕರ್ತೃವೇ ತೋರುವುದರಿಂದ ಪುನಃ **''ಅಯಂ ಕರ್ತಾ, ನ ಅಸರ್ವಜ್ಞಃ, ಕ್ಷಿತ್ಯಾದಿ-ಸರ್ವಕರ್ತೃತ್ವಾತ್''** ಎಂಬುದಾಗಿ ಆ ಅಸರ್ವಜ್ಞತ್ವವನ್ನು ನಿಷೇಧಿಸಿದರೆ ಸರ್ವಜ್ಞ ಈಶ್ವರಸಾಧಕವಾದ ನಿಮ್ಮ ಅನುಮಾನವೂ ಸತ್ಪ್ರತಿಪಕ್ಷವಾಗಬೇಕಾಗುತ್ತದೆ (ಈ ರೀತಿಯಾಗಿ ಸರ್ವಜ್ಞ ಈಶ್ವರಸಿದ್ಧಿಯೂ ಆಗದೇ ಹೋಗಬೇಕಾಗುತ್ತದೆ) ಅಲ್ಲವೇ?

ಈ ರೀತಿಯಾಗಿ ಅತಿಪ್ರಸಂಗಶಂಕೆ ಮಾಡಿದರೆ, ಅದು ಸರಿಯಲ್ಲ. ಅನಿರ್ವಚನೀಯವಸ್ತುಸಿದ್ಧಿ - ಈಶ್ವರಸಿದ್ಧಿ ಎರಡರಲ್ಲಿಯೂ ಪ್ರಮೇಯಸಾಮ್ಯ ಇರುತ್ತಿದ್ದರೆ ಆಗ ಈ ರೀತಿಯಾಗಿ ಪ್ರತಿಬಂಧಿ ಹೇಳುವುದು ಯುಕ್ತವಾಗುತ್ತಿತ್ತು. ಆದರೆ ಎರಡರಲ್ಲಿ ಪ್ರಮೇಯಸಾಮ್ಯ ಇಲ್ಲ. ಅರ್ಥಾತ್ ಅನಿರ್ವಚನೀಯ-ವಸ್ತುಸಿದ್ಧಿ-ಈಶ್ವರಸಿದ್ಧಿ ಎರಡರಲ್ಲಿಯೂ ಬಹಳ ವೈಷಮ್ಯವಿದೆ.

ಏನು ವೈಷಮ್ಯ? ಎಂದರೆ, ನಿಮ್ಮ ಸಿದ್ಧಾಂತದಲ್ಲಿ ಅಸತ್ತ್ವ ಬೇರೆ, ಅನಿರ್ವಚನೀಯತ್ವ ಬೇರೆ. 'ವಿಮತಂ ಮಿಥ್ಯಾ' ಎನ್ನುವಲ್ಲಿ ಅಸತ್ತ್ವದಿಂದ ಭಿನ್ನವಾದ ಅನಿರ್ವಚನೀಯತ್ವವು ಸಾಧಿಸಲ್ಪಡುತ್ತಿದೆ. ಹಾಗಾಗಿ ಅಸತ್ತ್ವವನ್ನು ನಿಷೇಧಿಸುವುದಕ್ಕಾಗಿ **''ಇದಂ, ನ ಅಸತ್, ಪ್ರತೀತತ್ವಾತ್''** ಎಂಬ ಮತ್ತೊಂದು ಪರಿಶೇಷಾನುಮಾನವು ಪುನಃ ಪ್ರವೃತ್ತವಾಗುವುದು ಯುಕ್ತ. ಆದರೆ ನಮ್ಮ ಸಿದ್ಧಾಂತದಲ್ಲಿ ಕ್ಷಿತ್ಯಾದಿಕರ್ತೃತ್ವ ಬೇರೆ, ಈಶ್ವರತ್ವ ಬೇರೆ ಅಲ್ಲ. ಕ್ಷಿತ್ಯಾದಿಕರ್ತೃತ್ವವೇ ಈಶ್ವರತ್ವ ಆಗಿದೆ. ಹಾಗಾಗಿ **''ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್''** ಎಂಬ ಅನುಮಾನದಿಂದ ಕ್ಷಿತ್ಯಾದಿಕರ್ತೃತ್ವವನ್ನು ಸಾಧಿಸಿದಾಗ ಈಶ್ವರತ್ವವನ್ನೇ ಸಾಧಿಸಿ-ದಂತಾಗುತ್ತದೆ. ಹೊರತು ಕಾರ್ಯತ್ವಾನುಮಾನದಿಂದ ಕ್ಷಿತ್ಯಾದಿಕರ್ತೃತ್ವ ಸಿದ್ಧವಾಗಿ, ಆ ಕ್ಷಿತ್ಯಾದಿಕರ್ತಾ ಈಶ್ವರನಾಗಿದ್ದಾನೆ ಎಂದು ಸಾಧಿಸುವುದಕ್ಕಾಗಿ ಮತ್ತೊಂದು ಅನುಮಾನವನ್ನು ಮಾಡಬೇಕಾದ ಪ್ರಸಕ್ತಿ ಇಲ್ಲ.

ಈ ರೀತಿಯಾಗಿ ಪ್ರಮೇಯವೈಷಮ್ಯ ಇರುವುದರಿಂದ ಪ್ರತಿಬಂಧೀಗ್ರಹಣ ಸರಿಯಲ್ಲ.

ಹೌದು, ಈಶ್ವರಸಿದ್ಧಿಗಾಗಿ ಪುನಃ ಮತ್ತೊಂದು ಅನುಮಾನ ಮಾಡುವುದು ಇಲ್ಲವಾದರೂ ಸಹ ಕಾರ್ಯತ್ವಾನುಮಾನದಿಂದ ಒಬ್ಬ ಕರ್ತಾ ಇದ್ದಾನೆ ಎಂದಷ್ಟೇ ಸಿದ್ಧವಾದಾಗ, ಆ ಕರ್ತಾ ಅಸರ್ವಜ್ಞನಾಗಿರಬಹುದು ಎಂಬ ಶಂಕೆ ಬಂದಾಗ, ಆ ಕರ್ತಾ ಸರ್ವಜ್ಞನಾಗಿದ್ದಾನೆ ಎಂದು ಸಾಧಿಸಲು

**''ಅಯಂ ಕರ್ತಾ, ನ ಅಸರ್ವಜ್ಞಃ, ಕ್ಷಿತ್ಯಾದಿಸರ್ವಕರ್ತೃತ್ವಾತ್, ವ್ಯತಿರೇಕೇಣ ದೇವದತ್ತವತ್''**

ಎಂಬುದಾಗಿ ಮತ್ತೊಂದು ಅನುಮಾನ ಮಾಡುವುದು ಆವಶ್ಯಕ. ಆದ್ದರಿಂದ ಎರಡು ಅನುಮಾನಗಳೂ ಪರಸ್ಪರ ಸತ್ಪ್ರತಿಪಕ್ಷವಾಗಿ ಅಪ್ರಮಾಣವಾಗಬೇಕಾದ ಪ್ರಸಂಗ ಬರುತ್ತದೆಯಲ್ಲವೇ ? ಎಂಬ ಶಂಕೆಯೂ ಸರಿಯಲ್ಲ.

ಏಕೆಂದರೆ- 'ಕ್ಷಿತ್ಯಾದಿಕಂ ಸಕರ್ತೃಕಂ' ಎಂಬ ಅನುಮಾನದಿಂದ ಕ್ಷಿತ್ಯಾದಿಕರ್ತೃತ್ವವು ಮಾತ್ರ ಸಿದ್ಧವಾಗಿ ಅವನ ಸಾರ್ವಜ್ಞಸಿದ್ಧಿಗಾಗಿ ಮತ್ತೊಂದು ಅನುಮಾನ ಮಾಡಬೇಕಾದ ಪ್ರಸಂಗವೇ ಇಲ್ಲ.

**''ಉಪಾದಾನಗೋಚರಾಪರೋಕ್ಷಜ್ಞಾನಚಿಕೀರ್ಷಾಕೃತಿಮತ್ತ್ವಂ ಕರ್ತೃತ್ವಮ್''**

ಉಪಾದಾನಕಾರಣವಿಷಯಕವಾದ ಅಪರೋಕ್ಷಜ್ಞಾನ, ಚಿಕೀರ್ಷಾ, ಕೃತಿ ಇವುಗಳು ಉಳ್ಳವನೇ ಕರ್ತಾ ಎನಿಸುತ್ತಾನೆ. ಪ್ರಕೃತ ಕ್ಷಿತ್ಯಾದಿಸರ್ವಕರ್ತಾ ಆಗಬೇಕಾದರೆ ಕ್ಷಿತ್ಯಾದಿಸರ್ವವಿಷಯಕಜ್ಞಾನ ಇರಲೇಬೇಕಾದ್ದರಿಂದ ಕ್ಷಿತ್ಯಾದಿ-ಸರ್ವಕರ್ತಾ ಸರ್ವಜ್ಞನೇ ಆಗಿರಬೇಕು. ಹಾಗಾಗಿ ಕ್ಷಿತ್ಯಾದಿಕರ್ತಾ ಅಸರ್ವಜ್ಞ-ನಾಗಿರಬಹುದು ಎಂಬ ಶಂಕೆಯೇ ಅಸಮಂಜಸವಾದ್ದರಿಂದ, ಕಾರ್ಯತ್ವಾನು-ಮಾನದಿಂದ ಕ್ಷಿತ್ಯಾದಿಕರ್ತೃತ್ವ ಸಿದ್ಧವಾದರೆ (ಕ್ಷಿತ್ಯಾದಿಕರ್ತೃತ್ವದಲ್ಲಿಯೇ ಸರ್ವಜ್ಞತ್ವವು ಅಂತರ್ಭೂತವಾಗಿರುವ ಕಾರಣ) ಸರ್ವಜ್ಞತ್ವವೂ ಸಿದ್ಧವೇ ಆಗುವುದರಿಂದ ಸಾರ್ವಜ್ಞಸಿದ್ಧಿಗಾಗಿ ಪುನಃ ಮತ್ತೊಂದು ಅನುಮಾನ ಮಾಡಬೇಕಾದ ಆವಶ್ಯಕತೆಯೇ ಇಲ್ಲ (ಎರಡು ಅನುಮಾನಗಳೇ ಇಲ್ಲ). ಹೀಗಾಗಿ ಎರಡು ಅನುಮಾನಗಳು ಪರಸ್ಪರ ಸತ್ಪ್ರತಿಪಕ್ಷವಾಗಿ ಅಪ್ರಮಾಣ-ವಾಗಬೇಕಾದ ಅತಿಪ್ರಸಂಗ ಬರುವುದಿಲ್ಲ. ಆದ್ದರಿಂದ ಕಾರ್ಯತ್ವಾನು-ಮಾನದಿಂದಲೇ ಈಶ್ವರಸಿದ್ಧಿಯು ಸುಲಭವೇ ಆಗಿದೆ ಎಂದು ಭಾವ.

**ಅವತಾರಿಕೆ :-** ''ಕ್ಷಿತ್ಯಾದಿಕರ್ತೃತ್ವವೇ ಈಶ್ವರತ್ವ. ಕ್ಷಿತ್ಯಾದಿಕರ್ತೃತ್ವದಲ್ಲಿಯೇ ಸರ್ವಜ್ಞತ್ವ ಅಂತರ್ಭೂತವಾಗಿದೆ. ಹೀಗಾಗಿ ಸರ್ವಜ್ಞತ್ವಸಾಧನೆಗಾಗಿ ಬೇರೊಂದು ಅನುಮಾನ ಮಾಡಬೇಕಾದ ಪ್ರಸಂಗ ಇಲ್ಲ. ಎರಡು ಅನುಮಾನಗಳೇ ಇಲ್ಲವಾದ್ದರಿಂದ ಪರಸ್ಪರ ಸತ್ಪ್ರತಿಪಕ್ಷತಾ (ಅಪ್ರಾಮಾಣ್ಯ) ಇಲ್ಲ'' ಎಂಬ ನಮ್ಮ ಸಮಾಧಾನದ ಮೇಲೆ ಶಂಕೆ ಮಾಡಿಕೊಂಡು ಉತ್ತರ ನೀಡುತ್ತಾರೆ -

**ಟೀಕಾ: ಯೇ ತು ಕಾರ್ಯತ್ವಾದಿನಾ ಕರ್ತೃಮಾತ್ರಸಿದ್ಧಿಮಂಗೀಕೃತ್ಯ ಸಾರ್ವಜ್ಞ್ಯಾದಿಸಿದ್ಧೌ ಪುನಃ ಪರಿಶೇಷೇಣ ಪ್ರಯತಂತೇ ತೇಷಾಂ ಕಥಮಿತಿ ಚೇನ್ನ । ಯತೋಽಸ್ತ್ಯತ್ರ ಪ್ರಮೇಯವಿಶೇಷಃ । ಯನ್ಮಿಥ್ಯಾತ್ವಸಾಧನೇ ಯಥಾಽಸತ್ತ್ವಸ್ಯೈವ ಪ್ರತೀತಿರ್ನ ತಥಾ ಕರ್ತೃತ್ವಸಾಧನೇಽಸಾರ್ವಜ್ಞ್ಯಾದಿಪ್ರತೀತಿರ್ಯೇನ ಸತ್ಪ್ರತಿಪಕ್ಷತಾ ಸ್ಯಾತ್ ।**

**ಯಃ ಕರ್ತಾ ನಾಸೌ ಸರ್ವಜ್ಞ ಇತ್ಯಸ್ಯೈವೇತಿ ಚೇನ್ನ । ಪ್ರಕೃತೇ ಮಿಥ್ಯಾತ್ವಸ್ಯೈವಾಸತ್ವೇನ ತೇನ ತದಸಾಧನಾತ್ । ಅಸ್ಯ ಚಾಶ್ರಯಾಸಿದ್ಧ್ಯಾದಿನಾ ನಿರಾಕರಣಾತ್ ।**

**ಅನುವಾದ :-** ನೀವು ''ಕ್ಷಿತ್ಯಾದಿಕರ್ತೃತ್ವವೇ ಈಶ್ವರತ್ವ. ಅದರಲ್ಲಿಯೇ ಸರ್ವಜ್ಞತ್ವ ಅಂತರ್ಭೂತವಾಗಿದೆ'' ಎಂದು ಅಂಗೀಕರಿಸಿದ ಕಾರಣ ಸರ್ವಜ್ಞತ್ವಸಾಧನೆಗಾಗಿ ಬೇರೊಂದು ಅನುಮಾನ ಮಾಡುವುದಿಲ್ಲವಾದ್ದರಿಂದ ನಿಮಗೆ ಸತ್ಪ್ರತಿಪಕ್ಷತಾದೋಷ ಬರದಿದ್ದರೂ ಸಹ, ಯಾರು ಕರ್ತೃತ್ವದಲ್ಲಿ ಜ್ಞಾನದ ಪ್ರವೇಶ ಒಪ್ಪದೇ 'ಪ್ರಯತ್ನವತ್ವಂ ಕರ್ತೃತ್ವಂ' ಎಂದು ಅಂಗೀಕರಿಸಿ,

''**ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್**'' ಎಂಬ ಅನುಮಾನದಿಂದ ಕ್ಷಿತ್ಯಾದಿಗಳಿಗೆ ಒಬ್ಬ ಕರ್ತಾ ಇದ್ದಾನೆಂದು ಸಿದ್ಧಿಸುತ್ತದೆ ಎಂದಷ್ಟೇ ಹೇಳಿ, ಆ ಕರ್ತಾ ಅಸರ್ವಜ್ಞಕರ್ತಾ ಆಗಿರಬಹುದೆಂಬ ಶಂಕೆ ಬಂದಾಗ

''**ಅಯಂ ಕರ್ತಾ, ನ ಅಸರ್ವಜ್ಞಃ, ಕ್ಷಿತ್ಯಾದಿಸರ್ವಕರ್ತೃತ್ವಾತ್**''

ಎಂಬ ಪರಿಶೇಷಾನುಮಾನದಿಂದ ಕ್ಷಿತ್ಯಾದಿಕರ್ತೃವಿಗೆ ಸರ್ವಜ್ಞತ್ವವನ್ನು ಸಾಧಿಸಲು ಪ್ರಯತ್ನಿಸುತ್ತಾರೆ ಅವರಿಗೆ ಹೇಗೆ ? ಅವರು ಸಾರ್ವಜ್ಞಸಿದ್ಧಿಗಾಗಿ ಎರಡನೇ ಅನುಮಾನವನ್ನು ಒಪ್ಪುವುದರಿಂದ ಎರಡು ಅನುಮಾನಗಳೂ ಪರಸ್ಪರ ಸತ್ಪ್ರತಿಪಕ್ಷಗಳಾಗಿ ಅಪ್ರಮಾಣವಾಗಬೇಕಾದ ಅತಿಪ್ರಸಂಗ (ಈಶ್ವರಸಿದ್ಧಿ ಆಗದೇ ಹೋಗಬೇಕಾದ ಪ್ರಸಂಗ) ಅವರಿಗೆ ಬಂದೇ ಬರುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ ಇಲ್ಲಿ ಪ್ರಮೇಯವಿಶೇಷ (ಪ್ರಮೇಯವೈಷಮ್ಯ) ಇದೆ. ಏನದು ಪ್ರಮೇಯವೈಷಮ್ಯ? ಎಂದರೆ-

'ವಿಮತಂ ಮಿಥ್ಯಾ' ಎಂಬುದಾಗಿ ಮಿಥ್ಯಾತ್ವವನ್ನು ಸಾಧಿಸಿದಾಗ (ಮಿಥ್ಯಾತ್ವ ಎಂದರೆ ಅಸತ್ವ ಎನ್ನುವುದು ಪ್ರಸಿದ್ಧವಾದ್ದರಿಂದ) ಅಸತ್ವವೇ ಪ್ರತೀತವಾಗುತ್ತಿರಲು,

''**ಇದಂ ನ ಅಸತ್ ಪ್ರತೀತತ್ವಾತ್**'' ಎಂಬುದಾಗಿ ಪುನಃ ಅಸತ್ವವನ್ನು ನಿಷೇಧಿಸಿದರೆ, ಅಲ್ಲಿ ಸತ್ಪ್ರತಿಪಕ್ಷತಾ ಬಂದು, ಎರಡು ಅನುಮಾನಗಳಿಗೂ ಅಪ್ರಾಮಾಣ್ಯ ಬರುತ್ತದೆ.

ಆದರೆ ಈಶ್ವರವಿಷಯದಲ್ಲಿ ಹಾಗಲ್ಲ. 'ಕ್ಷಿತ್ಯಾದಿಕಂ ಸಕರ್ತೃಕಂ' ಎಂಬುದಾಗಿ ಕರ್ತೃತ್ವವನ್ನು ಸಾಧಿಸಿದಾಗ (ಈ ಪಕ್ಷದಲ್ಲಿ ಕರ್ತೃತ್ವದಲ್ಲಿ ಜ್ಞಾನವು ಸೇರದೇ ಪ್ರಯತ್ನವು ಮಾತ್ರ ಸೇರುವುದರಿಂದ) ಒಬ್ಬ ಕರ್ತಾ (ಪ್ರಯತ್ನವಿಶಿಷ್ಟನಾದ ಒಬ್ಬ ವ್ಯಕ್ತಿ) ಇದ್ದಾನೆ ಎಂದಷ್ಟೇ ಪ್ರತೀತವಾಗುತ್ತದೆ. ಹೊರತು ಅಸರ್ವಜ್ಞಕರ್ತಾ ಪ್ರತೀತನಾಗುವುದಿಲ್ಲ. ಒಂದುವೇಳೆ ಅಸರ್ವಜ್ಞಕರ್ತಾ ಪ್ರತೀತನಾಗುತ್ತಿದ್ದರೆ, ಮೊದಲನೇ ಕಾರ್ಯತ್ವಾನುಮಾನದಿಂದ ಅಸರ್ವಜ್ಞಕರ್ತೃತ್ವವು ಪ್ರತೀತವಾಗಿ 'ಅಯಂ ಕರ್ತಾ ನ ಅಸರ್ವಜ್ಞಃ' ಎಂಬುದಾಗಿ ಪುನಃ ಅಸರ್ವಜ್ಞಕರ್ತೃತ್ವವನ್ನು ನಿಷೇಧಿಸಿದರೆ ಎರಡೂ ಅನುಮಾನಗಳೂ ಪರಸ್ಪರ ಸತ್ಪ್ರತಿಪಕ್ಷವಾಗಿ ಅಪ್ರಮಾಣವಾಗಬೇಕಾಗುತ್ತಿತ್ತು. ಪ್ರಕೃತ ಕರ್ತೃತ್ವವು ಪ್ರಯತ್ನಮಾತ್ರ-ಘಟಿತವಾದ್ದರಿಂದ ಕಾರ್ಯತ್ವಾನುಮಾನದಿಂದ ಒಬ್ಬ ಕರ್ತಾ ಇದ್ದಾನೆ ಎಂದಷ್ಟೇ ಸಿದ್ಧವಾಗಿ, ಆ ಕರ್ತೃವಿಗೆ ಸಾರ್ವಜ್ಞಸಿದ್ಧಿಗಾಗಿ

**''ಅಯಂ ಕರ್ತಾ, ನ ಅಸರ್ವಜ್ಞಃ, ಕ್ಷಿತ್ಯಾದಿಸರ್ವಕರ್ತೃತ್ವಾತ್''**

ಎಂಬುದಾಗಿ ಮತ್ತೊಂದು ಅನುಮಾನ ಮಾಡಿದರೆ (ಪರಸ್ಪರ ಸಾಧ್ಯಾಭಾವ-ಸಾಧಕವಾಗದ ಕಾರಣ) ಸತ್ಪ್ರತಿಪಕ್ಷತಾದೋಷಕ್ಕೆ ಅವಕಾಶವೇ ಇಲ್ಲ. ಹೀಗಾಗಿ ಈ ರೀತಿ ಎರಡು ಅನುಮಾನಗಳಿಂದ ಈಶ್ವರಸಿದ್ಧಿಯು ಸುಲಭವೇ ಹೊರತು ದುರ್ಲಭವಲ್ಲ ಎಂದು ಅಭಿಪ್ರಾಯ.

ಹೌದು, ಆದರೂ ಸಹ ಮತ್ತೆ ಈಶ್ವರಸಿದ್ಧಿಯು ದುರ್ಲಭವೇ ಆಗುತ್ತದೆ. ಹೇಗೆಂದರೆ- ಕಾರ್ಯತ್ವಹೇತುವಿನಿಂದ ಪ್ರಯತ್ನಮಾತ್ರಘಟಿತವಾದ ಕರ್ತೃತ್ವವನ್ನು ಸಾಧಿಸಿದಾಗ ಸಾರ್ವಜ್ಞವು ಪ್ರತೀತವಾಗದಿದ್ದರೂ ಸಹ, ಕಾರ್ಯತ್ವಾನುಮಾನದಿಂದ ಕೇವಲ ಕರ್ತೃತ್ವವು ಸಿದ್ಧವಾದರೂ ಸಹ,

**''ವಿಮತಃ ಕರ್ತಾ, ನ ಸರ್ವಜ್ಞಃ, ಕರ್ತೃತ್ವಾತ್ । ಯಃ ಕರ್ತಾ ನಾಸೌ ಸರ್ವಜ್ಞಃ, ಯಥಾ ಕುಲಾಲಃ ॥''**

ಎಂಬ ಬೇರೆ ಅನುಮಾನದಿಂದ ಅಸರ್ವಜ್ಞಕರ್ತಾ ಪ್ರತೀತವಾಗುತ್ತಿರಲು, ಅನಂತರ ''ವಿಮತಃ ನ ಅಸರ್ವಜ್ಞಃ......'' ಎಂಬುದಾಗಿ ಪರಿಶೇಷಾನುಮಾನ-ದಿಂದ ಅಸರ್ವಜ್ಞಕರ್ತೃತ್ವವನ್ನು ಮತ್ತೆ ನಿಷೇಧಿಸಿದರೆ ಸತ್ಪ್ರತಿಪಕ್ಷತಾ ಉಂಟಾಗಿ ಎರಡು ಅನುಮಾನಗಳಿಗೂ ಅಪ್ರಾಮಾಣ್ಯಪ್ರಸಕ್ತಿ ಬರುವುದರಿಂದ ಈಶ್ವರಸಿದ್ಧಿಯು ದುರ್ಲಭವೇ ಆಗುತ್ತದೆಯಲ್ಲವೇ ?

ಈ ವಿಧವಾದ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ಮತ್ತೆ ಇಲ್ಲಿ ಪ್ರಮೇಯ-ವೈಷಮ್ಯ ಇದೆ. ಅದು ಏನೆಂದರೆ :- "**ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್**" ಎಂಬ ಕಾರ್ಯತ್ವಾನುಮಾನದಿಂದ ಸಾಮಾನ್ಯವಾಗಿ ಒಬ್ಬ ಕರ್ತಾ ಇದ್ದಾನೆ ಎಂದಷ್ಟೇ ಸಿದ್ಧವಾದಾಗ, ಈ ಅನುಮಾನದಿಂದ ಸಿದ್ಧವಾದ ಯಾವ ಕರ್ತೃತ್ವವಿದೆ ಅದೇ ಕರ್ತೃತ್ವವನ್ನೇ ಹೇತುವನ್ನಾಗಿ ಮಾಡಿಕೊಂಡು

"**ವಿಮತಃ ಕರ್ತಾ, ಸರ್ವಜ್ಞಃ, ಕ್ಷಿತ್ಯಾದಿಸರ್ವಕರ್ತೃತ್ವಾತ್**"

ಎಂಬುದಾಗಿ ಸಾರ್ವಜ್ಞವನ್ನು ಹೇಗೆ ನೀವು ಸಾಧಿಸುತ್ತೀರಿ ಹಾಗೆ "**ವಿವಾದ-ಪದಂ ಮಿಥ್ಯಾ ಬಾಧ್ಯತ್ವಾತ್**" ಎಂಬ ಬಾಧ್ಯತ್ವಾನುಮಾನದಿಂದ ಸಾಮಾನ್ಯವಾಗಿ ಮಿಥ್ಯಾತ್ವವು ಸಿದ್ಧವಾದಾಗ, ಈ ಅನುಮಾನದಿಂದ ಸಿದ್ಧವಾದ ಯಾವ ಮಿಥ್ಯಾತ್ವವಿದೆ ಅದೇ ಮಿಥ್ಯಾತ್ವವನ್ನೇ ಹೇತುವನ್ನಾಗಿ ಮಾಡಿಕೊಂಡು ನಾವು ಅಸತ್ವವನ್ನು ಸಾಧಿಸುವುದಿಲ್ಲ. ಕಾರಣ "**ವಿವಾದಪದಂ ಅಸತ್ ಮಿಥ್ಯಾತ್ವಾತ್**" ಎಂಬುದಾಗಿ ಮಿಥ್ಯಾತ್ವದಿಂದ ಅಸತ್ವವನ್ನು ಸಾಧಿಸಲು ಹೊರಟರೆ, ಮಿಥ್ಯಾತ್ವವೇ ಅಸತ್ವವಾದ್ದರಿಂದ ಅನುಮಾನಕ್ಕೆ ಸಾಧ್ಯಾವಿಶಿಷ್ಟತಾದೋಷ ಬರುತ್ತದೆ. ಆದ್ದರಿಂದ ಕಾರ್ಯತ್ವಾನುಮಾನದಿಂದ ಸಿದ್ಧವಾದ ಕರ್ತೃತ್ವವನ್ನೇ ಹೇತುವನ್ನಾಗಿ ಮಾಡಿಕೊಂಡು ಸರ್ವಜ್ಞತ್ವವನ್ನು ಸಾಧಿಸುವಂತೆ, ಬಾಧ್ಯತ್ವಾನುಮಾನದಿಂದ ಸಿದ್ಧವಾದ ಮಿಥ್ಯಾತ್ವವನ್ನೇ ಹೇತುವನ್ನಾಗಿ ಮಾಡಿಕೊಂಡು ಅಸತ್ವವನ್ನು ಸಾಧಿ ಸಲು ಬರುವುದಿಲ್ಲವಾದ್ದರಿಂದ, ಪ್ರಮೇಯವೈಷಮ್ಯ ಇರುವ ಕಾರಣ ಈಶ್ವರಸಿದ್ಧಿಯು ದುರ್ಲಭವಲ್ಲ, ಸುಲಭವೇ ಎಂದು ಭಾವ.

ಹೌದು,

"**ವಿಮತಃ ಕರ್ತಾ, ನ ಸರ್ವಜ್ಞಃ, ಕರ್ತೃತ್ವಾತ್ । ಯಃ ಕರ್ತಾ ನಾಸೌ ಸರ್ವಜ್ಞಃ, ಯಥಾ ಕುಲಾಲಃ ।**"

ಎಂಬುದಾಗಿ ಕರ್ತೃತ್ವದಿಂದ ಅಸಾರ್ವಜ್ಞವನ್ನು ಸಾಧಿಸಿದರೆ, ಸಾಧ್ಯಾವಿಶಿಷ್ಟತಾ ಬರುವುದಿಲ್ಲವಾದ್ದರಿಂದ ಈ ಅನುಮಾನದಿಂದ ಅಸರ್ವಜ್ಞಕರ್ತೃತ್ವ ಪ್ರತೀತ-ವಾದಾಗ ಮತ್ತೆ "**ವಿಮತಃ ಕರ್ತಾ, ನ ಅಸರ್ವಜ್ಞಃ... .. .**" ಎಂಬುದಾಗಿ ಪರಿಶೇಷಾನುಮಾನ ಮಾಡಿದಾಗ ಸತ್ಪ್ರತಿಪಕ್ಷತಾ ಬರುತ್ತದೆ. ಹೀಗಾಗಿ ಎರಡು ಅನುಮಾನಗಳಿಗೂ ಅಪ್ರಾಮಾಣ್ಯ ಬರುವುದರಿಂದ ಸಾರ್ವಜ್ಞಾದಿವಿಶಿಷ್ಟ ಈಶ್ವರಸಿದ್ಧಿಯು ದುರ್ಲಭವೇ ಆಗುತ್ತದೆಯಲ್ಲವೇ?

ಹೀಗೆ ಶಂಕೆ ಬಂದರೆ, ಅದು ಸರಿಯಲ್ಲ. ಏಕೆಂದರೆ -

**''ವಿಮತಃ ಕರ್ತಾ, ನ ಸರ್ವಜ್ಞಃ, ಕರ್ತೃತ್ವಾತ್''**

ಎಂಬ ಅನುಮಾನ ಸರಿಯಾಗಿದ್ದರೆ ಆಗ ಅಸರ್ವಜ್ಞಕರ್ತೃತ್ವನಿಷೇಧಕ ಅನುಮಾನದ ಪ್ರವೃತ್ತಿ, ಸತ್ಪ್ರತಿಪಕ್ಷತಾ ಇವುಗಳಿಗೆ ಅವಕಾಶವಿರುತ್ತಿತ್ತು. ಆದರೆ ಈ ಅನುಮಾನವೇ ಸರಿಯಲ್ಲ. ಹೇಗೆಂದರೆ -

ಪಕ್ಷೀಭೂತನಾದ (ವಿಮತ) ಈಶ್ವರನು ಸಿದ್ಧನಾಗಿದ್ದಾನೆಯೋ ? ಇಲ್ಲವೋ? ಸಿದ್ಧನಾಗಿಲ್ಲ ಎಂದರೆ ಆಶ್ರಯಾಸಿದ್ಧಿ ಬರುತ್ತದೆ. ಸಿದ್ಧನಾಗಿದ್ದಾನೆ ಎಂದರೆ ಧರ್ಮಿಗ್ರಾಹಕಪ್ರಮಾಣವಿರೋಧ ಬರುತ್ತದೆ. ಅಂದರೆ ಯಾವ ವೇದದಿಂದ ಈಶ್ವರನು ಸಿದ್ಧನಾಗಿದ್ದಾನೆ ಅಂತಹ 'ಯಃ ಸರ್ವಜ್ಞಃ ಸ ಸರ್ವವಿತ್' ಮುಂತಾದ ವೇದಗಳಿಂದ ಈಶ್ವರನು ಸಾರ್ವಜ್ಞಾದಿಗಳಿಂದ ವಿಶಿಷ್ಟನಾಗಿಯೇ ಸಿದ್ಧನಾಗಿದ್ದರಿಂದ, ಅಂತಹ ಪ್ರಮಾಣಸಿದ್ಧವಾದ ಸಾರ್ವಜ್ಞಾದಿಗಳಿಂದ ವಿಶಿಷ್ಟನಾದ ಈಶ್ವರನನ್ನೇ ಪಕ್ಷ ಮಾಡಿಕೊಂಡು ಮತ್ತೆ ಅವನಿಗೆ ಅಸರ್ವಜ್ಞತ್ವವನ್ನು ಸಾಧಿಸಿದರೆ ಧರ್ಮಿ-ಗ್ರಾಹಕಪ್ರಮಾಣ(ವೇದ)ವಿರೋಧ ಬರುತ್ತದೆ. ಆದ್ದರಿಂದ ಈ ಅನುಮಾನ ದುಷ್ಟವಾದ್ದರಿಂದ **''ಕ್ಷಿತ್ಯಾದಿಕಂ ಸಕರ್ತೃಕಂ ಕಾರ್ಯತ್ವಾತ್''** ಎಂಬ ಕಾರ್ಯತ್ವಾನುಮಾನದಿಂದಲೇ ಈಶ್ವರಸಿದ್ಧಿ ಸುಲಭ ಎಂದು ಅಭಿಪ್ರಾಯ.

**ಅವತಾರಿಕೆ :-** ಹಿಂದೆ ''ನ ಚ ಧೂಮತ್ವವನ್ಮಿಥ್ಯಾತ್ವಮಿತ್ಯುಭಯ-ಸಂಪ್ರತಿಪನ್ನಂ ಸಾಮಾನ್ಯಮಸ್ತಿ'' ''ಭಾಷ್ಪಾರೋಪಿತಧೂಮ-ಮಹಾನಸೀಯ ಧೂಮ ಇವುಗಳಲ್ಲಿ ಅನುಗತವಾದ ಧೂಮತ್ವ ಎಂಬ ಧರ್ಮ ಹೇಗೆ ಇಲ್ಲವೋ ಅದರಂತೆಯೇ ಅಸತ್-ಅನಿರ್ವಚನೀಯ ಎರಡರಲ್ಲಿ ಅನುಗತವಾದ ಮಿಥ್ಯಾತ್ವ ಎಂಬ ಧರ್ಮವೂ ಇಲ್ಲ'' ಎಂಬುದಾಗಿ ಆಚಾರ್ಯರು ಅನುಗತಧೂಮತ್ವವನ್ನು ದೃಷ್ಟಾಂತವನ್ನಾಗಿ ಕೊಟ್ಟು ಅನುಗತಮಿಥ್ಯಾತ್ವವನ್ನು ನಿರಾಕರಿಸಿದರು. ಅದರ ಮೇಲೆ ಆಕ್ಷೇಪ ಮಾಡಿಕೊಂಡು ಉತ್ತರ ನೀಡುತ್ತಾರೆ -

**ಮೂಲದಲ್ಲಿ ಧೂಮತ್ವದೃಷ್ಟಾಂತ ಕೊಟ್ಟಿದ್ದು ಯುಕ್ತವೇ ಆಗಿದೆ**

**ಟೀಕಾ : ನನ್ವಸದನಿರ್ವಚನೀಯೇ ದ್ವೇ ಅಪಿ ನ ಸ್ತಃ । ತತೋ ನರಖರವಿಷಾಣಯೋರ್ವಿಷಾಣತ್ವವದಿತಿ ನಿದರ್ಶನೀಯಮ್ । ಧೂಮಸ್ತು ಭಾಷ್ಪಾರೋಪಿತ ಏವ ನಾಸ್ತಿ । ನ ತ್ವಿತರಃ । ತತ್ಕಥಂ ಧೂಮತ್ವವದಿತ್ಯುದಾಹೃತಮ್ ।**

**ಮೈವಮ್ । ಅಸದಿತಿ ನಿರ್ದೇಶಸ್ಯ ಪ್ರತಿಯೋಗಿಪ್ರಧಾನತ್ವೇ ವ್ಯಕ್ತ್ಯಭಾವಮಾತ್ರೇ ದೃಷ್ಟಾಂತತ್ವೋಪಪತ್ತೇಃ। ನಿಷೇಧಪ್ರಧಾನತ್ವೇ ತು ತಸ್ಯ ಸತ್ತ್ವೇನ ಸುತರಾಂ ಯುಕ್ತತ್ವಾತ್ ।**

**ಬಾಷ್ಪಧೂಲೀಮಶಕಮಾಲಾದ್ಯಾರೋಪಿತಧೂಮೇಷು ಧೂಮತ್ವವದಿತಿ ವಾ ವ್ಯಾಖ್ಯೇಯಮ್ ।**

**ಅನುವಾದ :-** ಈ ರೀತಿಯಾಗಿ ಧೂಮತ್ವದ ದೃಷ್ಟಾಂತ ಕೊಡುವುದು ಸರಿಯಲ್ಲ. ಕಾರಣ ದೃಷ್ಟಾಂತ-ದ್ರಾಷ್ಟಾಂತಿಕಗಳಲ್ಲಿ ವೈಷಮ್ಯ ಇದೆ. ಹೇಗೆಂದರೆಃ- ಅಸತ್-ಅನಿರ್ವಚನೀಯ ಎರಡೂ ಇಲ್ಲ[1]. ಧರ್ಮಿಗಳೆರಡೂ ಇಲ್ಲದಿರುವಾಗ ಅವುಗಳಲ್ಲಿ ಅನುಗತಧರ್ಮವೂ ಇರುವುದಿಲ್ಲ ಎನ್ನುವುದಕ್ಕೆ ಎರಡೂ ಧರ್ಮಿಗಳೂ ಇಲ್ಲದಿರುವ ದೃಷ್ಟಾಂತ ಕೊಡಬೇಕು. ಉದಾಹರಣೆಗೆ- ನರಖರವಿಷಾಣಯೋಃ ವಿಷಾಣತ್ವವತ್ ನರವಿಷಾಣ-ಖರವಿಷಾಣ ಎರಡೂ ಇಲ್ಲ. ಅಂತಹ ನರವಿಷಾಣ-ಖರವಿಷಾಣ ಎರಡೂ ಧರ್ಮಿಗಳು ಇಲ್ಲವಾದ್ದರಿಂದ ಅವುಗಳಲ್ಲಿ ವಿಷಾಣತ್ವ ಎಂಬ ಸಾಧಾರಣಧರ್ಮ ಹೇಗೆ ಇಲ್ಲವೋ, ಅದರಂತೆ ಅಸತ್-ಅನಿರ್ವಚನೀಯ ಎರಡೂ ಇಲ್ಲವಾದ್ದರಿಂದ ಅವುಗಳಲ್ಲಿ ಮಿಥ್ಯಾತ್ವ ಎಂಬ ಸಾಧಾರಣಧರ್ಮ ಇಲ್ಲ ಎಂಬುದಾಗಿ ನರವಿಷಾಣ-ಖರವಿಷಾಣಗಳಲ್ಲಿ ವಿಷಾಣತ್ವದ ದೃಷ್ಟಾಂತವನ್ನು ಕೊಡಬೇಕು.

ಆದರೆ ಬಾಷ್ಪಾರೋಪಿತಧೂಮ-ಮಹಾನಸೀಯಧೂಮಗಳಲ್ಲಿ ಧೂಮತ್ವ-ದಂತೆ ಎಂಬುದಾಗಿ ದೃಷ್ಟಾಂತ ಕೊಟ್ಟಿದ್ದು ಸರಿಯಲ್ಲ. ಏಕೆಂದರೆ- ಇಲ್ಲಿ ಬಾಷ್ಪಾರೋಪಿತಧೂಮ ಎಂಬ ಒಂದು ಧರ್ಮಿ ಮಾತ್ರ ಇಲ್ಲ. ಮತ್ತೊಂದು ಧರ್ಮಿ ಮಹಾನಸೀಯಧೂಮ ಅದು ಇದೆ (ಸತ್ ಆಗಿದೆ).

ಅಂದಮೇಲೆ ಎರಡೂ ಧರ್ಮಿಗಳು ಇಲ್ಲದ ಕಾರಣ ಅನುಗತಧರ್ಮ ಇರುವುದಿಲ್ಲ ಎನ್ನುವುದಕ್ಕೆ ಎರಡೂ ಧರ್ಮಿಗಳು ಇಲ್ಲದಿರುವ ದೃಷ್ಟಾಂತ ಕೊಡಬೇಕೇ ಹೊರತು, ಒಂದು ಧರ್ಮಿ ಇದ್ದು ಮತ್ತೊಂದು ಧರ್ಮಿ ಇಲ್ಲ ಆದ್ದರಿಂದ ಅನುಗತಧರ್ಮ ಇಲ್ಲ ಎಂಬ ದೃಷ್ಟಾಂತವನ್ನು ಕೊಡುವುದು ಸರಿಯಲ್ಲ. ಹಾಗಾಗಿ 'ನ ಚ ಧೂಮತ್ವವತ್' ಎಂಬುದಾಗಿ ಆಚಾರ್ಯರು ಕೊಟ್ಟ ದೃಷ್ಟಾಂತ ಹೇಗೆ ಉಪಪನ್ನ?

---

೧ ಅಸತ್ ಇಲ್ಲ ಎನ್ನುವುದು ಸಿದ್ಧವಿಷಯ. ಪ್ರಮಾಣ ಇಲ್ಲದ ಕಾರಣ ಅನಿರ್ವಚನೀಯವಸ್ತು ಈವರೆಗೂ ಸಿದ್ಧವಾಗಿಲ್ಲ. ಹಾಗಾಗಿ ಅನಿರ್ವಚನೀಯವೂ ಇಲ್ಲ ಎಂದು ಭಾವ.

ಈ ಆಕ್ಷೇಪಕ್ಕೆ ಶ್ರೀಮಟ್ಟೀಕಾಕೃತ್ಪಾದರು ಎರಡು ರೀತಿಯಿಂದ ಸಮಾಧಾನ ಹೇಳುತ್ತಾರೆ.

**ಸಮಾಧಾನ 1)**

ಅಸತ್ ಎನ್ನುವುದಕ್ಕೆ ಪ್ರತಿಯೋಗಿಪ್ರಾಧಾನ್ಯ ವಿವಕ್ಷಿಸುವುದು ಒಂದು, ನಿಷೇಧಪ್ರಾಧಾನ್ಯ ವಿವಕ್ಷಿಸುವುದು ಮತ್ತೊಂದು. ಇವುಗಳಲ್ಲಿ ಪ್ರತಿಯೋಗಿ-ಪ್ರಾಧಾನ್ಯವಿವಕ್ಷಾ ಇಟ್ಟುಕೊಂಡಾಗ 'ಶಶವಿಷಾಣಂ ಅಸತ್' ಎನ್ನುವುದಕ್ಕೆ 'ಶಶವಿಷಾಣಂ ಅತ್ಯಂತಾಭಾವಪ್ರತಿಯೋಗಿ' ಎಂದು ಅರ್ಥ ಬರುತ್ತದೆ. ಇನ್ನು ನಿಷೇಧಪ್ರಾಧಾನ್ಯವಿವಕ್ಷಾ ಇಟ್ಟುಕೊಂಡಾಗ 'ಶಶವಿಷಾಣಂ ಅಸತ್' ಎನ್ನುವುದಕ್ಕೆ 'ಶಶವಿಷಾಣಪ್ರತಿಯೋಗಿಕಾತ್ಯಂತಾಭಾವಃ ಅಸ್ತಿ' ಎಂದು ಅರ್ಥ ಬರುತ್ತದೆ.

ಇವುಗಳಲ್ಲಿ ನಿಷೇಧಪ್ರಾಧಾನ್ಯವಿವಕ್ಷಾ ಇಟ್ಟುಕೊಂಡಾಗ, ಅಸತ್ ಶಬ್ದಕ್ಕೆ ಅತ್ಯಂತಾಭಾವ ಎಂದು ಅರ್ಥ ಬರುವುದರಿಂದ, ಘಟಪಟಾದಿಗಳಂತೆ ಅತ್ಯಂತಾಭಾವ ಎನ್ನುವುದೂ ಸತ್ ಆದ ವಸ್ತುವೇ ಆಗುತ್ತದೆ. ಆದ್ದರಿಂದ ಬಾಷ್ಪಾರೋಪಿತಧೂಮ-ಮಹಾನಸೀಯಧೂಮ ಅವುಗಳಲ್ಲಿ ಒಂದು ಧರ್ಮಿ ಸತ್ ಆಗಿದೆ ಮತ್ತೊಂದು ಧರ್ಮಿ ಅಸತ್ ಆಗಿದೆ, ಹೀಗೆ ಸತ್-ಅಸತ್ ಆದ ಎರಡು ಧರ್ಮಿಗಳಲ್ಲಿ ಅನುಗತಧೂಮತ್ವ ಎಂಬ ಧರ್ಮ ಹೇಗೆ ಇರಲು ಸಾಧ್ಯವಿಲ್ಲವೋ, ಅದರಂತೆಯೇ ಅಸತ್-ಅನಿರ್ವಚನೀಯ ಇವುಗಳಲ್ಲಿ ಒಂದು ಧರ್ಮಿ ಸತ್ ಆಗಿದೆ ಮತ್ತೊಂದು ಧರ್ಮಿ ಅಸತ್ ಆಗಿದೆ, ಹೀಗಾಗಿ ಸತ್ -ಅಸತ್ ಆದ ಎರಡು ಧರ್ಮಿಗಳಲ್ಲಿ ಅನುಗತಮಿಥ್ಯಾತ್ವ ಎಂಬ ಧರ್ಮವೂ ಇರಲು ಸಾಧ್ಯವಿಲ್ಲ ಎಂಬುದಾಗಿ ಧೂಮತ್ವದ ದೃಷ್ಟಾಂತ ಕೊಟ್ಟಿದ್ದು ಉಪಪನ್ನವೇ ಆಗುತ್ತದೆ.

ಇನ್ನು ಪ್ರತಿಯೋಗಿಪ್ರಾಧಾನ್ಯವಿವಕ್ಷಾ ಇಟ್ಟುಕೊಂಡಾಗ ಅಸತ್ ಎನ್ನುವುದಕ್ಕೆ ಅತ್ಯಂತಾಭಾವಪ್ರತಿಯೋಗಿ ಎಂದು ಅರ್ಥ ಬರುವುದರಿಂದ ಅಸತ್-ಅನಿರ್ವಚನೀಯ ಎರಡು ಧರ್ಮಿಗಳೂ ಇಲ್ಲ ಎಂದಾಗುತ್ತದೆ. ಹೀಗಾಗಿ ದೃಷ್ಟಾಂತದಲ್ಲಿ ಒಂದು ಧರ್ಮಿ ಇದೆ, ಇನ್ನೊಂದು ಧರ್ಮಿ ಇಲ್ಲ. ದ್ರಾಷ್ಟಾಂತಿಕದಲ್ಲಿ ಎರಡು ಧರ್ಮಿಗಳೂ ಇಲ್ಲ. ಆದ್ದರಿಂದ ದೃಷ್ಟಾಂತ-ದ್ರಾಷ್ಟಾಂತಿಕಗಳಲ್ಲಿ ವೈಷಮ್ಯದ ಪ್ರಸಕ್ತಿ ಬರುತ್ತದೆ.

ಆದರೆ ಈ ಪಕ್ಷದಲ್ಲಿ ಧೂಮತ್ವವು ವ್ಯಕ್ತ್ಯಭಾವಮಾತ್ರದಲ್ಲಿ ದೃಷ್ಟಾಂತ-ವಾಗಬಹುದು. ಅಂದರೆ - ಪ್ರತಿಯೋಗಿಪ್ರಾಧಾನ್ಯವಿವಕ್ಷಾ ಇಟ್ಟುಕೊಂಡಾಗ ದೃಷ್ಟಾಂತದಲ್ಲಿ ಒಂದು ಧರ್ಮಿ ಇದೆ ಮತ್ತೊಂದು ಧರ್ಮಿ ಇಲ್ಲ. ದ್ರಾಷ್ಟಾಂತಿಕದಲ್ಲಿ ಎರಡೂ ಧರ್ಮಿಗಳು ಇಲ್ಲ ಎಂಬ ವೈಷಮ್ಯ ನಿಜವೇ. ಆದರೆ ಬಾಷ್ಪಾರೋಪಿತಧೂಮ ಎಂಬ ವ್ಯಕ್ತಿ (ಧರ್ಮಿ) ಇಲ್ಲದ ಕಾರಣ ಅದರಲ್ಲಿ ಹಾಗೂ ಮಹಾನಸೀಯಧೂಮದಲ್ಲಿ ಅನುಗತಧೂಮತ್ವವು ಯಾವ ರೀತಿಯಾಗಿ ಇಲ್ಲವೋ, ಅದೇ ರೀತಿಯಾಗಿ ಅನಿರ್ವಚನೀಯ-ಅಸತ್ ಎಂಬ ವ್ಯಕ್ತಿಗಳು (ಧರ್ಮಿಗಳು) ಇಲ್ಲದ ಕಾರಣ ಅವುಗಳಲ್ಲಿಯೂ ಅನುಗತಮಿಥ್ಯಾತ್ವ ಇಲ್ಲ ಎಂಬುದಾಗಿ ವ್ಯಕ್ತ್ಯಭಾವಮಾತ್ರದಲ್ಲಿ ಧೂಮತ್ವವು ದೃಷ್ಟಾಂತವಾಗುತ್ತದೆ. ಹೀಗಾಗಿ ಈ ಪಕ್ಷದಲ್ಲಿಯೂ ಧೂಮತ್ವದ ದೃಷ್ಟಾಂತ ಕೊಟ್ಟಿದ್ದಕ್ಕೆ ಯಾವ ಅನುಪಪತ್ತಿ ಇಲ್ಲ.

**ಸಮಾಧಾನ 2)**

ಅಥವಾ ಆಚಾರ್ಯರು 'ಧೂಮತ್ವವತ್' ಎಂಬುದಾಗಿ ಸಾಮಾನ್ಯವಾಗಿ ಹೇಳಿದ್ದಾರೆ. 'ಧೂಮತ್ವವತ್' ಎನ್ನುವುದಕ್ಕೆ ''ಬಾಷ್ಪಾರೋಪಿತಧೂಮ-ಧೂಲ್ಯಾರೋಪಿತಧೂಮ-ಮಶಕಮಾಲಾರೋಪಿತಧೂಮೇಷು ಧೂಮತ್ವವತ್'' ಎಂಬುದಾಗಿಯೂ ಅರ್ಥ ಮಾಡಲು ಬರುತ್ತದೆ. ಅಂದರೆ- ಬಾಷ್ಪದಲ್ಲಿ ಆರೋಪಿತವಾದ ಧೂಮ, ಧೂಲಿಯಲ್ಲಿ ಆರೋಪಿತವಾದ ಧೂಮ, ಮಶಕ-ಮಾಲಾದಲ್ಲಿ ಆರೋಪಿತವಾದ ಧೂಮ ಈ ಮೂರೂ (ಆರೋಪಿತವಾದ್ದರಿಂದ) ಅಸತ್ ಆಗಿವೆ. ಹಾಗಾಗಿ ಬಾಷ್ಪಾರೋಪಿತಧೂಮ-ಧೂಲ್ಯಾರೋಪಿತಧೂಮ ಮಶಕಮಾಲಾರೋಪಿತಧೂಮ ಇವುಗಳಲ್ಲಿ (ಧರ್ಮಿಗಳೇ ಇಲ್ಲವಾದ್ದರಿಂದ) ಅನುಗತವಾದ ಧೂಮತ್ವ ಹೇಗೆ ಇಲ್ಲವೋ ಅದರಂತೆ ಅಸತ್- ಅನಿರ್ವಚನೀಯ ಗಳಲ್ಲಿ (ಧರ್ಮಿಗಳೇ ಇಲ್ಲವಾದ್ದರಿಂದ) ಅನುಗತವಾದ ಮಿಥ್ಯಾತ್ವ ಇಲ್ಲ ಎಂಬುದಾಗಿಯಾದರೂ ಆಚಾರ್ಯರ ಮಾತಿಗೆ ಅರ್ಥ ಮಾಡಿಕೊಳ್ಳಬಹುದು. ಆದ್ದರಿಂದ 'ನ ಚ ಧೂಮತ್ವವತ್' ಎಂಬುದಾಗಿ ಆಚಾರ್ಯರು ದೃಷ್ಟಾಂತ ಹೇಳಿದ್ದು ಅತ್ಯಂತ ಸಮಂಜಸವೇ ಆಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** ಹಿಂದೆ ಆಚಾರ್ಯರು ದೃಷ್ಟಾಂತ ಕೊಡುವಾಗ ''ಬಾಷ್ಪಾರೋಪಿತಧೂಮವೇ ಅಸತ್ ಆದ ಕಾರಣ ಅಲ್ಲಿ ಧೂಮತ್ವಧರ್ಮವೇ ಇಲ್ಲವಾದ್ದರಿಂದ ಬಾಷ್ಪಾರೋಪಿತಧೂಮ-ಮಹಾನಸೀಯಧೂಮ ಇವುಗಳಲ್ಲಿ

ಧೂಮತ್ವ ಎಂಬ ಅನುಗತಧರ್ಮ ಹೇಗೆ ಇಲ್ಲವೋ ಹಾಗೆ ಅಸತ್-ಅನಿರ್ವಚನೀಯಗಳಲ್ಲಿ ಅನುಗತವಾದ ಮಿಥ್ಯಾತ್ವ ಇಲ್ಲ'' ಎಂಬುದಾಗಿ ಬಾಷ್ಪಾರೋಪಿತಧೂಮವು ಅಸತ್ ಆದ್ದರಿಂದ ಅಲ್ಲಿ ಧೂಮತ್ವಧರ್ಮ ಇಲ್ಲ ಎಂದು ಹೇಳಿದರು. ಇದರಮೇಲೆ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುತ್ತಾರೆ-

### ಬಾಷ್ಪಾರೋಪಿತಧೂಮದಲ್ಲಿಯೂ ಧೂಮತ್ವವನ್ನು ಅಂಗೀಕರಿಸಿದರೆ ದೋಷನಿರೂಪಣೆ

**ಟೀಕಾ :** **ನನು ಬಾಷ್ಪಾರೋಪಿತಧೂಮೇಽಪಿ ಧೂಮತ್ವಸಾಮಾನ್ಯಾಂಗೀಕಾರೇ ಕೋ ದೋಷ ಇತಿ ಚೇತ್ ತದಾ ಪರ್ವತಸ್ಯಾಗ್ನಿಮತ್ತ್ವೇ ಸಾಧ್ಯೇ ಪ್ರಯುಜ್ಯಮಾನಂ ಧೂಮವತ್ತ್ವಂ ಬಾಷ್ಪಾರೋಪಿತ-ಧೂಮೇನ ನಿರಗ್ನಿಕೇಽಪಿ ಹ್ರದಾದೌ ವರ್ತಮಾನೇನ ನಿಮಿತ್ತೇನಾಗ್ನಿವ್ಯಭಿಚಾರಿ ಸ್ಯಾತ್ । ನ ಚ ತೇನ ತದಗ್ನಿಂ ವ್ಯಭಿಚರತಿ । ನಿಃಶಂಕಂ ಲೋಕವ್ಯವಹಾರಹೇತುತ್ವಾದಿತ್ಯಾಹ-**

**ಮೂಲ :- ನ ಚ ಬಾಷ್ಪಾರೋಪಿತಧೂಮೇನ ಧೂಮವತ್ತ್ವಂ ವ್ಯಭಿಚರತಿ ।**

**ಬಹುಲೋರ್ಧ್ವತ್ವಾದಿವದಾಭಾಸವಿವೇಕೋಽಪಿ ವಹ್ನಿಂ ಪ್ರತಿ ಪ್ರಯೋಜಕ ಇತಿ ಚೇತ್ । ತತ್ ಕಿಂ ಪ್ರಯೋಕ್ತೄಣಾಂ ಲೌಕಿಕಾನಾಮಭಿಪ್ರಾಯಮನುರುದ್ಧ್ಯೇದಮಾಶ್ರೀಯತೇ ಕಿಂ ವಾ ಸ್ವಾಭ್ಯುಪಗತಸಾಮಾನ್ಯನಿರ್ವಾಹಾರ್ಥಮ್ ।**

**ನಾದ್ಯಃ । ತದಭಾವಾತ್ । ಲೌಕಿಕಾ ಹಿ ಧೂಮವತ್ತ್ವಸ್ಯಾನೈಕಾಂತ್ಯೇ ಚೋದಿತೇ ಧೂಮ ಏವಾಸೌ ನ ಭವತೀತಿ ಪ್ರತಿವಕ್ತಾರೋ ಭವಂತಿ । ಅನ್ಯಥಾ ತದನ್ಯತ್ವೇ ಸತೀತ್ಯವಕ್ಷ್ಯನ್ । ನ ದ್ವಿತೀಯಃ । ತ್ವದಭ್ಯುಪಗಮಸ್ಯೈವ ನಿರ್ಮೂಲತ್ವಾತ್ । ಭ್ರಾಂತಿಪ್ರತಿಪನ್ನಾನಾಮನಿರ್ವಚನೀಯತ್ವಸ್ಯಾದ್ಯಾಪ್ಯಸಿದ್ಧತ್ವಾತ್ ।**

**ಅನುವಾದ :-** ಬಾಷ್ಪಾರೋಪಿತಧೂಮದಲ್ಲಿ ಧೂಮತ್ವಧರ್ಮ ಇಲ್ಲ ಎಂದು ಏಕೆ ಹೇಳುತ್ತೀರಿ ? ಮಹಾನಸೀಯಧೂಮದಲ್ಲಿ ಧೂಮತ್ವ ಒಪ್ಪುವಂತೆ ಬಾಷ್ಪಾರೋಪಿತಧೂಮದಲ್ಲಿಯೂ ಧೂಮತ್ವಧರ್ಮವನ್ನು ಅಂಗೀಕರಿಸಿದರೆ ಏನು ದೋಷ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ- ಬಾಷ್ಪಾರೋಪಿತ-ಧೂಮದಲ್ಲಿಯೂ ಧೂಮತ್ವವನ್ನು ಅಂಗೀಕರಿಸಿದರೆ, '**ಪರ್ವತೋ ವಹ್ನಿಮಾನ್ ಧೂಮಾತ್**' ಎಂಬುದಾಗಿ ಧೂಮದಿಂದ ವಹ್ನಿಯನ್ನು ಸಾಧಿಸುವಾಗ, ವಿಪಕ್ಷವಾದ (ವಹ್ನಿರೂಪ ಸಾಧ್ಯ ಇಲ್ಲದ) ಹ್ರದದಲ್ಲಿ ಬಾಷ್ಪಾರೋಪಿತವಾದ ಧೂಮವು ಇರುವ ನಿಮಿತ್ತ ಧೂಮವು ವಹ್ನಿವ್ಯಭಿಚಾರಿ ಆಗಬೇಕಾಗುತ್ತದೆ.

ಧೂಮವು ವಹ್ನಿವ್ಯಭಿಚಾರಿ ಆಗಲಿ ಎಂಬುದಾಗಿ ಶಂಕಿಸಲು ಬರುವುದಿಲ್ಲ. ಏಕೆಂದರೆ- ವಹ್ನ್ಯರ್ಥಿಯಾದವನು (ವಹ್ನಿಯನ್ನು ಅಪೇಕ್ಷಿಸುವ ಪುರುಷನು) 'ಧೂಮ ಇದೆ ಎಂದಮೇಲೆ ವಹ್ನಿ ಇದ್ದೇ ಇರುತ್ತದೆ' ಎಂಬುದಾಗಿ ನಿಃಶಂಕವಾಗಿ ಪ್ರವೃತ್ತನಾಗುವುದು ಲೋಕದಲ್ಲಿ ಕಂಡಿದೆ. ಪ್ರಕೃತ ಧೂಮವು ವಹ್ನಿವ್ಯಭಿಚಾರಿ ಆದರೆ (ಒಂದು ಕಡೆ ಧೂಮ ಇದ್ದರೂ ವಹ್ನಿ ಇಲ್ಲ ಎಂದಾದರೆ) 'ಇಲ್ಲಿ ಧೂಮ ಇದೆ ಎಂದಮೇಲೆ ವಹ್ನಿ ಇದ್ದೇ ಇರುತ್ತದೆ' ಎಂಬುದಾಗಿ ವಹ್ನ್ಯರ್ಥಿಯಾದವನು ನಿಃಶಂಕವಾಗಿ ಪ್ರವೃತ್ತವಾಗುವುದು ಅನುಪಪನ್ನವಾಗಬೇಕಾಗುತ್ತದೆ. ಈಗಲಾದರೋ ವಹ್ನ್ಯರ್ಥಿಯಾದವನು ಧೂಮವನ್ನು ಕಂಡು ನಿಃಶಂಕವಾಗಿ ಪ್ರವೃತ್ತನಾಗುತ್ತಾನೆ ಎಂದಮೇಲೆ ಧೂಮವು ವಹ್ನಿವ್ಯಭಿಚಾರಿ ಅಲ್ಲ ಎಂದು ತಿಳಿಯುತ್ತದೆ ಎಂಬುದಾಗಿ ಆಚಾರ್ಯರು ಹೇಳುತ್ತಾರೆ -

**ಮೂಲ :-** ನ ಚ ಬಾಷ್ಪಾರೋಪಿತಧೂಮೇನ ಧೂಮವತ್ತ್ವಂ ವ್ಯಭಿಚರತಿ ।

**ಮೂಲಾರ್ಥ :-** ಅಗ್ನಿಸಾಧಕವಾಗಿ ಪ್ರಯೋಗಿಸಲ್ಪಡುವ ಧೂಮವು, ಅಗ್ನಿ ಇಲ್ಲದ ಹ್ರದದಲ್ಲಿ ಬಾಷ್ಪಾರೋಪಿತಧೂಮವು ಇರುವ ನಿಮಿತ್ತದಿಂದ ವಹ್ನಿವ್ಯಭಿಚಾರಿ ಆಗುವುದಿಲ್ಲ.

ಹೌದು, ಬಾಷ್ಪಾರೋಪಿತಧೂಮದಲ್ಲಿಯೂ ಸಹ ಧೂಮತ್ವಸಾಮಾನ್ಯವನ್ನು ಅಂಗೀಕರಿಸೋಣ. ಹಾಗಾದರೆ ಅಗ್ನಿ ಇಲ್ಲದ ಹ್ರದದಲ್ಲಿ ಬಾಷ್ಪಾರೋಪಿತ-ಧೂಮವು ಇರುವ ನಿಮಿತ್ತ ಧೂಮವು ವಹ್ನಿವ್ಯಭಿಚಾರಿ ಆಗುವುದರಿಂದ ವಹ್ನ್ಯರ್ಥಿಯಾದವನು ನಿಃಶಂಕವಾಗಿ ಪ್ರವೃತ್ತನಾಗುವುದು ಅನುಪಪನ್ನ-ವಾಗುತ್ತದೆಯಲ್ಲವೇ ? ಎಂಬ ಶಂಕೆ ಬೇಡ. ಏಕೆಂದರೆ- ಯಾವ ಸ್ಥಳದಲ್ಲಿ ವಹ್ನಿಯು ಶಾಂತವಾಗಿದೆ ಆ ಸ್ಥಳದಲ್ಲಿ[೧] ವಹ್ನಿ ಇಲ್ಲದಿದ್ದರೂ ಸಹ ಧೂಮ ಇರುವುದರಿಂದ ವ್ಯಭಿಚಾರ ಬರುತ್ತದೆ. ಹಾಗಾಗಿ ಕೇವಲ ಧೂಮ

೧. ನೀರಿನಿಂದ ವಹ್ನಿಯನ್ನು ಆರಿಸಿದಾಗ ವಹ್ನಿ ಶಾಂತವಾದರೂ ಸ್ವಲ್ಪ ಹೊತ್ತು ಧೂಮ ಇರುತ್ತದೆ. ಅಂತಹ ಸ್ಥಳದಲ್ಲಿ ಎಂದರ್ಥ.

ವಹ್ನಿವ್ಯಾಪ್ಯವಲ್ಲ. ಕಿಂತು ಬಹುಲೋರ್ಧ್ವತ್ವಾದಿವಿಶಿಷ್ಟವಾದ ಧೂಮವೇ ವಹ್ನಿವ್ಯಾಪ್ಯ ಎಂದು ವಿವಕ್ಷಿಸಲಾಗುತ್ತದೆ. ಅಗ್ನಿಯು ಶಾಂತವಾದ ಸ್ಥಳದಲ್ಲಿ ಕೇವಲ ಧೂಮ ಇದ್ದರೂ ಬಹುಲೋರ್ಧ್ವತ್ವಾದಿವಿಶಿಷ್ಟಧೂಮ ಇಲ್ಲವಾದ್ದರಿಂದ ವ್ಯಭಿಚಾರ ಬರುವುದಿಲ್ಲ. ಆದ್ದರಿಂದ ಕೇವಲ ಧೂಮ ವಹ್ನಿವ್ಯಾಪ್ಯ ಎಂದು ಹೇಳದೇ, ಬಹುಲೋರ್ಧ್ವತ್ವಾದಿವಿಶಿಷ್ಟಧೂಮವು ವಹ್ನಿವ್ಯಾಪ್ಯ ಎಂದು ಯಾವ ರೀತಿಯಾಗಿ ಹೇಳುತ್ತಾರೆಯೋ, ಅದೇ ರೀತಿಯಾಗಿ ಕೇವಲ ಧೂಮ ವಹ್ನಿವ್ಯಾಪ್ಯ ಎಂದು ಹೇಳಿದರೆ ವಹ್ನಿ ಇಲ್ಲದ ಹ್ರದದಲ್ಲಿ ಬಾಷ್ಪಾರೋಪಿತಧೂಮ ಇರುವ ನಿಮಿತ್ತ ವ್ಯಭಿಚಾರ ಬರುವುದರಿಂದ 'ಕೇವಲ ಧೂಮ ವಹ್ನಿವ್ಯಾಪ್ಯವಲ್ಲ. ಕಿಂತು ಆಭಾಸವಿವಿಕ್ತವಾದ ಧೂಮವೇ ವಹ್ನಿವ್ಯಾಪ್ಯ' ಎಂದು ಹೇಳುತ್ತೇವೆ. ಪ್ರಕೃತ ಹ್ರದದಲ್ಲಿ ಇರುವ ಧೂಮವು (ಆಭಾಸಧೂಮವೇ ಆಗಿದೆ ಹೊರತು) ಆಭಾಸವಿವಿಕ್ತವಾಗಿಲ್ಲ. ಹೀಗಾಗಿ ವ್ಯಭಿಚಾರ ಬರುವುದಿಲ್ಲ. ಆಭಾಸವಿವಿಕ್ತವಾದ ಧೂಮವು ವಹ್ನಿವ್ಯಾಪ್ಯ ಎಂದು ವಿವಕ್ಷಿಸುವುದರಿಂದ ವಹ್ನ್ಯರ್ಥಿಯಾದವನ ನಿಃಶಂಕ ಪ್ರವೃತ್ತಿಯೂ ಉಪಪನ್ನವಾಗುತ್ತದೆ. ಆದ್ದರಿಂದ ಯಾವ ಅನುಪಪತ್ತಿಯೂ ಇಲ್ಲ ಎಂಬುದಾಗಿ ಆಕ್ಷೇಪ ಬಂದರೆ,

ವಿಕಲ್ಪಪೂರ್ವಕವಾಗಿ ಅದನ್ನು ನಿರಾಕರಿಸುತ್ತಾರೆ- ಆಭಾಸವಿವಿಕ್ತವಾದ ಧೂಮವು ವಹ್ನಿವ್ಯಾಪ್ಯ ಎಂಬ ಮಾತನ್ನು ಹಾಗೆ ಹೇಳುವ ಲೌಕಿಕರ ಅಭಿಪ್ರಾಯಕ್ಕೆ ಅನುಗುಣವಾಗಿ ಹೇಳುತ್ತಿದ್ದೀರೋ? ಅಥವಾ ಬಾಷ್ಪಾರೋಪಿತಧೂಮದಲ್ಲಿ ನೀವು ಅಂಗೀಕರಿಸಿದ ಧೂಮತ್ವಸಾಮಾನ್ಯವನ್ನು ನಿರ್ವಾಹ ಮಾಡುವುದಕ್ಕಾಗಿ ಹೇಳುತ್ತಿದ್ದೀರೋ ?

ಆಭಾಸವಿವಿಕ್ತವಾದ ಧೂಮವು ವಹ್ನಿವ್ಯಾಪ್ಯ ಎಂಬುದಾಗಿ ಲೌಕಿಕರು ಅಭಿಪ್ರಾಯಪಡುತ್ತಾರೆ. ಲೌಕಿಕರ ಆ ಅಭಿಪ್ರಾಯಕ್ಕೆ ಅನುಗುಣವಾಗಿ ಹಾಗೆ ಹೇಳುತ್ತೇವೆ ಎಂಬ ಮೊದಲನೇ ಪಕ್ಷ ಸರಿಯಲ್ಲ. ಏಕೆಂದರೆ- ಲೌಕಿಕರ ಅಭಿಪ್ರಾಯವೇ ಹಾಗೆ ಇಲ್ಲ. ವಹ್ನಿ ಇಲ್ಲದ ಹ್ರದದಲ್ಲಿ ಬಾಷ್ಪಾರೋಪಿತಧೂಮ ಇರುವ ಕಾರಣ ಧೂಮವು ವಹ್ನಿವ್ಯಭಿಚಾರಿಯಾಗುತ್ತದೆ ಎಂಬುದಾಗಿ ಧೂಮಕ್ಕೆ ವ್ಯಭಿಚಾರವನ್ನು ಹೇಳಿದರೆ, ಈ ಬಾಷ್ಪಾರೋಪಿತಧೂಮವು ಧೂಮವೇ ಅಲ್ಲ ಎಂಬುದಾಗಿ ಲೌಕಿಕರು ಪ್ರತ್ಯುತ್ತರ ನೀಡುವವರಾಗುತ್ತರೆ. ಇಲ್ಲವಾದರೆ ಮಹಾನಸೀಯಧೂಮ-ಪರ್ವತೀಯಧೂಮಗಳಂತೆ ಬಾಷ್ಪಾರೋಪಿತಧೂಮವೂ ಒಂದು ಧೂಮವೇ ಆಗಿದೆ ಎಂದೇ ಲೌಕಿಕರು ಅಭಿಪ್ರಾಯಪಡುತ್ತಿದ್ದರೆ,

ಬಾಷ್ಪಾರೋಪಿತಧೂಮದಿಂದ ಹ್ರದದಲ್ಲಿ ವ್ಯಭಿಚಾರ ಹೇಳಿದಾಗ 'ತದನ್ಯತ್ವೇ ಸತಿ ಬಾಷ್ಪಾರೋಪಿತಧೂಮದಿಂದ ಭಿನ್ನವಾದ ಧೂಮವು ಅಗ್ನಿಸಾಧಕ' ಎಂಬುದಾಗಿ ಹೇಳಿ (ವಿಶೇಷಣ ನೀಡಿ) ವ್ಯಭಿಚಾರವನ್ನು ಪರಿಹರಿಸಿಕೊಳ್ಳುತ್ತಿದ್ದರು ಅಲ್ಲವೇ ? ಪ್ರಕೃತ ಯಾವ ಲೌಕಿಕರೂ 'ತದನ್ಯತ್ವೇ ಸತಿ' ಎಂದು ವಿಶೇಷಣ ನೀಡುವುದಿಲ್ಲವಾದ್ದರಿಂದ (ಲೌಕಿಕರ ದೃಷ್ಟಿಯಲ್ಲಿ ಬಾಷ್ಪಾರೋಪಿತಧೂಮವು ಧೂಮವೇ ಅಲ್ಲವಾದ್ದರಿಂದ) ಆಭಾಸವಿವಿಕ್ತವಾದ ಧೂಮವು ವಹ್ನಿವ್ಯಾಪ್ಯ ಎಂಬುದಾಗಿ ಲೌಕಕರ ಅಭಿಪ್ರಾಯಕ್ಕೆ ಅನುಗುಣವಾಗಿ ಹೇಳುವ ಮೊದಲನೇ ಪಕ್ಷ ಸರಿಯಲ್ಲ.

ಇನ್ನು ಬಾಷ್ಪಾರೋಪಿತಧೂಮದಲ್ಲಿ ನಾವು ಅಂಗೀಕರಿಸಿದ ಧೂಮತ್ವ-ಸಾಮಾನ್ಯವನ್ನು ನಿರ್ವಾಹ ಮಾಡುವುದಕ್ಕಾಗಿ ಹಾಗೆ ಹೇಳುತ್ತೇವೆ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಬಾಷ್ಪಾರೋಪಿತಧೂಮದಲ್ಲಿ ಧೂಮತ್ವ ಸಾಮಾನ್ಯವನ್ನು ನೀವು ಅಂಗೀಕರಿಸಿರುವುದೇ ನಿರ್ಮೂಲವಾಗಿದೆ. ಹಾಗೆ ಅಂಗೀಕರಿಸಲು ಯಾವುದೇ ಪ್ರಮಾಣ ಆಧಾರವಾಗಿ ಇಲ್ಲ ಎಂದು ಭಾವ.

ಬಾಷ್ಪಾರೋಪಿತಧೂಮದಲ್ಲಿ ಧೂಮತ್ವಸಾಮಾನ್ಯವನ್ನು ನಾವು ಅಂಗೀಕರಿ-ಸುವುದು ನಿರ್ಮೂಲ ಅಲ್ಲ. ಏಕೆಂದರೆ- ಬಾಷ್ಪಾರೋಪಿತವಾದ ಧೂಮವು ಶಶವಿಷಾಣದಂತೆ ಅತ್ಯಂತ ಅಸತ್ ಅಲ್ಲ. ಹಾಗೆ ಒಂದುವೇಳೆ ಅತ್ಯಂತ ಅಸತ್ ಆಗಿದ್ದರೆ ಆಗ ಅಸತ್ ಆದ ಬಾಷ್ಪಾರೋಪಿತಧೂಮದಲ್ಲಿ ಸತ್ ಆದ ಮಹಾನಸೀಯಧೂಮದಲ್ಲಿ ಧೂಮತ್ವಸಾಮಾನ್ಯ ಕೂಡುತ್ತಿರಲಿಲ್ಲ. ಹೌದು, ಬಾಷ್ಪಾರೋಪಿತಧೂಮವು ಅತ್ಯಂತ ಅಸತ್ ಅಲ್ಲ ಎಂದರೆ ಮತ್ತೇನು ? ಎಂದರೆ, ಅದು ಭ್ರಾಂತಿಪ್ರತಿಪನ್ನವಾದ್ದರಿಂದ ಅನಿರ್ವಚನೀಯವಾಗಿದೆ ಪ್ರಾತಿಭಾಸಿಕವಾಗಿದೆ. ಹಾಗಾಗಿ ವ್ಯಾವಹಾರಿಕಸತ್ ಆದ ಮಹಾನಸೀಯಧೂಮ, ಪ್ರಾತಿಭಾಸಿಕಸತ್ ಆದ ಬಾಷ್ಪಾರೋಪಿತಧೂಮ ಇವುಗಳಲ್ಲಿ ಧೂಮತ್ವ ಸಾಮಾನ್ಯವು ಕೂಡುತ್ತದೆ. ಆದ್ದರಿಂದ (ಬಾಷ್ಪಾರೋಪಿತಧೂಮವು ಅನಿರ್ವಚನೀಯವಾದ್ದರಿಂದ) ಬಾಷ್ಪಾರೋಪಿತಧೂಮದಲ್ಲಿ ಧೂಮತ್ವ-ಸಾಮಾನ್ಯವನ್ನು ನಾವು ಅಂಗೀಕರಿಸಿರುವುದು ನಿರ್ಮೂಲ ಅಲ್ಲ ಎಂಬುದಾಗಿ ಶಂಕಿಸಿದರೆ ಅದು ಸರಿಯಲ್ಲ.

ಕಾರಣ- ಭ್ರಾಂತಿಪ್ರತಿಪನ್ನವಾದ ವಸ್ತುಗಳಿಗೆ ಅನಿರ್ವಚನೀಯತ್ವವು ಇಂದಿಗೂ ಸಿದ್ಧವಾಗಿಲ್ಲ. (ಅನಿರ್ವಚನೀಯತ್ವಸಾಧಕವಾದ ಅನುಮಾನಕ್ಕಿಂತಲೂ

ಪೂರ್ವದಲ್ಲಿಯಾಗಲೀ ಅನಂತರದಲ್ಲಿಯಾಗಲೀ ಸಿದ್ಧವಾಗಿಲ್ಲ ಎಂದಷ್ಟೇ ಅಲ್ಲ. ಕಿಂತು ಅನಿರ್ವಚನೀಯತ್ವಸಾಧಕ ಅನುಮಾನವು ಪ್ರವೃತ್ತವಾದ ದಶಾದಲ್ಲಿಯೂ ಸಹ ಭ್ರಾಂತಿಪತಿಪನ್ನವಸ್ತುಗಳಿಗೆ ಅನಿರ್ವಚನೀಯತ್ವ ಸಿದ್ಧವಾಗಿಲ್ಲ.) ಹಾಗಾಗಿ ಭ್ರಾಂತಿಪ್ರತಿಪನ್ನವಾದ ಬಾಷ್ಪಾರೋಪಿತಧೂಮವು ಅತ್ಯಂತಅಸತ್ ಆಗಿದೆ. ಅಸತ್ ಆದ ಬಾಷ್ಪಾರೋಪಿತಧೂಮ, ಸತ್ ಆದ ಮಹಾನಸೀಯಧೂಮ ಇವುಗಳಲ್ಲಿ ಧೂಮತ್ವಸಾಮಾನ್ಯ ಇಲ್ಲದಿದ್ದರೂ ನೀವು ಅದನ್ನು ಅಂಗೀಕರಿಸುವುದು ನಿರ್ಮೂಲವೇ ಆಗಿದೆ ಎಂದು ಅಭಿಪ್ರಾಯ.

ಆದ್ದರಿಂದ ಅಪ್ರಸಿದ್ಧವಿಶೇಷಣತಾ ದೋಷ ಬರುವುದರಿಂದ ''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್'' ಎಂಬ ಅನುಮಾನವಾಗಲೀ, ಅಸತ್-ಅನಿರ್ವಚನೀಯಗಳಲ್ಲಿ ಮಿಥ್ಯಾತ್ವರೂಪ ಸಾಧಾರಣಧರ್ಮವು ಇಲ್ಲವಾದ್ದರಿಂದ ''ವಿವಾದಪದಂ ಮಿಥ್ಯಾ ಬಾಧ್ಯತ್ವಾತ್'' ಎಂಬ ಅನುಮಾನವಾಗಲೀ ಅನಿರ್ವಚನೀಯವಸ್ತುವಿಷಯದಲ್ಲಿ ಪ್ರಮಾಣವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ಈವರೆಗೆ ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷ-ಅನುಮಾನಪ್ರಮಾಣಗಳನ್ನು ನಿರಾಕರಿಸಿ, ಪ್ರಕೃತ ಆಗಮಪ್ರಮಾಣವನ್ನು ಶಂಕಿಸಿಕೊಂಡು ಅದನ್ನೂ ನಿರಾಕರಿಸುತ್ತಾರೆ :-

**ಅನಿರ್ವಚನೀಯವಸ್ತುವಿಷಯದಲ್ಲಿ ನಿರವಕಾಶಾಗಮಪ್ರಮಾಣನಿರಾಕರಣೆ**

**ಟೀಕಾ: ಅಸ್ತ್ವಾಗಮಸ್ತರ್ಹ್ಯನಿರ್ವಚನೀಯಾರ್ಥೇ ಮಾನಮಿತಿ ಚೇತ್ । ಸ ಕಿಂ ಸದಸದ್ವಿಲಕ್ಷಣಮೇತದಿತಿ ನಿರವಕಾಶತಯಾ ವಿವಕ್ಷಿತಾರ್ಥಸ್ಯ ಪ್ರತಿಪಾದಕೋ ಭವೇತ್ । ಉತಾನಿರ್ವಚನೀಯಮೇತ-ದಿತ್ಯಾದಿರೂಪಃ । ನಾದ್ಯೋಽನುಪಲಂಭಾದಿತ್ಯಾಹ -**

**ಮೂಲ :- ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ ।**

**ಚಶಬ್ದಃ ಪ್ರಮಾಣಾಂತರನಿರಾಕರಣಸಮುಚ್ಚಯೇ । ಕ್ವಚಿತ್ ಪ್ರದೇಶೇ ।**

**ಅನುವಾದ :-** ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷ-ಅನುಮಾನಗಳು ಪ್ರಮಾಣವಾಗದೇ ಇದ್ದರೂ ಸಹ ಆಗಮವು ಪ್ರಮಾಣವಾಗುತ್ತದೆ ಎಂಬುದಾಗಿ ಶಂಕೆ ಬಂದರೆ, ಅದನ್ನು ವಿಕಲ್ಪಪೂರ್ವಕವಾಗಿ ನಿರಾಕರಿಸುತ್ತಾರೆ -

ಅನಿರ್ವಚನೀಯವಸ್ತುವಿಷಯದಲ್ಲಿ ಆಗಮವು ಪ್ರಮಾಣವಾಗುತ್ತದೆ ಎನ್ನುವುದಾದರೆ, ಆಗಮವು ಹೇಗೆ ಪ್ರಮಾಣವಾಗುತ್ತದೆ ? ಆಗಮವು 'ಇದು ಸದಸದ್ವಿಲಕ್ಷಣವಾಗಿದೆ' ಎಂಬುದಾಗಿ ನಿರವಕಾಶವಾಗಿ (ಅನಿರ್ವಚನೀಯ-ವಸ್ತುವನ್ನು ಪ್ರತಿಪಾದಿಸುತ್ತದೆಯೋ?) ವಿವಕ್ಷಿತಾರ್ಥಕ್ಕೆ ಪ್ರತಿಪಾದಕವಾಗುತ್ತದೆಯೋ? ಅಥವಾ ಇದು ಅನಿರ್ವಚನೀಯವಾಗಿದೆ ಎಂಬುದಾಗಿ ಪ್ರತಿಪಾದಿಸುತ್ತದೆಯೋ?

ಆಗಮವು 'ಇದು ಸದಸದ್ವಿಲಕ್ಷಣವಾಗಿದೆ' ಎಂಬುದಾಗಿ ನಿರವಕಾಶವಾಗಿ ಅನಿರ್ವಚನೀಯವಸ್ತುವನ್ನು ಪ್ರತಿಪಾದಿಸುತ್ತದೆ ಎಂಬ ಮೊದಲನೇ ಪಕ್ಷ ಸರಿಯಲ್ಲ. ಕಾರಣ- ಅಂತಹ ನಿರವಕಾಶವಾದ ಯಾವ ಆಗಮವೂ ಉಪಲಬ್ಧವಾಗಿಲ್ಲ ಎಂಬುದಾಗಿ ಆಚಾರ್ಯರು ನಿರಾಕರಿಸುತ್ತಾರೆ-

**ಮೂಲ :- ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ ।**

**ಮೂಲಾರ್ಥ :- ಭಾವಾಭಾವವಿಲಕ್ಷಣವಾದ (ಸದಸದ್ವಿಲಕ್ಷಣವಾದ) ವಸ್ತುವನ್ನು ಯಾವ ಶಾಖೆಯ ಆಗಮವೂ ಪ್ರತಿಪಾದಿಸುವುದಿಲ್ಲ.**

'ನ ಚ...' ಎಂಬುದಾಗಿ ಮೂಲದಲ್ಲಿ ಚಶಬ್ದವು ಮತ್ತೊಂದು ಪ್ರಮಾಣದ ನಿರಾಕರಣೆಗೆ ಸಮುಚ್ಚಾಯಕವಾಗಿದೆ. ಅಂದರೆ- ಅನಿರ್ವಚನೀಯ-ವಸ್ತುವಿಷಯದಲ್ಲಿ ಪ್ರತ್ಯಕ್ಷ-ಅನುಮಾನಗಳನ್ನು ಹಿಂದೆ ನಿರಾಕರಿಸಲಾಗಿದೆ. ಹಾಗಾಗಿ ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷ-ಅನುಮಾನಗಳು ಪ್ರಮಾಣವಾಗುವುದಿಲ್ಲ ಎಂದಷ್ಟೇ ಅಲ್ಲ, ಕಿಂತು ಆಗಮವೂ ಪ್ರಮಾಣ-ವಾಗುವುದಿಲ್ಲ ಎಂಬುದಾಗಿ ಆಗಮರೂಪ ಪ್ರಮಾಣಾಂತರನಿರಾಕರಣದ ಸಮುಚ್ಚಯ ಮಾಡುತ್ತಿದೆ ಚಶಬ್ದ ಎಂದರ್ಥ.

'ಕ್ವಚಿದಾಗಮಃ' ಎಂಬುದಾಗಿ ಮೂಲದಲ್ಲಿ 'ಕ್ವಚಿತ್' ಎಂದರೆ ಪ್ರದೇಶದಲ್ಲಿ ಶಾಖೆಯಲ್ಲಿ ಎಂದರ್ಥ. ಸದಸದ್ವಿಲಕ್ಷಣವಾದ ವಸ್ತುವನ್ನು ಪ್ರತಿಪಾದಿಸುವ ಆಗಮವಾಕ್ಯವು ಯಾವ ಶಾಖೆಯಲ್ಲಿಯೂ ಉಪಲಬ್ಧವಾಗುವುದಿಲ್ಲ ಎಂದು ಭಾವ.

**ಟೀಕಾ : ನಿರವಕಾಶಾಗಮಪಕ್ಷನಿರಾಕರಣಸೂಚನಾಯಾನಿರ್ವಚನೀಯ-ಮಿತಿ ಲಕ್ಷ್ಯಪ್ರಕ್ರಮಂ ವಿಹಾಯ ಭಾವಾಭಾವವಿಲಕ್ಷಣಮಿತಿ ಲಕ್ಷಣಾನುವಾದಃ ಕೃತಃ । ತರ್ಹಿ ಸದಸದ್ವಿಲಕ್ಷಣಮಿತಿ ವಕ್ತವ್ಯಮ್ । ತಸ್ಯೈವಾನಿರ್ವಚನೀಯತ್ವೇನ ಪರೈರಂಗೀಕೃತತ್ವಾತ್ ।**

**ಮೈವಮ್ । ಯತೋಽತ್ರ ನ ಭಾವಾಭಾವಶಬ್ದೌ ರೂಢ್ಯಾ ವಿಧಿನಿಷೇಧಯೋರಭಿಧಾಯಕೌ । ಕಿಂತು ಯೋಗೇನ ಸದಸತ್ಪರೌ । ವಿಧಿನಿಷೇಧಪರತ್ವೇಽಪಿ ಕೇನಾಪಿ ಪ್ರಕಾರೇಣ ನಿರ್ವಕ್ತುಮಶಕ್ಯಮ-ನಿರ್ವಚನೀಯಮ್ । ಸದಸದ್ವಿಲಕ್ಷಣತ್ವಂ ತೂಪಲಕ್ಷಣತ್ವೇನ ಉಚ್ಯತ ಇತಿ ಪರೈರಂಗೀಕೃತತ್ವಾದದೋಷಃ ।**

**ಅತ ಏವ 'ಉಭಯವಿಲಕ್ಷಣಂ ಚೇದನಿರ್ವಚನೀಯತ್ವಂ ಬ್ರಹ್ಮಣ ಏವಾಪತಿತಮ್' ಇತಿ ಭಿನ್ನಾಭಿನ್ನವಿಲಕ್ಷಣತ್ವೇನಾನಿರ್ವಚನೀಯತ್ವಂ ವಕ್ಷ್ಯತಿ । ಪ್ರಸಿದ್ಧಾತಿಕ್ರಮಸ್ತೂತ್ತರಾರ್ಥಃ । ತಚ್ಚ ದರ್ಶಯಿಷ್ಯಾಮಃ ॥**

**ಅನುವಾದ :-** ಹೌದು, ಹಿಂದೆ ''ನ ಚಾನಿರ್ವಚನೀಯೇ ಕಿಂಚಿನ್ಮಾನಂ'' ಎಂಬುದಾಗಿ ಅಥವಾ ''ಅನಿರ್ವಚನೀಯಾಸಿದ್ಧೇರೇವ'' ಎಂಬುದಾಗಿ ಉಪಕ್ರಮದಲ್ಲಿ ಲಕ್ಷಣಧರ್ಮಿಯಾಗಿ ಲಕ್ಷ್ಯವೇ ಪ್ರಕ್ರಾಂತವಾದದ್ದರಿಂದ ಪ್ರಕೃತದಲ್ಲಿ ''**ನ ಚ ಅನಿರ್ವಚನೀಯಂ ಕ್ವಚಿದಾಗಮೋ ವಕ್ತಿ**'' ಎಂಬುದಾಗಿ ಲಕ್ಷ್ಯಪ್ರಕ್ರಮ ಮಾಡಬೇಕಿತ್ತು. ಉಪಕ್ರಮದಲ್ಲಿ ಹೇಳಿದ ಲಕ್ಷ್ಯವನ್ನು ಹೇಳುವುದು ಬಿಟ್ಟು ''ನ ಚ ಭಾವಾಭಾವವಿಲಕ್ಷಣಂ'' ಎಂಬುದಾಗಿ ಏಕೆ ಹೇಳುತ್ತಿದ್ದಾರೆ ? ಭಾವಾಭಾವವಿಲಕ್ಷಣತ್ವವು ಅನಿರ್ವಚನೀಯದ ಲಕ್ಷಣವಾದ್ದರಿಂದ ಲಕ್ಷಣವನ್ನು ಹೇಳುತ್ತಿದ್ದಾರೆ ಎಂಬ ಉತ್ತರ ಸರಿಯಲ್ಲ. ಲಕ್ಷ್ಯಪ್ರಕ್ರಮವನ್ನು ಬಿಟ್ಟು ಲಕ್ಷಣವನ್ನು ಅನುವಾದ ಮಾಡುವುದಕ್ಕೆ ಯಾವುದೇ ಪ್ರಯೋಜನ ಇಲ್ಲ. ಅಂದಮೇಲೆ ''ನ ಚಾನಿರ್ವಚನೀಯಂ'' ಎಂದು ಹೇಳದೇ ''ನ ಚ ಭಾವಾಭಾವವಿಲಕ್ಷಣಂ'' ಎಂದು ಏಕೆ ಹೇಳಿದರು ?

ಈ ಪ್ರಶ್ನೆಗೆ ಟೀಕಾಕೃತ್ತಾದರು ಉತ್ತರ ನೀಡುತ್ತಿದ್ದಾರೆ- ''ಆಗಮವು 'ಇದು ಸದಸದ್ವಿಲಕ್ಷಣವಾಗಿದೆ' ಎಂಬುದಾಗಿ ನಿರವಕಾಶವಾಗಿ ಅನಿರ್ವಚನೀಯ-ವಸ್ತುವನ್ನು ಪ್ರತಿಪಾದಿಸುತ್ತದೆ'' ಎಂಬ ಮೊದಲನೇ ಪಕ್ಷದ ಅರ್ಥಾತ್ ನಿರವಕಾಶ ಆಗಮಪಕ್ಷದ ನಿರಾಕರಣೆಯನ್ನು ಸೂಚಿಸುವುದಕ್ಕಾಗಿ ('ಇದು ಸದಸದ್ವಿಲಕ್ಷಣವಾಗಿದೆ' ಎಂಬುದಾಗಿ ಆಗಮವು ನಿರಕವಕಾಶವಾಗಿ ಅನಿರ್ವಚನೀಯವಸ್ತುವನ್ನು ಪ್ರತಿಪಾದಿಸುವುದಿಲ್ಲ ಎಂದು ತಿಳಿಸುವುದಕ್ಕಾಗಿ) ಆಚಾರ್ಯರು

**''ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ''**

ಎಂಬುದಾಗಿ ಲಕ್ಷಣಾನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ ಎಂದು ಭಾವ.

ಹಾಗಾದರೆ ಲಕ್ಷಣವನ್ನು ಅನುವಾದ ಮಾಡುವ ಉದ್ದೇಶವಿದ್ದದ್ದಾದರೆ

**ಪ್ರತ್ಯೇಕಂ ಸದಸತ್ತ್ವಾಭ್ಯಾಂ ವಿಚಾರಪದವೀಂ ನ ಯತ್ ।**
**ಗಾಹತೇ ತದನಿರ್ವಾಚ್ಯಮಾಹುರ್ವೇದಾಂತವಾದಿನಃ ॥**

ಎಂಬ ಅವರ ಕಾರಿಕೆಯಂತೆ ಸದಸದ್ವಿಲಕ್ಷಣತ್ವವನ್ನೇ ಅನಿರ್ವಚನೀಯ-ಲಕ್ಷಣವನ್ನಾಗಿ ಅವರು ಅಂಗೀಕರಿಸಿದ್ದರಿಂದ ''**ನ ಚ ಸದಸದ್ವಿಲಕ್ಷಣಂ ಕ್ವಚಿದಾಗಮೋ ವಕ್ತಿ**'' ಎಂಬುದಾಗಿ ಆಚಾರ್ಯರು ಹೇಳಬೇಕಿತ್ತು ? ಲಕ್ಷಣವನ್ನಾಗಿ ಅಂಗೀಕರಿಸಿದ ಸದಸದ್ವಿಲಕ್ಷಣತ್ವವನ್ನು ಅನುವಾದ ಮಾಡುವುದು ಬಿಟ್ಟು, ಲಕ್ಷಣವನ್ನಾಗಿ ಒಪ್ಪದ ಭಾವಾಭಾವವಿಲಕ್ಷಣತ್ವವನ್ನು ಏಕೆ ಅನುವಾದ ಮಾಡುತ್ತಿದ್ದಾರೆ ?

ಈ ಪ್ರಶ್ನೆಗೆ ಟೀಕಾಕೃತ್ಪಾದರು ಎರಡು ರೀತಿಯಿಂದ ಸಮಾಧಾನ ಹೇಳುತ್ತಾರೆ-

**ಸಮಾಧಾನ 1) ಭಾವಾಭಾವವಿಲಕ್ಷಣತ್ವ ಎಂದರೆ ಸದಸದ್ವಿಲಕ್ಷಣತ್ವ ಎಂದೇ ಅರ್ಥ**

ಇಲ್ಲಿ ಭಾವ-ಅಭಾವಶಬ್ದಗಳು ರೂಢಿವೃತ್ತಿಯಿಂದ ವಿಧಿ-ನಿಷೇಧಗಳಿಗೆ ವಾಚಕವಾಗಿಲ್ಲ. (ಭಾವ-ಅಭಾವ ಶಬ್ದಗಳಿಗೆ ರೂಢಿವೃತ್ತಿಯಿಂದ ವಿಧಿ-ನಿಷೇಧಗಳು ಎಂಬ ಅರ್ಥ ವಿವಕ್ಷಿತವಾಗಿಲ್ಲ.) ಕಿಂತು ಭಾವ-ಅಭಾವ ಶಬ್ದಗಳು

**'ಭವತೀತಿ ಭಾವಃ ಸನ್, ನ ಭವತೀತಿ ಅಭಾವಃ ಅಸನ್'**

ಎಂಬುದಾಗಿ ಯೋಗವೃತ್ತಿಯಿಂದ ಸತ್-ಅಸತ್‌ವಾಚಕವಾಗಿವೆ. (ಭಾವ-ಅಭಾವ ಶಬ್ದಗಳಿಗೆ ಯೋಗವೃತ್ತಿಯಿಂದ ಸತ್-ಅಸತ್ ಎಂದು ಅರ್ಥ.) ಹೀಗಾಗಿ ಭಾವಾಭಾವವಿಲಕ್ಷಣತ್ವವನ್ನು ಹೇಳಿದರೆ ಸದಸದ್ವಿಲಕ್ಷಣತ್ವವನ್ನೇ ಹೇಳಿದಂತಾಗುವುದರಿಂದ ಯಾವ ಅನುಪಪತ್ತಿಯೂ ಇಲ್ಲ.

**ಸಮಾಧಾನ 2) ಭಾವಾಭಾವವಿಲಕ್ಷಣತ್ವವೂ ಅನಿರ್ವಚನೀಯಲಕ್ಷಣವೇ**

ಅಥವಾ ಭಾವ-ಅಭಾವ ಶಬ್ದಗಳು ರೂಢಿವೃತ್ತಿಯಿಂದ ವಿಧಿ-ನಿಷೇಧಗಳಿಗೆ ವಾಚಕ ಎಂದೇ ಇಟ್ಟುಕೊಂಡರೂ ಸಹ ಅನಿರ್ವಚನೀಯಲಕ್ಷಣಾನುವಾದಕ್ಕೆ ಯಾವುದೇ ಅನುಪಪತ್ತಿ ಇಲ್ಲ. ಏಕೆಂದರೆ -

**''ಕೇನಾಪಿ ಪ್ರಕಾರೇಣ ನಿರ್ವಕ್ತುಂ ಅಶಕ್ಯಂ ಅನಿರ್ವಚನೀಯಮ್''**

ಸತ್-ಅಸತ್, ನಿತ್ಯ-ಅನಿತ್ಯ, ಭಾವ-ಅಭಾವ ಹೀಗೆ ಯಾವ ಪ್ರಕಾರದಿಂದಲೂ ಯಾವುದನ್ನು ನಿರ್ವಚನ ಮಾಡಲು ಬರುವುದಿಲ್ಲ ಅದು ಅನಿರ್ವಚನೀಯ ಎನ್ನುವುದು ಅವರಿಗೆ ಸಮ್ಮತವಾಗಿದೆ. ಸದಸದ್ವಿಲಕ್ಷಣತ್ವ ಎಂಬ ಪ್ರಸಿದ್ಧ ಲಕ್ಷಣವಾದರೂ ಉಪಲಕ್ಷಣವಾಗಿ ಹೇಳಲ್ಪಡುತ್ತದೆ. ಅಂದರೆ ಸದಸದ್ವಿಲಕ್ಷಣತ್ವ ಒಂದೇ ಅನಿರ್ವಚನೀಯಲಕ್ಷಣ ಅಲ್ಲ. ಭಾವಾಭಾವವಿಲಕ್ಷಣತ್ವ, ನಿತ್ಯಾನಿತ್ಯವಿಲಕ್ಷಣತ್ವ ಮೊದಲಾದವುಗಳನ್ನೂ ಉಪಲಕ್ಷಣಯಾ ತೆಗೆದುಕೊಳ್ಳಬೇಕು ಎಂದರ್ಥ.

ಅನ್ನುವುದಕ್ಕಾಗಿಯೇ ಮುಂದೆ 'ಬ್ರಹ್ಮನು ಭಿನ್ನನೋ ? ಅಭಿನ್ನನೋ ? ಭಿನ್ನಾಭಿನ್ನನೋ ? ಭಿನ್ನಾಭಿನ್ನವಿಲಕ್ಷಣನೋ ?' ಎಂದು ವಿಕಲ್ಪ ಮಾಡಿ

**'ಉಭಯವಿಲಕ್ಷಣತ್ವಂ ಚೇದನಿರ್ವಚನೀಯತ್ವಂ ಬ್ರಹ್ಮಣ ಏವಾಪತಿತಮ್।'**

''ಬ್ರಹ್ಮನನ್ನು ಭಿನ್ನಾಭಿನ್ನವಿಲಕ್ಷಣ ಎಂದು ಅಂಗೀಕರಿಸುವುದಾದರೆ ಬ್ರಹ್ಮನಿಗೇ ಅನಿರ್ವಚನೀಯತ್ವ ಬರಬೇಕಾಗುತ್ತದೆ'' ಎಂಬುದಾಗಿ ಭಿನ್ನಾಭಿನ್ನವಿಲಕ್ಷಣತ್ವದಿಂದಲೂ ಅನಿರ್ವಚನೀಯತ್ವವನ್ನು (ಆಪಾದಿಸುವವರಿದ್ದಾರೆ) ಹೇಳುವವರಿದ್ದಾರೆ. ಹಾಗಾಗಿ ''ಕೇನಾಪಿ ಪ್ರಕಾರೇಣ ನಿರ್ವಕ್ತುಂ ಅಶಕ್ಯಂ ಅನಿರ್ವಚನೀಯಂ'' ಭಾವ-ಅಭಾವ, ಸತ್-ಅಸತ್ ಇತ್ಯಾದಿಯಾಗಿ ಯಾವ ಪ್ರಕಾರದಿಂದಲೂ ಯಾವುದನ್ನು ನಿರ್ವಚನ ಮಾಡಲು ಬರುವುದಿಲ್ಲ ಅದು ಅನಿರ್ವಚನೀಯ ಎನ್ನುವುದು ಅನಿರ್ವಚನೀಯವಾದಿಗಳಿಗೆ ಸಮ್ಮತವಾದ್ದರಿಂದ, (ಭಾವಭಾವವಿಲಕ್ಷಣತ್ವವೂ ಅನಿರ್ವಚನೀಯಲಕ್ಷಣವಾಗಿ ಅಂಗೀಕೃತ-ವಾದ್ದರಿಂದ) 'ನ ಚ ಭಾವಾಭಾವವಿಲಕ್ಷಣಂ' ಎಂಬುದಾಗಿ ಅನಿರ್ವಚನೀಯ-ಲಕ್ಷಣಾನುವಾದ ಮಾಡಿದ್ದು (ಅನುಪಪನ್ನ ಅಲ್ಲ) ಸಮಂಜಸವೇ ಆಗಿದೆ.

**ಪ್ರಸಿದ್ಧಲಕ್ಷಣವನ್ನು ಬಿಟ್ಟು ಅಪ್ರಸಿದ್ಧಲಕ್ಷಣವನ್ನು ಏಕೆ ಅನುವಾದಿಸುತ್ತಿದ್ದಾರೆ ?**

ಹೌದು, ಸದಸದ್ವಿಲಕ್ಷಣತ್ವದಂತೆ ಭಾವಾಭಾವವಿಲಕ್ಷಣತ್ವವೂ ಅನಿರ್ವಚನೀಯಲಕ್ಷಣವೇ ಆಗಿದೆ ಎನ್ನುವುದು ಸರಿ. ಆದರೂ ಸದಸದ್ವಿಲಕ್ಷಣತ್ವ ಎನ್ನುವುದೇ ಪ್ರಸಿದ್ಧವಾದ ಲಕ್ಷಣವಾಗಿದ್ದರಿಂದ ''**ನ ಚ ಸದಸದ್ವಿಲಕ್ಷಣಂ**'' ಎಂಬುದಾಗಿ ಪ್ರಸಿದ್ಧಲಕ್ಷಣವಾದ ಸದಸದ್ವಿಲಕ್ಷಣತ್ವವನ್ನೇ ಅನುವಾದ ಮಾಡುವುದು ಉಚಿತ. ಪ್ರಸಿದ್ಧವಾದ ಲಕ್ಷಣವನ್ನು ಅನುವಾದ ಮಾಡುವುದು

ಬಿಟ್ಟು, ಭಾವಾಭಾವವಿಲಕ್ಷಣತ್ವ ಎಂಬ ಅಪ್ರಸಿದ್ಧವಾದ ಲಕ್ಷಣವನ್ನು ಏಕೆ ಅನುವಾದಿಸುತ್ತಿದ್ದಾರೆ ? ಅದರಿಂದ ಏನು ಪ್ರಯೋಜನ ?

ಈ ಪ್ರಶ್ನೆಗೆ ಹೀಗೆ ಸಮಾಧಾನ ತಿಳಿಸುತ್ತಾರೆ :- ಪ್ರಸಿದ್ಧಲಕ್ಷಣವನ್ನು ಅನುವಾದಿಸುವುದು ಬಿಟ್ಟು ಅಪ್ರಸಿದ್ಧಲಕ್ಷಣವನ್ನು (ಭಾವಾಭಾವವಿಲಕ್ಷಣತ್ವವನ್ನು) ಅನುವಾದಿಸುತ್ತಿರುವುದು ಉತ್ತರಗ್ರಂಥದ ಉಪಕ್ಷೇಪಕ್ಕಾಗಿ. ಉತ್ತರಗ್ರಂಥದ ಉಪಕ್ಷೇಪ ಹೇಗೆ ? ಎಂಬುದನ್ನು ಇಲ್ಲಿಯೇ ಮುಂದೆ ತೋರಿಸಿಕೊಡುತ್ತೇವೆ.

ಅಂದರೆ :- ಭಾವಾಭಾವವಿಲಕ್ಷಣವಾದ ಅನಿರ್ವಚನೀಯವಸ್ತುವನ್ನು ''ನಾಸದಾಸೀತ್ ನೋ ಸದಾಸೀತ್'' ಇತ್ಯಾದಿ ಆಗಮಗಳು ಪ್ರತಿಪಾದಿಸುತ್ತ ಇವೆಯಲ್ಲವೇ ? ಹಾಗಾಗಿ ಭಾವಾಭಾವವಿಲಕ್ಷಣವಸ್ತುವನ್ನು ಯಾವ ಆಗಮವೂ ಪ್ರತಿಪಾದಿಸುವುದಿಲ್ಲ ಎಂದು ಹೇಗೆ ಹೇಳುತ್ತೀರಿ ? ಎಂಬ ಆಕ್ಷೇಪಪೂರ್ವಕವಾಗಿ ಮುಂದಿನ ಗ್ರಂಥವು ಪ್ರವೃತ್ತವಾಗುತ್ತದೆ. ಹಾಗೆ ಮುಂದಿನ ಗ್ರಂಥ ಹೊರಡಲು ಪ್ರಸಕ್ತಿ ತಂದುಕೊಡುವುದಕ್ಕಾಗಿ ಆಚಾರ್ಯರು

**''ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ''**

ಎಂಬುದಾಗಿ ಅಪ್ರಸಿದ್ಧವಾದ ಭಾವಾಭಾವವಿಲಕ್ಷಣತ್ವ ಲಕ್ಷಣದ ಅನುವಾದ ಮಾಡುತ್ತಿದ್ದಾರೆ ಎಂದು ಭಾವ.

**ಅವತಾರಿಕೆ :-** ''ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ'' ಭಾವಾಭಾವವಿಲಕ್ಷಣವಾದ ವಸ್ತುವನ್ನು ಯಾವ ಆಗಮವೂ ಪ್ರತಿಪಾದಿಸುವುದಿಲ್ಲ ಎಂದು ಹೇಳಿದ್ದು ಸರಿಯಲ್ಲ. ಕಾರಣ ಭಾವಾಭಾವವಿಲಕ್ಷಣವಾದ ವಸ್ತುವನ್ನು ಆಗಮವು ಪ್ರತಿಪಾದಿಸುತ್ತಿದೆ ಎಂಬುದಾಗಿ ಆಕ್ಷೇಪ ಮಾಡಿಕೊಂಡು ಸಮಾಧಾನ ಹೇಳುತ್ತಾರೆ-

### 'ನಾಸದಾಸೀತ್..' ಎಂಬ ಆಗಮವು ಅನಿರ್ವಚನೀಯಪರವಲ್ಲ

**ಟೀಕಾ :** **ನನು ನಾಸದಾಸೀದಿತ್ಯಾದ್ಯಾಗಮೋಽನಿರ್ವಚನೀಯಾಮವಿದ್ಯಾಂ ವಕ್ತಿ । ಸದಸತೀ ಪ್ರತಿಷಿದ್ಧ್ಯ ತಮ ಆಸೀದಿತಿ ಮಹಾಪ್ರಲಯೇಽವಿದ್ಯಾವಸ್ಥಾನಸ್ಯೋಕ್ತತ್ವಾತ್ । ನ ಚಾಸತಃ ಸತ್ವಪ್ರಸಕ್ತ್ಯಭಾವೇನ ತನ್ನಿಷೇಧಾಯೋಗಾದನುಪಪನ್ನಾರ್ಥಂ ವಾಕ್ಯಂ ನಾನಿರ್ವಚನೀಯಾಮವಿದ್ಯಾಂ ಗಮಯಿತುಮಲಮಿತಿ ಸಾಂಪ್ರತಮ್ । ಅತ್ರ ಸದಸಚ್ಛಬ್ದಯೋರ್ಭಾವಾಭಾವಪರತ್ವೇ-**

**ನಾಂಗೀಕೃತತ್ವಾತ್ । ಭಾವಾಭಾವವೈಲಕ್ಷಣ್ಯೇನಾಪ್ಯನಿರ್ವಚನೀಯತ್ವಸಿದ್ಧೇಃ । ಅತಃ ಕಥಂ 'ನ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ' ಇತಿ । ತತ್ರಾಹ -**

**ಮೂಲ :- 'ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮಾಪರೋ ಯತ್' ಇತ್ಯತ್ರ ಚ ।**

**ಚಶಬ್ದೇನ ಭಾವಾಭಾವವಿಲಕ್ಷಣಂ ನ ವಕ್ತೀತ್ಯೇತದನುಕೃಷ್ಯತೇ ।**

**ಅನುವಾದ :-** ಹೌದು, 'ನಾಸದಾಸೀತ್ ನೋ ಸದಾಸೀತ್' ಇತ್ಯಾದಿ ಆಗಮವು ಅನಿರ್ವಚನೀಯವಾದ ಅವಿದ್ಯೆಯನ್ನು ಪ್ರತಿಪಾದಿಸುತ್ತಿದೆ. ''ನಾಸದಾಸೀತ್ ಅಸತ್ ಇರಲಿಲ್ಲ. ನೋ ಸದಾಸೀತ್ ಸತ್ ಇರಲಿಲ್ಲ'' ಎಂಬುದಾಗಿ ಸತ್-ಅಸತ್‌ಗಳನ್ನು ನಿಷೇಧಿಸಿ, ತಮಃ ಆಸೀತ್ ಅವಿದ್ಯೆ ಇತ್ತು ಎಂಬುದಾಗಿ ಮಹಾಪ್ರಲಯದಲ್ಲಿ ಅವಿದ್ಯೆಯ ಅಸ್ತಿತ್ವವನ್ನು ಆಗಮ ಹೇಳುತ್ತಿದೆ. ಸತ್-ಅಸತ್‌ಗಳನ್ನು ನಿಷೇಧಿಸಿ ಅವಿದ್ಯೆಯ ಅಸ್ತಿತ್ವವನ್ನು ಹೇಳಿದರೆ ಅವಿದ್ಯೆಗೆ ಸದಸದ್ವಿಲಕ್ಷಣತ್ವವನ್ನು (ಅನಿರ್ವಚನೀಯತ್ವವನ್ನು) ಹೇಳಿದಂತಾಗುತ್ತದೆ.

ಅಲ್ಲ, ಸತ್‌ಪದಾರ್ಥಕ್ಕೆ ಅಸ್ತಿತ್ವದ ಪ್ರಸಕ್ತಿ ಇರುವುದರಿಂದ, ಪ್ರಸಕ್ತವಾಗುವ ಅಸ್ತಿತ್ವವನ್ನು 'ನೋ ಸದಾಸೀತ್' ಎಂದು ನಿಷೇಧಿಸುವುದು ಉಪಪನ್ನವಾಗುತ್ತದೆ. ಆದರೆ ಅಸತ್‌ಗೆ ಅಸ್ತಿತ್ವದ ಪ್ರಸಕ್ತಿಯೇ ಇಲ್ಲವಾದ್ದರಿಂದ 'ನಾಸದಾಸೀತ್' ಎಂಬುದಾಗಿ ಅಸತ್‌ಗೆ ಅಸ್ತಿತ್ವವನ್ನು ನಿಷೇಧಿಸುವುದು ಅನುಪಪನ್ನ. ಅಂತಹ ಅನುಪಪನ್ನವಾದ ಅರ್ಥ ಉಳ್ಳ 'ನಾಸದಾಸೀತ್ ನೋ ಸದಾಸೀತ್' ಎಂಬ ಈ ಆಗಮವು ಅನಿರ್ವಚನೀಯವಾದ ಅವಿದ್ಯೆಯನ್ನು ಪ್ರತಿಪಾದಿಸಲು ಸಮರ್ಥವಾಗುವುದಿಲ್ಲ ಅಲ್ಲವೇ ?

ಈ ವಿಧವಾದ ಆಕ್ಷೇಪ ಬೇಡ. ಕಾರಣ - ಆಗಮದಲ್ಲಿರುವ ಸತ್-ಅಸತ್ ಶಬ್ದಗಳಿಗೆ ಭಾವ-ಅಭಾವ ಎಂದು ಅರ್ಥ ವಿವಕ್ಷಿತವಾಗಿದೆ. ಹಾಗಾಗಿ 'ನಾಸದಾಸೀತ್' ಎನ್ನುವಲ್ಲಿ ಅಸತ್ ಎಂದರೆ ಅಭಾವ ಎಂದು ಅರ್ಥ ವಿವಕ್ಷಿತವಾದ್ದರಿಂದ, ಸೃಷ್ಟಿಕಾಲದಲ್ಲಿ ಅಭಾವಕ್ಕೆ ಅಸ್ತಿತ್ವದ ಪ್ರಸಕ್ತಿ ಇರುವುದರಿಂದ, ಪ್ರಸಕ್ತವಾದ ಅಭಾವದ ಅಸ್ತಿತ್ವವನ್ನು 'ನಾಸದಾಸೀತ್' ಎಂಬುದಾಗಿ ಆಗಮ ನಿಷೇಧಿಸುವುದು ಉಪಪನ್ನವೇ ಆಗಿದೆ.

ಹೌದು, ಹೀಗೆ ಹೇಳಿದಾಗ ಅಭಾವದ ನಿಷೇಧ ಉಪಪನ್ನವಾದರೂ ಸಹ (ಸತ್-ಅಸತ್ ಶಬ್ದಗಳಿಗೆ ಭಾವ-ಅಭಾವ ಎಂದು ಅರ್ಥ ಮಾಡಿದ್ದರಿಂದ) ಅವಿದ್ಯೆಗೆ ಭಾವಾಭಾವವಿಲಕ್ಷಣತ್ವವನ್ನು ಹೇಳಿದಂತಾಗುತ್ತದೆಯೇ ಹೊರತು ಸದಸದ್ವಿಲಕ್ಷಣತ್ವ (ಅನಿರ್ವಚನೀಯತ್ವ) ಹೇಳಿದಂತಾಗುವುದಿಲ್ಲವಲ್ಲ? ಎಂಬ ಶಂಕೆ ಬೇಡ. ಏಕೆಂದರೆ - ಸದಸದ್ವಿಲಕ್ಷಣತ್ವದಂತೆ ಭಾವಾಭಾವವಿಲಕ್ಷಣತ್ವವೂ ಅನಿರ್ವಚನೀಯಲಕ್ಷಣವೇ ಆದ್ದರಿಂದ ಅವಿದ್ಯೆಗೆ ಭಾವಾಭಾವವಿಲಕ್ಷಣತ್ವ-ದಿಂದಲೂ ಅನಿರ್ವಚನೀಯತ್ವ ಸಿದ್ಧಿಸುತ್ತದೆ.

ಅಂದಮೇಲೆ 'ನಾಸದಾಸೀತ್ ನೋ ಸದಾಸೀತ್' ಇತ್ಯಾದಿ ಆಗಮವು ಭಾವಾಭಾವವಿಲಕ್ಷಣವಾದ ಅವಿದ್ಯೆಯನ್ನು ಪ್ರತಿಪಾದಿಸುತ್ತಿರುವಾಗ

**'ನ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ'**

'ಭಾವಾಭಾವವಿಲಕ್ಷಣವಸ್ತುವನ್ನು ಯಾವ ಆಗಮವೂ ಪ್ರತಿಪಾದಿಸುವುದಿಲ್ಲ' ಎಂಬುದಾಗಿ ಹೇಗೆ ಹೇಳುತ್ತೀರಿ ?

ಹೀಗೆ ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರ ನೀಡುತ್ತಾರೆ -

**ಮೂಲ :-** 'ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ
ವ್ಯೋಮಾಪರೋ ಯತ್' ಇತ್ಯತ್ರ ಚ ।

**ಮೂಲಾರ್ಥ :-** 'ನಾಸದಾಸೀತ್ ನೋ ಸದಾಸೀತ್' (ಎನ್ನುವಲ್ಲಿಯೂ ಸಹ) ಎಂಬ ವಾಕ್ಯವೂ ಸಹ ಭಾವಾಭಾವವಿಲಕ್ಷಣವಾದ ವಸ್ತುವನ್ನು ಪ್ರತಿಪಾದಿಸುವುದಿಲ್ಲ.

ಮೂಲದಲ್ಲಿರುವ ('.....ಇತ್ಯತ್ರ ಚ' ಎನ್ನುವಲ್ಲಿರುವ) ಚಶಬ್ದವು 'ನ ಚ ಭಾವಾಭಾವವಿಲಕ್ಷಣಂ ಕ್ವಚಿದಾಗಮೋ ವಕ್ತಿ' ಎಂಬ ಹಿಂದಿನ ಮೂಲವಾಕ್ಯ-ದಲ್ಲಿರುವ 'ಭಾವಾಭಾವವಿಲಕ್ಷಣಂ ನ ವಕ್ತಿ' ಎಂಬುದನ್ನು ಅನುಕರ್ಷಣ ಮಾಡುತ್ತಿದೆ. 'ನಾಸದಾಸೀತ್ ನೋ ಸದಾಸೀತ್' ಎಂಬ ಆಗಮವಾಕ್ಯವೂ ಸಹ ಭಾವಾಭಾವವಿಲಕ್ಷಣವಾದ ವಸ್ತುವನ್ನು ಪ್ರತಿಪಾದಿಸುತ್ತಿಲ್ಲ ಎಂದು ಮೂಲಾರ್ಥವಾಗುತ್ತದೆ.

**ಅವತಾರಿಕೆ :-** 'ನಾಸದಾಸೀತ್ ನೋ ಸದಾಸೀತ್' ಎಂಬ ಆಗಮವೂ ಸಹ ಭಾವಾಭಾವವಿಲಕ್ಷಣವಸ್ತುವನ್ನು ಪ್ರತಿಪಾದಿಸುವುದಿಲ್ಲ ಎಂಬುದಾಗಿ ಪ್ರತಿಜ್ಞೆ ಮಾಡಿದ್ದನ್ನು ಉಪಪಾದನೆ ಮಾಡಿ ತೋರಿಸುತ್ತಾರೆ -

**ಟೀಕಾ : ಇದಂ ಖಲು ವಾಕ್ಯಂ ಪ್ರಲಯೇ ಸದಸತೋರಭಾವಂ ತಮಸಶ್ಚ ಭಾವಂ ಪ್ರತಿಪಾದಯದನುಭೂಯತೇ । ನ ಪುನಸ್ತಮಃ ಸದಸದ್ವಿಲಕ್ಷಣಮಿತಿ ।**

**ನನು ಸದಸತೋರಭಾವೇಽವಸ್ಥಿತಸ್ಯ ತಮಸೋ ಬಲಾತ್ ಸದಸದ್ವೈಲಕ್ಷಣ್ಯಮಾಪದ್ಯತ ಇತಿ । ಸತ್ಯಮ್ । ನ ತರ್ಹೀದಂ ವಾಕ್ಯಮವಿದ್ಯಾನಿರ್ವಚನೀಯತಾಯಾಮಾಗಮಯಿತವ್ಯಮ್ । ಪದಾರ್ಥಸಂಸರ್ಗಮಾತ್ರಸ್ಯಾಗಮಾರ್ಥತ್ವೇನ ಸಾಮರ್ಥ್ಯ-ಲಬ್ಧಸ್ಯಾತದರ್ಥತ್ವಾತ್ । ಯಥೋಕ್ತಂ- 'ಯಶ್ಚಾರ್ಥಾದರ್ಥೋ ನ ಸ ಚೋದನಾರ್ಥಃ ।' ಇತಿ ।**

**ಅನುವಾದ :-** ಈ ವಾಕ್ಯವು 'ನಾಸದಾಸೀತ್' 'ನೋ ಸದಾಸೀತ್' ಸತ್ ಇರಲಿಲ್ಲ, ಅಸತ್ ಇರಲಿಲ್ಲ ಎಂಬುದಾಗಿ ಸತ್-ಅಸತ್‌ಗಳ ಅಭಾವವನ್ನು ಪ್ರತಿಪಾದಿಸುತ್ತಿದೆ ಹಾಗೂ 'ತಮ ಆಸೀತ್' ಅವಿದ್ಯೆ ಇತ್ತು ಎಂಬುದಾಗಿ ಅವಿದ್ಯೆಯ ಅಸ್ತಿತ್ವವನ್ನು ಪ್ರತಿಪಾದಿಸುತ್ತಿದೆ. ಹಾಗೆಯೇ ಅನುಭೂತವಾಗುತ್ತಿದೆ. ಹೊರತು 'ಅವಿದ್ಯೆ ಸದಸದ್ವಿಲಕ್ಷಣವಾಗಿದೆ' ಎಂಬುದಾಗಿ ಪ್ರತಿಪಾದಿಸುತ್ತಿಲ್ಲ.

ಹೌದು, ಪ್ರಲಯಕಾಲದಲ್ಲಿ ಸತ್ ಇರಲಿಲ್ಲ, ಅಸತ್ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಅವಿದ್ಯೆ ಇತ್ತು ಎಂದರೆ ಇರುವ ಅವಿದ್ಯೆಗೆ ಸದಸದ್ವಿಲಕ್ಷಣತ್ವವು [೧]ಅನ್ಯಥಾನುಪಪತ್ತಿಬಲದಿಂದಲೇ ಸಿದ್ಧಿಸುತ್ತದೆ. ಅಲ್ಲವೇ ?

ಹೀಗೆ ಆಕ್ಷೇಪಿಸುವುದು ಸರಿಯಲ್ಲ. ಕಾರಣ - ಹೀಗೆ ಅರ್ಥಾಪತ್ತಿಬಲದಿಂದ ಸದಸದ್ವೈಲಕ್ಷಣ್ಯ ಸಾಧಿಸುವುದಾದರೆ 'ಅವಿದ್ಯೆಯು ಸದಸದ್ವಿಲಕ್ಷಣವಾಗಿದೆ'

---

೧ ಸದಸತೋರಭಾವೇಽವಸ್ಥಾನಾನ್ಯಥಾನುಪಪತ್ತಿಯಿಂದ ಅವಿದ್ಯೆಗೆ ಸದಸದ್ವೈಲಕ್ಷಣ್ಯವು ಸಿದ್ಧವಾಗುತ್ತದೆ. ಅಂದರೆ- ಸತ್-ಅಸತ್‌ಗಳು ಇಲ್ಲದಿರುವಾಗ ಅವಿದ್ಯೆಯ ಇರುವಿಕೆ ಶ್ರುತವಾಗುತ್ತಿದೆ. ಸದಸತೋರಭಾವೇಽವಸ್ಥಾನಂ ಸದಸದ್ವೈಲಕ್ಷಣ್ಯಂ ವಿನಾ ಅನುಪಪದ್ಯ-ಮಾನಮ್ । ಅವಿದ್ಯೆಗೆ ಸದಸದ್ವೈಲಕ್ಷಣ್ಯ ಒಪ್ಪದೇ ಸದಸತೋರಭಾವೇಽವಸ್ಥಾನವು ಅನುಪಪನ್ನ. ಅವಿದ್ಯೆಯು ಸದಸದ್ವಿಲಕ್ಷಣ ಆಗದ ಹೊರತು ಸತ್-ಅಸತ್‌ಗಳು ಇಲ್ಲದಿರುವಾಗ ಇರುವಿಕೆ ಎನ್ನುವುದು ಅವಿದ್ಯೆಗೆ ಕೂಡುವುದಿಲ್ಲ. (ಅವಿದ್ಯೆಯು ಸದಸದ್ವಿಲಕ್ಷಣ ಎಂದು ಒಪ್ಪಿದಾಗ ಮಾತ್ರ ಸತ್-ಅಸತ್‌ಗಳು ಇಲ್ಲದಿರುವಾಗ ಇರುವಿಕೆ ಎನ್ನುವುದು ಅವಿದ್ಯೆಗೆ ಉಪಪನ್ನವಾಗುತ್ತದೆ.) ಹಾಗಾಗಿ ಸದಸತೋರಭಾವೇಽವಸ್ಥಾ-ನಾನ್ಯಥಾನುಪಪತ್ತಿಯಿಂದ ಅವಿದ್ಯೆಗೆ ಸದಸದ್ವೈಲಕ್ಷಣ್ಯವು ಸಿದ್ಧವಾಗುತ್ತದೆ ಎಂದು ಭಾವ.

ಎಂಬ ವಿಷಯದಲ್ಲಿ ಈ ವಾಕ್ಯವನ್ನು ('ನಾಸದಾಸೀತ್' ಎಂಬ ವಾಕ್ಯವನ್ನು) ಆಗಮ ಪ್ರಮಾಣವನ್ನಾಗಿ ಕೊಡಬೇಡಿ.

**''ಯಶ್ಚ ಅರ್ಥಾತ್ ಅರ್ಥಃ ನ ಸ ಚೋದನಾರ್ಥಃ''**

(ಪ್ರತೀತವಾದ ಅರ್ಥದಿಂದ ಯಾವ ಅರ್ಥವು ಬರುತ್ತದೆ ಆ ಅರ್ಥವು ಆಗಮದ ಅರ್ಥವಾಗುವುದಿಲ್ಲ)

ಎಂಬುದಾಗಿ ಜೈಮಿನಿಸೂತ್ರದಲ್ಲಿ ಮೀಮಾಂಸಕರು ಹೇಳಿದಂತೆ, ಪದಾರ್ಥ-ಸಂಸರ್ಗವು ಮಾತ್ರ ಆಗಮಾರ್ಥವಾಗುತ್ತದೆ. ಅರ್ಥಾತ್ ಸಿದ್ಧವಾಗುವ (ಅರ್ಥಾಪತ್ತಿಯಿಂದ ಸಿದ್ಧವಾಗುವ) ಅರ್ಥವು ಆಗಮಾರ್ಥವಾಗುವುದಿಲ್ಲ. ಪ್ರಕೃತ ಸತ್-ಅಸತ್‌ಗಳ ಅಭಾವ ಹಾಗೂ ಅವಿದ್ಯೆಯ ಅವಸ್ಥಾನ ಈ ಪ್ರತೀತಾರ್ಥವು ಮಾತ್ರ ಆಗಮಾರ್ಥ ಆಗುತ್ತದೆಯೇ ಹೊರತು ಸತ್-ಅಸತ್‌ಗಳ ಅಭಾವ ಹಾಗೂ ಅವಿದ್ಯೆಯ ಅವಸ್ಥಾನದಿಂದ ಸಿದ್ಧವಾಗುವ ಸದಸದ್ವೈಲಕ್ಷಣ್ಯವು ಆಗಮಾರ್ಥ ಆಗುವುದಿಲ್ಲ. ಹಾಗಾಗಿ ಅವಿದ್ಯೆಯು ಸದಸದ್ವಿಲಕ್ಷಣವಾಗಿದೆ ಎಂಬ ವಿಷಯದಲ್ಲಿ ಅರ್ಥಾಪತ್ತಿಯನ್ನು ಪ್ರಮಾಣವನ್ನಾಗಿ ಉದಾಹರಿಸಬಹುದೇ ಹೊರತು 'ನಾಸದಾಸೀತ್ ನೋ ಸದಾಸೀತ್ ತಮ ಆಸೀತ್' ಎಂಬ ವಾಕ್ಯವನ್ನು ಆಗಮಪ್ರಮಾಣವನ್ನಾಗಿ ಉದಾಹರಿಸಲು ಬರುವುದಿಲ್ಲ. ಆದ್ದರಿಂದ ಅವಿದ್ಯೆ ಸದಸದ್ವಿಲಕ್ಷಣವಾಗಿದೆ ಎಂಬ ವಿಷಯದಲ್ಲಿ ಆಗಮವು ಪ್ರಮಾಣವಾಗದ ಕಾರಣ

**''ನ ಭಾವಾಭಾವವಿಲಕ್ಷಣಂ ಆಗಮೋ ವಕ್ತಿ''**

ಎಂಬುದಾಗಿ ಆಚಾರ್ಯರು ಹೇಳಿದ್ದು ಸಮಂಜಸವೇ ಆಗಿದೆ.

**ಅವತಾರಿಕೆ :-** ಅನಿರ್ವಚನೀಯವಸ್ತುವಿಷಯದಲ್ಲಿ ಆಗಮಪ್ರಮಾಣವನ್ನು ನಿರಾಕರಿಸಿದ ನಂತರ ಪರಿಶೇಷಪ್ರಮಾಣವನ್ನು ಶಂಕಿಸಿಕೊಂಡು ನಿರಾಕರಿಸುತ್ತಾರೆ-

## 'ನಾಸದಾಸೀತ್..' ಆಗಮವು ಪರಿಶೇಷತಯಾ ಅನಿರ್ವಚನೀಯವಿಷಯದಲ್ಲಿ ಪ್ರಮಾಣವಾಗುತ್ತದೆಂಬ ಶಂಕೆ, ಅದರ ನಿರಾಕರಣೆ

**ಟೀಕಾ : ಮಾ ಭೂದಿದಂ ವಾಕ್ಯಮನಿರ್ವಚನೀಯಾವಿದ್ಯಾಯಾಮಾಗಮ-ತಯಾ ಪ್ರಮಾಣಮ್ । ಪರಿಶೇಷತಯಾ ತು ಭವಿಷ್ಯತಿ । ತಥಾ ಹಿ । ತಮ ಆಸೀದಿತಿ ಮಹಾಪ್ರಲಯೇ ತಮಸೋಽವಿದ್ಯಾಪರ-**

**ಪರ್ಯಾಯಸ್ಯಾವಸ್ಥಾನಮಭಿಹಿತಮ್ । ತಸ್ಯ ಚ ಪ್ರಸಕ್ತಾನಾಂ ಸತ್ತ್ವಾದಿಪ್ರಕಾರಾಣಾಂ ನಾಸದಾಸೀದಿತ್ಯಾದಿನಾ ಸದಸದಭಾವಾಭಿಧಾನೇನ ಪ್ರತಿಷೇಧೇ ಸತ್ಯನ್ಯತ್ರಾಪ್ರಸಂಗಾತ್ ಪರಿಶಿಷ್ಯಮಾಣೇ ತಮಸೋಽನಿರ್ವಚನೀಯತ್ವೇ ಬುದ್ಧಿರ್ಭವಿಷ್ಯತೀತ್ಯಾಶಂಕ್ಯಾಸ್ಯ ವಾಕ್ಯಸ್ಯಾರ್ಥಾಂತರಂ ವಿವಕ್ಷುಸ್ತತ್ಸಿದ್ಧಯೇ ಪರಾಭಿಮತಾರ್ಥೇಽನಿಷ್ಟಪ್ರಸಂಗಂ ತಾವದಾಹ -**

**ಮೂಲ :- ಪಾರಿಶೇಷ್ಯೇಣಾನಿರ್ವಚನೀಯತ್ವಾಂಗೀಕಾರೇ 'ಆನೀದವಾತಂ ಸ್ವಧಯಾ ತದೇಕಮ್' ಇತಿ ತದಾನೀಂ ಪರಿಶಿಷ್ಟತ್ವಾತ್ ಬ್ರಹ್ಮಣ ಏವಾನಿರ್ವಚನೀಯತ್ವಂ ಸ್ಯಾತ್ ।**

**ಅನುವಾದ :-** 'ಅವಿದ್ಯೆ ಅನಿರ್ವಚನೀಯವಾಗಿದೆ' ಎಂಬ ವಿಷಯದಲ್ಲಿ 'ನಾಸದಾಸೀತ್ ನೋ ಸದಾಸೀತ್' ಎಂಬ ಈ ವಾಕ್ಯ ಆಗಮವಾಗಿ ಅನಿರ್ವಚನೀಯವಸ್ತುವಾಚಕವಾಗಿ ಪ್ರಮಾಣವಾಗುವುದು ಬೇಡ. ಆದರೆ ಪರಿಶೇಷ ಪ್ರಮಾಣವನ್ನು ಉತ್ಥಾಪನ ಮಾಡುವ ಮೂಲಕ ಪ್ರಮಾಣವಾಗುತ್ತದೆ. ಹೇಗೆಂದರೆ- 'ತಮ ಆಸೀತ್' ಎಂಬುದಾಗಿ ಮಹಾಪ್ರಲಯಕಾಲದಲ್ಲಿ ಅವಿದ್ಯಾಪರ್ಯಾಯಶಬ್ದವಾಚ್ಯವಾದ ತಮಸ್ಸು ಇತ್ತು ಎಂಬುದಾಗಿ ಹೇಳಲ್ಪಡುತ್ತಿದೆ. ತಮಸ್ಸು ಇದೆ ಎಂದರೆ ಅದು ಸತ್ ಆಗಬೇಕು ಅಥವಾ ಅಸತ್ ಆಗಬೇಕು, ಇಲ್ಲವೇ ಸದಸತ್ ಆಗಬೇಕು. ತಮಸ್ಸು ಒಂದುವೇಳೆ ಸತ್ ಆಗಿದ್ದರೆ ಅಥವಾ ಅಸತ್ ಆಗಿದ್ದರೆ, ಆಗ ಸತ್ ಆದ ತಮಸ್ಸೇ ಇರುವಾಗ ಅಥವಾ ಅಸತ್ ಆದ ತಮಸ್ಸೇ ಇರುವಾಗ 'ನಾಸದಾಸೀತ್ ನೋ ಸದಾಸೀತ್' ಎಂಬುದಾಗಿ ಸತ್-ಅಸತ್‌ಗಳ ಅಭಾವ ಹೇಳುವುದು ಅಯುಕ್ತವಾಗಬೇಕಾಗುತ್ತದೆ. ಹಾಗಾಗಿ ಮಹಾಪ್ರಲಯಕಾಲದಲ್ಲಿ ಇರುವ ತಮಸ್ಸಿಗೆ ಸತ್ತ್ವ-ಅಸತ್ತ್ವ-ಸದಸತ್ತ್ವ ಪ್ರಕಾರಗಳು ಪ್ರಸಕ್ತವಾದಾಗ, 'ನೋ ಸದಾಸೀತ್' ಎಂದು ಸದಭಾವವನ್ನು ಹೇಳುವ ಮೂಲಕ ಸತ್ತ್ವಪ್ರಕಾರ ನಿಷಿದ್ಧವಾದರೆ, 'ನಾಸದಾಸೀತ್' ಎಂದು ಅಸದಭಾವವನ್ನು ಹೇಳುವ ಮೂಲಕ ಅಸತ್ತ್ವಪ್ರಕಾರ ನಿಷಿದ್ಧವಾದರೆ, ಸದಸತ್ತ್ವ ಒಪ್ಪಿದರೆ ವಿರೋಧ ಬರುವುದರಿಂದ ಸದಸತ್ತ್ವಪ್ರಕಾರವೂ ಅಪ್ರಸಕ್ತವಾದರೆ, ತಮಸ್ಸಿಗೆ ಸದಸದ್ವಿಲಕ್ಷಣತ್ವವೇ (ಅನಿರ್ವಚನೀಯತ್ವವೇ) ಪರಿಶಿಷ್ಯಮಾಣವಾಗುತ್ತದೆ. ಆದ್ದರಿಂದ ಅವಿದ್ಯೆಗೆ ಅನಿರ್ವಚನೀಯತ್ವವು ಪರಿಶೇಷದಿಂದ ಸಿದ್ಧವಾಗುತ್ತದೆ. ಇಲ್ಲಿ ಇಷ್ಟು ಅನುಮಾನ ಮಾಡಿದಂತಾಗುತ್ತದೆ-

**ತಮಃ, ಅನಿರ್ವಚನೀಯಂ, ಸದಸದಭಾವಾಧಿಕರಣಕಾಲೇ ವಿದ್ಯಮಾನತ್ವಾತ್ ।**

(ಅವಿದ್ಯೆಯು, ಅನಿರ್ವಚನೀಯವಾಗಿದೆ, ಸತ್-ಅಸತ್‌ಗಳು ಇಲ್ಲದ ಕಾಲದಲ್ಲಿ ಇರುವುದರಿಂದ.)

ಅಂದಮೇಲೆ - ''**ನಾಸದಾಸೀತ್ ನೋ ಸದಾಸೀತ್ ತಮ ಆಸೀತ್**'' ಎಂಬ ಈ ವಾಕ್ಯವು ಅನಿರ್ವಚನೀಯವಿಷಯದಲ್ಲಿ ಆಗಮವಾಗಿ ಅನಿರ್ವಚನೀಯ-ವಸ್ತುವಾಚಕವಾಗಿ ಪ್ರಮಾಣವಾಗದಿದ್ದರೂ ಸಹ ಪರಿಶೇಷಪ್ರಮಾಣವನ್ನು ಉತ್ಥಾಪನ ಮಾಡುವ ಮೂಲಕ ಪ್ರಮಾಣವಾಗುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, 'ನಾಸದಾಸೀತ್' ಎಂಬ ಈ ಪರೋದೀರಿತವಾಕ್ಯಕ್ಕೆ ಬೇರೆ ಅರ್ಥವನ್ನೇ ಹೇಳುವವರಾಗಿ, ತಾವು ಹೇಳಲಿರುವ ಆ ಅರ್ಥಾಂತರದ ಸಿದ್ಧಿಗಾಗಿ, ಈ ವಾಕ್ಯಕ್ಕೆ ಪರರು ಹೇಳಿದ ಅರ್ಥವನ್ನು ಅಂಗೀಕರಿಸಿದರೆ ಅನಿಷ್ಟಪ್ರಸಂಗವನ್ನು ಮೊದಲಿಗೆ ಹೇಳುತ್ತಾರೆ ಆಚಾರ್ಯರು-

**ಮೂಲ :- ಪಾರಿಶೇಷ್ಯೇಣಾನಿರ್ವಚನೀಯತ್ವಾಂಗೀಕಾರೇ 'ಆನೀದವಾತಂ ಸ್ವಧಯಾ ತದೇಕಮ್' ಇತಿ ತದಾನೀಂ ಪರಿಶಿಷ್ಟತ್ವಾತ್ ಬ್ರಹ್ಮಣ ಏವಾನಿರ್ವಚನೀಯತ್ವಂ ಸ್ಯಾತ್ ।**

**ಮೂಲಾರ್ಥ :-** ಈ ರೀತಿಯಾಗಿ ಪರಿಶೇಷಪ್ರಮಾಣದಿಂದ ಅವಿದ್ಯೆಗೆ ಅನಿರ್ವಚನೀಯತ್ವವನ್ನು ಅಂಗೀಕರಿಸುವುದಾದರೆ, ಮಹಾಪ್ರಲಯಕಾಲದಲ್ಲಿ ಅವಿದ್ಯೆ ಇರುವಂತೆ 'ಆನೀದವಾತಂ ಸ್ವಧಯಾ ತದೇಕಮ್' ಎಂಬ ವಾಕ್ಯ ತಿಳಿಸುವ ಹಾಗೆ ಬ್ರಹ್ಮನೂ (ಪರಿಶಿಷ್ಟನಾದ್ದರಿಂದ) ಇರುವುದರಿಂದ, ಅವಿದ್ಯೆಗೆ ಅನಿರ್ವಚನೀಯತ್ವ ಹೇಳುವಂತೆ ಬ್ರಹ್ಮನಿಗೂ ಅನಿರ್ವಚನೀಯತ್ವ ಹೇಳ-ಬೇಕಾಗುತ್ತದೆ.

**ಟೀಕಾ : ಯದ್ಯಸ್ಯ ವಾಕ್ಯಸ್ಯೋಕ್ತವಿಧಯಾ ಪರಿಶೇಷಪ್ರಮಾಣತ್ವೇನ ತಮಸೋಽನಿರ್ವಚನೀಯತ್ವಮಂಗೀಕ್ರಿಯತೇ ತದಾ ಪರಮಾರ್ಥತಯಾಽಂಗೀಕೃತಸ್ಯೈವ ಬ್ರಹ್ಮಣೋಽಪ್ಯನಿರ್ವಚ-ನೀಯತ್ವಂ ಸ್ಯಾತ್ । ತಸ್ಯಾಪಿ ತಮೋವತ್ 'ಆನೀದವಾತಮ್' ಇತಿ ವಾಕ್ಯೇನ ತದಾನೀಂ ಪ್ರಲಯೇ ಪರಿಶಿಷ್ಟತ್ವಾವಗಮಾತ್ । ಉಭಯೋರಪಿ ಪರಿಶಿಷ್ಟತ್ವೇನಾವಗತಯೋರನ್ಯತರಸ್ಮಿನ್ನೇವ ಪರಿಶೇಷೇಣಾನಿರ್ವಚನೀಯತ್ವಾಪಾತೇ ನಿಯಾಮಕಾಭಾವಾತ್ ।**

**ಬ್ರಹ್ಮಣಃ ಪಾರಮಾರ್ಥಿಕತ್ವೇ ಪ್ರಮಾಣಮಸ್ತೀತಿ ಚೇನ್ನ । ತಮಸೋಽಪಿ ತಸ್ಯ ವಕ್ಷ್ಯಮಾಣತ್ವಾತ್ । ಅತೋ ನೈತದ್ವಾಕ್ಯಂ ಪ್ರಸಿದ್ಧಸದಸತ್ಪ್ರತಿಷೇಧಪರಮಿತಿ ।**

**ತದೇಕಂ ಸರ್ವೋತ್ತಮಂ ಬ್ರಹ್ಮ ಅವಾತಂ ವಾತಪ್ರೇರಣಯಾ ವಿನೈವ ಸ್ವಧಯಾ ಸುಖೇನೈವ ನ ತು ಸುಖಪ್ರಾಪ್ತ್ಯಾದ್ಯರ್ಥಂ ಆನೀದಚೇಷ್ಟತೇತಿ ಶ್ರುತ್ಯರ್ಥಃ ।**

**ಅನುವಾದ:-** ಒಂದುವೇಳೆ ಹಿಂದೆ ಹೇಳಿದಂತೆ ಈ ವಾಕ್ಯಕ್ಕೆ ('ನಾಸದಾಸೀತ್' ಎಂಬ ವಾಕ್ಯಕ್ಕೆ) ಪರಿಶೇಷಪ್ರಮಾಣೋತ್ಥಾಪಕತ್ವವನ್ನು ಒಪ್ಪಿ ಪರಿಶೇಷದಿಂದ ಅವಿದ್ಯೆಗೆ ಅನಿರ್ವಚನೀಯತ್ವವನ್ನು ಅಂಗೀಕರಿಸುವುದಾದರೆ ಆಗ ಪಾರಮಾರ್ಥಿಕ-ಸತ್ಯನನ್ನಾಗಿಯೇ ಅಂಗೀಕರಿಸಿದ ಬ್ರಹ್ಮನಿಗೂ ಅನಿರ್ವಚನೀಯತ್ವವನ್ನು ಅಂಗೀಕರಿಸಬೇಕಾಗುತ್ತದೆ. ಯಾಕೆ ? ಪ್ರಲಯಕಾಲದಲ್ಲಿ ಸತ್-ಅಸತ್ ಇರದ ಸಂದರ್ಭದಲ್ಲಿ 'ತಮ ಆಸೀತ್' ಎಂಬ ವಾಕ್ಯ ಹೇಳುವಂತೆ ಅವಿದ್ಯೆ ಹೇಗೆ ಇತ್ತೋ, ಅದರಂತೆ ಸತ್-ಅಸತ್ ಇರದ ಆ ಸಂದರ್ಭದಲ್ಲಿಯೇ '**ಆನೀದವಾತಂ ಸ್ವಧಯಾ ತದೇಕಮ್**' ಎಂಬ ವಾಕ್ಯ ಹೇಳುವಂತೆ ಬ್ರಹ್ಮನೂ ಇದ್ದಾನೆ ಎಂದು ತಿಳಿದುಬರುತ್ತದೆ. ಸತ್-ಅಸತ್ ಇರದ ಸಂದರ್ಭದಲ್ಲಿ ಅವಿದ್ಯೆ ಇದೆ ಎಂಬ ಕಾರಣಕ್ಕೆ ಅವಿದ್ಯೆಗೆ ಅನಿರ್ವಚನೀಯತ್ವ ಹೇಳುವುದಾದರೆ, ಸತ್-ಅಸತ್ ಇರದ ಸಂದರ್ಭದಲ್ಲಿ ಅವಿದ್ಯೆಯಂತೆ ಬ್ರಹ್ಮನೂ ಇರುವ ಕಾರಣ ಬ್ರಹ್ಮನಿಗೂ ಅನಿರ್ವಚನೀಯತ್ವ ಹೇಳಬೇಕಾಗುತ್ತದೆ.

ಸತ್-ಅಸತ್ ಇರದ ಸಂದರ್ಭದಲ್ಲಿ ಅವಿದ್ಯೆ ಹಾಗೂ ಬ್ರಹ್ಮ ಇಬ್ಬರೂ ಇರುವಾಗ ಪರಿಶೇಷದಿಂದ ಒಂದಕ್ಕೆ (ಅವಿದ್ಯೆಗೆ) ಮಾತ್ರ ಅನಿರ್ವಚನೀಯತ್ವ ಹೇಳಲು (ಅವಿದ್ಯೆಗೆ ಮಾತ್ರ ಅನಿರ್ವಚನೀಯತ್ವ ಹೇಳಿ ಬ್ರಹ್ಮನಿಗೆ ಅನಿರ್ವಚನೀಯತ್ವ ಹೇಳದಿರಲು) ನಿಯಾಮಕ ಯಾವುದೂ ಇಲ್ಲ.

ಬ್ರಹ್ಮ ಪಾರಮಾರ್ಥಿಕಸತ್ಯನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣ ಇರುವುದರಿಂದ ಬ್ರಹ್ಮನಿಗೆ ಅನಿರ್ವಚನೀಯತ್ವ ಅಂಗೀಕಾರಾರ್ಹವಾಗುವುದಿಲ್ಲ ಎಂಬುದಾಗಿ ಹೇಳುವುದು ಸರಿಯಲ್ಲ. ಬ್ರಹ್ಮ ಪಾರಮಾರ್ಥಿಕಸತ್ಯನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣ ಇರುವಂತೆ, ಅವಿದ್ಯೆ ಸತ್ಯವಾಗಿದೆ ಎಂಬ ವಿಷಯದಲ್ಲಿಯೂ '**ಅನೃತಂ ಪರಿಣಾಮತಃ**' '**ವಿಶ್ವಂ ಸತ್ಯಂ ವಶೇ ವಿಷ್ಣೋಃ**'

ಇತ್ಯಾದಿಯಾಗಿ ಮುಂದೆ ಪ್ರಮಾಣಗಳನ್ನು ಹೇಳುವವರಿದ್ದಾರೆ ಆಚಾರ್ಯರು. ಹಾಗಾಗಿ ಬ್ರಹ್ಮನ ಸತ್ಯತ್ವ ಪ್ರಾಮಾಣಿಕವಾದಂತೆ, ಅವಿದ್ಯೆಯ ಸತ್ಯತ್ವವೂ ಪ್ರಾಮಾಣಿಕವೇ ಆಗಿದ್ದರಿಂದ ಅವಿದ್ಯೆಗೆ ಅನಿರ್ವಚನೀಯತ್ವ ಹೇಳುವುದಾದರೆ ಅದೇ ಪರಿಶೇಷದಿಂದ ಬ್ರಹ್ಮನಿಗೂ ಅನಿರ್ವಚನೀಯತ್ವ ಒಪ್ಪಬೇಕಾದ ಅತಿಪ್ರಸಂಗ ಬರುವುದರಿಂದ, '**ನಾಸದಾಸೀತ್ ನೋ ಸದಾಸೀತ್**' ಎಂಬ ಈ ವಾಕ್ಯವು ಪ್ರಸಿದ್ಧವಾದ ಸತ್-ಅಸತ್‌ಗಳನ್ನು ನಿಷೇಧಿಸಲು ಹೊರಟಿಲ್ಲ ಎಂದು ಸಿದ್ಧವಾಗುತ್ತದೆ.

ಪ್ರಲಯಕಾಲದಲ್ಲಿ ಬ್ರಹ್ಮನಿಗೆ ಅಸ್ತಿತ್ವವನ್ನು ತಿಳಿಸುವ 'ಆನೀದವಾತಂ ಸ್ವಧಯಾ ತದೇಕಮ್' ಎಂಬ ಶ್ರುತಿಯ ಅರ್ಥ ಇಷ್ಟು :-

**ತದೇಕಂ** ಸರ್ವೋತ್ತಮನಾದ ಬ್ರಹ್ಮನು, **ಅವಾತಂ** ಮುಖ್ಯಪ್ರಾಣನ ಪ್ರೇರಣೆ ಇಲ್ಲದೇ (ಯಾರ ಪ್ರೇರಣೆಯೂ ಇಲ್ಲದೇ ಅನನ್ಯಾಪೇಕ್ಷನಾಗಿ), **ಸ್ವಧಯಾ** ಸುಖದಿಂದಲೇ (ಹೊರತು ಸುಖಪ್ರಾಪ್ತಿ ಮೊದಲಾದ ಪ್ರಯೋಜನಕ್ಕಾಗಿ ಅಲ್ಲ) **ಆಸೀತ್** ಸಕ್ರಿಯನಾದನು (ಇದ್ದನು).

**ಟೀಕಾ: ನನು ಮಹಾಪ್ರಲಯೇ ಬ್ರಹ್ಮಣೋಽವಸ್ಥಾನಂ ಪರಸ್ಯ ಸಮ್ಮತಮೇವ । ತತ್ಕಿಂ ತತ್ಸಮರ್ಥನಾಯ 'ಆನೀದವಾತಮ್' ಇತಿ ವಾಕ್ಯಮುಪಾದೀಯತೇ ।**

**ಮೈವಮ್ । ಯದೀದಮನುದಾಹೃತ್ಯಾತಿಪ್ರಸಂಗೋಽಭಿಧೀಯೇತ ತದೈತದ್ವಾಕ್ಯಪ್ರಕೃತಸ್ಯೈವ ಸನ್ನಿಹಿತತ್ವಾದನೇನ ಸತ್ತ್ವಾದಿಪ್ರತಿಷೇಧಸ್ಯ ಕ್ರಿಯಮಾಣತ್ವಾನ್ನಾತಿಪ್ರಸಂಗ ಇತಿ ಪರಃ ಪರಿಹರ್ತುಮುತ್ಸಹೇ-ತಾಪಿ । ತನ್ನಿರಾಸಾಯೈತತ್ಪ್ರಕರಣಗತವಾಕ್ಯೇನೈವ ಬ್ರಹ್ಮಣೋಽ-ವಸ್ಥಾನಮುಪಪಾದನೀಯಮ್ ।**

**ಅನುವಾದ :-** ಅನಿರ್ವಚನೀಯವಾದಿಗಳಾದ ಅದ್ವೈತಿಗಳು ಬ್ರಹ್ಮನನ್ನು ಪಾರಮಾರ್ಥಿಕ ಸತ್ಯ ಎಂದು ಅಂಗೀಕರಿಸುತ್ತಾರೆ. ಅವನು ಪಾರಮಾರ್ಥಿಕ ಎಂದರೆ ಅಬಾಧ್ಯ. ಸದಾಕಾಲದಲ್ಲಿಯೂ ಇರುವವನು. ಹೀಗಾಗಿ ಮಹಾಪ್ರಲಯಕಾಲದಲ್ಲಿ ಬ್ರಹ್ಮ ಇರುತ್ತಾನೆ ಎಂಬ ವಿಷಯ ಪರರಿಗೆ ಸಮ್ಮತವೇ ಆಗಿದೆ. ಅಂದಮೇಲೆ ಪ್ರಲಯಕಾಲದಲ್ಲಿ ಬ್ರಹ್ಮ ಇದ್ದಾನೆ ಎನ್ನುವುದನ್ನು ಸಮರ್ಥಿಸುವುದಕ್ಕಾಗಿ ''**ಆನೀದವಾತಂ ಸ್ವಧಯಾ ತದೇಕಂ**'' ಎಂಬ ವಾಕ್ಯವನ್ನು ಉದಾಹರಿಸುವ ಅಗತ್ಯವೇನು ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ ಬ್ರಹ್ಮನಿಗೆ ಅಸ್ತಿತ್ವವನ್ನು ಬೋಧಿಸುವ ಈ ವಾಕ್ಯವನ್ನು ಉದಾಹರಿಸದೇ ಹಾಗೆಯೇ ಅತಿಪ್ರಸಂಗವನ್ನು ಹೇಳಿದರೆ, ಅಂದರೆ :-

''ಪರಿಶೇಷದಿಂದ ಅವಿದ್ಯೆಗೆ ಅನಿರ್ವಚನೀಯತ್ವವನ್ನು ಅಂಗೀಕರಿಸುವುದಾದರೆ ಪ್ರಲಯಕಾಲದಲ್ಲಿ ಬ್ರಹ್ಮನೂ ಪರಿಶಿಷ್ಟನಾದ್ದರಿಂದ ಬ್ರಹ್ಮನಿಗೇ ಅನಿರ್ವಚನೀಯತ್ವ ಬರಬೇಕಾಗುತ್ತದೆ''

ಎಂಬುದಾಗಿ ಒಂದುವೇಳೆ ಅತಿಪ್ರಸಂಗ ಹೇಳಿದರೆ, ಆಗ ಇದು ಅವರಿಗೆ ಅತಿಪ್ರಸಂಗವೇ ಆಗುವುದಿಲ್ಲ. ಏಕೆಂದರೆ - ಈ ಪ್ರಕರಣದಲ್ಲಿ ಬರುವ ವಾಕ್ಯದಿಂದ ಯಾವುದು ಪ್ರಕೃತವಾಗುತ್ತದೆ ಅದಕ್ಕೇನೇ ಸತ್ತಾದಿಪ್ರತಿಷೇಧ ಮಾಡುತ್ತಿರುವುದರಿಂದ, 'ತಮ ಆಸೀತ್' ಎಂಬ ಈ ಪ್ರಕರಣಗತವಾಕ್ಯದಿಂದ ಅವಿದ್ಯೆ ಪ್ರಕೃತವಾದ್ದರಿಂದ ಸನ್ನಿಹಿತವಾದ ಅವಿದ್ಯೆಗೆ ಸತ್ತಾದಿಪ್ರತಿಷೇಧ ಮಾಡುವುದು ಯುಕ್ತವೇ ಆಗಿದೆ. ಆದರೆ ಈ ಪ್ರಕರಣದಲ್ಲಿ ಬರುವ ಯಾವ ವಾಕ್ಯದಿಂದಲೂ ಬ್ರಹ್ಮ ಪ್ರಕೃತನಾಗಿಲ್ಲವಾದ್ದರಿಂದ ಅಸನ್ನಿಹಿತನಾದ ಬ್ರಹ್ಮನಿಗೆ ಸತ್ತಾದಿಪ್ರತಿಷೇಧ ಮಾಡುವುದು ಅಯುಕ್ತ. ಆದ್ದರಿಂದ (ಬ್ರಹ್ಮನಿಗೆ ಸತ್ತಾದಿಪ್ರತಿಷೇಧ ಅಪ್ರಸಕ್ತವಾದ್ದರಿಂದ) ಬ್ರಹ್ಮನಿಗೆ ಅನಿರ್ವಚನೀಯತ್ವ ಒಪ್ಪಬೇಕಾದ ಅತಿಪ್ರಸಂಗ ಬರುವುದೇ ಇಲ್ಲ ಎಂಬುದಾಗಿ ಪರರು ಅತಿಪ್ರಸಂಗವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸಬಹುದು. ಅದನ್ನು ನಿರಾಕರಿಸುವುದಕ್ಕಾಗಿ, ಪರರು ಹಾಗೆ ಅತಿಪ್ರಸಂಗವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸಬಾರದು ಅನ್ನುವುದಕ್ಕಾಗಿ ಏತತ್ಪ್ರಕರಣಗತವಾದ ವಾಕ್ಯದಿಂದಲೇ ಬ್ರಹ್ಮನ ಅವಸ್ಥಾನವನ್ನು ಉಪಪಾದಿಸಿದ್ದಾರೆ ಆಚಾರ್ಯರು.

ಈ ಪ್ರಕರಣದಲ್ಲಿ ಬರುವ 'ತಮ ಆಸೀತ್' ಎಂಬ ವಾಕ್ಯದಿಂದ ಪ್ರಲಯಕಾಲದಲ್ಲಿ ಅವಿದ್ಯೆಯ ಅವಸ್ಥಾನ ತಿಳಿದುಬರುವುದರಿಂದ ಅವಿದ್ಯೆಗೆ ಅನಿರ್ವಚನೀಯತ್ವ ಹೇಳುವುದಾದರೆ, ಇದೇ ಪ್ರಕರಣದಲ್ಲಿ ಬರುವ

'**ಆನೀದವಾತಂ ಸ್ವಧಯಾ ತದೇಕಮ್**' ಎಂಬ ವಾಕ್ಯದಿಂದಲೇ ಪ್ರಲಯ-ಕಾಲದಲ್ಲಿ ಬ್ರಹ್ಮನ ಅವಸ್ಥಾನವೂ ತಿಳಿದುಬರುತ್ತಿರುವುದರಿಂದ ಬ್ರಹ್ಮನಿಗೂ ಅನಿರ್ವಚನೀಯತ್ವ ಹೇಳಬೇಕಾಗುತ್ತದೆ. ಆದ್ದರಿಂದ ಬ್ರಹ್ಮನ ಅಸ್ತಿತ್ವವನ್ನು ಬೋಧಿಸುವ, ಈ ಪ್ರಕರಣದಲ್ಲಿಯೇ ಬಂದ 'ಆನೀದವಾತಮ್' ಎಂಬ

ವಾಕ್ಯವನ್ನು ಉದಾಹರಿಸಿ ಆಚಾರ್ಯರು ಅತಿಪ್ರಸಂಗವನ್ನು ಹೇಳಿದ್ದು ಅತ್ಯಂತ ಸಮಂಜಸವೇ ಆಗಿದೆ ಎಂದು ಭಾವ.

**ಅವತಾರಿಕೆ :-** ಹಿಂದೆ- ''ನಾಸದಾಸೀತ್ ಎಂಬ ಪರೋದೀರಿತ ವಾಕ್ಯಕ್ಕೆ ಬೇರೆ ಅರ್ಥವನ್ನೇ ಹೇಳುವವರಾಗಿ, ತಾವು ಹೇಳಲಿರುವ ಆ ಬೇರೆ ಅರ್ಥದ ಸಿದ್ಧಿಗಾಗಿ, ಆ ವಾಕ್ಯಕ್ಕೆ ಪರರು ಹೇಳುವ ಅರ್ಥವನ್ನು ಸ್ವೀಕರಿಸಿದರೆ ಅತಿಪ್ರಸಂಗವನ್ನು ಮೊದಲಿಗೆ ಹೇಳುತ್ತಾರೆ ಆಚಾರ್ಯರು'' ಎಂಬುದಾಗಿ ಅವತಾರಿಕೆ ನೀಡಿದರು. 'ನಾಸದಾಸೀತ್' ಎಂಬ ವಾಕ್ಯಕ್ಕೆ ಪರರು ಹೇಳುವ ಅರ್ಥವನ್ನು ಹೇಳಿದರೆ ಬ್ರಹ್ಮನಿಗೂ ಅನಿರ್ವಚನೀಯತ್ವ ಬರಬೇಕಾಗುತ್ತದೆ ಎಂದು ಅತಿಪ್ರಸಂಗವನ್ನೂ ಹೇಳಿಯಾಯಿತು. ಪ್ರಕೃತ 'ನಾಸದಾಸೀತ್' ಎಂಬ ಶ್ರುತಿಗೆ ಪರರು ಹೇಳುವ ಅರ್ಥ ಸರಿಯಲ್ಲ ಎನ್ನುವುದಾದರೆ, ಹಾಗಾದರೆ ಶ್ರುತಿಗೆ ಏನು ಅರ್ಥ ಹೇಳಬೇಕು ? ಎನ್ನುವುದನ್ನು ತೋರಿಸಿಕೊಡುತ್ತಾರೆ ('ನಾಸದಾಸೀತ್' ಶ್ರುತಿಗೆ ಸಿದ್ಧಾಂತರೀತ್ಯಾ ಬೇರೆ ಅರ್ಥವನ್ನು ಹೇಳುತ್ತಾರೆ)-

## 'ನಾಸದಾಸೀತ್..' ಆಗಮವು ಹೇಳುವ ಸದಸದ್ವೈಲಕ್ಷಣ್ಯ ಮೂರ್ತಾಮೂರ್ತವೈಲಕ್ಷಣ್ಯವೇ ಆಗಿದೆ

**ಟೀಕಾ :** **ಯದಿ ತರ್ಹಿ ಪ್ರತೀತೋऽರ್ಥೋऽನುಪಪನ್ನಃ ಕೋऽರ್ಥೋऽಸ್ಯ ಬ್ರಹ್ಮತಮಸೋಸ್ಸದಸದ್ವೈಲಕ್ಷಣ್ಯಸ್ಯೇತ್ಯತಃ ಶ್ರುತ್ಯಂತರೇಣ ತಂ ದರ್ಶಯತಿ -**

**ಮೂಲ :-** **ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ ।**
**ಮೂರ್ತಾಮೂರ್ತೇತರದ್ ಬ್ರಹ್ಮ ನ ಸತ್ತನ್ನಾಸದುಚ್ಯತೇ ।**
**ಇತಿ ಪೈಂಗಿಶ್ರುತಿಃ ।**

**ಬ್ರಹ್ಮೇತ್ಯುಪಲಕ್ಷಣಮ್ । ಪ್ರಕೃತ್ಯಾಖ್ಯಂ ತಮೋऽಪೀತಿ ಜ್ಞಾತವ್ಯಮ್ ।**

**ಅನುವಾದ :-** 'ನಾಸದಾಸೀತ್' 'ನೋ ಸದಾಸೀತ್' 'ತಮ ಆಸೀತ್' 'ಆನೀದವಾತಂ ಸ್ವಧಯಾ ತದೇಕಮ್'

ಇತ್ಯಾದಿ ವಾಕ್ಯಗಳಿಂದ ಯಾವ ಅರ್ಥ ಪ್ರತೀತವಾಗುತ್ತಿದೆ (ಬ್ರಹ್ಮ-ಅವಿದ್ಯೆ-ಗಳಿಗೆ ಪ್ರಸಿದ್ಧ ಸದಸದ್ವೈಲಕ್ಷಣ್ಯ ಅನಿರ್ವಚನೀಯತ್ವ ಎಂಬ ಯಾವ ಅರ್ಥ

ಪ್ರತೀತವಾಗುತ್ತಿದೆ) ಆ ಅರ್ಥ ಅನುಪಪನ್ನ ಎಂದಾದರೆ, ಹಾಗಾದರೆ ಬ್ರಹ್ಮ-ಅವಿದ್ಯೆಗಳಿಗೆ ಹೇಳಲ್ಪಡುತ್ತಿರುವ ಸದಸದ್ವೈಲಕ್ಷಣ್ಯ ಎನ್ನುವುದಕ್ಕೆ (ಬ್ರಹ್ಮ-ಅವಿದ್ಯೆಗಳಿಗೆ ಸದಸದ್ವೈಲಕ್ಷಣ್ಯವನ್ನು ಪ್ರತಿಪಾದಿಸುವ ವಾಕ್ಯಗಳಿಗೆ) ಏನು ಅರ್ಥ ?

ಈ ರೀತಿ ಶಂಕೆ ಬಂದರೆ, 'ನಾಸದಾಸೀತ್' ಎಂಬ ಶ್ರುತಿಗೆ ಏನು ಅರ್ಥ ಹೇಳಬೇಕು ಎನ್ನುವುದನ್ನು ಮತ್ತೊಂದು ಶ್ರುತಿಯಿಂದಲೇ ಆಚಾರ್ಯರು ತೋರಿಸಿಕೊಡುತ್ತಾರೆ -

ಮೂಲ:- ಮೂರ್ತಂ ಸದಿತಿ ಸಂಪ್ರೋಕ್ತಮಮೂರ್ತಮಸದುಚ್ಯತೇ ।
ಮೂರ್ತಾಮೂರ್ತೇತರದ್ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ಇತಿ
ಪೈಂಗಿಶ್ರುತಿ: ।

**ಮೂಲಾರ್ಥ :-** ಮೂರ್ತ ಪದಾರ್ಥಗಳು ಸತ್ ಎಂದು ಕರೆಸಿಕೊಳ್ಳಲ್ಪಡುತ್ತವೆ. (ಸತ್ ಎಂದರೆ ಮೂರ್ತ ಪದಾರ್ಥಗಳು ಎಂದರ್ಥ.) ಅಮೂರ್ತಪದಾರ್ಥಗಳು ಅಸತ್ ಎಂದು ಕರೆಸಿಕೊಳ್ಳಲ್ಪಡುತ್ತವೆ. (ಅಸತ್ ಎಂದರೆ ಅಮೂರ್ತಪದಾರ್ಥಗಳು ಎಂದರ್ಥ.) ಮೂರ್ತ-ಅಮೂರ್ತ ಪದಾರ್ಥಗಳಿಂದ ಭಿನ್ನನಾದ ಬ್ರಹ್ಮನು 'ಸತ್ ಅಲ್ಲ' 'ಅಸತ್ ಅಲ್ಲ' (ಸದಸದ್ವಿಲಕ್ಷಣ) ಎಂಬುದಾಗಿ ಕರೆಸಿಕೊಳ್ಳುತ್ತಾನೆ ಎಂದು ಪೈಂಗಿಶ್ರುತಿಯ ಅರ್ಥ.

ಪೈಂಗಿಶ್ರುತಿಯಲ್ಲಿ ಬ್ರಹ್ಮ ಎಂದು ಹೇಳಿರುವುದು ಉಪಲಕ್ಷಣವಾಗಿದೆ. ಅಂದರೆ ಬ್ರಹ್ಮನನ್ನು ತೆಗೆದುಕೊಳ್ಳುವುದರ ಜೊತೆಗೆ ಉಪಲಕ್ಷಣಯಾ ಪ್ರಕೃತಿ ಎಂಬ ಹೆಸರುಳ್ಳ ಅವಿದ್ಯೆಯನ್ನೂ ತೆಗೆದುಕೊಳ್ಳಬೇಕು.

ಹಾಗಾದರೆ -

**'ನಾಸದಾಸೀತ್' 'ನೋ ಸದಾಸೀತ್' 'ತಮ ಆಸೀತ್' 'ಆನೀದವಾತಂ ಸ್ವಧಯಾ ತದೇಕಂ'**

ಇತ್ಯಾದಿ ವಾಕ್ಯಗಳು 'ಅವಿದ್ಯೆ ಸದಸದ್ವಿಲಕ್ಷಣವಾಗಿದೆ' 'ಬ್ರಹ್ಮನು ಸದಸದ್ವಿಲಕ್ಷಣನಾಗಿದ್ದಾನೆ' ಎಂದು ಹೇಳಿದರೆ 'ಅವಿದ್ಯೆಯು ಮೂರ್ತ-ಅಮೂರ್ತವಿಲಕ್ಷಣವಾಗಿದೆ' 'ಬ್ರಹ್ಮನು ಮೂರ್ತ-ಅಮೂರ್ತವಿಲಕ್ಷಣ-ನಾಗಿದ್ದಾನೆ' ಎಂಬುದಾಗಿ ಆ ವಾಕ್ಯಗಳ ಅರ್ಥವನ್ನು ತಿಳಿದುಕೊಳ್ಳಬೇಕು ಎಂದು ಭಾವ.

**ಅವತಾರಿಕೆ :-** 'ನಾಸದಾಸೀತ್' ಎಂಬ ಶ್ರುತಿ ತಿಳಿಸುವ ಸದಸದ್ವೈಲಕ್ಷಣ್ಯ ಅದು ಮೂರ್ತಾಮೂರ್ತವೈಲಕ್ಷಣ್ಯವೇ ಹೊರತು ಅನಿರ್ವಚನೀಯತ್ವ ಅಲ್ಲ ಎಂದು ಉಪಪಾದಿಸಿದರು. ಅದರಮೇಲೆ ಶಂಕೆ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

**ಟೀಕಾ : ನನ್ವಸರ್ವಗತಪರಿಮಾಣಂ ಮೂರ್ತಂ ತತೋಽನ್ಯತ್ಸರ್ವಮ-ಮೂರ್ತಮ್ । ತಥಾ ಚ ಭಾವಾಭಾವಾತ್ಮಕಸ್ಯ ಸರ್ವಸ್ಯಾಪಿ ಮೂರ್ತಾಮೂರ್ತಾಂತಃ ಪಾತಿತ್ವಾತ್ತತೋ ವಿಲಕ್ಷಣತ್ವೇ ಬ್ರಹ್ಮ-ಪ್ರಕೃತ್ಯೋರನಿರ್ವಚನೀಯತಾತಾದವಸ್ಥ್ಯಮಿತಿ ಚೇತ್ ।**

**ಮೈವಮ್ । ಮೂರ್ತಶಬ್ದಸ್ಯ ಪೃಥಿವ್ಯಪ್ತೇಜೋವಿಷಯತ್ವೇನಾ-ಮೂರ್ತಶಬ್ದಸ್ಯ ಚ ವಾಯ್ವಾಕಾಶಪರತ್ವೇನ ಸರ್ವಸ್ಯ ತದಂತ-ರ್ಭಾವಾಭಾವಾತ್ । ಬ್ರಹ್ಮಪ್ರಕೃತ್ಯೋಶ್ಚ ಪಂಚಮಹಾಭೂತ-ವಿಲಕ್ಷಣತ್ವಸ್ಯೋಪಪನ್ನತ್ವಾದಿತಿ ಭಾವೇನ ಸದಸಚ್ಛಬ್ದೌ ಶ್ರುತ್ಯಂತರೇಣ ವ್ಯಾಖ್ಯಾತಿ -**

**ಮೂಲಃ- 'ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚೈತತ್ ಸತ್' ಇತಿ ಮಾಧ್ಯಂದಿನಶ್ರುತಿಃ ।**

**'ವಾಯುರಂತರಿಕ್ಷಂ ಚಾಸತ್' ಇತಿ ಶ್ರುತಿಶೇಷಃ ।**

**ಅನುವಾದ :-** ಹೌದು, ಸದಸದ್ವೈಲಕ್ಷಣ್ಯ ಎಂಬುದಕ್ಕೆ ಮೂರ್ತಾ-ಮೂರ್ತವೈಲಕ್ಷಣ್ಯ ಎಂದು ಅರ್ಥ ಮಾಡಿದರೂ ಸಹ ಅನಿರ್ವಚನೀಯತ್ವ ಅನಿವಾರ್ಯವಾಗುತ್ತದೆ. ಹೇಗೆಂದರೆ- ಸೀಮಿತವಾದ ಪರಿಮಾಣ ಉಳ್ಳ ವಸ್ತುಗಳು ಮೂರ್ತ ಎನಿಸುತ್ತವೆ. ಅಂತಹ ಸೀಮಿತಪರಿಮಾಣವುಳ್ಳ ವಸ್ತುಗಳಿಂದ ಭಿನ್ನವಾದ ಎಲ್ಲವೂ (ಅಪರಿಮಿತಪರಿಮಾಣ ಉಳ್ಳ ಎಲ್ಲವೂ) ಅಮೂರ್ತ ಎನಿಸುತ್ತವೆ. ಹಾಗಾಗಿ ಭಾವ-ಅಭಾವರೂಪವಾದ ಸಮಗ್ರ ಜಗತ್ತೂ ಈ ಮೂರ್ತ-ಅಮೂರ್ತಗಳಲ್ಲಿಯೇ ಅಂತರ್ಭಾವವಾಗುವುದರಿಂದ, ಬ್ರಹ್ಮ-ಅವಿದ್ಯೆಗಳಿಗೆ ಈ ಮೂರ್ತ-ಅಮೂರ್ತವೈಲಕ್ಷಣ್ಯ ಹೇಳಿದರೆ ಪ್ರಸಿದ್ಧಸದಸ-ದ್ವೈಲಕ್ಷಣ್ಯವೇ ಹೇಳಿದಂತಾಗಿ ಅನಿರ್ವಚನೀಯತ್ವವೇ ಸಿದ್ಧಿಸುತ್ತದೆಯಲ್ಲವೇ ?

ಹೀಗೆ ಶಂಕೆ ಮಾಡುವುದು ಸರಿಯಲ್ಲ. ಏಕೆಂದರೆ ಮೂರ್ತಶಬ್ದವು ಪೃಥಿವೀ-ಅಪ್-ತೇಜೋವಿಷಯಕವಾದ್ದರಿಂದ (ಮೂರ್ತಶಬ್ದಕ್ಕೆ ಪೃಥಿವೀ-ಅಪ್-ತೇಜಸ್ಸು ಎಂದು ಅರ್ಥ ಇರುವುದರಿಂದ), ಅಮೂರ್ತಶಬ್ದವು ವಾಯು-ಆಕಾಶವಿಷಯಕವಾದ್ದರಿಂದ (ಅಮೂರ್ತಶಬ್ದಕ್ಕೆ ವಾಯು-ಆಕಾಶ ಎಂದು ಅರ್ಥ ಇರುವುದರಿಂದ) ಭಾವ-ಅಭಾವರೂಪವಾದ ಸಮಗ್ರ ಜಗತ್ತೂ ಈ ಮೂರ್ತ-ಅಮೂರ್ತಗಳಲ್ಲಿ ಅಂತರ್ಭಾವ ಆಗುವುದಿಲ್ಲ. ಅರ್ಥಾತ್ ಈ ಪಕ್ಷದಲ್ಲಿ ಬ್ರಹ್ಮ-ಅವಿದ್ಯೆಗಳಿಗೆ ಮೂರ್ತ-ಅಮೂರ್ತವಿಲಕ್ಷಣತ್ವವನ್ನು ಹೇಳಿದರೆ ಪಂಚಮಹಾಭೂತವಿಲಕ್ಷಣತ್ವವನ್ನು ಹೇಳಿದಂತಾಗುತ್ತದೆಯೇ ಹೊರತು ಅನಿರ್ವಚನೀಯತ್ವ ಹೇಳಿದಂತಾಗುವುದಿಲ್ಲ. ಬ್ರಹ್ಮ-ಅವಿದ್ಯೆಗಳಿಗೆ ಪಂಚಮಹಾಭೂತವಿಲಕ್ಷಣತ್ವವು ಉಪಪನ್ನವೇ ಆಗಿದೆ ಎಂಬ ಅಭಿಪ್ರಾಯದಿಂದ 'ನಾಸದಾಸೀತ್ ನೋ ಸದಾಸೀತ್' ಎಂಬ ಶ್ರುತಿಯಲ್ಲಿರುವ ಸತ್-ಅಸತ್ ಶಬ್ದಗಳನ್ನು ಮತ್ತೊಂದು ಶ್ರುತಿಯಿಂದ ವ್ಯಾಖ್ಯಾನಿಸುತ್ತಾರೆ -

**ಮೂಲ:-** 'ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚೈತತ್ ಸತ್' ಇತಿ ಮಾಧ್ಯಂದಿನಶ್ರುತಿಃ।

**ಮೂಲಾರ್ಥ :-** 'ವಾಯು-ಆಕಾಶಗಳಿಂದ ಭಿನ್ನವಾದ ಪೃಥಿವೀ-ಅಪ್-ತೇಜಸ್ಸುಗಳು ಸತ್ ಎನಿಸುತ್ತವೆ' ಎಂದು ಮಾಧ್ಯಂದಿನಶ್ರುತಿ ಹೇಳುತ್ತದೆ.

ಪೃಥಿವೀ-ಅಪ್-ತೇಜಸ್ಸುಗಳಿಂದ ಭಿನ್ನವಾದ ವಾಯು-ಆಕಾಶಗಳು ಅಸತ್ ಎನಿಸುತ್ತವೆ ಎಂಬುದಾಗಿ ಶ್ರುತಿಶೇಷ ಮಾಡಿಕೊಳ್ಳಬೇಕು.

### 'ನಾಸದಾಸೀತ್..' ಶ್ರುತ್ಯರ್ಥನಿರೂಪಣೆ

**ಟೀಕಾ : ತತಶ್ಚಾಯಂ ಶ್ರುತ್ಯರ್ಥೋಽ ಭವತಿ । ತದಾನೀಂ ಪ್ರಲಯೇ ಅಸದಮೂರ್ತಂ ವಾಯ್ವಂತರಿಕ್ಷಾಖ್ಯಂ ನಾಸೀತ್ । ಸಚ್ಚ ಮೂರ್ತಂ ಪೃಥಿವ್ಯಪ್ತೇಜೋರೂಪಂ ನೋ ಆಸೀತ್ । ರಜಃಶಬ್ದೋಪಲಕ್ಷಿತಂ ಗುಣತ್ರಯಂ ಚ ನಾಸೀತ್ । ಯತ್ಪರಃ ಪರಂ ಸರ್ವಗತಮವ್ಯಾಕೃತಂ ವ್ಯೋಮ ತಚ್ಚ ಮೂರ್ತಸಂಬಂಧಾಭಾವಾನ್ನೋ ಆಸೀದಿತಿ ।**

**ಸದಸಚ್ಛಬ್ದಯೋರ್ಭಾವಾಭಾವಪರತ್ವೇ ಪ್ರಸಿದ್ಧಮೂರ್ತಾ-ಮೂರ್ತವಿಷಯತ್ವೇ ವಾ ಸರ್ವಸ್ಯ ತದಂತರ್ಭಾವಾತ್ ಪುನಾ ರಜಃಪ್ರಭೃತೇಃ ಪ್ರತಿಷೇಧೋಽನರ್ಥಕಃ ಸ್ಯಾದಿತ್ಯನಿಷ್ಟಾಂತರ-**

**ಸೂಚನಾರ್ಥಂ ಪ್ರಾಗಧಿಕಾಂಶೋದಾಹರಣಂ ಕೃತಮ್ । ಅನ್ಯಥಾ 'ನಾಸದಾಸೀತ್ ನೋಸದಾಸೀತ್ತದಾನೀಮ್' ಇತ್ಯೇತಾವದೇವೋ-ದಾಹರಿಷ್ಯತ್ ।**

**ನನು ಪ್ರತೀತಾರ್ಥೇ ಬಾಧಿತೇಽರ್ಥಾಂತರಮಾವಶ್ಯಕಮೇವ । ತತ್ಕಿಂ ಶ್ರುತ್ಯುದಾಹರಣೇನ । ಮೈವಮ್ । ಬಾಧಕೇನಾ-ರ್ಥಾಂತರಮೇವ ಲಭ್ಯತೇ । ನ ತು ತದ್ವಿಶೇಷೋಽಪೀತಿ ತತ್ರಾಶ್ರಯಣೀಯಮೇವ ಶ್ರುತ್ಯಂತರಮ್ ।**

**ಅನುವಾದ :-** ಹಾಗಾದರೆ ಒಟ್ಟನಲ್ಲಿ 'ನಾಸದಾಸೀತ್' ಎಂಬ ಶ್ರುತಿಯ ಅರ್ಥ ಇಷ್ಟು ಹೇಳಿದಂತಾಗುತ್ತದೆ :-

**ತದಾನೀಂ** ಪ್ರಲಯಕಾಲದಲ್ಲಿ **ಅಸತ್** ವಾಯು-ಅಂತರಿಕ್ಷ ಎಂಬ ಅಮೂರ್ತಪದಾರ್ಥ **ನ ಆಸೀತ್** ಇರಲಿಲ್ಲ. **ಸತ್ ಚ** ಪೃಥಿವೀ-ಅಪ್-ತೇಜಸ್ಸು ಎಂಬ ಮೂರ್ತಪದಾರ್ಥವೂ ಸಹ **ನೋ ಆಸೀತ್** ಇರಲಿಲ್ಲ. **ರಜಃ** ರಜಃ ಶಬ್ದದಿಂದ ಉಪಲಕ್ಷಿತವಾದ ಗುಣತ್ರಯವು (ಸತ್ವರಜಸ್ತಮೋಗುಣಗಳು) **ನ ಆಸೀತ್** ಇರಲಿಲ್ಲ. **ಯತ್ ಪರಃ (ಪರಂ)** ಸರ್ವತ್ರ ವ್ಯಾಪ್ತವಾದ **ವ್ಯೋಮ** ಅವ್ಯಾಕೃತ ಆಕಾಶವು, ಅದೂ ಸಹ ಮೂರ್ತಪದಾರ್ಥಗಳ ಸಂಬಂಧ ಇರದ ಕಾರಣ, **ನೋ ಆಸೀತ್** ಇರಲಿಲ್ಲ ಎಂದು.

ಹೌದು - ಸತ್-ಅಸತ್ ಪದಾರ್ಥಗಳು ಇರಲಿಲ್ಲ, ಅವಿದ್ಯೆ ಇತ್ತು ಎಂಬುದನ್ನು ಪ್ರಮಾಣೀಕರಿಸುವಾಗ "**ನಾಸದಾಸೀತ್ ನೋ ಸದಾಸೀತ್ ತದಾನೀಮ್**" ಎಂಬ ಶ್ರುತ್ಯಂಶವನ್ನು ಮಾತ್ರ ಉದಾಹರಿಸಿದ್ದರೆ ಸಾಕಾಗಿತ್ತು. ಅನಾವಶ್ಯಕವಾದ "**ನಾಸೀದ್ರಜೋ ನೋ ವ್ಯೋಮಾಪರೋ ಯತ್**" ಎಂಬ ಹೆಚ್ಚಿನಾಂಶವನ್ನು ಏಕೆ ಉದಾಹರಿಸಿದರು ಆಚಾರ್ಯರು ?

ಈ ಪ್ರಶ್ನೆಗೆ ಶ್ರೀಮಟ್ಟೀಕಾಕೃತ್ಪಾದರು ಸಮಾಧಾನ ಹೇಳುತ್ತಾರೆ -

"ಶ್ರುತಿಯಲ್ಲಿರುವ ಸತ್-ಅಸತ್ ಶಬ್ದಗಳು ಭಾವಾಭಾವಪರವಾಗಿವೆ (ಸತ್-ಅಸತ್ ಶಬ್ದಗಳಿಗೆ ಭಾವ-ಅಭಾವ ಎಂದು ಅರ್ಥ) ಎಂಬುದಾಗಿ ಹೇಳಿದರೆ, ಅಥವಾ ಪ್ರಸಿದ್ಧ ಮೂರ್ತಾಮೂರ್ತಪರವಾಗಿವೆ (ಸತ್-ಅಸತ್ ಶಬ್ದಗಳಿಗೆ ಪ್ರಸಿದ್ಧವಾದ [೧]ಮೂರ್ತಪದಾರ್ಥಗಳು [೨]ಅಮೂರ್ತಪದಾರ್ಥಗಳು ಎಂದು

---

೧ ಸೀಮಿತವಾದ ಪರಿಮಾಣ ಉಳ್ಳ ಪೃಥಿವ್ಯಾದಿವಸ್ತುಗಳು

೨ ಅಪರಿಮಿತವಾದ ಪರಿಮಾಣ ಉಳ್ಳ ಆಕಾಶಾದಿಗಳು

ಅರ್ಥ) ಎಂಬುದಾಗಿ ಹೇಳಿದರೆ, ಸಮಗ್ರವಾದ ಜಗತ್ತೂ ಈ ಭಾವಾಭಾವ-ಮೂರ್ತಾಮೂರ್ತ ವಸ್ತುಗಳಲ್ಲಿಯೇ ಅಂತರ್ಭಾವ ಆಗುವುದರಿಂದ, (ಈ ಮೂಲಕ ಸಮಗ್ರ ಜಗತ್ತನ್ನೇ ನಿಷೇಧಿಸಿದಂತಾಗುವುದರಿಂದ) ಪುನಃ ರಜೋಗುಣ ಮೊದಲಾದವುಗಳನ್ನು ನಿಷೇಧಿಸುವುದು ವ್ಯರ್ಥವಾಗುತ್ತದೆ'' ಎಂಬ ಮತ್ತೊಂದು ಅನಿಷ್ಟವನ್ನು ಸೂಚಿಸುವುದಕ್ಕಾಗಿ ಆಚಾರ್ಯರು ಹಿಂದೆ ಶ್ರುತಿಯನ್ನು ಉದಾಹರಿಸುವಾಗ

**''ನಾಸೀದ್ರಜೋ ನೋ ವ್ಯೋಮಾಪರೋ ಯತ್''**

ಎಂಬ ಹೆಚ್ಚಿನ ಅಂಶವನ್ನು ಉದಾಹರಿಸಿದ್ದಾರೆ. ಒಂದುವೇಳೆ ಸತ್-ಅಸತ್ ಪದಾರ್ಥಗಳು ಇರಲಿಲ್ಲ ಎಂದಷ್ಟೇ ಹೇಳುವ ಉದ್ದೇಶ ಇದ್ದದ್ದಾದರೆ

**'ನಾಸದಾಸೀತ್ ನೋ ಸದಾಸೀತ್ ತದಾನೀಂ'**

ಎಂದಷ್ಟೇ ಉದಾಹರಿಸುತ್ತಿದ್ದರು ಎಂದು ಭಾವ.

ಹೌದು - 'ನಾಸದಾಸೀತ್' ಎಂಬ ಶ್ರುತಿಗೆ ಪ್ರಸಿದ್ಧಸದಸದ್ವೈಲಕ್ಷಣ್ಯ ಎಂಬ ಪರರು ಹೇಳುವ ಅರ್ಥವು ಬಾಧಿತ ಎಂದಾದಾಗ, ಶ್ರುತಿಯು ಅಪೌರುಷೇಯವಾಗಿ ನಿರ್ದೋಷವಾದ್ದರಿಂದ ಸರ್ವಥಾ ನಿರ್ವಿಷಯತ್ವರೂಪವಾದ ಅಪ್ರಾಮಾಣ್ಯವನ್ನು ಶ್ರುತಿಗೆ ಹೇಳಲು ಸಾಧ್ಯವಾಗದ ಕಾರಣ, ಬೇರೆ ಅರ್ಥವನ್ನು ಹೇಳಬೇಕಾದದ್ದು ಆವಶ್ಯಕವೇ. ಅಂದಮೇಲೆ 'ಮೂರ್ತಂ ಸದಿತಿ ಸಂಪ್ರೋಕ್ತಂ' ಎಂಬ ಶ್ರುತಿಯನ್ನು ಉದಾಹರಿಸುವುದು ಯಾಕೆ ?

ಹೀಗೆ ಶಂಕಿಸುವುದು ಸರಿಯಲ್ಲ. ಏಕೆಂದರೆ - ಪ್ರಸಿದ್ಧಸದಸದ್ವೈಲಕ್ಷಣ್ಯ ಎಂಬ ಪರರು ಹೇಳುವ ಅರ್ಥದಲ್ಲಿ ಬಾಧಕ ಕಂಡಾಗ, ಶ್ರುತಿಗೆ ಬೇರೆ ಅರ್ಥ ಹೇಳಬೇಕು ಎಂದಷ್ಟೇ ಲಬ್ಧವಾಗುತ್ತದೆ. ಹೊರತು ಮೂರ್ತಾಮೂರ್ತವೈಲಕ್ಷಣ್ಯ (ಪಂಚಮಹಾಭೂತವೈಲಕ್ಷಣ್ಯ) ಎಂಬ ವಿಶೇಷಾರ್ಥವು (ಕೇವಲ ಬಾಧಕದಿಂದ) ಲಬ್ಧವಾಗುವುದಿಲ್ಲ. ಆದ್ದರಿಂದ ಅರ್ಥವಿಶೇಷಲಾಭ(ನಿಮಿತ್ತವಾಗಿ)ಕ್ಕಾಗಿ

**'ಮೂರ್ತಂ ಸದಿತಿ ಸಂಪ್ರೋಕ್ತಂ'**
**'ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚೈತತ್ ಸತ್'**

ಎಂಬ ಬೇರೆ ಶ್ರುತಿಯನ್ನು ಆಶ್ರಯಿಸಲೇಬೇಕು. ಹೀಗಾಗಿ ಆಚಾರ್ಯರು ಶ್ರುತ್ಯಂತರೋದಾಹರಣ ಮಾಡಿದ್ದು ಸಮಂಜಸವೇ ಎಂದು ಭಾವ.

ಅಂದಮೇಲೆ ಯಾವ ಆಗಮವೂ ಪ್ರಸಿದ್ಧಸದಸದ್ವೈಲಕ್ಷಣ್ಯವನ್ನು (ಸದಸದ್ವಿಲಕ್ಷಣವಸ್ತುವನ್ನು) ಪ್ರತಿಪಾದಿಸದ ಕಾರಣ, ಅನಿರ್ವಚನೀಯವಸ್ತು-ವಿಷಯದಲ್ಲಿ ಆಗಮವು ಹೇಗೆ ಪ್ರಮಾಣವಾಗುತ್ತದೆ ? ಎಂಬುದಾಗಿ ಹಿಂದೆ ವಿಕಲ್ಪಿಸಿದ ಎರಡು ಪಕ್ಷಗಳಲ್ಲಿ ''ಇದು ಸದಸದ್ವಿಲಕ್ಷಣವಾಗಿದೆ ಎಂದು ನಿರವಕಾಶವಾಗಿ ಆಗಮವು ಅನಿರ್ವಚನೀಯವಸ್ತುವನ್ನು ಪ್ರತಿಪಾದಿಸುತ್ತದೆ'' ಎಂಬ ಮೊದಲನೇ ಪಕ್ಷ ಸರಿಯಲ್ಲ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ಈವರೆಗೆ ಮೊದಲನೇ ನಿರವಕಾಶ ಆಗಮಪಕ್ಷವನ್ನು ನಿರಾಕರಿಸಿ, ಪ್ರಕೃತ ''ಆಗಮವು 'ಇದು ಅನಿರ್ವಚನೀಯವಾಗಿದೆ' ಎಂಬುದಾಗಿ ಪ್ರತಿಪಾದಿಸುತ್ತದೆ'' ಎಂಬ ಎರಡನೇ ಪಕ್ಷವನ್ನು ನಿರಾಕರಿಸುತ್ತಾರೆ -

## ಶ್ರುತಿಪುರಾಣಾದಿಗಳಲ್ಲಿ ಕೇಳಿಬರುವ 'ಅನಿರ್ವಾಚ್ಯ-ಅಚಿಂತ್ಯ-ಅತರ್ಕ್ಯ-ಅಜ್ಞೇಯ' ಶಬ್ದಗಳ ಅರ್ಥನಿರೂಪಣೆ

**ಟೀಕಾ : ನನು ಶ್ರುತಿಪುರಾಣಾದಿಷು ಪ್ರಪಂಚಸ್ಯಾನಿರ್ವಚನೀಯತ್ವ-ಮುಚ್ಯತೇ । ಅಚಿಂತ್ಯತ್ವಮತರ್ಕ್ಯತ್ವಮಜ್ಞೇಯತ್ವಂ ಚ । ನ ಚ ತತ್ರ ಚಿಂತಾದ್ಯವಿಷಯತ್ವಮೇವಾರ್ಥಃ । ತಥಾ ಸತಿ ಪ್ರಮಾಣಾನಾಂ ನಿರ್ವಿಷಯತ್ವಾಪತ್ತೇಃ । ಅತಸ್ತದಾದಿಪ್ರಕಾರೈರಚಿಂತ್ಯತ್ವಾದ್ಯೇವ ತದರ್ಥಃ ।**

**ಕಿಂಚ ಪ್ರಪಂಚೋಽನೃತೋಽಸನ್ನ ಸತ್ಯ ಇತ್ಯಪಿ ಸಂತಿ ವಾಕ್ಯಾನಿ । ನ ಚಾಸತ್ತ್ವಮೇವ ತದರ್ಥಃ । ತಥಾತ್ವೇ ಪ್ರತೀತಿವಿರೋಧಾತ್ । ಅತಸ್ತಾನ್ಯನಿರ್ವಚನೀಯವಚನಾನಿ । ತತ್ಕಥಮನಿರ್ವಚನೀಯಂ ನಾಗಮೋ ವಕ್ತೀತಿ ದ್ವಿತೀಯಪಕ್ಷನಿರಾಸಾಯ ತದ್ವಚನಾರ್ಥಂ ಸೋಪಪತ್ತಿಕಯಾ ಸ್ಮೃತ್ಯೈವ ದರ್ಶಯತಿ -**

**ಮೂಲ :- ಅದ್ಭುತತ್ವಾದನಿರ್ವಾಚ್ಯಂ ಬ್ರಹ್ಮ ಚಿಚ್ಚೇತ್ಯಮೇವ ಚ ।**

**ಅದ್ಭುತತ್ವಾದಾಶ್ಚರ್ಯತ್ವಾದೇವ ಚೇತ್ಯಮನಿರ್ವಾಚ್ಯಮುಚ್ಯತೇ । ನ ತು ಸದಾದಿಪ್ರಕಾರೈರ್ನಿರ್ವಕ್ತುಮಶಕ್ಯತ್ವಾತ್ । ಕುತಃ । ನ ಕೇವಲಂ ಚೇತ್ಯಮನಿರ್ವಾಚ್ಯಮುಚ್ಯತೇ । ಕಿಂತು, ಬ್ರಹ್ಮ ತದಿತರ-ಚೇತನಂ ಚ । ನ ಚ ಬ್ರಹ್ಮಾದೇರನಿರ್ವಾಚ್ಯತಾಽಂಗೀಕಾರಾರ್ಹಾ ।**

**ಅತಸ್ತತ್ರ ಯಥಾಽದ್ಭುತತ್ವಾದೇವ ಸಾ ವ್ಯಾಖ್ಯೇಯಾ ತಥಾ ಚೇತ್ಯಸ್ಯಾಪಿ । ಪ್ರಕರಣಾತ್ ।**

**ಅನುವಾದ :-** ಶ್ರುತಿ-ಪುರಾಣಾದಿಗಳಲ್ಲಿ ಅಲ್ಲಲ್ಲಿ ಪ್ರಪಂಚಕ್ಕೆ ಅನಿರ್ವಚನೀಯತ್ವವನ್ನು ಹೇಳುವುದುಂಟು. ಹಾಗೆಯೇ ಅಚಿಂತ್ಯತ್ವ-ಅತರ್ಕ್ಯತ್ವ-ಅಜ್ಞೇಯತ್ವಗಳನ್ನೂ ಹೇಳುವುದುಂಟು. ಅಲ್ಲಿ ಎಲ್ಲಕಡೆ ಅಚಿಂತ್ಯತ್ವ ಎಂದರೆ ಚಿಂತಾಽವಿಷಯತ್ವ, ಅತರ್ಕ್ಯತ್ವ ಎಂದರೆ ತರ್ಕಾವಿಷಯತ್ವ, ಅಜ್ಞೇಯತ್ವ ಎಂದರೆ ಜ್ಞಾನಾವಿಷಯತ್ವ ಎಂದು ಅರ್ಥವಲ್ಲ. ಒಂದುವೇಳೆ ಅಚಿಂತ್ಯತ್ವಾದಿಪದಗಳಿಗೆ ಚಿಂತಾದ್ಯವಿಷಯತ್ವವೇ ಅರ್ಥವಾಗುವುದಾದರೆ ಪ್ರಪಂಚವು ಚಿಂತೆಗೆ ವಿಷಯವಲ್ಲ, ತರ್ಕಕ್ಕೆ ವಿಷಯವಲ್ಲ, ಜ್ಞಾನಕ್ಕೆ ವಿಷಯವಲ್ಲ ಎಂದಾಗುವುದರಿಂದ ಪ್ರಪಂಚಗ್ರಾಹಕವಾದ ಪ್ರತ್ಯಕ್ಷ-ಅನುಮಾನ-ಆಗಮಗಳು ನಿರ್ವಿಷಯವಾಗಬೇಕಾಗುತ್ತದೆ. ಆದ್ದರಿಂದ ಅಚಿಂತ್ಯತ್ವಾದಿ-ಪದಗಳಿಗೆ ಚಿಂತಾದ್ಯವಿಷಯತ್ವ ಎಂದು ಅರ್ಥ ಮಾಡಬಾರದು. ಕಿಂತು ಸತ್ ಎಂದಾಗಲೀ ಅಸತ್ ಎಂದಾಗಲೀ ಚಿಂತೆಗೆ ವಿಷಯವಲ್ಲ, ಸತ್ ಎಂದಾಗಲೀ ಅಸತ್ ಎಂದಾಗಲೀ ಜ್ಞಾನಕ್ಕೆ ವಿಷಯವಲ್ಲ ಇತ್ಯಾದಿಯಾಗಿಯೇ ಅವುಗಳಿಗೆ ಅರ್ಥ ಹೇಳಬೇಕು.

ಮತ್ತು ಅದೇ ರೀತಿಯಾಗಿ 'ಪ್ರಪಂಚಃ ಅನೃತಃ' 'ಪ್ರಪಂಚಃ ಅಸನ್' 'ಪ್ರಪಂಚಃ ನ ಸತ್ಯಃ' ಎಂಬುದಾಗಿಯೂ ಅನೇಕ ವಚನಗಳು ಇವೆ. ಅಲ್ಲಿ ಎಲ್ಲಕಡೆ ಅಸತ್ತ್ವವೇ ಅವುಗಳ ಅರ್ಥವಲ್ಲ. ಯಾಕೆ ? ಹಾಗೆ ಅಸತ್ತ್ವವೇ ಅರ್ಥವಾಗುವುದಾದರೆ ಪ್ರಪಂಚಕ್ಕೆ ಅಸತ್ವವನ್ನು ಹೇಳಿದಂತಾಗುತ್ತದೆ. ಆದರೆ

'**ಅಸಚ್ಚೇನ್ನ ಪ್ರತೀಯೇತ**' ಎಂಬುದಾಗಿ ಅಸತ್‌ಗೆ ಪ್ರತೀತಿಯನ್ನು ಒಪ್ಪಿಲ್ಲವಾದ್ದರಿಂದ, ಪ್ರಕೃತ ಪ್ರಪಂಚಕ್ಕೆ ಪ್ರತೀತಿಯಾದರೂ ಇದೆ, ಹಾಗಾಗಿ ಅಸತ್ವವನ್ನು ಹೇಳಿದರೆ ಪ್ರತೀತಿವಿರೋಧ ಬರಬೇಕಾಗುತ್ತದೆ. ಆದ್ದರಿಂದ 'ಪ್ರಪಂಚಃ ಅನೃತಃ' ಇತ್ಯಾದಿವಚನಗಳಿಗೆ ಅಸತ್ತ್ವವೇ ಅರ್ಥವಲ್ಲ. ಕಿಂತು ಅನಿರ್ವಚನೀಯತ್ವ ಎಂದರ್ಥ.

ಅಂದಮೇಲೆ ಅನಿರ್ವಚನೀಯಬೋಧಕವಾದ ಇಷ್ಟೆಲ್ಲ ವಚನಗಳಿರುವಾಗ

'**ಅನಿರ್ವಚನೀಯಂ ಆಗಮೋ ನ ವಕ್ತಿ**' ಎಂದು ಹೇಗೆ ಹೇಳುತ್ತೀರಿ?

ಈ ರೀತಿಯಾಗಿ ಶಂಕೆ ಬಂದರೆ, ''ಆಗಮವು ಇದು ಅನಿರ್ವಚನೀಯವಾಗಿದೆ ಎಂಬುದಾಗಿ ಪ್ರತಿಪಾದಿಸುತ್ತದೆ'' ಎಂಬ ಎರಡನೇ ಪಕ್ಷವನ್ನು ನಿರಾಕರಿಸುವುದಕ್ಕಾಗಿ

**'ಪ್ರಪಂಚಃ ಅನಿರ್ವಚನೀಯಃ' 'ಪ್ರಪಂಚಃ ಅಚಿಂತ್ಯಃ'**

ಇತ್ಯಾದಿ ಶ್ರುತಿ-ಪುರಾಣವಚನಗಳ ನಿಜವಾದ ಅರ್ಥವನ್ನು ಯುಕ್ತಿಸಹಿತವಾದ ಸ್ಮೃತಿಯಿಂದಲೇ ತೋರಿಸಿಕೊಡುತ್ತಾರೆ ಆಚಾರ್ಯರು -

**ಮೂಲ :- ಅದ್ಭುತತ್ವಾದನಿರ್ವಾಚ್ಯಂ ಬ್ರಹ್ಮ ಚಿಚ್ಚೇತ್ಯಮೇವ ಚ ।**

**ಮೂಲಾರ್ಥ :- ಅದ್ಭುತವಾದ್ದರಿಂದ ಬ್ರಹ್ಮ ಹಾಗೂ ಚೇತನಾಚೇತನಾತ್ಮಕ ಜಗತ್ತು ಅನಿರ್ವಚನೀಯ ಎಂದು ಕರೆಸಿಕೊಳ್ಳಲ್ಪಡುತ್ತದೆ.**

ಚೇತ್ಯವು ಅಚೇತನವಾದ ಪ್ರಪಂಚವು ಅದ್ಭುತವಾದ್ದರಿಂದಲೇ ಆಶ್ಚರ್ಯವಾದ್ದರಿಂದಲೇ ಅನಿರ್ವಚನೀಯ ಎನಿಸಿಕೊಳ್ಳುತ್ತದೆ. ಹೊರತು ಸತ್ ಎಂದಾಗಲೀ ಅಸತ್ ಎಂದಾಗಲೀ ನಿರ್ವಚನ ಮಾಡಲು ಬರುವುದಿಲ್ಲವಾದ್ದರಿಂದ ಅಲ್ಲ. ಯಾಕೆ ? ಶ್ರುತಿ-ಪುರಾಣಾದಿಗಳಲ್ಲಿ ಕೇವಲ ಅಚೇತನ ಮಾತ್ರ ಅನಿರ್ವಚನೀಯ ಎಂದು ಕರೆಸಿಕೊಳ್ಳುತ್ತಿಲ್ಲ. ಕಿಂತು ಬ್ರಹ್ಮ ಹಾಗೂ ಇತರ ಚೇತನರೂ ಅನಿರ್ವಚನೀಯ ಎಂದು ಕರೆಸಿಕೊಳ್ಳುತ್ತಿದ್ದಾರೆ. ಆದರೆ ಆ ಬ್ರಹ್ಮನಿಗಾಗಲೀ ಇತರ ಚೇತನರಿಗಾಗಲೀ ಅನಿರ್ವಚನೀಯತ್ವವನ್ನು ('ಸದಾದಿಪ್ರಕಾರೈಃ ನಿರ್ವಕ್ತುಂ ಅಶಕ್ಯತ್ವ'ವನ್ನು) ಅಂಗೀಕರಿಸಲು ಬರುವುದಿಲ್ಲ. ಆದ್ದರಿಂದ ಅಲ್ಲಿ ಯಾವ ರೀತಿಯಾಗಿ ಅದ್ಭುತತ್ವನಿಮಿತ್ತವಾಗಿಯೇ ಬ್ರಹ್ಮನಿಗೆ ಹಾಗೂ ಇತರ ಚೇತನರಿಗೆ ಅನಿರ್ವಚನೀಯತ್ವದ ವ್ಯಾಖ್ಯಾನ ಮಾಡಲಾಗುವುದೋ ಅದೇ ರೀತಿಯಾಗಿ ಒಂದೇ ಪ್ರಕರಣವಾದ್ದರಿಂದ ಅಚೇತನವಾದ ಜಗತ್ತಿಗೂ ಸಹ ಅದೇ ಅದ್ಭುತತ್ವನಿಮಿತ್ತವಾಗಿಯೇ ಅನಿರ್ವಚನೀಯತ್ವದ ವ್ಯಾಖ್ಯಾನ ಮಾಡುವುದು ಸಮಂಜಸ ಎಂದು ಭಾವ.

**ಮೂಲ :- ಅಚಿಂತ್ಯಂ ತತ ಏವೈತತ್ ......**

**ಟೀಕಾ: ಏತತ್ ಬ್ರಹ್ಮ ಚಿಚ್ಚೇತ್ಯಂ ಚ । ತತಃ ಅದ್ಭುತತ್ವಾದೇವ । ಅಚಿಂತ್ಯಮುಚ್ಯತೇ । ನ ತು ಸದಾದಿಪ್ರಕಾರೈರ್ಮನೋವೃತ್ತ್ಯ-ವಿಷಯತ್ವಾತ್ ।**

**ಅನುವಾದ :-** ಮೂಲ :- ಅಚಿಂತ್ಯಂ ತತ್ ಏವೈತತ್ ।

**ಏತತ್** ಬ್ರಹ್ಮ ಹಾಗೂ ಚೇತನ-ಅಚೇತನಾತ್ಮಕ ಜಗತ್ತು, **ತತಃ ಏವ** ಅದ್ಭುತವಾದದ್ದರಿಂದಲೇ, **ಅಚಿಂತ್ಯಂ** ಅಚಿಂತ್ಯ ಎಂಬುದಾಗಿ ಸ್ಮೃತಿಗಳಲ್ಲಿ ಕರೆಯಲ್ಪಡುತ್ತದೆ. ಹೊರತು 'ಸತ್' 'ಅಸತ್' 'ಸದಸತ್' ಎಂಬುದಾಗಿ ಮನೋವೃತ್ತಿಗೆ ವಿಷಯವಾಗದ ಕಾರಣ (ಸದಸದ್ವಿಲಕ್ಷಣವಾಗಿದೆ ಎಂಬುದಾಗಿ ಮನೋವೃತ್ತಿಗೆ ವಿಷಯವಾದ್ದರಿಂದ) ಅಚಿಂತ್ಯ ಎಂದು ಕರೆಸಿಕೊಳ್ಳುವುದಿಲ್ಲ. ಅದ್ಭುತವಾಗಿರುವ ಕಾರಣದಿಂದಲೇ ಅಚಿಂತ್ಯ ಎನಿಸಿಕೊಳ್ಳುತ್ತಿದೆ ಎಂದು (ಮೂಲಾರ್ಥ) ಭಾವ.

**ಮೂಲ :- ........ ಅತರ್ಕ್ಯಾಜ್ಞೇಯಮೇವ ಚ ।**

**ಟೀಕಾ : ತತ ಇತಿ ವರ್ತತೇ । ತೇನ ಏವಕಾರಸ್ಯ ಸಂಬಂಧಃ । ಅತರ್ಕ್ಯಂ ಚ ತದಜ್ಞೇಯಂ ಚ ಅತರ್ಕ್ಯಾಜ್ಞೇಯಂ ತತಃ ಅದ್ಭುತತ್ವಾದೇವ । ನ ತು ಸದಾದಿಪ್ರಕಾರೈರನುಮಾತುಂ ಪ್ರತ್ಯಕ್ಷೇಣ ವಾ ಜ್ಞಾತುಮಶಕ್ಯತ್ವಾತ್ । ಮನೋವೃತ್ತೇಃ ಪ್ರತ್ಯಕ್ಷತ್ವೇಽಪಿ ಬಾಹ್ಯಾಂತರತ್ವಭೇದೇನ ಪೃಥಗುಪಾದಾನಮ್ ।**

**ಅನುವಾದ :-** ''ಅಚಿಂತ್ಯಂ ತತ ಏವೈತತ್'' ಎಂಬ ಹಿಂದಿನ ಮೂಲದಲ್ಲಿರುವ 'ತತಃ' ಎಂಬ ಪದವು ''ಅತರ್ಕ್ಯಾಜ್ಞೇಯಮೇವ ಚ'' ಎಂಬ ಈ ಮೂಲದಲ್ಲಿ ಅನುವೃತ್ತವಾಗುತ್ತದೆ. ಅನುವೃತ್ತವಾಗುವ 'ತತಃ' ಎನ್ನುವುದಕ್ಕೆ 'ಏವ'ಕಾರದ ಜೊತೆಗೆ ('ಅತರ್ಕ್ಯಾಜ್ಞೇಯ**ಮೇವ** ಚ' ಎನ್ನುವಲ್ಲಿರುವ 'ಏವ'ಕಾರದ ಜೊತೆಗೆ) ಸಂಬಂಧ ಅನ್ವಯ ತಿಳಿಯಬೇಕು. ''ಅತರ್ಕ್ಯಾ-ಜ್ಞೇಯಂ'' ಎನ್ನುವಲ್ಲಿ 'ಅತರ್ಕ್ಯಂ ಚ ತತ್ ಅಜ್ಞೇಯಂ ಚ ಅತರ್ಕ್ಯಾಜ್ಞೇಯಂ' (ಅತರ್ಕ್ಯವೂ ಆಗಿದೆ, ಅಜ್ಞೇಯವೂ ಆಗಿದೆ) ಎಂಬುದಾಗಿ ಕರ್ಮಧಾರಯ-ಸಮಾಸವನ್ನು ಮಾಡಿಕೊಳ್ಳಬೇಕು.

ಹಾಗಾದರೆ ಮೂಲದ ಅರ್ಥ ಇಷ್ಟು ಹೇಳಿದಂತಾಗುತ್ತದೆ :-

ಮೂಲ :- ಅತರ್ಕ್ಯಾಜ್ಞೇಯಮೇವ ಚ ।

**ಮೂಲಾರ್ಥ :-** ಬ್ರಹ್ಮ ಹಾಗೂ ಚೇತನ-ಅಚೇತನಾತ್ಮಕ ಜಗತ್ತು, ತತ ಏವ ಅದ್ಭುತವಾಗಿರುವ ಕಾರಣದಿಂದಲೇನೇ, **ಅತರ್ಕ್ಯಾಜ್ಞೇಯಂ** ಅತರ್ಕ್ಯವೂ ಆಗಿದೆ, ಅಜ್ಞೇಯವೂ ಆಗಿದೆ ಎಂದು ಕರೆಸಿಕೊಳ್ಳುತ್ತದೆ. ಹೊರತು ಸತ್ ಎಂದಾಗಲೀ ಅಸತ್ ಎಂದಾಗಲೀ ಅನುಮಾನದಿಂದ ಅಥವಾ ಪ್ರತ್ಯಕ್ಷದಿಂದ ತಿಳಿಯಲು ಅಶಕ್ಯವಾಗಿದೆ ಎಂಬ ಕಾರಣದಿಂದ ಅತರ್ಕ್ಯ-ಅಜ್ಞೇಯ ಎನಿಸುವುದಿಲ್ಲ.

ಹೌದು, ಚಿಂತಾ ಜ್ಞಾನ ಎರಡೂ ಪ್ರತ್ಯಕ್ಷವೇ ಆಗಿದ್ದರಿಂದ 'ಅಜ್ಞೇಯಂ' ಎಂದು ಹೇಳುವುದರಿಂದಲೇ ವಿವಕ್ಷಿತವಾದ ಅರ್ಥವು ಲಭಿಸುವುದರಿಂದ ಸ್ಮೃತಿಯಲ್ಲಿ 'ಅಚಿಂತ್ಯಂ' 'ಅಜ್ಞೇಯಂ' ಎಂಬುದಾಗಿ ಪ್ರತ್ಯೇಕವಾಗಿ ಏಕೆ ಹೇಳಿದರು ? ('ಅಜ್ಞೇಯಂ' ಎಂದು ಹೇಳುವುದರಿಂದ ಪ್ರತ್ಯಕ್ಷಾಜ್ಞೇಯತ್ವ ಹೇಳಿದಂತಾಗಿ ತದಂತರ್ಗತ ಮನೋವೃತ್ಯವಿಷಯತ್ವವೂ ಲಬ್ಧವಾಗುವುದರಿಂದ 'ಅಚಿಂತ್ಯಂ' ಎಂದು ಪ್ರತ್ಯೇಕ ಹೇಳಿದ್ದು ಸರಿಯಲ್ಲ ಅಲ್ಲವೇ ?)

ನಿಜವೇ. ಎರಡೂ ಮನೋವೃತ್ತಿಗಳು ಪ್ರತ್ಯಕ್ಷವೇ ಆಗಿವೆ ಸತ್ಯವೇ. ಆದರೂ ಸಹ ಚಿಂತಾರೂಪವಾದ ಮನೋವೃತ್ತಿಯು ಆಂತರವಾದ್ದರಿಂದ, ಅಂತಹ ಆಂತರಮನೋವೃತ್ತಿಗೆ ವಿಷಯವಾಗದ ಕಾರಣ ಅಚಿಂತ್ಯ ಎನಿಸುತ್ತದೆ. ಚಕ್ಷುರಾದಿ ಬಾಹ್ಯಜ್ಞಾನೇಂದ್ರಿಯಗಳು ಬಾಹ್ಯಪ್ರತ್ಯಕ್ಷವಾದ್ದರಿಂದ ಅಂತಹ ಬಾಹ್ಯಮನೋವೃತ್ತಿಗೆ ವಿಷಯವಾಗದ ಕಾರಣ ಅಜ್ಞೇಯ ಎನಿಸುತ್ತದೆ. ಹೀಗೆ ಮನಸ್ಸು-ಇಂದ್ರಿಯಗಳಲ್ಲಿ ಬಾಹ್ಯತ್ವ-ಆಂತರತ್ವ ಎಂಬ ವ್ಯತ್ಯಾಸ ಇರುವ ಕಾರಣ, ಅಂತಹ ಬಾಹ್ಯ-ಆಂತರ ಮನೋವೃತ್ತಿಗಳಿಗೆ ವಿಷಯವಾಗದ ನಿಮಿತ್ತ 'ಅಚಿಂತ್ಯ' ಎಂಬುದಾಗಿ 'ಅಜ್ಞೇಯ' ಎಂಬುದಾಗಿ ಪ್ರತ್ಯೇಕವಾಗಿ ಸ್ಮೃತಿಯಲ್ಲಿ ಹೇಳಿರುವುದು ಸಮಂಜಸವೇ ಆಗಿದೆ ಎಂದು ಭಾವ.

## 'ಅನೃತ-ಅಸತ್' ಇತ್ಯಾದಿಶಬ್ದಗಳ ಅರ್ಥನಿರೂಪಣೆ

**ಟೀಕಾಃ ಅಸ್ತ್ವೇವಂ ಯತ್ರ ಬ್ರಹ್ಮಣಾ ಸಹಾನಿರ್ವಾಚ್ಯತ್ವಾದಿ ಪ್ರಪಂಚ-ಸ್ಯೋಚ್ಯತೇ। ಯತ್ರ ತು ಬ್ರಹ್ಮೈವರ್ತಮನ್ಯದನೃತಮಿತ್ಯಾದ್ಯುಕ್ತಿಃ ತತ್ರ ಕಥಮಿತ್ಯತ ಆಹ -**

**ಮೂಲ :- ಋ ಗತಾವಿತಿ ಧಾತೋಸ್ತು ಪೂರ್ವಾವಗತವತ್ ಸದಾ।**
**ಸ್ಥಿತೇರ್ಬ್ರಹ್ಮರ್ತಮಿತ್ಯುಕ್ತಮನೃತಂ ಪರಿಣಾಮತಃ।**
**ಪ್ರಕೃತಿಪ್ರಾಕೃತಂ ಪ್ರೋಕ್ತಂ .....**

**ಧಾತೋರಿತಿ ॥ ಧಾತುವ್ಯಾಖ್ಯಾನಾತ್ । ಗತ್ಯರ್ಥಾನಾಮ-ವಗತ್ಯರ್ಥತ್ವೇನ ನಿಷ್ಠಾಪ್ರತ್ಯಯಸ್ಯ ಭೂತಾರ್ಥತ್ವೇನ ತಸ್ಯ ಚ ವಿಶೇಷಾನುಕ್ತ್ಯಾ ಅನಾದಿತಾಲಾಭೇ ಸತಿ ಋತಮನಾದಿತೋಽ-ವಗತಮಿತ್ಯುಕ್ತಂ ಭವತಿ । ನ ಚ ಪರಿಣಾಮಿತ್ವೇ ಅಸ್ಯೈವ ಪೂರ್ವಾವಗತತ್ವಂ ಮುಖ್ಯತೋ ಯುಜ್ಯತ ಇತಿ ಪೂರ್ವಾವಗತ-ವತ್ ಸದಾ ಸ್ಥಿತಿರುಕ್ತಾ ಭವತಿ ।**

**ಪ್ರಕೃತಿಶ್ಚ ಪ್ರಾಕೃತಂ ಚ ಪ್ರಕೃತಿಪ್ರಾಕೃತಮ್ । ತುಶಬ್ದೋಽವಧಾರಣೇ । ತತಶ್ಚ ಪರಿಣಾಮಿತ್ವಾಪರಿಣಾಮಿತ್ವಾಭ್ಯಾಮೇವ ಬ್ರಹ್ಮಜಗತೀ ಋತಾನೃತೇ 'ತದೇವರ್ತಂ' 'ಅನೃತೇನ ಹಿ ಪ್ರತ್ಯೂಢಾಃ' ಇತ್ಯಾದೌ ಪ್ರೋಕ್ತೇ। ನ ತು ಸತ್ವಾಸತ್ವಾಭ್ಯಾಮಿತ್ಯುಕ್ತಂ ಭವತಿ।**

**ಅನುವಾದ :-** ಹೌದು, ಪ್ರಪಂಚವು ಅದ್ಭುತವಾಗಿರುವ ಕಾರಣ 'ಅನಿರ್ವಚನೀಯ', ಅದ್ಭುತವಾಗಿರುವ ಕಾರಣಕ್ಕೇನೇ 'ಅಚಿಂತ್ಯ-ಅತರ್ಕ್ಯ-ಅಜ್ಞೇಯ' ಎಂಬುದಾಗಿ ಕರೆಸಿಕೊಳ್ಳುತ್ತದೆ. ಹೊರತು ಸದಸದ್ವಿಲಕ್ಷಣವಾಗಿದೆ ಎಂಬ ಕಾರಣಕ್ಕೆ ಅನಿರ್ವಚನೀಯ-ಅಚಿಂತ್ಯ-ಅತರ್ಕ್ಯ-ಅಜ್ಞೇಯ ಎಂದು ಕರೆಸಿಕೊಳ್ಳುವುದಿಲ್ಲ ಎಂದು ನೀವು ಹೇಳುತ್ತಿದ್ದೀರಿ. ಸರಿ ಆಗಲಿ. ಹೀಗೆ ಅರ್ಥವನ್ನು ಎಲ್ಲಿ ಹೇಳಬಹುದು? ಎಲ್ಲಿ ಬ್ರಹ್ಮನ ಜೊತೆಗೇನೇ ಪ್ರಪಂಚಕ್ಕೆ ಅನಿರ್ವಚನೀಯತ್ವಾದಿಗಳು ಹೇಳಲ್ಪಡುತ್ತವೆ ಅಂತಹ ಸ್ಥಳಗಳಲ್ಲಿ ಬ್ರಹ್ಮನಿಗೆ ಸದಸದ್ವಿಲಕ್ಷಣತ್ವ ಹೇಳಲು ಬಾರದ ಕಾರಣ ಅದ್ಭುತತ್ವನಿಮಿತ್ತದಿಂದಲೇ ಅನಿರ್ವಚನೀಯತ್ವಾದಿಗಳನ್ನು ಬ್ರಹ್ಮನಿಗೆ ಹೇಳುವಂತೆ, ಸಮಾನಪ್ರಕರಣ - ಸಮಾನನ್ಯಾಯಗಳಿಂದ ಪ್ರಪಂಚಕ್ಕೂ ಅದ್ಭುತತ್ವನಿಮಿತ್ತದಿಂದಲೇ ಅನಿರ್ವಚನೀಯತ್ವಾದಿಗಳನ್ನು ಹೇಳಬಹುದಾಗಿದೆ.

ಆದರೆ ಬ್ರಹ್ಮ ಒಬ್ಬನೇ ಋತ (ಸತ್ಯ), ಉಳಿದ ಜಗತ್ತೆಲ್ಲವೂ ಅನೃತ (ಮಿಥ್ಯಾ) ಇತ್ಯಾದಿಯಾಗಿ ಎಲ್ಲಿ ಹೇಳುವುದುಂಟು ಅಂತಹ ಸ್ಥಳಗಳಲ್ಲಿ ಪ್ರಪಂಚಕ್ಕೆ ಅನೃತತ್ವವನ್ನು ಹೇಗೆ ಕೂಡಿಸುವುದು ?

ಈ ರೀತಿಯಾಗಿ ಆಕ್ಷೇಪ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ-

ಮೂಲ :-

ಋ ಗತಾವಿತಿ ಧಾತೋಸ್ತು ಪೂರ್ವಾವಗತವತ್ ಸದಾ।
ಸ್ಥಿತೇರ್ಬ್ರಹ್ಮರ್ತಮಿತ್ಯುಕ್ತಮನೃತಂ ಪರಿಣಾಮತಃ।
ಪ್ರಕೃತಿಪ್ರಾಕೃತಂ ಪ್ರೋಕ್ತಂ .....

**ಮೂಲಾರ್ಥ :-** 'ಋ ಗತೌ' ಎಂದು ಧಾತುವಿರುವುದರಿಂದ (ಧಾತುವಿನ ಅರ್ಥವಿರುವುದರಿಂದ) ಬ್ರಹ್ಮನು ಪೂರ್ವಾವಗತವತ್ ಸದಾ ಸ್ಥಿತನಾದ ಕಾರಣ (ಪರಿಣಾಮರಹಿತನಾದ ಕಾರಣ) 'ತದೇವರ್ತಂ' ಎಂಬ ಶ್ರುತಿಯಲ್ಲಿ ಋತ ಎಂದು ಕರೆಯಲ್ಪಡುತ್ತಾನೆ. ಪ್ರಕೃತಿ, ಪ್ರಕೃತಿಕಾರ್ಯವಾದ ಜಗತ್ತು ಪರಿಣಾಮ

ಉಳ್ಳದ್ದಾದ್ದರಿಂದ 'ಅನೃತೇನ ಹಿ ಪ್ರತ್ಯೂಢಾಃ' ಎಂಬ ಶ್ರುತಿಯಲ್ಲಿ ಅನೃತ ಎಂದು ಕರೆಯಲ್ಪಡುತ್ತಿದೆ.

'ಋ ಗತೌ' ಎನ್ನುವಲ್ಲಿ 'ಋ' ಎನ್ನುವುದು ಮಾತ್ರ ಧಾತುವಾಗಿದೆ. 'ಗತೌ' ಎನ್ನುವುದು ಧಾತುವಿನ (ಅರ್ಥ) ವ್ಯಾಖ್ಯಾನ ಆಗಿದೆ. ಆದ್ದರಿಂದ ''**ಋ ಗತಾವಿತಿ ಧಾತೋಸ್ತು**'' ಎಂಬ ಮೂಲದಲ್ಲಿರುವ 'ಧಾತೋಃ' ಎನ್ನುವುದಕ್ಕೆ 'ಧಾತುವ್ಯಾಖ್ಯಾನಾತ್' ಎಂಬುದಾಗಿ ಅರ್ಥ ತಿಳಿಯಬೇಕು.

''ಯೇ ಯೇ ಗತ್ಯರ್ಥಾಃ ತೇ ತೇ ಜ್ಞಾನಾರ್ಥಾಃ'' ಎಂದು ಹೇಳಿದಂತೆ ಗತ್ಯರ್ಥಕವಾದ ಧಾತುಗಳಿಗೆ ಅವಗತಿ (ಜ್ಞಾನ) ಎಂದು ಅರ್ಥ ಇರುವುದರಿಂದ, 'ಋತಂ' ಎನ್ನುವಲ್ಲಿನ ಋ ಧಾತುವು ಗತ್ಯರ್ಥಕವಾದ್ದರಿಂದ ಜ್ಞಾನಾರ್ಥಕವಾಗಿದೆ. ಮತ್ತು 'ಋತಂ' ಎನ್ನುವಲ್ಲಿನ ಕ್ತಪ್ರತ್ಯಯವು ನಿಷ್ಠಾಪ್ರತ್ಯಯವಾದ್ದರಿಂದ ಭೂತಾರ್ಥಕವಾಗಿದೆ. (ಭೂತಕಾಲ ಎಂಬ ಅರ್ಥ ಉಳ್ಳದ್ದಾಗಿದೆ.) ಇಷ್ಟು ಹಿಂದಿನದ್ದು, ಅಷ್ಟು ಹಿಂದಿನದ್ದು ಎಂಬುದಾಗಿ ಭೂತಕಾಲಕ್ಕೆ ಅವಧಿಯನ್ನು ಹೇಳಿಲ್ಲವಾದ್ದರಿಂದ ಅನಾದಿತ್ವವೇ ಲಭಿಸುತ್ತದೆ. ಹೀಗಾಗಿ 'ಋತಂ' ಎಂದರೆ ಅನಾದಿತಃ ಅವಗತಂ ಅನಾದಿಕಾಲದಿಂದಲೂ (ತಿಳಿಯಲ್ಪಟ್ಟದ್ದು) ಜ್ಞಾನವಿಷಯವಾದದ್ದು ಎಂದು ಅರ್ಥ ಹೇಳಿದಂತಾಗುತ್ತದೆ.

ಹಾಗಾದರೆ 'ಬ್ರಹ್ಮ ಋತಂ' ಎಂದರೆ ಬ್ರಹ್ಮನು ಅನಾದಿಕಾಲದಿಂದ ಜ್ಞಾನವಿಷಯನಾಗಿದ್ದಾನೆ ಎಂದು ಅರ್ಥ ಹೇಳಿದಂತಾಗುತ್ತದೆ. ಆದರೆ ಈ ಅನಾದಿಕಾಲೀನಜ್ಞಾನವಿಷಯತ್ವವು ಬ್ರಹ್ಮನಿಗೆ ಅಸಾಧಾರಣ ಹೇಗಾಗುತ್ತದೆ ? ಯಾಕೆಂದರೆ :- ಅನಾದಿಕಾಲೀನಜ್ಞಾನವಿಷಯತ್ವವು ಅನಾದಿಯಾದ ಪ್ರಕೃತ್ಯಾದಿಗಳಲ್ಲಿಯೂ ಸಾಧಾರಣವಾಗಿದೆ. ಅಂದಮೇಲೆ 'ತದೇವರ್ತಮ್' ('ತದೇವ ಋತಂ') ಎಂಬುದಾಗಿ ಶ್ರುತಿಯು ಬ್ರಹ್ಮನಿಗೆ ಮಾತ್ರ ಅನಾದಿಕಾಲೀನ ಜ್ಞಾನವಿಷಯತ್ವವನ್ನು ಹೇಗೆ ಹೇಳುತ್ತದೆ ?

ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಈ ರೀತಿಯಾದ ಸಮಾಧಾನ :- ಬ್ರಹ್ಮನೂ ಪ್ರಕೃತ್ಯಾದಿಗಳಂತೆ ಪರಿಣಾಮಿಯಾಗಿರುವುದಾದರೆ (ಪರಿಣಾಮ ಉಳ್ಳವನಾಗಿದ್ದರೆ) ''ತದೇವ ಋತಂ'' ಎಂಬುದಾಗಿ ಅವಧಾರಣಸಹಿತವಾಗಿ ಬ್ರಹ್ಮ ಒಬ್ಬನಿಗೇ ಪೂರ್ವಾವಗತತ್ವ ಮುಖ್ಯವಾಗಿ ಹೇಳಿದ್ದು ಕೂಡುವುದಿಲ್ಲ. ಪ್ರಕೃತ ಬ್ರಹ್ಮ ಒಬ್ಬನಿಗೇ ಪೂರ್ವಾವಗತತ್ವವನ್ನು ಮುಖ್ಯ(ಅಸಾಧಾರಣ)ವಾಗಿ

ಹೇಳುತ್ತಿರುವುದರಿಂದ, ಬ್ರಹ್ಮನಿಗೆ ಪ್ರಕೃತ್ಯಾದಿಗಳಂತೆ ಪರಿಣಾಮ ಇಲ್ಲ. ಕಿಂತು ಪೂರ್ವಾವಗತವತ್ ಸದಾ ಸ್ಥಿತಿಯನ್ನು ಹೇಳಿದಂತಾಗುತ್ತದೆ. ಹೀಗಾಗಿ ಬ್ರಹ್ಮ ಋತ ಎಂದರೆ ಕೇವಲ ಅನಾದಿಕಾಲೀನಜ್ಞಾನವಿಷಯ ಎಂದಷ್ಟೇ ಅರ್ಥವಲ್ಲ. ಕಿಂತು ಪೂರ್ವಾವಗತವತ್ ಸದಾ ಸ್ಥಿತನಾಗಿದ್ದಾನೆ ಬ್ರಹ್ಮ ಎಂದು ಅರ್ಥ ಲಬ್ಧವಾಗುತ್ತದೆ.

ಮೂಲದಲ್ಲಿರುವ 'ಪ್ರಕೃತಿಪ್ರಾಕೃತಂ' ಎನ್ನುವಲ್ಲಿ 'ಪ್ರಕೃತಿಶ್ಚ ಪ್ರಾಕೃತಂ ಚ ಅನಯೋಃ ಸಮಾಹಾರಃ ಪ್ರಕೃತಿಪ್ರಾಕೃತಂ' ಎಂಬುದಾಗಿ ಸಮಾಹಾರದ್ವಂದ್ವ ವಿವಕ್ಷಿತವಾಗಿದೆ. 'ಧಾತೋಸ್ತು' ಎಂಬ ಮೂಲದಲ್ಲಿರುವ 'ತು'ಶಬ್ದವು ಅವಧಾರಣಾರ್ಥಕವಾಗಿದೆ. ('ತು'ಶಬ್ದಕ್ಕೆ 'ಏವ' ಎಂದರ್ಥ.)

ಹಾಗಾದರೆ- 'ತದೇವರ್ತಂ' ಎಂಬ ಶ್ರುತಿಯಲ್ಲಿ ಬ್ರಹ್ಮನು ಅಪರಿಣಾಮಿ-ಯಾದ್ದರಿಂದ (ಪರಿಣಾಮರಹಿತನಾದ್ದರಿಂದ) 'ಋತ' ಎಂದು ಕರೆಯಲ್ಪಡುತ್ತಿದ್ದಾನೆ. ಜಗತ್ತು ಪರಿಣಾಮಿಯಾಗಿದ್ದರಿಂದ (ಪರಿಣಾಮ ಉಳ್ಳದ್ದಾದ್ದರಿಂದ) 'ಅನೃತೇನ ಹಿ ಪ್ರತ್ಯೂಢಾಃ' ಎಂಬ ಶ್ರುತಿಯಲ್ಲಿ 'ಅನೃತ' ಎಂದು ಕರೆಯಲ್ಪಡುತ್ತಿದೆ. ಹೊರತು ಬ್ರಹ್ಮನು ಸತ್ ಆದ್ದರಿಂದ ಋತ, ಜಗತ್ತು ಅಸತ್ ಆದ್ದರಿಂದ ಅನೃತ ಎಂದು ಕರೆಯಲ್ಪಡುತ್ತಿಲ್ಲ ಎಂಬುದಾಗಿ ಶ್ರುತಿಯ (ಋತತ್ವ- ಅನೃತತ್ವಗಳ) ಅರ್ಥ ಹೇಳಿದಂತಾಗುತ್ತದೆ.

**ಅವತಾರಿಕೆ :-** ಈ ರೀತಿಯಾಗಿ ಋತ-ಅನೃತ ಶಬ್ದಗಳ ನಿರ್ವಚನವನ್ನು (ಬ್ರಹ್ಮನನ್ನು ಋತ ಎಂದು ಕರೆಯಲು ಕಾರಣವನ್ನು ಹಾಗೂ ಜಗತ್ತನ್ನು ಅನೃತ ಎಂದು ಕರೆಯಲು ಕಾರಣವನ್ನು) ತಿಳಿಸಿಕೊಟ್ಟು, ಪ್ರಕೃತ ಸತ್-ಅಸತ್ ಶಬ್ದಗಳ ನಿರ್ವಚನವನ್ನು (ಬ್ರಹ್ಮನಿಗೆ ಸತ್ ಎಂದು ಕರೆಯಲು ಕಾರಣವನ್ನು ಹಾಗೂ ಜಗತ್ತನ್ನು ಅಸತ್ ಎಂದು ಕರೆಯಲು ಕಾರಣವನ್ನು) ತಿಳಿಸಿಕೊಡುತ್ತಾರೆ -

**ಮೂಲ :- ಅಸತ್ತದಶುಭತ್ವತಃ ।**

**ಟೀಕಾ : ಸಂಸಾರರೂಪತ್ವೇನಾಶುಭತ್ವತ ಏವ । ತಥಾ ಪರಮಾನಂದ-ರೂಪತ್ವೇನ ಶುಭತ್ವಾತ್ ಬ್ರಹ್ಮ ಸತ್ ಪ್ರೋಕ್ತಮಿತ್ಯಪಿ ಜ್ಞಾತವ್ಯಮ್ ।**

**ಅನುವಾದ :-** ಜಗತ್ತು ಸಂಸಾರರೂಪವಾದ್ದರಿಂದ ಅಶುಭವಾಗಿದೆ. ಅಶುಭವಾದ್ದರಿಂದ ಅಸತ್ ಎನಿಸಿಕೊಳ್ಳುತ್ತದೆ. ಅದರಂತೆಯೇ ಬ್ರಹ್ಮನು ಪರಮಾನಂದರೂಪನಾದ್ದರಿಂದ

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**

ಎಂಬ ವಚನದಂತೆ ಸತ್ ಎನಿಸಿಕೊಳ್ಳುತ್ತಾನೆ.

**[1]ಸದಾನಂದಸ್ವರೂಪತ್ವಾತ್ ಶುಭತ್ವಾತ್ ಬ್ರಹ್ಮ ಸತ್ ಸ್ಮೃತಮ್ ।**

ಇತ್ಯಾದಿ ಪ್ರಮಾಣಗಳು ಈ ವಿಚಾರವನ್ನು ದೃಢಪಡಿಸುತ್ತವೆ.

**ಅವತಾರಿಕೆ :-** ಈವರೆಗೆ ಸತ್-ಅಸತ್ ಶಬ್ದಗಳ ನಿರ್ವಚನವನ್ನು (ಬ್ರಹ್ಮ ಸತ್ ಎನಿಸಿಕೊಳ್ಳಲು, ಜಗತ್ತು ಅಸತ್ ಎನಿಸಿಕೊಳ್ಳಲು ಕಾರಣವನ್ನು) ತಿಳಿಸಿ, ಪ್ರಕೃತ ಸತ್ಯ-ಅಸತ್ಯ ಶಬ್ದಗಳ ನಿರ್ವಚನವನ್ನು (ಬ್ರಹ್ಮ ಸತ್ಯ ಎನಿಸಿಕೊಳ್ಳಲು, ಜಗತ್ತು ಅಸತ್ಯ ಎನಿಸಿಕೊಳ್ಳಲು ಕಾರಣವನ್ನು) ತಿಳಿಸುತ್ತಾರೆ -

**ಮೂಲ :- ಅಸತಾಂ ಬುದ್ಧಿಗಮ್ಯತ್ವಾದಸತ್ಯಮಿತಿ ಚೋಚ್ಯತೇ ।**

**ಟೀಕಾ : ಏವಂ ಸತಾಂ ಬುದ್ಧಿಗಮ್ಯತ್ವಾದ್ ಬ್ರಹ್ಮ ಸತ್ಯಮಿತ್ಯುಚ್ಯತ ಇತ್ಯಪಿ ದ್ರಷ್ಟವ್ಯಮ್ ।**

**ಪ್ರಕೃತ್ಯಾದಿ ಸತಾಮಪಿ ಬುದ್ಧಿಗಮ್ಯಮ್ । ಕಿಂ ವಿಶಿಷ್ಯಾಭಿಧೀಯತೇ ಅಸತಾಮಿತಿ । ನಿಯಮಾಭಿಪ್ರಾಯೇಣೇತಿ ಭಾವೇನ ಸದಸದ್ವಿವೇಕಮಾಹ -**

**ಮೂಲ :- ನಿಯಮೇನ ಬಹಿಶ್ಚಿತ್ತಾಸ್ತೇಽಸಂತೋ ಬ್ರಹ್ಮಣಿ ಸ್ಥಿತಾಃ ।**

**ಟೀಕಾ : ತೇಽಸಂತ ಇತ್ಯತ್ರಾಕಾರಪ್ರಶ್ಲೇಷಭಾವಾಭಾವಾಭ್ಯಾಂ ಯಚ್ಛಬ್ದಾಧ್ಯಾಹಾರೇಣ ಚ ದ್ವೇ ವಾಕ್ಯೇ ದ್ರಷ್ಟವ್ಯೇ । ಬ್ರಹ್ಮಣಿ ಸ್ಥಿತಾಸ್ತನ್ನಿಷ್ಠಬುದ್ಧಯಃ ।**

**ಅನುವಾದ :-** ಜಗತ್ತನ್ನು ಕೆಲವೆಡೆ ಅಸತ್ಯ ಎಂದು ಕರೆಯಲಾಗಿದೆ. ಅದು ಯಾಕೆ ? ಎನ್ನುವುದನ್ನು ಆಚಾರ್ಯರು ಸ್ಪಷ್ಟಪಡಿಸುತ್ತಿದ್ದಾರೆ.

**'ಅಸದ್ಭಿಃ ಯಾಯತೇ ಜ್ಞಾಯತೇ ಇತಿ ತತ್ ಅಸತ್ಯಮ್'**

ಎಂಬ ನಿರ್ವಚನದಂತೆ, ಜಗತ್ತು ಅಸಜ್ಜನರಿಂದ ತಿಳಿಯಲ್ಪಡುತ್ತದೆ ಅಸಜ್ಜನರ ಬುದ್ಧಿಗಮ್ಯವಾಗಿದೆ ಎಂಬ ಕಾರಣಕ್ಕೆ ಜಗತ್ತು ಅಸತ್ಯ ಎಂದು ಕರೆಸಿಕೊಳ್ಳುತ್ತದೆ.

---

1 ಶ್ರೀವಿಜಯೀಂದ್ರತೀರ್ಥರ ಟಿಪ್ಪಣಿಯಲ್ಲಿ ಉದಾಹರಿಸಿದ ಪ್ರಮಾಣ

ಅದರಂತೆಯೇ ಬ್ರಹ್ಮನನ್ನು ಸತ್ಯ ಎಂದು ಕರೆಯಲು ಕಾರಣವೇನು ? ಅದನ್ನೂ ಈ ರೀತಿ ತಿಳಿಯಬೇಕು :-

**'ಸದ್ಭಿಃ ಯಾಯತೇ ಜ್ಞಾಯತೇ ಇತಿ ತತ್ ಸತ್ಯಮ್'**

ಎಂಬ ನಿರ್ವಚನದಂತೆ ಬ್ರಹ್ಮನು ಸಜ್ಜನರಿಂದ ತಿಳಿಯಲ್ಪಡುತ್ತಾನೆ ಸಜ್ಜನರ ಬುದ್ಧಿಗಮ್ಯನಾಗಿದ್ದಾನೆ ಎಂಬ ಕಾರಣಕ್ಕೆ ಬ್ರಹ್ಮನು ಸತ್ಯ ಎಂದು ಕರೆಸಿಕೊಳ್ಳುತ್ತಾನೆ.

ಹೌದು ''ಜಗತ್ತು ಅಸಜ್ಜನರಿಂದ ತಿಳಿಯಲ್ಪಡುತ್ತದೆ ಅಸಜ್ಜನರ ಬುದ್ಧಿಗಮ್ಯ-ವಾಗಿದೆ'' ಎಂದು ಹೇಳುತ್ತಿದ್ದೀರಿ. ಆದರೆ ಪ್ರಕೃತ್ಯಾದಿ ಜಗತ್ತು ಅಸಜ್ಜನರ ಬುದ್ಧಿಗೆ ಮಾತ್ರ ಗಮ್ಯವಾಗಿದೆಯೇ ? ಏನಿಲ್ಲ. ಅಸಜ್ಜನರ ಬುದ್ಧಿಗೆ ಗಮ್ಯವಾದಂತೆ ಸಜ್ಜನರ ಬುದ್ಧಿಗೂ ಗಮ್ಯವಾಗಿದೆ. ಹೀಗಿರುವಾಗ ''ಜಗತ್ತು ಅಸಜ್ಜನರ ಬುದ್ಧಿಗಮ್ಯವಾಗಿದೆ'' ಎಂಬುದಾಗಿ ವಿಶೇಷವಾಗಿ (ಪ್ರತ್ಯೇಕವಾಗಿ) ಹೇಳುವುದೇನು ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ ನಿಯಮಾಭಿಪ್ರಾಯದಿಂದ (ನೈರಂತರ್ಯಾಭಿಪ್ರಾಯದಿಂದ) ಸದ್ಬುದ್ಧಿಗಮ್ಯತ್ವ -ಅಸದ್ಬುದ್ಧಿಗಮ್ಯತ್ವಗಳನ್ನು ವಿವಕ್ಷಿಸಲಾಗಿದೆ. ಅಂದರೆ :- ಕೇವಲ ಸದ್ಬುದ್ಧಿಗಮ್ಯತ್ವಂ ಸತ್ಯತ್ವಂ (ಸಜ್ಜನರ ಬುದ್ಧಿಗೆ ಗಮ್ಯವಾದದ್ದು ಸತ್ಯ), ಅಸದ್ಬುದ್ಧಿಗಮ್ಯತ್ವಂ ಅಸತ್ಯತ್ವಂ (ಅಸಜ್ಜನರ ಬುದ್ಧಿಗೆ ಗಮ್ಯವಾದದ್ದು ಅಸತ್ಯ) ಎಂಬುದಾಗಿ ಹೇಳುವುದಿಲ್ಲ. ಹಾಗೆ ಹೇಳಿದರೆ ಜಗತ್ತೂ ಸಜ್ಜನರ ಬುದ್ಧಿಗೆ ಗಮ್ಯವಾಗುತ್ತದೆಯಲ್ಲ ? ಎಂಬ ಶಂಕೆ ಬರುತ್ತದೆ. ಕಿಂತು- ''**ನಿತ್ಯಂ ಸದ್ಬುದ್ಧಿಗಮ್ಯತ್ವಂ ಸತ್ಯತ್ವಂ**'' ನಿತ್ಯದಲ್ಲಿಯೂ (ನಿರಂತರವಾಗಿ) ಸಜ್ಜನರ ಬುದ್ಧಿಗೆ ಗಮ್ಯವಾದದ್ದು ಸತ್ಯ.

''**ನಿತ್ಯಂ ಅಸದ್ಬುದ್ಧಿಗಮ್ಯತ್ವಂ ಅಸತ್ಯತ್ವಂ**'' ನಿತ್ಯದಲ್ಲಿಯೂ (ನಿರಂತರವಾಗಿ) ಅಸಜ್ಜನರ ಬುದ್ಧಿಗೆ ಗಮ್ಯವಾದದ್ದು ಅಸತ್ಯ ಎಂಬುದಾಗಿ ಹೇಳುತ್ತೇವೆ. ಪ್ರಕೃತ್ಯಾದಿ ಜಗತ್ತು ಕದಾಚಿತ್ (ಕೆಲವೊಮ್ಮೆ) ಸಜ್ಜನರ ಬುದ್ಧಿಗೆ ಗಮ್ಯವಾಗುವುದಾದರೂ ಸಹ ನಿತ್ಯದಲ್ಲಿ (ನಿರಂತರವಾಗಿ) ಸಜ್ಜನರ ಬುದ್ಧಿಗೆ ಗಮ್ಯವಾಗುವುದಿಲ್ಲ. ಆದರೆ ಬ್ರಹ್ಮನು ನಿತ್ಯದಲ್ಲಿ (ನಿರಂತರವಾಗಿ) ಸಜ್ಜನರ ಬುದ್ಧಿಗೆ ಗಮ್ಯನಾಗುವುದರಿಂದ ಬ್ರಹ್ಮನಿಗೆ ಮಾತ್ರ ಸತ್ಯ ಎಂದು ಕರೆಯುವುದರಲ್ಲಿ ಯಾವ ಅನುಪಪತ್ತಿ ಇಲ್ಲ. ಅದರಂತೆಯೇ ಬ್ರಹ್ಮನು ಕದಾಚಿತ್ (ಕೆಲವೊಮ್ಮೆ) ಅಸಜ್ಜನರ ಬುದ್ಧಿಗೆ

ಗಮ್ಯನಾಗುವುದಾದರೂ ಸಹ ನಿತ್ಯದಲ್ಲಿ (ನಿರಂತರವಾಗಿ) ಅಸಜ್ಜನರ ಬುದ್ಧಿಗೆ ಗಮ್ಯನಾಗುವುದಿಲ್ಲ. ಆದರೆ ಜಗತ್ತು ನಿತ್ಯದಲ್ಲಿ (ನಿರಂತರವಾಗಿ) ಅಸಜ್ಜನರ ಬುದ್ಧಿಗೆ ಗಮ್ಯವಾಗುವುದರಿಂದ ಜಗತ್ತಿಗೆ ಮಾತ್ರ ಅಸತ್ಯ ಎಂದು ಕರೆಯುವುದರಲ್ಲಿಯೂ ಯಾವ ಅನುಪಪತ್ತಿ ಇಲ್ಲ.

ಈ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಆಚಾರ್ಯರು ಸಜ್ಜನರು ಯಾರು ? ಅಸಜ್ಜನರು ಯಾರು ? ಎಂಬ ವಿಭಾಗವನ್ನು ತಿಳಿಸುತ್ತಾರೆ -

**ಮೂಲ :- ನಿಯಮೇನ ಬಹಿಶ್ಚಿತ್ತಾಸ್ತೇऽಸಂತೋ ಬ್ರಹ್ಮಣಿ ಸ್ಥಿತಾಃ ।**

ಮೂಲದಲ್ಲಿ 'ತೇऽಸಂತಃ' ಎನ್ನುವಲ್ಲಿ ಅಕಾರಪ್ರಶ್ಲೇಷ ಭಾವಾಭಾವಗಳಿಂದ ಮತ್ತು ಯಚ್ಛಬ್ದದ ಅಧ್ಯಾಹಾರದಿಂದ

**ಯೇ ನಿಯಮೇನ ಬಹಿಶ್ಚಿತ್ತಾಃ ತೇऽಸಂತಃ ।**
**ಯೇ ನಿಯಮೇನ ಬ್ರಹ್ಮಣಿ ಸ್ಥಿತಾಃ ತೇ ಸಂತಃ ।**

**(ಯಾರು ನಿರಂತರವಾಗಿ ಭಗವಂತನನ್ನು ಬಿಟ್ಟು ಇತರ ಜಗತ್ತಿನಲ್ಲಿಯೇ ಆಸಕ್ತಮನಸ್ಕರಾಗಿರುತ್ತಾರೋ ಅವರು ಅಸಜ್ಜನರು. ಇನ್ನು ಯಾರು ನಿರಂತರವಾಗಿ ಭಗವಂತನಲ್ಲಿಯೇ ಆಸಕ್ತಮನಸ್ಕರಾಗಿರುತ್ತಾರೋ ಅವರು ಸಜ್ಜನರು)**

ಎಂಬುದಾಗಿ ಎರಡು ವಾಕ್ಯಗಳನ್ನು ಮಾಡಿಕೊಂಡು ಮೂಲಾರ್ಥ ತಿಳಿಯಬೇಕು.

ಮೂಲದಲ್ಲಿ 'ಬ್ರಹ್ಮಣಿ ಸ್ಥಿತಾಃ' ಎಂದರೆ ಬ್ರಹ್ಮನಲ್ಲಿ ಆಶ್ರಯಿಸಿಕೊಂಡು ಇರುವುದು ಎಂದರ್ಥವಲ್ಲ. ಕಾರಣ ಬ್ರಹ್ಮನು ಸರ್ವಾಶ್ರಯನಾದ್ದರಿಂದ ಸಜ್ಜನರಿಗೆ ಆಶ್ರಯನಾಗಿರುವಂತೆ ಅಸಜ್ಜನರಿಗೂ ಆಶ್ರಯನೇ ಆಗಿದ್ದಾನೆ. ಹಾಗಾಗಿ ಬ್ರಹ್ಮನಲ್ಲಿ ಆಶ್ರಯಿಸಿ ಇರುವುದು ಎಂದು ಅರ್ಥವಲ್ಲ. ಕಿಂತು ಬ್ರಹ್ಮನಿಷ್ಠಬುದ್ಧಯಃ ಬ್ರಹ್ಮನಲ್ಲಿಯೇ ಆಸಕ್ತವಾದ ಬುದ್ಧಿ ಉಳ್ಳವರು ಎಂದು ಅರ್ಥ. ಅಸಜ್ಜನರು ಬ್ರಹ್ಮನಲ್ಲಿ ಆಶ್ರಯಿಸಿ ಇದ್ದರೂ ಬ್ರಹ್ಮನಲ್ಲಿಯೇ ಆಸಕ್ತವಾದ ಬುದ್ಧಿ ಉಳ್ಳವರಾಗಿಲ್ಲವಾದ್ದರಿಂದ ಯಾವ ಅನುಪಪತ್ತಿ ಇಲ್ಲ ಎಂದು ಭಾವ.

## ಪ್ರಪಂಚಸತ್ಯತ್ವವು ಪ್ರಮಾಣಸಿದ್ಧವಾಗಿದೆ

**ಟೀಕಾ : ಕಸ್ಮಾದೇವಮನ್ಯತತ್ತ್ವಾದ್ಯುಕ್ತೇರನ್ಯಾರ್ಥವರ್ಣನಮ್ । ಬ್ರಹ್ಮವತ್ ಸತ್ಯತ್ವೇನ ಪ್ರಮಿತತ್ವಾದಿತ್ಯಾಹ -**

ಮೂಲ :- ವಿಶ್ವಂ ಸತ್ಯಂ ......

ಪ್ರಮಿತಮಿತಿ ಶೇಷಃ । ನ ಚ ಸತ್ಯತ್ವೇಽಪಿ ಪರಮಾತ್ಮನೋಽಸ್ಯಾ-
ವಿಶೇಷಃ ಶಂಕನೀಯಃ । ಏತತ್ಸತ್ತಾಯಾ ಅಪಿ ತದಧೀನತ್ವಾದಿತ್ಯಾಹ-

ಮೂಲ :- .... ವಶೇ ವಿಷ್ಣೋಃ .....

ತದಧೀನಸತ್ತಾಕಮಪಿ ತೇನ ನೋತ್ಪಾದ್ಯತ ಇತ್ಯಾಹ -

ಮೂಲ :- .......ನಿತ್ಯಮೇವ.......

ನ ಚ ತಥಾತ್ವೇ ಭಾಗೇ ಪ್ರತ್ಯಕ್ಷಾದಿವಿರೋಧಶ್ಶಂಕನೀಯ ಇತ್ಯಾಹ -

ಮೂಲ :- ......ಪ್ರವಾಹತಃ ।

ಪ್ರವಾಹತೋ ನಿತ್ಯತ್ವೇಽಪಿ ನಾವಾಂತರವೈಚಿತ್ರ್ಯಮಿತ್ಯಾಹ -

ಮೂಲ :- ನ ಕ್ವಾಪ್ಯನೀದೃಶಂ ವಿಶ್ವಂ ......

ಕ್ವಾಪಿ ಕಾಲೇ । ತಥಾತ್ವೇಽಪಿ ನ ಪ್ರಲಯಾದ್ಯಾಗಮವಿರೋಧ-
ಶ್ಶಂಕನೀಯ ಇತ್ಯಾಹ

ಮೂಲ :- ...... ತತ್ತತ್ಕಾಲಾನುಸಾರತಃ ।

ಯಸ್ಮಿನ್ ಕಾಲೇ ಯಾದೃಶೇನ ಭವಿತವ್ಯಂ ತಥಾಭಾವಸ್ಯ ನ
ವ್ಯತ್ಯಾಸ ಇತ್ಯುಕ್ತಂ ಭವತಿ ।

**ಅನುವಾದ :-** ''ಅನೃತೇನ ಹಿ ಪ್ರತ್ಯೂಢಾಃ'' ಇತ್ಯಾದಿ ಶ್ರುತಿಗಳಲ್ಲಿ ಜಗತ್ತಿಗೆ ಅನೃತತ್ವಾದಿಗಳನ್ನು ಹೇಳಿದಾಗ, ಅನೃತ ಎಂದರೆ ಪರಿಣಾಮ ಉಳ್ಳದ್ದು ಇತ್ಯಾದಿಯಾಗಿ ಶ್ರುತಿಗಳಿಗೆ ಅರ್ಥಾಂತರವನ್ನು ಹೇಳಿದಿರಿ. ಅನೃತತ್ವಾದಿ-ಪ್ರತಿಪಾದಕವಾದ ಶ್ರುತಿಗಳಿಗೆ ಹಾಗೇಕೆ ಅರ್ಥಾಂತರವನ್ನು ಹೇಳಬೇಕು ? (ಮಿಥ್ಯಾತ್ವ ಮೊದಲಾದ ಅರ್ಥಗಳನ್ನು ಹೇಳಬಹುದಲ್ಲ?)

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ- [೧]ಬ್ರಹ್ಮನು

---

೧ 'ತತ್ ಸತ್ಯಮ್' ಮೊದಲಾದ ಶ್ರುತಿಗಳಿಂದ ಬ್ರಹ್ಮನು ಸತ್ಯನಾಗಿದ್ದಾನೆ ಎಂದು ಸಿದ್ಧನಾಗಿದ್ದಾನೆ. ಹೀಗಾಗಿ ಬ್ರಹ್ಮನಿಗೆ ಅನೃತತ್ವವನ್ನು ಪ್ರತಿಪಾದನೆ ಮಾಡುವ ವಾಕ್ಯಗಳಿಗೆ ನೀವು

ಸತ್ಯನಾಗಿದ್ದಾನೆಂದು ಪ್ರಮಾಣಸಿದ್ಧನಾದಂತೆ, ಜಗತ್ತೂ ಸತ್ಯವಾಗಿದೆಯೆಂದು ಪ್ರಮಾಣಸಿದ್ಧವಾಗಿದೆ. ಸತ್ಯತ್ವೇನ ಪ್ರತ್ಯಕ್ಷಾದಿಪ್ರಮಾಣಸಿದ್ಧವಾದ್ದರಿಂದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳಲು ಬರುವುದಿಲ್ಲ ಎಂಬ ಸಮಾಧಾನವನ್ನು ಆಚಾರ್ಯರು ಹೇಳುತ್ತಾರೆ -

**ಮೂಲ :- ವಿಶ್ವಂ ಸತ್ಯಂ .........**

ಮೂಲದಲ್ಲಿ 'ಪ್ರಮಿತಂ' ಎಂದು ಶೇಷ ಮಾಡಿಕೊಳ್ಳಬೇಕು. ವಿಶ್ವಂ ಪ್ರಕೃತ್ಯಾದಿ ಜಗತ್ತು ಸತ್ಯಂ (ಮಿಥ್ಯೆಯಲ್ಲ) ಸತ್ಯವಾಗಿದೆ ಎಂದು ಪ್ರಮಿತಂ ಪ್ರಮಿತವಾಗಿದೆ, ಪ್ರತ್ಯಕ್ಷಾದಿಪ್ರಮಾಣಸಿದ್ಧವಾಗಿದೆ ಎಂದು ಮೂಲಾರ್ಥ.

ಜಗತ್ತು ಸತ್ಯ ಎಂದಾದರೂ ಸಹ (ಜಗತ್ತೂ ಸತ್ಯ , ಪರಮಾತ್ಮನೂ ಸತ್ಯ , ಹೀಗಾಗಿ) ಪರಮಾತ್ಮನಿಂದ ಜಗತ್ತಿಗೆ (ಸತ್ಯತ್ವೇನ ಸಾಮ್ಯ ಬಂತು) ಯಾವುದೇ ವೈಲಕ್ಷಣ್ಯ ಇಲ್ಲ ಎಂದು ಶಂಕಿಸಲು ಅವಕಾಶವಿಲ್ಲ. ಕಾರಣ -

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ ॥**

ಎಂಬುದಾಗಿ ಸ್ಮೃತಿಯು ಹೇಳುವಂತೆ ಜಗತ್ತಿನ ಸತ್ಯತ್ವವೂ ಸಹ ಭಗವಂತನ ಅಧೀನವೇ ಆಗಿದೆ ಎಂದು ಆಚಾರ್ಯರು ತಿಳಿಸುತ್ತಾರೆ -

**ಮೂಲ :- ವಶೇ ವಿಷ್ಣೋಃ ...... ।**

ಸತ್ಯವಾದ ಜಗತ್ತು (ಜಗತ್ತಿನ ಸತ್ಯತ್ವವು) ಭಗವಂತನ ಅಧೀನವೇ ಆಗಿದೆ ಎಂದು ಮೂಲಾರ್ಥ.

ಜಗತ್ತು ಭಗವಂತನ ಅಧೀನವಾದ ಸತ್ಯತ್ವ ಉಳ್ಳದ್ದಾದರೂ ಸಹ ಭಗವಂತ-ನಿಂದ ನಾಶ ಮಾಡಲ್ಪಡುವುದಿಲ್ಲ (ಭಗವಂತನು ಜಗತ್ತಿನ ಸ್ವರೂಪಸತ್ವವನ್ನು ಅಪಹರಿಸುವುದಿಲ್ಲ) ಎಂದು ಹೇಳುತ್ತಾರೆ -

---

ಅರ್ಥಾಂತರವನ್ನು ಹೇಳುತ್ತೀರಿ. ಅದರಂತೆಯೇ ಜಗತ್ತೂ ಸತ್ಯವಾಗಿದೆಯೆಂದು ಪ್ರತ್ಯಕ್ಷಾದಿ-ಪ್ರಮಾಣಗಳಿಂದ ಸಿದ್ಧವಾಗಿದ್ದರಿಂದ ಜಗತ್ತಿಗೆ ಅನೃತತ್ವಾದಿಗಳನ್ನು ಪ್ರತಿಪಾದನೆ ಮಾಡುವ 'ಅನೃತೇನ ಹಿ ಪ್ರತ್ಯೂಢಾಃ' ಇತ್ಯಾದಿ ಪ್ರಮಾಣಗಳಿಗೆ ಅರ್ಥಾಂತರವನ್ನು ನಾವೂ ಹೇಳುತ್ತೇವೆ.

ಹೀಗಿರುವಾಗ ಜಗತ್ತಿಗೆ ಅನೃತತ್ವಪ್ರತಿಪಾದಕವಾದ ವಾಕ್ಯಗಳಿಗೆ ಅರ್ಥಾಂತರ ಹೇಳುವುದು ಬೇಡ ಎನ್ನುವುದಾದರೆ, ಬ್ರಹ್ಮನಿಗೆ ಅನೃತತ್ವಪ್ರತಿಪಾದಕವಾದ ವಾಕ್ಯಕ್ಕೂ ನೀವೂ ಅರ್ಥಾಂತರ ಹೇಳಬೇಡಿ ಎಂದು ಭಾವ. (ಶ್ರೀವೇದೇಶತೀರ್ಥರ ಟಿಪ್ಪಣೀ)

ಮೂಲ :- ನಿತ್ಯಮೇವ ... ... ।

ಜಗತ್ತು ನಿತ್ಯವೇ ಆಗಿದೆ ಸರ್ವಥಾ ಸತ್ತಾಪಹಾರರೂಪ ಬಾಧ್ಯತ್ವ ಉಳ್ಳದ್ದಲ್ಲ ಎಂದು ಮೂಲಾರ್ಥ.

ಜಗತ್ತು ನಿತ್ಯವೇ ಆಗಿದೆ ಎಂದು ಹೇಳುವುದಾದರೆ, ಘಟಾದಿಗಳಿಗೆ ಪ್ರತ್ಯಕ್ಷಾದಿಗಳಿಂದ ನಾಶ ಕಂಡಿದ್ದರಿಂದ ಮತ್ತು

''ಏವಂ ಲೋಕಂ ಪರಂ ವಿಂದ್ಯಾತ್ ನಶ್ವರಂ ಕರ್ಮನಿರ್ಮಿತಮ್ ।''

ಇತ್ಯಾದಿ ಆಗಮಗಳು ಸ್ವರ್ಗಾದಿಗಳಿಗೆ ಅನಿತ್ಯತ್ವವನ್ನು ಪ್ರತಿಪಾದಿಸುತ್ತಿ-ರುವುದರಿಂದ, ಅನಿತ್ಯವಾದ ಕಾರ್ಯಾತ್ಮಕ ಜಗದ್ಭಾಗದಲ್ಲಿ ಪ್ರತ್ಯಕ್ಷಾದಿವಿರೋಧ ಬರುತ್ತದೆಯಲ್ಲವೇ ? ಎಂಬ ಶಂಕೆ ಬೇಡ ಎಂಬುದಾಗಿ ಆಚಾರ್ಯರು ಹೇಳುತ್ತಾರೆ -

ಮೂಲ :- ...... ಪ್ರವಾಹತಃ ।

ಜಗತ್ತು ನಿತ್ಯವಾಗಿದೆ ಎಂದರೆ ಆಕಾಶಾದಿಗಳಂತೆ ನಿರ್ವಿಕಾರವಾಗಿದೆ (ಸರ್ವಕಾಲವೃತ್ತಿಯಾಗಿದೆ) ಎಂದು ಅರ್ಥವಲ್ಲ. ಕಿಂತು ಪ್ರವಾಹತಃ ನಿತ್ಯವಾಗಿದೆ, ಜಗತ್ತಿನ ಸೃಷ್ಟ್ಯಾದಿಪ್ರವಾಹ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. (ಸೃಷ್ಟ್ಯಾದಿಪ್ರವಾಹಕ್ಕೆ ಎಂದಿಗೂ ವಿಚ್ಛೇದ ಬರುವುದಿಲ್ಲ ಎಂದು ಭಾವ.)

ಜಗತ್ತು ಪ್ರವಾಹತಃ ನಿತ್ಯವಾದರೂ ಸಹ [೧]ಅವಾಂತರವೈಚಿತ್ರ್ಯ ಇಲ್ಲ ಎನ್ನುತ್ತಾರೆ -

ಮೂಲ :- ನ ಕ್ವಾಪ್ಯನೀದೃಶಂ ವಿಶ್ವಂ ... ... ।

ಮೂಲದಲ್ಲಿ 'ಕ್ವಾಪಿ' ಎಂದರೆ ಯಾವ ಕಾಲದಲ್ಲಿಯೂ ಸಹ ಎಂದರ್ಥ.

ವಿಶ್ವಂ ಜಗತ್ತು ಕ್ವಾಪಿ ಯಾವ ಕಾಲದಲ್ಲಿಯೂ ಸಹ ಅನೀದೃಶಂ ನ ವೈಚಿತ್ರ್ಯ ಉಳ್ಳದ್ದಾಗುವುದಿಲ್ಲ ಕಲ್ಪಭೇದದಿಂದ ವಿಲಕ್ಷಣಾಕಾರ ಉಳ್ಳದ್ದಾಗುವುದಿಲ್ಲ, ವಸಿಷ್ಠಾದಿರಹಿತವಾಗುವುದಿಲ್ಲ ಎಂದು ಮೂಲಾರ್ಥ.

---

೧ ಅವಾಂತರವೈಚಿತ್ರ್ಯ ಎಂದರೆ ಘಟಾದಿಪದಾರ್ಥಗಳಿಗೆ ಕಲ್ಪಭೇದದಿಂದ ವಿಲಕ್ಷಣಾಕಾರತ್ವ ಎಂದರ್ಥ. ಅಂದರೆ - ಘಟಾದಿಪದಾರ್ಥಗಳು ಈ ಕಲ್ಪದಲ್ಲಿ ಈ ಆಕಾರ ಉಳ್ಳದ್ದಾಗಿವೆ. ಮುಂದಿನ ಕಲ್ಪದಲ್ಲಿ ಬೇರೆ ಆಕಾರ ಉಳ್ಳದ್ದಾಗುತ್ತವೆ ಎಂಬ ಈ ವಿಧವಾದ ವೈಚಿತ್ರ್ಯ ಎಂದರ್ಥ.
(ಶ್ರೀವಿಜಯೀಂದ್ರತೀರ್ಥರ ಟಿಪ್ಪಣೀ)

ಅಥವಾ ಈ ಕಲ್ಪದಲ್ಲಿ ವಸಿಷ್ಠಾದಿಗಳು ಇರುತ್ತಾರೆ. ಮುಂದಿನ ಕಲ್ಪದಲ್ಲಿ ವಸಿಷ್ಠಾದಿಗಳು ಇರುವುದಿಲ್ಲ ಎಂಬ ವೈಚಿತ್ರ್ಯ ಎಂದರ್ಥ. (ದ್ವೈತದ್ಯುಮಣೀ ಟಿಪ್ಪಣೀ)

ಜಗತ್ತು ಯಾವ ಕಾಲದಲ್ಲಿಯೂ ವೈಚಿತ್ರ್ಯ ಉಳ್ಳದ್ದಾಗುವುದಿಲ್ಲ ಎಂದು ಹೇಳಿದರೂ ಸಹ (ಸರ್ವಕಾಲದಲ್ಲಿಯೂ ಹಾಗೆಯೇ ಇರುತ್ತದೆ ಎಂದು ಹೇಳಿದರೂ ಸಹ) ಸೃಷ್ಟಿಕಾಲದಲ್ಲಿ ಯಾವ ವಿಧವಾಗಿರುತ್ತದೆ ಸ್ಥಿತಿಕಾಲದಲ್ಲಿ ಆ ವಿಧವಾಗಿರುವುದಿಲ್ಲ, ಸ್ಥಿತಿಕಾಲದಲ್ಲಿ ಯಾವ ವಿಧವಾಗಿರುತ್ತದೆ ಪ್ರಲಯಕಾಲದಲ್ಲಿ ಆ ವಿಧವಾಗಿರುವುದಿಲ್ಲ. ಹಾಗಾಗಿ ಪ್ರಲಯಾದಿಗಳನ್ನು ವಿಧಾನ ಮಾಡುವ ಆಗಮವಿರೋಧ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕಿಸಬೇಡಿ ಎನ್ನುತ್ತಾರೆ ಆಚಾರ್ಯರು -

**ಮೂಲ :- ...... ತತ್ತತ್ಕಾಲಾನುಸಾರತಃ।**

ಜಗತ್ತು (ಪದಾರ್ಥಗಳು) ಯಾವ ಕಾಲದಲ್ಲಿ ಯಾವ ವಿಧವಾದ ಅವಸ್ಥಾವಿಶೇಷವಿಶಿಷ್ಟವಾಗಿರಬೇಕೋ ಆ ವಿಧವಾದ ಅವಸ್ಥಾವಿಶೇಷಕ್ಕೆ ವ್ಯತ್ಯಾಸ ಇಲ್ಲ ಎಂದು ಹೇಳಿದಂತಾಗುತ್ತದೆ. ಪ್ರಲಯಾದಿಗಳನ್ನು ವಿಧಾನ ಮಾಡುವ ಆಗಮವು ಪ್ರವಾಹಿಗೆ ನಾಶ ಹೇಳುತ್ತದೆಯೇ ಹೊರತು ಪ್ರವಾಹಕ್ಕೆ ನಾಶ ಹೇಳುತ್ತಿಲ್ಲ ಎಂದು ಭಾವ.

**ಟೀಕಾ: ಯದಿ ತರ್ಹೀತ್ಥಂಭೂತಂ ಜಗತ್ ಕಥಂ ಕೇಚಿದ್ವೈಪರೀತ್ಯೇನ ಆಹುರಿತ್ಯತ ಆಹ -**

**ಮೂಲಃ- ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ತ ಆಸುರಾಃ .........**

**ಅತ್ರ 'ವಿಶ್ವಂ ಸತ್ಯಂ ವಶೇ ವಿಷ್ಣೋರ್ನಿತ್ಯಮೇವ ಪ್ರವಾಹತಃ' ಇತ್ಯಸ್ಯಾಸತ್ಯಮನೀಶ್ವರಮಪ್ರತಿಷ್ಠಮಿತಿ ವಿಪರೀತೋಕ್ತಿಃ। ಆಸುರಾ ಇತಿ ಮಿಥ್ಯಾಜ್ಞಾನಿತ್ವೇ ಹೇತುಃ । ಕಿಮರ್ಥಂ ತೇ ತಥಾಽಹುರಿತ್ಯತ ಆಹ-**

**ಮೂಲಃ- ಸ್ವಯಂ ನಷ್ಟಾ ಜಗತಃ ಕ್ಷಯಕಾರಿಣಃ। ಇತ್ಯಾದಿ ವ್ಯಾಸಸ್ಮೃತೌ।**

**ಅನುವಾದ :-** ಹಿಂದೆ ಹೇಳಿದಂತೆ ಒಂದುವೇಳೆ ಜಗತ್ತು ಸತ್ಯವಾಗಿದೆ ಎಂದು ಪ್ರಮಾಣಸಿದ್ಧವೇ ಆಗಿದ್ದರೆ, ಹಾಗಾದರೆ ಕೆಲವರು ಇಂತಹ ಸತ್ಯವಾದ ಜಗತ್ತನ್ನು ವಿಪರೀತವಾಗಿ ಏಕೆ ಹೇಳುತ್ತಾರೆ ? ಎಂಬ ಶಂಕೆಗೆ ಆಚಾರ್ಯರು ಸಮಾಧಾನ ಹೇಳುತ್ತಾರೆ -

ಮೂಲ :- ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ತ ಆಸುರಾಃ ......

ಇಲ್ಲಿ 'ವಿಶ್ವಂ ಸತ್ಯಂ' ಎನ್ನುವುದಕ್ಕೆ 'ಅಸತ್ಯಂ' ಎನ್ನುವುದು ವಿಪರೀತೋಕ್ತಿ. 'ವಶೇ ವಿಷ್ಣೋಃ' ಎನ್ನುವುದಕ್ಕೆ 'ಅನೀಶ್ವರಮ್' ಎನ್ನುವುದು ವಿಪರೀತೋಕ್ತಿ. 'ಪ್ರವಾಹತಃ ನಿತ್ಯಮೇವ' ಎನ್ನುವುದಕ್ಕೆ 'ಅಪ್ರತಿಷ್ಠಂ' ಎನ್ನುವುದು ವಿಪರೀತೋಕ್ತಿ.

ಹಾಗಾದರೆ ಈ ಹಿಂದೆ ಹೇಳಿದಂತೆ ಜಗತ್ತು ಸತ್ಯವಾಗಿ, ವಿಷ್ಣುವಿನ ಅಧೀನ-ವಾಗಿ, ಪ್ರವಾಹತಃ ನಿತ್ಯವಾಗಿ ಪ್ರಮಾಣಗಳಿಂದ ಸಿದ್ಧವಾಗಿದ್ದರೂ ಸಹ

**ಮೂಲಾರ್ಥ :-** ಅಸುರಸ್ವಭಾವದ ಕೆಲವರು ಜಗತ್ತು ಅಸತ್ಯವಾಗಿದೆ (ಮಿಥ್ಯೆಯಾಗಿದೆ), ಈಶ್ವರನು ಇದಕ್ಕೆ ನಿಯಾಮಕನಲ್ಲ, ಶುಕ್ತಿರೂಪ್ಯದಂತೆ ಜ್ಞಾನನಿವರ್ತ್ಯವಾಗಿದೆ ಎಂಬುದಾಗಿ ವಿಪರೀತವಾಗಿ ಹೇಳುತ್ತಾರೆ.

ಅವರು ಮಿಥ್ಯಾಜ್ಞಾನಿಗಳಾಗಿದ್ದಾರೆ ಎನ್ನುವುದಕ್ಕೆ 'ತೇ ಆಸುರಾಃ ಅವರು ಅಸುರಸ್ವಭಾವದವರು' ಎನ್ನುವುದು ಹೇತುವಾಗಿದೆ. (ಅವರು ಮಿಥ್ಯಾಜ್ಞಾನಿಗಳು ಏಕೆ ? ಎಂದರೆ, ಅವರು ಅಸುರಸ್ವಭಾವದವರಾಗಿದ್ದರಿಂದ ಮಿಥ್ಯಾಜ್ಞಾನಿಗಳು ಎಂದು ಕಾರ್ಯಕಾರಣಭಾವ ತಿಳಿಯಬೇಕು.)

ಅವರು ಯಾಕೆ ಹಾಗೆ ಹೇಳುತ್ತಾರೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ -

ಮೂಲ :- ಸ್ವಯಂ ನಷ್ಟಾಃ ಜಗತಃ ಕ್ಷಯಕಾರಿಣಃ । ಇತ್ಯಾದಿ ವ್ಯಾಸಸ್ಮೃತೌ ।

**ಮೂಲಾರ್ಥ :-** ಅಸುರಸ್ವಭಾವದ ಅವರು ತಾವೂ ಸ್ವಯಂ ನಷ್ಟರಾಗಿ (ಸ್ವಭಾವತಃ ಜ್ಞಾನಾದಿಗುಣವಿರುದ್ಧವಾದ ಮಿಥ್ಯಾಜ್ಞಾನಾದಿಗಳುಳ್ಳವರಾಗಿ) ಜಗತ್ತಿಗೆ ನಾಶವನ್ನುಂಟು ಮಾಡುವವರು (ಮಿಥ್ಯಾಜ್ಞಾನ ಉಂಟುಮಾಡುವ ಮೂಲಕ ನರಕಾದ್ಯನರ್ಥ ಕೊಡುವವರು) ಎಂಬುದಾಗಿ ವ್ಯಾಸಸ್ಮೃತಿಯಲ್ಲಿ ತಿಳಿಸಿದ್ದಾರೆ.

### ಭಗವದ್ಗೀತಾವಚನಗಳಿಂದ ಪ್ರಪಂಚಸತ್ಯತ್ವಸಮರ್ಥನೆ

**ಟೀಕಾ: ಪ್ರಪಂಚಾನಿರ್ವಚನೀಯತಾಭಿಧಾಯಿನಾಂ ವಾಕ್ಯಾನಾಮುಕ್ತಾ-ರ್ಥಾಂತರಪರತಾಸಮರ್ಥನಾರ್ಥಂ ತತ್ಸತ್ಯತಾಂ ಭಗವದ್ಗೀತಾಭಿಃ ಶ್ರುತಿಭಿಶ್ಚ ದೃಢೀಕರೋತಿ -**

**ಮೂಲ :- ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥**

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ।।**

**ಇತ್ಯಾದಿ ಚ ಗೀತಾಸು ।**

**ತೇ ಅಸುರಾಃ । ಅಸತ್ಯತ್ವಾದಪ್ರತಿಷ್ಠಂ ಜ್ಞಾನಬಾಧ್ಯಮ್ । ತತ ಏವಾನೀಶ್ವರಮ್। ನ ಚ ಯತೋ ಯತೋ ಜಾತಮಸಾವಸಾವೀಶ್ವರ ಇತಿ ವಾಚ್ಯಮ್ । ಯತೋಽಪರಸ್ಪರಸಂಭೂತಮ್ । ಏಕಸ್ಮಾದೇಕಸ್ಯ ನೋತ್ಪತ್ತಿರಿತಿ ಯಾವತ್ । ಸತ್ಯಂ ನ ಚೇತ್ ಕಿಮಸದೇವ । ಪರಸ್ಪರಸಂಭೂತಂ ನ ಚೇತ್ ಕಿಂ ನಿತ್ಯಂ ಸ್ವತೋ ವಾ ಜಾತಮ್ । ಆದ್ಯಸ್ಯೋತ್ತರಮ್ । ಅನ್ಯತ್ ಸದಸದ್ಭ್ಯಾಮಿತಿ ಶೇಷಃ । ದ್ವಿತೀಯಸ್ಯ ಕಾಮಹೈತುಕಂ ಕಾಮ ಇತಿ ತತ್ಕಾರಣಮವಿದ್ಯೋಪಲಕ್ಷ್ಯತೇ । ಅತ್ರ ಜಗದಸತ್ಯತಾವಾದಿನಾಮಸುರತ್ವಾದ್ಯುಕ್ತ್ಯಾ ತತ್ಸತ್ಯತಾಽವಗಮ್ಯತೇ ।**

**ಅನುವಾದ :-** ಪ್ರಪಂಚಕ್ಕೆ ಅನಿರ್ವಚನೀಯತ್ವವನ್ನು ಹೇಳುವ (ಪ್ರಪಂಚವು ಅನಿರ್ವಚನೀಯವಾಗಿದೆ ಎಂದು ಹೇಳುವ) ವಾಕ್ಯಗಳಿಗೆ 'ಅದ್ಭುತತ್ವಾದ-ನಿರ್ವಾಚ್ಯಂ' ಇತ್ಯಾದಿಯಾಗಿ ಹಿಂದೆ ಅರ್ಥಾಂತರಪರತ್ವವನ್ನು ಹೇಳಿದರು. ಆ ಅರ್ಥಾಂತರವನ್ನು ಸಮರ್ಥಿಸುವುದಕ್ಕಾಗಿ, ಜಗತ್ತಿನ ಸತ್ಯತ್ವವನ್ನು ಭಗವದ್ಗೀತಾವಾಕ್ಯಗಳಿಂದ ಹಾಗೂ ಶ್ರುತಿಗಳಿಂದ ದೃಢಪಡಿಸುತ್ತಾರೆ -

ಮೂಲ :- ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ।
ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ।।ಇತ್ಯಾದಿ ಚ ಗೀತಾಸು

**ಮೂಲಾರ್ಥ :-** ಜಗತ್ತು ಅಸತ್ಯವಾಗಿದೆ. (ಸತ್ಯವಾಗಿಲ್ಲ.) ಅಸತ್ಯವಾದ್ದರಿಂದಲೇ ಜ್ಞಾನಬಾಧ್ಯವಾಗಿದೆ. (ಐಕ್ಯಜ್ಞಾನದಿಂದ ಬ್ರಹ್ಮಾಪರೋಕ್ಷದಿಂದ ನಾಶವಾಗುತ್ತದೆ.) ಜ್ಞಾನಬಾಧ್ಯವಾದ್ದರಿಂದಲೇ ಅನೀಶ್ವರವಾಗಿದೆ. (ಈಶ್ವರನಿಂದ ಜನ್ಯವಾಗಿಲ್ಲ. ಅಥವಾ ಈಶ್ವರನಿಂದ ನಿಯಮ್ಯವಾಗಿಲ್ಲ.) ಮತ್ತು ಪರಸ್ಪರಸಂಭೂತವಲ್ಲ. (ಒಂದರಿಂದ ಇನ್ನೊಂದು ವಸ್ತು ಹುಟ್ಟುವುದಿಲ್ಲ.) ಜಗತ್ತು ಸತ್ಯವಲ್ಲ ಎಂದರೆ ಶಶವಿಷಾಣಾದಿಗಳಂತೆ ಅಸತ್ ಆಗಿದೆಯೋ ? ಇಲ್ಲ. ಅದು ಸತ್-ಅಸತ್ ವಸ್ತುಗಳಿಂದ ಭಿನ್ನವಾಗಿದೆ ಅಂದರೆ ಸದಸದ್ವಿಲಕ್ಷಣವಾಗಿದೆ. ಪರಸ್ಪರಸಂಭೂತವಲ್ಲ ಎಂದರೆ ನಿತ್ಯವಾಗಿದೆಯೋ? ಇಲ್ಲ. ಜಗತ್ತು ಅವಿದ್ಯೋಪಾದಾನಕವಾಗಿದೆ.

ಅಸುರಸ್ವಭಾವದ ಕೆಲವರು ಜಗತ್ತಿನ ಬಗ್ಗೆ ಈ ರೀತಿಯಾಗಿ ಹೇಳುತ್ತಾರೆ. ಈ ವಿಧವಾದ ವಿಪರೀತದೃಷ್ಟಿಯನ್ನು ಅವಲಂಬಿಸಿ, ಮನಸ್ಸನ್ನು ಹಾಳು ಮಾಡಿಕೊಂಡ ಮತ್ತು ಅಲ್ಪಮತಿಗಳಾದ ಆ ಅಸುರಜನರು ಘೋರಕರ್ಮಗಳಲ್ಲಿ ನಿರತರಾಗಿ, ಅಹಿತಕಾರಿಗಳಾಗಿ, ಜಗತ್ತನ್ನು ನಾಶ ಮಾಡುವುದಕ್ಕಾಗಿ ಕಲಿಯುಗಾದಿಗಳಲ್ಲಿ ಈ ಭೂಮಿಯಲ್ಲಿ ಹುಟ್ಟುತ್ತಾರೆ.

ಗೀತಾಮೂಲದಲ್ಲಿ 'ತೇ' ಎಂದರೆ ಅಸುರರು ಎಂದರ್ಥ. 'ಅಸತ್ಯಮಪ್ರತಿಷ್ಠಂ ತೇ' ಎಂಬ ಶ್ಲೋಕಕ್ಕಿಂತ ಪೂರ್ವದಲ್ಲಿ

**ಪ್ರವೃತ್ತಿಂಚ ನಿವೃತ್ತಿಂಚ ಜನಾ ನ ವಿದುರಾಸುರಾಃ।**

ಎಂಬುದಾಗಿ ಅಸುರರೇ ಪ್ರಸಕ್ತರಾಗಿದ್ದರಿಂದ 'ತೇ' ಎಂದರೆ ಅಸುರರನ್ನೇ ತೆಗೆದುಕೊಳ್ಳಬೇಕು.

''ಜಗತ್ತು ಅಸತ್ಯವಾಗಿದೆ. (ಸತ್ಯವಾಗಿಲ್ಲ). ಅಸತ್ಯವಾದ್ದರಿಂದಲೇ ಅಪ್ರತಿಷ್ಠವಾಗಿದೆ ಜ್ಞಾನಬಾಧ್ಯವಾಗಿದೆ. ಜ್ಞಾನಬಾಧ್ಯವಾದ್ದರಿಂದಲೇ ಅನೀಶ್ವರವಾಗಿದೆ. (ಈಶ್ವರನಿಂದ ಜನ್ಯವಾಗಿಲ್ಲ.) ಜಗತ್ತು ಅನೀಶ್ವರ ಏಕೆ ? ಯಾರಿಂದ ಯಾವುದು ಹುಟ್ಟುತ್ತದೆ ಅದಕ್ಕೆ ಅವರೇ ಈಶ್ವರ ಎಂದು ಹೇಳಬಹುದಲ್ಲವೇ ? ಎಂಬ ಶಂಕೆ ಸರಿಯಲ್ಲ. ಕಾರಣ ಜಗತ್ತು ಅಪರಸ್ಪರಸಂಭೂತವಾಗಿದೆ ಒಂದರಿಂದ ಒಂದು ವಸ್ತು ಹುಟ್ಟುವುದಿಲ್ಲ. ಹಾಗಾದರೆ ಜಗತ್ತು ಸತ್ಯ ಅಲ್ಲ ಎನ್ನುವುದಾದರೆ ಶಶವಿಷಾಣಾದಿಗಳಂತೆ ಅಸತ್ ಆಗಿದೆಯೇ ? ಮತ್ತು ಪರಸ್ಪರಸಂಭೂತ ಅಲ್ಲ ಎನ್ನುವುದಾದರೆ ನಿತ್ಯವಾಗಿದೆಯೋ ? ಅಥವಾ ಸ್ವತಃ ಜಾತವಾಗಿದೆಯೋ ? (ತನ್ನಿಂದ ತಾನೇ ಹುಟ್ಟಿದೆಯೋ ?) ಇದರಲ್ಲಿ ಮೊದಲನೇ ಪ್ರಶ್ನೆಗೆ ಉತ್ತರ 'ಅನ್ಯತ್' ಎನ್ನುವುದು. ಜಗತ್ತು ಸತ್ಯ ಅಲ್ಲ ಎಂದರೆ ಶಶವಿಷಾಣಾದಿಗಳಂತೆ ಅಸತ್ ಎಂದರ್ಥವಲ್ಲ. ಕಿಂತು ಅನ್ಯತ್ ಸತ್-ಅಸತ್ ವಸ್ತುಗಳಿಂದ ಭಿನ್ನವಾಗಿದೆ ಸದಸದ್ವಿಲಕ್ಷಣವಾಗಿದೆ ಎಂದರ್ಥ. ಇನ್ನು ಎರಡನೇ ಪ್ರಶ್ನೆಗೆ (ಪರಸ್ಪರಸಂಭೂತ ಅಲ್ಲ ಎಂದರೆ ನಿತ್ಯವಾಗಿದೆಯೋ, ಸ್ವತಃ ಜಾತವಾಗಿದೆಯೋ ಎಂಬ ಪ್ರಶ್ನೆಗೆ) ಉತ್ತರ 'ಕಾಮಹೈತುಕಮ್' ಎನ್ನುವುದು. ಜಗತ್ತು ನಿತ್ಯವೂ ಅಲ್ಲ, ಸ್ವತಃ ಜಾತವಾದದ್ದೂ ಅಲ್ಲ. ಕಿಂತು 'ಕಾಮಹೈತುಕ'ವಾಗಿದೆ. ಕಾಮ ಎಂಬ ಪದದಿಂದ ಅದಕ್ಕೆ ಕಾರಣವಾದ ಅವಿದ್ಯೆಯನ್ನು ಲಕ್ಷಣಯಾ ತೆಗೆದುಕೊಳ್ಳಬೇಕು. ಹೀಗಾಗಿ ಕಾಮಹೈತುಕವಾಗಿದೆ ಎಂದರೆ ಅವಿದ್ಯೋಪಾದಾನಕವಾಗಿದೆ ಎಂದರ್ಥ.''

ಈ ರೀತಿಯಾಗಿ ಅಸುರಸ್ವಭಾವದ ಕೆಲವರು ಜಗತ್ತಿನ ಬಗ್ಗೆ ವಿಪರೀತವಾಗಿ ಹೇಳುತ್ತಾರೆ.

ಹೌದು, ''ಜಗತ್ತಿನ ಸತ್ಯತ್ವವನ್ನು ಭಗವದ್ಗೀತಾಶ್ಲೋಕಗಳಿಂದ ದೃಢಪಡಿಸುತ್ತಾರೆ'' ಎಂಬುದಾಗಿ ಅವತಾರಿಕೆ ನೀಡಿದಿರಿ. ಆದರೆ ಈ ಗೀತಾಶ್ಲೋಕಗಳಲ್ಲಿ ಜಗತ್ತಿನ ಸತ್ಯತ್ವ ಎಲ್ಲಿ ಪ್ರತಿಪಾದಿತವಾಗಿದೆ ? ಜಗತ್ತನ್ನು ಅಸತ್ಯ ಎನ್ನುವವರು ಅಸುರರು ಎಂದಷ್ಟೇ ಹೇಳಿದ್ದಾರೆ ಅಲ್ಲವೇ ? ಎಂಬ ಶಂಕೆ ಸರಿಯಲ್ಲ.

ಜಗತ್ತನ್ನು ಅಸತ್ಯ ಎಂದು ಹೇಳುವ ವಾದಿಗಳನ್ನು ಅಸುರರು ಎಂದು ಕರೆದರೆ, ಅವರು ಮಿಥ್ಯಾಜ್ಞಾನಿಗಳು ಅವರು ಹೇಳುವುದು ತಪ್ಪು ಎಂಬುದಾಗಿ ಹೇಳಿದಂತಾಗುತ್ತದೆ.

**''ಪರಸ್ಪರವಿರುದ್ಧಯೋಃ ಅನ್ಯತರನಿಷೇಧಸ್ಯ ಅನ್ಯತರವಿಧಿನಾ ವ್ಯಾಪ್ತತ್ವಾತ್''**

ಎಂಬ ನಿಯಮದಂತೆ ಸತ್ಯತ್ವ-ಅಸತ್ಯತ್ವ ಎಂಬ ಎರಡು ವಿರುದ್ಧಧರ್ಮಗಳಲ್ಲಿ ಅಸತ್ಯತ್ವವು ತಪ್ಪು ಎಂದಾದರೆ ಸತ್ಯತ್ವವು ಸರಿ ಎಂದೇ ಆಗುತ್ತದೆ. ಹಾಗಾಗಿ ಜಗತ್ತನ್ನು ಅಸತ್ಯ ಎಂದು ಹೇಳುವ ವಾದಿಗಳಿಗೆ ಅಸುರತ್ವವನ್ನು ಹೇಳುವುದರಿಂದ ಜಗತ್ತಿಗೆ ಸತ್ಯತ್ವವು ಸ್ಫುಟವಾಗಿ ತಿಳಿದುಬರುತ್ತದೆ. ಆದ್ದರಿಂದ ಈ ಗೀತಾಶ್ಲೋಕಗಳಿಂದ ಜಗತ್ತಿನ ಸತ್ಯತ್ವವು ದೃಢವಾಗುವುದರಿಂದ ''ಜಗತ್ತಿನ ಸತ್ಯತ್ವವನ್ನು ಭಗವದ್ಗೀತಾಶ್ಲೋಕಗಳಿಂದ ದೃಢಪಡಿಸುತ್ತಾರೆ'' ಎಂಬುದಾಗಿ ಕೊಟ್ಟ ಅವತಾರಿಕೆ ಸಮಂಜಸವೇ ಎಂದು ಭಾವ.

**ಅವತಾರಿಕೆ :-** ಭಗವದ್ಗೀತಾವಾಕ್ಯಗಳಿಂದ ಜಗತ್ಸತ್ಯತ್ವವನ್ನು ಸಮರ್ಥನೆ ಮಾಡಿ, ಪ್ರಕೃತ ಅನೇಕ ಶ್ರುತಿಗಳಿಂದಲೂ ಜಗತ್ಸತ್ಯತ್ವವನ್ನು ಸಮರ್ಥಿಸುತ್ತಾರೆ-

## ಶ್ರುತಿಗಳಿಂದ ಪ್ರಪಂಚಸತ್ಯತ್ವಸಮರ್ಥನೆ

**ಮೂಲ :- ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚ ನ ಪ್ರಮಿನಂತಿ ವ್ರತಂ ವಾಮ್ ।**

**ಟೀಕಾ : ಹೇ ಮಘವಾನೌ ಧನಾದಿಮಂತೌ ಇಂದ್ರಾಬೃಹಸ್ಪತೀ । ಯುವಯೋರ್ವಿಶ್ವಂ ಸತ್ಯಮೇವ । ನ ಕೇವಲಮಹಮೇವಂ ಪ್ರತಿಪನ್ನಃ । ಕಿಂತು ಆಪೋಽಪಿ ವಾಂ ಸತ್ಯಜಗತ್ಸರ್ಜನಾದಿಕಂ ಕರ್ಮ ಜಾನಂತೀತಿ ದ್ವಿರೂಪಂ ಪರಮೇಶ್ವರಂ ಪ್ರತ್ಯುಚ್ಯತೇ ।**

**ಅನುವಾದ :-** 'ಮಘವನ್ ಯಶಸ್ವಿನ್ ಮಖಪತೇ ಧನವನ್ನಿತಿ ವಾ' ಎಂಬ ಕರ್ಮನಿರ್ಣಯಕ್ಕೆ ಅನುಸಾರವಾಗಿ ಮಘವಾನೌ ಎಂಬ ಶಬ್ದಕ್ಕೆ ಧನಾದಿಮಂತೌ ಎಂದು ಅರ್ಥ ಹೇಳುತ್ತಿದ್ದಾರೆ. ಹಾಗಾದರೆ-

ಮೂಲ :- ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚ ನ ಪ್ರಮಿನಂತಿ ವ್ರತಂ ವಾಮ್ ।

**ಮೂಲಾರ್ಥ :- ಹೇ ಮಘವಾನೌ** [೧]ಧನಾದಿಮಂತರಾದ (ಧನಾದಿಗಳುಳ್ಳ) [೨]ಇಂದ್ರ-ಬೃಹಸ್ಪತಿಗಳೇ ! (ಇಂದ್ರ-ಬೃಹಸ್ಪತಿ ಎಂಬ ಎರಡು ರೂಪಗಳುಳ್ಳ ಭಗವಂತನೇ !) **ಯುವಯೋಃ ವಿಶ್ವಂ** ('ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ' ಎಂಬ ಮತ್ತೊಂದು ಶ್ರುತಿಗೆ ಅನುಸಾರವಾಗಿ) ನಿಮ್ಮಿಂದ ಸೃಷ್ಟವಾದ ಈ ಜಗತ್ತು **ಸತ್ಯಮೇವ** ಸತ್ಯವೇ ಆಗಿದೆ. ಕೇವಲ ನಾನು ಒಬ್ಬ ಹೀಗೆ ತಿಳಿದಿಲ್ಲ, ಕಿಂತು **ಆಪಶ್ಚ** ಅಪ್‌ಗೆ ಅಭಿಮಾನಿಗಳಾದ (ಅಥವಾ ವ್ಯಾಪನಶೀಲರಾದ) ದೇವತೆಗಳೂ ಸಹ **ವಾಂ ವ್ರತಂ** ನಿಮ್ಮ ಈ ಜಗತ್ಸೃಷ್ಟ್ಯಾದಿ ಕರ್ಮಗಳನ್ನು **ಪ್ರಮಿನಂತಿ** ತಿಳಿದಿದ್ದಾರೆ ಎಂಬುದಾಗಿ [೩]ದ್ವಿರೂಪಿಯಾದ ಭಗವಂತನನ್ನು ಕುರಿತು ಹೇಳುತ್ತಿರುವ ಮಾತು ಇದು.

**ಮೂಲ :- ಪ್ರ ಘಾ ನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಮ್ ।**

**ಟೀಕಾ : ನು ಇದಾನೀಮಸ್ಯ ಮಹತಸ್ಸತ್ಯಸ್ಯ ಪರಮೇಶ್ವರಸ್ಯ ಮಹಾಂತಿ ಸತ್ಯಾನಿ ಕರ್ಮಾಣಿ ಪ್ರಾವೋಚಮೇವ । ಕರ್ಮಣಾಂ ಸತ್ಯತ್ವಂ ವಿಷಯಸತ್ಯತಾಮಂತರೇಣ ನೋಪಪದ್ಯತ ಇತಿ ವಿಶ್ವಸತ್ಯತಾಸಿದ್ಧಿಃ ।**

೧ ಧನಾದಿ ಎನ್ನುವಲ್ಲಿ ಆದಿಪದದಿಂದ ಕರ್ಮನಿರ್ಣಯದಲ್ಲಿ ಹೇಳಿದಂತೆ ಯಶಸ್ಸು, ಮಖ ಮೊದಲಾದವುಗಳನ್ನು ತೆಗೆದುಕೊಳ್ಳಬೇಕು. (ದ್ವೈತದ್ಯುಮಣಿ ಟಿಪ್ಪಣೀ)

೨ ಮುಂದೆ ಉತ್ತರಾರ್ಧದಲ್ಲಿ ''ಅಚ್ಛೇಂದ್ರಾ ಬ್ರಹ್ಮಣಸ್ಪತೀ ಹವಿರ್ನೋನ್ನಂ ಯುಂಜೇವ ವಾಜಿನಾ ಜಿಗಾಗಮ್'' ಎಂಬುದಾಗಿ ಇಂದ್ರ-ಬೃಹಸ್ಪತಿಗಳು ಪ್ರಸಕ್ತರಾದ್ದರಿಂದ ಇಲ್ಲಿ ಮಘವಚ್ಛಬ್ದದಿಂದ ಇಂದ್ರ-ಬೃಹಸ್ಪತಿಗಳನ್ನು ಸಂಬೋಧಿಸುತ್ತಿದ್ದಾರೆ.

ಬೃಹಸ್ಪತಿಃ ಪುರೋಧಾಶ್ಚ ಬ್ರಹ್ಮಾ ಚ ಬ್ರಹ್ಮಣಸ್ಪತಿಃ ।

ಎಂದು ವಚನ ಇರುವುದರಿಂದ ಬ್ರಹ್ಮಣಸ್ಪತಿಃ ಎನ್ನುವುದಕ್ಕೆ ಬೃಹಸ್ಪತಿಃ ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

೩ 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎಂಬ ಅಧಿಕರಣನ್ಯಾಯದಿಂದ ದ್ವಿವಚನಾಂತವಾದ ಶಬ್ದಗಳಿಗೆ ಬ್ರಹ್ಮನಲ್ಲಿ ಸಮನ್ವಯವು ಸಿದ್ಧವಾದ್ದರಿಂದ ದ್ವಿರೂಪಿಯಾದ ಭಗವಂತನನ್ನು ಇಲ್ಲಿ ಸ್ವೀಕರಿಸಲಾಗಿದೆ. (ನಾರೋಪಂತ ಟಿಪ್ಪಣೀ)

**ಅನುವಾದ :-**

ಮೂಲ :- ಪ್ರ ಘಾ ನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಮ್ ।

**ಮೂಲಾರ್ಥ :-** ನು ಈಗ ಅಸ್ಯ ಮಹತಃ ಈ ವ್ಯಾಪ್ತನಾದ ಸತ್ಯಸ್ಯ ಸತ್ಯನಾದಂತಹ ಪರಮೇಶ್ವರನ ಮಹಾನಿ (ಮಹಾಂತಿ) ಮಹತ್ ಆದಂತಹ ಸತ್ಯಾ (ಸತ್ಯಾನಿ) ಸತ್ಯವಾದಂತಹ ಕರಣಾನಿ ಕರ್ಮಗಳನ್ನು ಪ್ರ ವೋಚಂ (ಘಾ) ಏವ ಹೇಳಿಯೇ ಹೇಳಿದ್ದೇನೆ.

ಹೌದು ಈ ಶ್ರುತಿಯಿಂದ ಕರ್ಮಗಳಿಗೆ ಸತ್ಯತ್ವ ಸಿದ್ಧವಾದರೂ ಸಹ ವಿಶ್ವಸತ್ಯತ್ವ ಎಲ್ಲಿ ಸಿದ್ಧವಾಯಿತು ? ಎಂಬ ಶಂಕೆ ಬೇಡ. ಕಾರಣ ವಿಷಯಸತ್ಯತ್ವ ಇಲ್ಲದೇ ಕರ್ಮಗಳಿಗೆ ಸತ್ಯತ್ವ ಉಪಪನ್ನವಾಗುವುದಿಲ್ಲವಾದ್ದರಿಂದ ಇಲ್ಲಿ ಹೇಳಿದ ಕರ್ಮಸತ್ಯತ್ವದಿಂದ ವಿಶ್ವಸತ್ಯತ್ವ ಸಿದ್ಧವಾಗುತ್ತದೆ ಎಂದು ಭಾವ.

**ಮೂಲ :- ಸತ್ಯಸ್ಸೋ ಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ ।**

**ಟೀಕಾ: ಸಃ ಜಗತ್ಸೃಷ್ಟ್ಯಾದಿಲಕ್ಷಣಃ । ಅಸ್ಯ ಪರಮೇಶ್ವರಸ್ಯ ಮಹಿಮಾ ಸತ್ಯಃ । ತಂ ವಿಪ್ರಪ್ರಧಾನೇಷು ಯಜ್ಞೇಷು ಶವಃ ಸುಖಮುದ್ದಿಶ್ಯ ಸ್ತೌಮಿ ।**

**ಅನುವಾದ :-**

ಮೂಲ:- ಸತ್ಯಸ್ಸೋ ಅಸ್ಯ ಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ ।

**ಮೂಲಾರ್ಥ :-** **ಅಸ್ಯ** ಈ ಪರಮೇಶ್ವರನ **ಸಃ** ಜಗತ್ಸೃಷ್ಟ್ಯಾದಿರೂಪವಾದ **ಮಹಿಮಾ** ಮಹಿಮೆಯು **ಸತ್ಯಃ** ಸತ್ಯವೇ ಆಗಿದೆ. **ತಂ** ಅಂತಹ ಜಗತ್ಸೃಷ್ಟ್ಯಾದಿರೂಪವಾದ ಸತ್ಯಮಹಿಮೆಯನ್ನು **ವಿಪ್ರರಾಜ್ಯೇ** (ಏಕವಚನವು ಬಹುವಚನಾರ್ಥದಲ್ಲಿದೆ, ರಾಜ್ಯಪದಕ್ಕೆ ಪ್ರಾಧಾನ್ಯ ಎಂದು ಅರ್ಥ ವಿವಕ್ಷಿಸಿ) ವಿಪ್ರಪ್ರಧಾನವಾದ **ಯಜ್ಞೇಷು** ಯಜ್ಞಗಳಲ್ಲಿ **ಶವಃ** ಸುಖವನ್ನುದ್ದೇಶಿಸಿ **ಗೃಣೇ** ಸ್ತುತಿಸುತ್ತೇನೆ.

**ಅವತಾರಿಕೆ :-** ''[೧]ಏವಂಭೂತೋಽಪಿ ಸಾರ್ವಜ್ಞ್ಯಾತ್ ಕವಿರಿತ್ಯೇವ ಶಬ್ದ್ಯತೇ'' ಎಂಬ ಈಶಾವಾಸ್ಯಭಾಷ್ಯದಲ್ಲಿ ಉದಾಹೃತವಾದ ಪ್ರಮಾಣಕ್ಕೆ ಅನುಸಾರವಾಗಿ 'ಕವಿರ್ಮನೀಷೀ' ಎಂಬ ಶ್ರುತಿಯನ್ನು ವ್ಯಾಖ್ಯಾನಿಸುತ್ತಾರೆ -

**ಮೂಲಃ- 'ಕವಿರ್ಮನೀಷೀ ಪರಿಭೂಸ್ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ' ಇತ್ಯಾದಿಶ್ರುತಿಭಿಶ್ಚ ।**

**ಟೀಕಾಃ ಕವಿಃ ಸರ್ವಜ್ಞಃ । ಮನಸಾಮೀಷ್ಟ ಇತಿ ಮನೀಷೀ । ಪರಿಭವತಿ ಸರ್ವಾನಿತಿ ಪರಿಭೂಸ್ಸರ್ವೋತ್ತಮಃ । ಸ್ವಯಮೇವ ಭವತೀತಿ ಸ್ವಯಂಭೂಃ ಸ್ವತಂತ್ರಃ ಪರಮೇಶ್ವರಃ । ಶಾಶ್ವತೀಭ್ಯಸ್ಸಮಾಭ್ಯಃ ಸರ್ವದಾ । ಅರ್ಥಾನ್ ಮಹದಾದೀನ್ । ಯಾಥಾತಥ್ಯತ ಏವ ವ್ಯದಧಾತ್ । ನ ತು ಮಿಥ್ಯಾಭೂತಾನ್ ।**

**ಇತ್ಯೇವಂ ಶ್ರುತಿಸ್ಮೃತಿಭಿಃ ಪ್ರಪಂಚಸ್ಯ ಸತ್ಯತಾವಗಮಾತ್ ತದನಿರ್ವಾಚ್ಯತಾಪರಾಣಾಂ ವಾಕ್ಯಾನಾಮರ್ಥಾಂತರಪರತ್ವಸ್ಯೈವ ಯುಕ್ತತ್ವಾತ್ ನಾಗಮೋಽನಿರ್ವಚನೀಯೇ ಮಾನಮಿತಿ ಸ್ಥಿತಮ್ ।**

**ಅನುವಾದ :- ಕವಿಃ** ಸರ್ವಜ್ಞನಾದ, **ಮನೀಷೀ** ಎಲ್ಲರ ಮನಸ್ಸುಗಳಿಗೆ ನಿಯಾಮಕನಾದ ಅಥವಾ (ಮನಶ್ಶಬ್ದಕ್ಕೆ ಮನೋಗತವಾದ ಇಚ್ಛಾ ಎಂದು ಅರ್ಥ) ತನಗೆ ಅಭಿಮತವಾದ ಎಲ್ಲ ಮನೋಗತ ಇಚ್ಛೆಗಳಿಗೆ ಸಮರ್ಥನಾದ ಅಂದರೆ ತಾನು ಅಪೇಕ್ಷಿಸಿದ ಎಲ್ಲ ಮನೋರಥಗಳನ್ನೂ ಈಡೇರಿಸಿಕೊಳ್ಳಲು ಅತ್ಯಂತ ಸಮರ್ಥನಾದ, **ಪರಿಭೂಃ** ಎಲ್ಲರನ್ನೂ ಮೀರಿಸುವವನಾದ ಅರ್ಥಾತ್ ಸರ್ವೋತ್ತಮನಾದ, **ಸ್ವಯಂಭೂಃ** ಬೇರೆ ಯಾರ ಅಪೇಕ್ಷೆಯೂ ಇಲ್ಲದೇ ತಾನೇ

---

೧ ಏವಂಭೂತೋಽಪಿ ಸಾರ್ವಜ್ಞ್ಯಾತ್ಕವಿರಿತ್ಯೇವ ಶಬ್ದ್ಯತೇ ।
ಬ್ರಹ್ಮಾದಿಸರ್ವಮನಸಾಂ ಪ್ರಕೃತ್ಯಾ ಮನಸೋಽಪಿ ಚ ॥
ಈಶಿತೃತ್ವಾನ್ಮನೀಷೀ ಸ ಪರಿಭೂಸ್ಸರ್ವತೋ ವರಃ ।
ಸದಾಽನನ್ಯಾಶ್ರಯತ್ವಾಚ್ಚ ಸ್ವಯಂಭೂಃ ಪರಿಕೀರ್ತಿತಃ ॥
ಸ ಸತ್ಯಂ ಜಗದೇತಾದೃಜನಿತ್ಯಮೇವ ಪ್ರವಾಹತಃ ।
ಅನಾದ್ಯನಂತಕಾಲೇಷು ಪ್ರವಾಹೈಕಪ್ರಕಾರಕಮ್ ।
ನಿಯಮೇನೈವ ಸಸೃಜೇ ಭಗವಾನ್ ಪುರುಷೋತ್ತಮಃ ॥(ಈಶಾವಾಸ್ಯಭಾಷ್ಯ ಶ್ಲೋಕ -೮)

ಸ್ವತಂತ್ರವಾಗಿ ಇರುವವನು ಅಂತಹ ಸ್ವತಂತ್ರನಾದ ಪರಮಾತ್ಮನು, **ಶಾಶ್ವತೀಭ್ಯಃ ಸಮಾಭ್ಯಃ** ಸರ್ವಕಾಲದಲ್ಲಿಯೂ **ಅರ್ಥಾನ್** ಮಹದಾದಿ ಪದಾರ್ಥಗಳನ್ನು (ಜಗತ್ತನ್ನು) **ಯಾಥಾತಥ್ಯತ ಏವ** ಯಥಾರ್ಥವಾಗಿಯೇ **ವ್ಯದಧಾತ್** ಸೃಷ್ಟಿ ಮಾಡಿದನು. ಹೊರತು ಮಿಥ್ಯಾಭೂತವಾದ ಜಗತ್ತನ್ನು ಸೃಷ್ಟಿ ಮಾಡಲಿಲ್ಲ.

ಇತ್ಯಾದಿ ಶ್ರುತಿಸ್ಮೃತಿಗಳಿಂದ ಪ್ರಪಂಚಕ್ಕೆ ಸತ್ಯತ್ವವು ತಿಳಿದುಬರುತ್ತಿರುವುದ-ರಿಂದ, ಆ ಪ್ರಪಂಚಕ್ಕೆ ಅನಿರ್ವಾಚ್ಯತ್ವವನ್ನು ಹೇಳುವ ವಾಕ್ಯಗಳಿಗೆ (ಅನಿರ್ವಚನೀಯಪರವಾಗಿದೆ ಎಂದು ಪರರಿಗೆ ಸಮ್ಮತವಾದ ವಾಕ್ಯಗಳಿಗೆ) ಅರ್ಥಾಂತರವನ್ನು (ಅದ್ಭುತತ್ವಾದಿನಿಮಿತ್ತಅನಿರ್ವಚನೀಯಪರತ್ವವನ್ನು) ಹೇಳುವುದೇ ಯುಕ್ತವಾದ್ದರಿಂದ, ಅನಿರ್ವಚನೀಯವಿಷಯದಲ್ಲಿ ಆಗಮವು ಪ್ರಮಾಣವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ಭಾಟ್ಟರು ಅರ್ಥಾಪತ್ತಿಯನ್ನು ಪೃಥಕ್ ಪ್ರಮಾಣ ಎಂದು ಅಂಗೀಕರಿಸುವುದರಿಂದ, 'ವ್ಯವಹಾರೇ ಭಟ್ಟನಯಃ' ಎಂದು ಅದ್ವೈತಿಗಳು ಹೇಳುವುದರಿಂದ, ಪ್ರಕೃತ ಭಾಟ್ಟಮತದಂತೆ ಅರ್ಥಾಪತ್ತಿಗೆ ಪೃಥಕ್ ಪ್ರಾಮಾಣ್ಯವನ್ನು ಒಪ್ಪಿ ಅನಿರ್ವಚನೀಯವಿಷಯದಲ್ಲಿ ಅರ್ಥಾಪತ್ತಿಪ್ರಮಾಣ-ವನ್ನು ಶಂಕಿಸುತ್ತಾರೆ ಅದ್ವೈತಿಗಳು -

### ಅನಿರ್ವಚನೀಯವಸ್ತುವಿಷಯದಲ್ಲಿ ಅರ್ಥಾಪತ್ತಿಪ್ರಮಾಣನಿರಾಕರಣೆ

**ಟೀಕಾಃ ಅಥಾಪಿ ಸ್ಯಾತ್ । ಅರ್ಥಾಪತ್ತ್ಯಾ ಶುಕ್ತಿರಜತಾದೇರಂಬರಾದೇರ್ವಾ ಅನಿರ್ವಾಚ್ಯತಾ ಸೇತ್ಸ್ಯತಿ । ತಥಾಹಿ । ಯದತ್ಯಂತಾಸತ್ ನ ತತ್ಪ್ರತೀಯತೇ ಯಥಾ ನರವಿಷಾಣಮ್ । ಯಚ್ಚಾತ್ಯಂತಸತ್ ನ ತದ್ಬಾಧ್ಯತೇ ಯಥಾऽತ್ಮಾ । ತದಿಹೋಭಯಾನ್ಯಥಾನುಪಪತ್ತ್ಯಾ ಅನಿರ್ವಚನೀಯತ್ವೈವಾಶ್ರಯಿತುಂ ಯುಕ್ತೇತಿ । ತತ್ರಾಹ -**

**ಮೂಲ :- ನ ಚಾರ್ಥಾಪತ್ತ್ಯಾ ಅನಿರ್ವಚನೀಯತ್ವಸಿದ್ಧಿಃ ।**

**ಅರ್ಥಾಪತ್ತಿಃ ಖಲು ನಾನುಮಾನಾದ್ಭಿದ್ಯತೇ । ಅನುಮಾನಂ ಚಾಪ್ರಸಿದ್ಧವಿಶೇಷಣತಯಾ ನಿರಾಕೃತಮಿತಿ ನಾರ್ಥಾಪತ್ತ್ಯಾ ಚ ಶುಕ್ತಿರಜತಾದೇರಂಬರಾದೇರ್ವಾऽನಿರ್ವಾಚ್ಯತಾಸಿದ್ಧಿಃ ।**

**ಅನುವಾದ :-** ಅನಿರ್ವಚನೀಯವಿಷಯದಲ್ಲಿ ಪ್ರತ್ಯಕ್ಷ-ಅನುಮಾನ-ಆಗಮಗಳು ಪ್ರಮಾಣವಾಗದೇ ಇದ್ದರೂ ಅರ್ಥಾಪತ್ತಿಯು ಪ್ರಮಾಣವಾಗಬಲ್ಲದು. ಅಂದರೆ ಪೂರ್ವೋದಾಹೃತ ಆಗಮಾದಿಪ್ರಮಾಣಗಳಿಂದ ಅನಿರ್ವಚನೀಯವಸ್ತು ಸಿದ್ಧವಾಗದೇ ಹೋದರೂ ಸಹ ಅರ್ಥಾಪತ್ತಿಪ್ರಮಾಣದಿಂದ ಶುಕ್ತಿರೂಪ್ಯಾದಿಗಳಿಗೆ ಅಥವಾ ಅಂಬರಾದಿಗಳಿಗೆ ಅನಿರ್ವಚನೀಯತ್ವವು ಸಿದ್ಧವಾಗುತ್ತದೆ. ಅದು ಹೇಗೆಂದರೆ -

**ವ್ಯಾಪ್ತಿ 1)**

**ಯತ್ ಅತ್ಯಂತಾಸತ್ ತತ್ ನ ಪ್ರತೀಯತೇ, ಯಥಾ ನರವಿಷಾಣಮ್ ।**

ಯಾವುದು ಅತ್ಯಂತ ಅಸತ್ ಆಗಿರುವುದೋ ಅದು ಪ್ರತೀತವಾಗುವುದಿಲ್ಲ (ಅದಕ್ಕೆ ಪ್ರತೀತಿ ಇಲ್ಲ). ಉದಾಹರಣೆಗೆ :- ನರವಿಷಾಣ. ನರವಿಷಾಣವು ಅತ್ಯಂತಾಸತ್ ಆದದ್ದರಿಂದ ನರವಿಷಾಣವು ಪ್ರತೀತವಾಗುವುದಿಲ್ಲ. ಪ್ರಕೃತ ಶುಕ್ತಿರೂಪ್ಯಾದಿಗಳು ಹಾಗೂ ಅಂಬರಾದಿಗಳು ನರವಿಷಾಣದಂತೆ ಅತ್ಯಂತಾಸತ್ ಆಗಿದ್ದರೆ ಪ್ರತೀತವಾಗಬಾರದಿತ್ತು. ಆದರೆ 'ಇದಂ ರಜತಂ' ಇತ್ಯಾದಿಯಾಗಿ ಶುಕ್ತಿರೂಪ್ಯಾದಿಗಳು ಪ್ರತೀತವಾಗುತ್ತಿರುವುದರಿಂದ ಹಾಗೂ 'ಇದಂ ಗಗನಂ' ಇತ್ಯಾದಿಯಾಗಿ ಅಂಬರಾದಿಗಳು ಪ್ರತೀತವಾಗುತ್ತಿರುವುದರಿಂದ ಅವು ಅಸತ್ ಅಲ್ಲ. ಅರ್ಥಾತ್ ಅಸದ್ವಿಲಕ್ಷಣವಾಗಿವೆ.

**ಅರ್ಥಾಪತ್ತಿಯ ಆಕಾರ**

**ಶುಕ್ತಿರೂಪ್ಯಾದೇಃ ಅಂಬರಾದೇಃ ವಾ ಪ್ರತೀತಿಃ ಅಸದ್ವೈಲಕ್ಷಣ್ಯಂ ವಿನಾ ಅನುಪಪದ್ಯಮಾನಾ । ತಥಾ ಚ ಪ್ರತೀತ್ಯನ್ಯಥಾನುಪಪತ್ತ್ಯಾ ಅಸದ್ವೈಲಕ್ಷಣ್ಯಂ ಸಿದ್ಧ್ಯತಿ ।**

ಶುಕ್ತಿರೂಪ್ಯಾದಿಗಳಿಗೆ ಅಥವಾ ಅಂಬರಾದಿಗಳಿಗೆ ಅಸದ್ವೈಲಕ್ಷಣ್ಯವನ್ನು ಒಪ್ಪದ ಹೊರತು ಅವುಗಳ ಪ್ರತೀತಿ ಉಪಪನ್ನವಾಗುವುದಿಲ್ಲ. ಹಾಗಾಗಿ (ಪ್ರತೀತಿಯನ್ನು ಕೂಡಿಸುವುದಕ್ಕಾಗಿ ಅಸದ್ವೈಲಕ್ಷಣ್ಯ ಒಪ್ಪಬೇಕು) ಪ್ರತೀತ್ಯ-ನ್ಯಥಾನುಪಪತ್ತಿಯಿಂದ ಅಸದ್ವೈಲಕ್ಷಣ್ಯ ಸಿದ್ಧವಾಗುತ್ತದೆ.

**ವ್ಯಾಪ್ತಿ 2)**

**ಯತ್ ಅತ್ಯಂತಸತ್ ತತ್ ನ ಬಾಧ್ಯತೇ, ಯಥಾ ಆತ್ಮಾ।**

ಯಾವುದು ಅತ್ಯಂತಸತ್ ಆಗಿರುವುದೋ ಅದು ಬಾಧಿತವಾಗುವುದಿಲ್ಲ. (ಅದಕ್ಕೆ ಬಾಧ ಬರುವುದಿಲ್ಲ.) ಉದಾಹರಣೆಗೆ ಆತ್ಮ. ಆತ್ಮನು ಅತ್ಯಂತಸತ್ (ಪಾರಮಾರ್ಥಿಕಸತ್) ಆದ್ದರಿಂದ ಆತ್ಮನಿಗೆ ಬಾಧ ಬರುವುದಿಲ್ಲ. ಆತ್ಮನು ಎಂದೂ ಬಾಧಿತನಾಗುವುದಿಲ್ಲ. ಪ್ರಕೃತ ಶುಕ್ತಿರೂಪ್ಯಾದಿಗಳು ಹಾಗೂ ಅಂಬರಾದಿಗಳು ಆತ್ಮನಂತೆ ಅತ್ಯಂತಸತ್ ಆಗಿದ್ದರೆ ಬಾಧಿತವಾಗಬಾರದಿತ್ತು. ಆದರೆ ಈಗ 'ನೇದಂ ರಜತಂ' ಇತ್ಯಾದಿಯಾಗಿ ಶುಕ್ತಿರೂಪ್ಯಾದಿಗಳಿಗೆ ಬಾಧ ಬರುತ್ತಿರುವುದರಿಂದ ಹಾಗೂ 'ನೇಹ ನಾನಾऽಸ್ತಿ ಕಿಂಚನ' ಇತ್ಯಾದಿ ಶ್ರುತಿಗಳಿಂದ ಅಥವಾ ಮಿಥ್ಯಾತ್ವಾನುಮಾನಗಳಿಂದ ಅಂಬರಾದಿಗಳಿಗೆ ಬಾಧ ಸಿದ್ಧವಾಗುತ್ತಿರುವುದರಿಂದ ಅವು ಆತ್ಮನಂತೆ ಸತ್ ಅಲ್ಲ. ಅರ್ಥಾತ್ ಸದ್ವಿಲಕ್ಷಣವಾಗಿವೆ.

**ಅರ್ಥಾಪತ್ತಿಯ ಆಕಾರ**

**ಶುಕ್ತಿರೂಪ್ಯಾದೇಃ ಅಂಬರಾದೇಃ ವಾ ಬಾಧಃ ಸದ್ವೈಲಕ್ಷಣ್ಯಂ ವಿನಾ ಅನುಪಪದ್ಯಮಾನಃ। ತಥಾ ಚ ಬಾಧಾನ್ಯಥಾನುಪಪತ್ತ್ಯಾ ಸದ್ವೈಲಕ್ಷಣ್ಯಂ ಸಿದ್ಧ್ಯತಿ।**

ಶುಕ್ತಿರೂಪ್ಯಾದಿಗಳಿಗೆ ಹಾಗೂ ಅಂಬರಾದಿಗಳಿಗೆ ಸದ್ವೈಲಕ್ಷಣ್ಯವನ್ನು ಒಪ್ಪದ ಹೊರತು ಅವುಗಳಿಗೆ ಬರುವ ಬಾಧ ಉಪಪನ್ನವಾಗುವುದಿಲ್ಲ. ಹಾಗಾಗಿ (ಬಾಧವನ್ನು ಕೂಡಿಸುವುದಕ್ಕಾಗಿ ಸದ್ವೈಲಕ್ಷಣ್ಯ ಒಪ್ಪಬೇಕು) ಬಾಧಾನ್ಯ-ಥಾನುಪಪತ್ತಿಯಿಂದ ಸದ್ವೈಲಕ್ಷಣ್ಯ ಸಿದ್ಧವಾಗುತ್ತದೆ.

ಹಾಗಾದರೆ - ಪ್ರತೀತ್ಯನ್ಯಥಾನುಪಪತ್ತಿಯಿಂದ ಅಸದ್ವೈಲಕ್ಷಣ್ಯ ಮತ್ತು ಬಾಧಾನ್ಯಥಾನುಪಪತ್ತಿಯಿಂದ ಸದ್ವೈಲಕ್ಷಣ್ಯ ಎರಡನ್ನೂ ಹೇಳಿದಾಗ ಃ- ಪ್ರತೀತಿ-ಬಾಧ ಉಭಯಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದಸದ್ವೈಲಕ್ಷಣ್ಯವೇ (ಅನಿರ್ವಚನೀಯತ್ವವೇ) ಸಿದ್ಧವಾಗುತ್ತದೆ. ಹೀಗೆ ಅರ್ಥಾಪತ್ತಿಪ್ರಮಾಣದಿಂದ ಜಗತ್ತಿಗೆ ಅನಿರ್ವಚನೀಯತ್ವವು ಸಿದ್ಧವಾಗುತ್ತದೆ.

ಈ ರೀತಿಯಾಗಿ ಆಕ್ಷೇಪ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ (ಈ ಅರ್ಥಾಪತ್ತಿಪ್ರಮಾಣವನ್ನು ಆಚಾರ್ಯರು ನಿರಾಕರಿಸುತ್ತಾರೆ)-

**ಮೂಲ :-** ನ ಚಾರ್ಥಾಪತ್ಯಾ ಅನಿರ್ವಚನೀಯತ್ವಸಿದ್ಧಿಃ ।

**ಮೂಲಾರ್ಥ :-** ಅರ್ಥಾಪತ್ತಿ ಪ್ರಮಾಣದಿಂದಲೂ ಸಹ ಜಗತ್ತಿಗೆ ಅನಿರ್ವಚನೀಯತ್ವ ಸಿದ್ಧವಾಗುವುದಿಲ್ಲ.

ಅರ್ಥಾಪತ್ತಿಯು ಅನುಮಾನದಿಂದ ಭಿನ್ನವಾದ ಪ್ರಮಾಣ ಆಗುವುದಿಲ್ಲ. ಅಂದರೆ ಅರ್ಥಾಪತ್ತಿಯು ಅನುಮಾನದಲ್ಲಿಯೇ ಅಂತರ್ಭಾವವಾಗುತ್ತದೆ.

**ಅರ್ಥಾಪತ್ತಿಶ್ಚೋಪಮಾ ಚ ಹ್ಯನುಮಾಭೇದ ಏವ ಹಿ ।**

ಎಂಬುದಾಗಿ ಈ ವಿಚಾರವನ್ನು ವಿಷ್ಣುತತ್ತ್ವನಿರ್ಣಯದಲ್ಲಿ ಆಚಾರ್ಯರು ವಿವರವಾಗಿ ನಿರೂಪಿಸಿದ್ದಾರೆ.

ಪ್ರಕೃತದಲ್ಲಿ ಪ್ರತೀತಿ-ಬಾಧ ಉಭಯಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದಸದ್ವೈಲಕ್ಷಣ್ಯ ಹೇಳಿದರೆ-

**ವಿಮತಂ ಅನಿರ್ವಚನೀಯಂ ಬಾಧ್ಯತ್ವೇ ಸತಿ ಪ್ರತೀಯಮಾನತ್ವಾತ್ ।**

(ಜಗತ್ತು ಅನಿರ್ವಚನೀಯವಾಗಿದೆ ಸದಸದ್ವಿಲಕ್ಷಣವಾಗಿದೆ, ಬಾಧ್ಯವೂ ಆಗಿ ಪ್ರತೀಯಮಾನವೂ ಆಗುತ್ತಿರುವುದರಿಂದ)

ಎಂಬುದಾಗಿ ಅನುಮಾನವನ್ನೇ ಮಾಡಿದಂತಾಗುತ್ತದೆ. ಅನಿರ್ವಚನೀಯ ವಿಷಯದಲ್ಲಿ ಅನುಮಾನವನ್ನೇ ಪ್ರಮಾಣವಾಗಿ ಉದಾಹರಿಸಿದಂತಾಗುತ್ತದೆ. ಹೊರತು ಅನುಮಾನ ಬಿಟ್ಟು ಅರ್ಥಾಪತ್ತಿಯನ್ನು ಪೃಥಕ್ ಹೇಳಿದಂತಾಗುವುದಿಲ್ಲ.

ಸರಿ ಹಾಗಾದರೆ, ಅನಿರ್ವಚನೀಯ ವಿಷಯದಲ್ಲಿ 'ವಿಮತಂ ಅನಿರ್ವಚನೀಯಂ ಬಾಧ್ಯತ್ವೇ ಸತಿ ಪ್ರತೀಯಮಾನತ್ವಾತ್' ಎಂಬ ಅನುಮಾನವೇ ಪ್ರಮಾಣವಾಗಲಿ? ಎಂಬುದಾಗಿ ಹೇಳುವುದು ಸರಿಯಲ್ಲ. ಏಕೆಂದರೆ - ''**ಅನುಮಾನಸ್ಯ ಚಾಪ್ರಸಿದ್ಧ-ವಿಶೇಷಣಃ ಪಕ್ಷಃ**'' ಎಂಬುದಾಗಿ ಅಪ್ರಸಿದ್ಧವಿಶೇಷಣತ್ವ-ವಿಶೇಷ್ಯವೈಯರ್ಥ್ಯ ಮೊದಲಾದ ದೋಷಗಳನ್ನು ಕೊಟ್ಟು ಹಿಂದೆಯೇ ಅನುಮಾನ ಪ್ರಮಾಣವನ್ನು ನಿರಾಕರಿಸಿ ಆಗಿದೆ. ಹಾಗಾಗಿ ಅನುಮಾನವನ್ನು ಹೊಸದಾಗಿ ನಿರಾಕರಿಸುವ ಅಗತ್ಯವಿಲ್ಲ. ಆದ್ದರಿಂದ ಶುಕ್ತಿರಜತಾದಿಗಳಿಗೆ ಅಥವಾ ಅಂಬರಾದಿಗಳಿಗೆ ಅರ್ಥಾಪತ್ತಿಯಿಂದಲೂ ಅನಿರ್ವಚನೀಯತ್ವ ಸಿದ್ಧವಾಗುವುದಿಲ್ಲ ಎಂದು ಭಾವ.

**ಅವತಾರಿಕೆ :-** ''ಅರ್ಥಾಪತ್ತಿಯು ಅನುಮಾನದಿಂದ ಭಿನ್ನವಾದ ಪ್ರಮಾಣ-ವಾಗಿಲ್ಲವಾದ್ದರಿಂದ (ಅನುಮಾನದಲ್ಲಿಯೇ ಅಂತರ್ಭಾವವಾಗುವುದರಿಂದ)

ಹಿಂದೆ ಅನುಮಾನವನ್ನು ನಿರಾಕರಿಸಿದ್ದರಿಂದಲೇ ಅರ್ಥಾಪತ್ತಿಯೂ ನಿರಾಕೃತವೇ ಆಯಿತು'' ಎಂಬುದಾಗಿ ಈವರೆಗೆ ವಸ್ತುಸ್ಥಿತಿಯನ್ನು ಹೇಳಿ ಅರ್ಥಾಪತ್ತಿಯನ್ನು ನಿರಾಕರಿಸಿದರು. ಪ್ರಕೃತದಲ್ಲಿ ಅರ್ಥಾಪತ್ತಿಯು ಅನುಮಾನಕ್ಕಿಂತ ಭಿನ್ನವಾದ ಪೃಥಕ್ ಪ್ರಮಾಣ ಎಂಬ ಪಕ್ಷದಲ್ಲಿಯೂ ದೋಷವನ್ನು ಹೇಳಿ ನಿರಾಕರಿಸುತ್ತಾರೆ-

**ಟೀಕಾ: ಅಥವಾऽತ್ಯಂತಾಸತೋ ನರವಿಷಾಣಾದೇರಪಿ ತತ್ತದಾತ್ ಪ್ರತೀತಿಸಂಭವೇನ 'ಅಸನ್ನ ಪ್ರತೀಯತೇ' ಇತಿ ವ್ಯಾಪ್ತ್ಯಭಾವಾಚ್ಛುಕ್ತಿ-ರಜತಾದೇರತ್ಯಂತಾಸತ್ತ್ವೇನೈವೋಪಪತ್ತೇಃ । ತಥಾ ಅನ್ಯಥಾ-ವಿಜ್ಞಾತಸ್ಯ ಸಮ್ಯಗ್ವಿಜ್ಞಾನಗೋಚರತ್ವಸ್ಯ ಬಾಧ್ಯತ್ವಸ್ಯ ಸತಶ್ಚಿದಾ-ನಂದಾತ್ಮನೋऽಪಿ ಸಂಭವೇನ 'ಸನ್ನ ಬಾಧ್ಯತೇ' ಇತಿ ವ್ಯಾಪ್ತ್ಯ-ಭಾವಾದಂಬರಾದೇಸ್ಸತ್ತ್ವೇನೈವೋಪಪತ್ತೇರ್ನಾರ್ಥಾಪತ್ತ್ಯಾऽ-ನಿರ್ವಚನೀಯತಾಸಿದ್ಧಿರಿತಿ ವ್ಯಾಖ್ಯೇಯಮ್ ।**

**ಅನುವಾದ :-** ಅಥವಾ, ಅರ್ಥಾಪತ್ತಿಗೆ ವ್ಯಾಪ್ತಿಯೇ ಮೂಲ. ಪ್ರಕೃತದಲ್ಲಿ ಪ್ರತೀತ್ಯನ್ಯಥಾನುಪಪತ್ತಿಯಿಂದ ಅಸದ್ವೈಲಕ್ಷಣ್ಯವನ್ನು ಹೇಳಬೇಕಾದರೆ

**''ಯತ್ ಅತ್ಯಂತಾಸತ್ ತತ್ ನ ಪ್ರತೀಯತೇ''**

(ಯಾವುದು ಅತ್ಯಂತಾಸತ್ ಆಗಿರುತ್ತದೆಯೋ ಅದಕ್ಕೆ ಪ್ರತೀತಿ ಇಲ್ಲ) ಎಂಬ ವ್ಯಾಪ್ತಿಯು ಮೂಲಭೂತವಾಗಿ ಇರಬೇಕು. ಆದರೆ ನರವಿಷಾಣಾದಿಗಳು ಅತ್ಯಂತಾಸತ್ ಆಗಿದ್ದರೂ 'ನರವಿಷಾಣಂ' ಇತ್ಯಾದಿ ತದ್ವಾಚಕಪದಗಳಿಂದ ನರವಿಷಾಣಾದಿವಿಷಯಕಪ್ರತೀತಿ ಬರುವುದರಿಂದ

**''ಯತ್ ಅತ್ಯಂತಾಸತ್ ತತ್ ನ ಪ್ರತೀಯತೇ''**

ಎಂಬ ವ್ಯಾಪ್ತಿಯೇ ಇಲ್ಲ. ಹಾಗಾಗಿ ಅತ್ಯಂತಾಸತ್‌ಗೂ ಪ್ರತೀತಿ ಸಾಧ್ಯವಾದ್ದರಿಂದ, ಶುಕ್ತಿರೂಪ್ಯಾದಿಗಳಿಗೆ ಅತ್ಯಂತಾಸತ್ತ್ವವನ್ನು ಅಂಗೀಕರಿಸಿದರೂ ಪ್ರತೀತಿಯನ್ನು ಕೂಡಿಸಬಹುದಾದ್ದರಿಂದ, ಪ್ರತೀತ್ಯನ್ಯಥಾನುಪಪತ್ತಿಯಿಂದ ಅಸದ್ವೈಲಕ್ಷಣ್ಯವನ್ನು ಹೇಳುವುದು ಸರಿಯಲ್ಲ. ಅಂದರೆ ನಿಮ್ಮ ಅರ್ಥಾಪತ್ತಿಗೆ ಅನ್ಯಥೈವೋಪಪತ್ತಿದೋಷ ಬರುತ್ತದೆ. (ಅನ್ಯಥೈವ ಅಸದ್ವೈಲಕ್ಷಣ್ಯ ಹೇಳದೇ ಅಸತ್ತ್ವವನ್ನೇ ಹೇಳಿ, ಉಪಪತ್ತಿ ಪ್ರತೀತಿಯನ್ನು ಕೂಡಿಸಬಹುದು.)

ಅದೇ ರೀತಿಯಾಗಿ, ಬಾಧಾನ್ಯಥಾನುಪಪತ್ತಿಯಿಂದ ಸದ್ವೈಲಕ್ಷಣ್ಯವನ್ನು ಹೇಳಬೇಕಾದರೆ ''**ಯತ್ ಅತ್ಯಂತಸತ್ ತತ್ ನ ಬಾಧ್ಯತೇ**'' (ಯಾವುದು ಅತ್ಯಂತಸತ್ ಆಗಿರುತ್ತದೆಯೋ ಅದಕ್ಕೆ ಬಾಧ ಬರುವುದಿಲ್ಲ) ಎಂಬ ವ್ಯಾಪ್ತಿಯು ಮೂಲಭೂತವಾಗಿ ಇರಬೇಕು. ಆದರೆ ಚಿದಾನಂದರೂಪನಾದ, ಪಾರಮಾರ್ಥಿಕಸತ್ ಆದ ಬ್ರಹ್ಮನಿಗೂ ಸಹ

**೧ಅನ್ಯಥಾ ವಿಜ್ಞಾತಸ್ಯ ಸಮ್ಯಗ್ವಿಜ್ಞಾನಗೋಚರತ್ವ**

ಎಂಬ ಬಾಧ್ಯತ್ವವನ್ನು (ಬಾಧವನ್ನು) ಹೇಳಬಹುದಾದ್ದರಿಂದ ''**ಯತ್ ಅತ್ಯಂತಸತ್ ತತ್ ನ ಬಾಧ್ಯತೇ**'' ಎಂಬ ವ್ಯಾಪ್ತಿಯೇ ಇಲ್ಲ. ಹಾಗಾಗಿ ಅತ್ಯಂತಸತ್ ಆದದ್ದಕ್ಕೂ ಬಾಧ ಸಂಭಾವಿತವಾದ್ದರಿಂದ, ಅಂಬರಾದಿಗಳಿಗೆ ಅತ್ಯಂತಸತ್ವವನ್ನು ಅಂಗೀಕರಿಸಿದರೂ ಬಾಧವನ್ನು ಕೂಡಿಸಬಹುದಾದ್ದರಿಂದ,

೧ ಅನ್ಯಥಾ ವಿಜ್ಞಾತಸ್ಯ ಸಮ್ಯಗ್ ವಿಜ್ಞಾನಗೋಚರತ್ವಂ ಬಾಧಃ ।

''ಮೊದಲು ತಪ್ಪಾಗಿ ತಿಳಿದಿದ್ದ ವಸ್ತುವನ್ನು ಅನಂತರ ಸರಿಯಾಗಿ ತಿಳಿದುಕೊಳ್ಳುವುದು''

ಇದು ಒಂದುವಿಧ ಬಾಧಸ್ವರೂಪ. ''ವಿಜ್ಞಾತಸ್ಯಾನ್ಯಥಾ ಸಮ್ಯಗ್ ವಿಜ್ಞಾನಂ ಹ್ಯೇವ ತನ್ಮತಮ್ ।'' ಎಂಬುದಾಗಿ ಆಚಾರ್ಯರು ಅನುವ್ಯಾಖ್ಯಾನದಲ್ಲಿ ಇದನ್ನು ತಿಳಿಸುತ್ತಾರೆ. ಈ ವಿಧವಾದ ಬಾಧವನ್ನು ಬ್ರಹ್ಮನಿಗೂ ಹೇಳಬಹುದಾಗಿದೆ. ಹೇಗೆಂದರೆ -

ಅ) ಬ್ರಹ್ಮನು ಸಗುಣನು ಜ್ಞಾನಚಿಕೀರ್ಷಾಕೃತಿಗಳುಳ್ಳವನು ಎಂಬುದಾಗಿ ಮೊದಲು ತಪ್ಪಾಗಿ ತಿಳಿದಿರುತ್ತೇವೆ. ಅಂತಹ ಅನ್ಯಥಾವಿಜ್ಞಾತನಾದ ಬ್ರಹ್ಮನನ್ನು ಅನಂತರ ವೇದಾಂತಗಳ ಅಧ್ಯಯನದಿಂದ ಸರಿಯಾಗಿ (ಬ್ರಹ್ಮ ಸಗುಣನಲ್ಲ, ನಿರ್ಗುಣ ಎಂದು ಸರಿಯಾಗಿ) ತಿಳಿಯುತ್ತೇವೆ. ಮೊದಲು ಅನ್ಯಥಾವಿಜ್ಞಾತನಾದ ಬ್ರಹ್ಮನು ಅನಂತರ ಸಮ್ಯಗ್ ವಿಜ್ಞಾನವಿಷಯನಾಗುತ್ತಾನೆ.

ಹೀಗೆ ಅದ್ವೈತಮತಪ್ರಕಾರವಾಗಿಯೂ ಈ ವಿಧವಾದ ಬಾಧವನ್ನು ಬ್ರಹ್ಮನಿಗೂ ಹೇಳಬಹುದಾಗಿದೆ. (ಶ್ರೀರಾಘವೇಂದ್ರಸ್ವಾಮಿಗಳವರ ಟಿಪ್ಪಣೀ)

ಆ) ಅಥವಾ, ಕ್ಷಣಿಕವಾದಿಗಳಾದ ಬೌದ್ಧಮತದ ಆಕರ್ಷಣೆಗೆ ಒಳಗಾಗಿ ಮೊದಲು ಬ್ರಹ್ಮನನ್ನು ಕ್ಷಣಿಕ ಎಂದು ತಿಳಿದಿರುತ್ತೇವೆ. ಅಂತಹ ಅನ್ಯಥಾವಿಜ್ಞಾತನಾದ ಬ್ರಹ್ಮನನ್ನು ಅನಂತರ ವೇದಾಂತಗಳ ಅಧ್ಯಯನದಿಂದ ಸರಿಯಾಗಿ (ಬ್ರಹ್ಮ ಕ್ಷಣಿಕನಲ್ಲ, ಅಕ್ಷಣಿಕ ನಿತ್ಯ ಎಂದು ಸರಿಯಾಗಿ) ತಿಳಿಯುತ್ತೇವೆ. ಹೀಗೆ ಮೊದಲು ಅನ್ಯಥಾವಿಜ್ಞಾತನಾದ ಬ್ರಹ್ಮನು ಅನಂತರ ಸಮ್ಯಗ್ಜ್ಞಾನವಿಷಯನಾಗುತ್ತಾನೆ.

ಈ ವಿಧವಾದ ಬಾಧವನ್ನು ಸ್ವಮತಾನುಸಾರ ಹಾಗೂ ಪರಮತಾನುಸಾರ ಬ್ರಹ್ಮನಿಗೂ ಹೇಳಬಹುದಾಗಿದೆ. (ಶ್ರೀಜನಾರ್ದನಭಟ್ಟರ ಟಿಪ್ಪಣೀ)

ಬಾಧಾನ್ಯಥಾನುಪಪತ್ತಿಯಿಂದ ಸದ್ವೈಲಕ್ಷಣ್ಯವನ್ನು ಹೇಳುವುದು ಸರಿಯಲ್ಲ. ಅಂದರೆ ನಿಮ್ಮ ಅರ್ಥಾಪತ್ತಿಗೆ ಅನ್ಯಥೈವೋಪಪತ್ತಿ ದೋಷ ಬರುತ್ತದೆ.

(ಅನ್ಯಥೈವ ಸದ್ವೈಲಕ್ಷಣ್ಯ ಹೇಳದೇ ಸತ್ವವನ್ನೇ ಹೇಳಿ, ಉಪಪತ್ತಿ ಬಾಧವನ್ನು ಕೂಡಿಸಬಹುದು.)

ಈ ರೀತಿಯಾಗಿ ನಿಮ್ಮ ಅರ್ಥಾಪತ್ತಿಗೆ ಅನ್ಯಥೈವೋಪಪತ್ತಿ ರೂಪವಾದ ದೋಷ ಬರುವುದರಿಂದ ಶುಕ್ತಿರೂಪ್ಯಾದಿಗಳಿಗೆ ಹಾಗೂ ಅಂಬರಾದಿಗಳಿಗೆ ಅರ್ಥಾಪತ್ತಿಯಿಂದಲೂ ಅನಿರ್ವಚನೀಯತ್ವವು ಸಿದ್ಧವಾಗುವುದಿಲ್ಲ ಎಂಬುದಾಗಿ ಯಾದರೂ ''**ನ ಚಾರ್ಥಾಪತ್ತ್ಯಾ ಅನಿರ್ವಚನೀಯತ್ವಸಿದ್ಧಿಃ**' ಎಂಬ ಮೂಲವಾಕ್ಯದ ವ್ಯಾಖ್ಯಾನ ಮಾಡಿಕೊಳ್ಳಬೇಕು.

**ಅವತಾರಿಕೆ :-** ''ನರವಿಷಾಣಾದಿಗಳು ಅತ್ಯಂತಾಸತ್ ಆದರೂ ಸಹ 'ನರವಿಷಾಣಂ' ಇತ್ಯಾದಿ ತದ್ವಾಚಕಪದಗಳಿಂದ ನರವಿಷಾಣಾದಿವಿಷಯಕವಾದ ಪ್ರತೀತಿ ಬರುವುದರಿಂದ (ಅಸತ್‌ಗೆ ಪ್ರತೀತಿ ಇಲ್ಲ ಎನ್ನುವುದು ಸರಿಯಲ್ಲ) ಅಸತ್‌ಗೂ ಪ್ರತೀತಿ ಒಪ್ಪಲೇಬೇಕು'' ಎಂಬುದಾಗಿ ಸಾಧಕವನ್ನು ಹೇಳಿ ಅಸತ್‌ಗೆ ಪ್ರತೀತಿಯನ್ನು ಈವರೆಗೆ ಸಮರ್ಥಿಸಿ, ಪ್ರಕೃತ ಅಸತ್‌ಗೆ ಪ್ರತೀತಿ ಒಪ್ಪದೇ ಇದ್ದರೆ ಇಂತಹ ಬಾಧಕ ಉಂಟು ಎಂಬುದಾಗಿ ಬಾಧಕವನ್ನು ಹೇಳುವ ಮೂಲಕವಾಗಿಯೂ ಅಸತ್‌ಗೆ ಪ್ರತೀತಿಯನ್ನು ಸಮರ್ಥಿಸುತ್ತಾರೆ -

### ಅಸತ್‌ಗೆ ಪ್ರತೀತಿ ಒಪ್ಪದಿದ್ದರೆ ಬಾಧಕಪ್ರದರ್ಶನ

**ಟೀಕಾ : ಅತ್ಯಂತಾಸತಃ ಪ್ರತೀತ್ಯನಂಗೀಕಾರೇ ಬಾಧಕಂ ಚಾಹ -**

**ಮೂಲ :- ಅಸತಃ ಪ್ರತೀತಿಂ ವಿನಾಽಸದ್ವೈಲಕ್ಷಣ್ಯಜ್ಞಾನಾನುಪಪತ್ತೇಃ ।**

**ಯದಿ ಪರೋಽಸನ್ನ ಪ್ರತೀಯಾತ್ತದಾ ಶುಕ್ತಿರಜತಾದೇರಸದ್ವೈ-ಲಕ್ಷಣ್ಯಂನಜಾನೀಯಾತ್। ವೈಲಕ್ಷಣ್ಯಜ್ಞಾನಸ್ಯ ಪ್ರತಿಯೋಗಿಜ್ಞಾನ-ಸಾಪೇಕ್ಷತಾನಿಯಮಾತ್। ನಹಿಕೇನಾಪ್ಯವಿದಿತಾದ್ಘಟಾದ್ವೈಲಕ್ಷಣ್ಯಂ ಪಟಸ್ಯ ಜ್ಞಾತುಂ ಶಕ್ಯತೇ ।**

**ಅನುವಾದ :-** ಅತ್ಯಂತಾಸತ್‌ಗೆ ಪ್ರತೀತಿಯನ್ನು ಒಪ್ಪದೇ ಹೋದರೆ ಬಾಧಕವನ್ನು ಹೇಳುತ್ತಾರೆ -

ಮೂಲ :- ಅಸತಃ ಪ್ರತೀತಿಂ ವಿನಾಽಸದ್ವೈಲಕ್ಷಣ್ಯಜ್ಞಾನಾನುಪಪತ್ತೇಃ।

**ಮೂಲಾರ್ಥ :-** ಅಸತ್‌ಗೆ ಪ್ರತೀತಿಯನ್ನು ಒಪ್ಪದೇ ಹೋದರೆ (ಶುಕ್ತಿರೂಪ್ಯಾದಿಗಳಲ್ಲಿ) ಅಸದ್ವೈಲಕ್ಷಣ್ಯಜ್ಞಾನ ಆಗದೇ ಹೋಗಬೇಕಾಗುತ್ತದೆ.

ಒಂದುವೇಳೆ 'ಅಸಚ್ಚೇನ್ನ ಪ್ರತೀಯೇತ' ಎಂಬುದಾಗಿ ಪರರು ಅಸತ್‌ಗೆ ಪ್ರತೀತಿಯನ್ನು ಅಂಗೀಕರಿಸದೇ ಹೋದರೆ ಆಗ ಶುಕ್ತಿರಜತಾದಿಗಳಲ್ಲಿ ಅಸದ್ವೈಲಕ್ಷಣ್ಯವನ್ನು ತಿಳಿಯದೇ ಹೋಗಬೇಕಾಗುತ್ತದೆ. ಯಾಕೆ ?

**'ಸದ್ಭ್ಯಾಂ ಅಧಿಕರಣಪ್ರತಿಯೋಗಿಭ್ಯಾಂ ಅಭಾವೋ ನಿರೂಪ್ಯತೇ'**

ಎಂಬ ನಿಯಮದಂತೆ ವೈಲಕ್ಷಣ್ಯಜ್ಞಾನ (ಅಭಾವಜ್ಞಾನ) ಆಗಬೇಕಾದರೆ ಪ್ರತಿಯೋಗಿಜ್ಞಾನ ನಿಯಮೇನ ಆಗಲೇಬೇಕು. ಪ್ರತಿಯೋಗಿಜ್ಞಾನ ಇದ್ದರೆ ಮಾತ್ರ ಅದರಿಂದ ಭೇದಜ್ಞಾನ ಆಗಲು ಸಾಧ್ಯ ಎಂದು ಭಾವ. ಯಾವನಿಗೆ ಘಟದ ಜ್ಞಾನವೇ ಇಲ್ಲ ಅಂತಹವನು ಪಟದಲ್ಲಿ ಘಟದಿಂದ ವೈಲಕ್ಷಣ್ಯವನ್ನು ತಿಳಿಯಲು ಸಾಧ್ಯವಿಲ್ಲ. ಪ್ರಕೃತ ಅಸತ್‌ಗೆ ಪ್ರತೀತಿಯನ್ನೇ ಒಪ್ಪದಿದ್ದರೆ ಪ್ರತಿಯೋಗಿಜ್ಞಾನ ಇಲ್ಲವಾದ್ದರಿಂದ ಶುಕ್ತಿರೂಪ್ಯಾದಿಗಳಲ್ಲಿ ಅಸದ್ವೈಲಕ್ಷಣ್ಯಜ್ಞಾನವೇ ಆಗದೇ ಹೋಗಬೇಕಾಗುತ್ತದೆ.

**ಅವತಾರಿಕೆ:-** ಈವರೆಗೆ 'ಅಸತಃ (ಪಂಚಮೀ) ವೈಲಕ್ಷಣ್ಯಂ ಅಸದ್ವೈಲಕ್ಷಣ್ಯಂ' ಎಂಬುದಾಗಿ ತತ್ಪುರುಷಸಮಾಸವನ್ನು ಅಂಗೀಕರಿಸಿ 'ಅಸದ್ವೈಲಕ್ಷಣ್ಯಜ್ಞಾನಾನುಪಪತ್ತೇಃ' ಎಂಬ ಮೂಲವನ್ನು ವ್ಯಾಖ್ಯಾನಿಸಿ, ಪ್ರಕೃತ 'ಅಸಚ್ಚ ತತ್ ವೈಲಕ್ಷಣ್ಯಂ ಚ' ಎಂಬುದಾಗಿ ಕರ್ಮಧಾರಯಸಮಾಸವನ್ನು ಮಾಡಿಕೊಂಡು ಮತ್ತು ಜ್ಞಾನಪದಕ್ಕೆ ಅಪರೋಕ್ಷಜ್ಞಾನ ಎಂದು ಅರ್ಥ ವಿವಕ್ಷಿಸಿ ಮೂಲವನ್ನು ಮತ್ತೊಂದು ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ -

### ಅಸತ್‌ಗೆ ಅಪರೋಕ್ಷಪ್ರತೀತಿವಿಷಯತ್ವಸಮರ್ಥನೆ

**ಟೀಕಾ: ಅಥೈವಂ ಬ್ರೂಯಾತ್ 'ಅಸ್ತ್ವೇವಾಸತೋಽಪಿ ಪರೋಕ್ಷಪ್ರತೀತಿಗೋಚರತಾ । ಅಪರೋಕ್ಷಪ್ರತೀತಿಗೋಚರತಾಂ ತು ನ ಮನ್ಯೇ' ಇತಿ । ತತ್ರಾಪಿ 'ಅಸತಃ ಪ್ರತೀತಿಂ ವಿನಾಽಸದ್ವೈಲಕ್ಷಣ್ಯಜ್ಞಾನಾನುಪಪತ್ತೇಃ' ಇತ್ಯೇವೋತ್ತರಮ್ ।**

**ಯದ್ಯತ್ಯಂತಾಸತೋಽಪರೋಕ್ಷಪ್ರತೀತಿವಿಷಯತಾ ನ ಸ್ಯಾತ್ ತರ್ಹಿ ಪ್ರಾತಿಭಾಸಿಕತಯಾಽರ್ಥಕ್ರಿಯಾನರ್ಹಸ್ಯ ರಜತಸ್ಯ ಯದಸತ್ ಪ್ರಾತಿಭಾಸಿಕವೈಲಕ್ಷಣ್ಯಂ ತದರೋಕ್ಷಜ್ಞಾನಂ ಭ್ರಾಂತಸ್ಯ ನೋಪಪದ್ಯೇತ । ತಥಾ ಚಾಪ್ರವೃತ್ತಿಃ ಪ್ರಸಜ್ಯೇತೇತಿ ।**

**ಅನುವಾದ :-** ಇದರ ಮೇಲೆ ಪರರು ಈ ರೀತಿ ಆಕ್ಷೇಪ ಮಾಡಬಹುದು-

''ನಾವು ಅಸತ್‌ವಿಷಯಕ ಪ್ರತೀತಿಯನ್ನೇ ಒಪ್ಪುವುದಿಲ್ಲ ಎಂದಲ್ಲ. ಅಸತ್‌ಗೆ ಪ್ರತೀತಿವಿಷಯತ್ವ ಅಂದರೆ ಪರೋಕ್ಷಪ್ರತೀತಿವಿಷಯತ್ವವನ್ನು ಒಪ್ಪುತ್ತೇವೆ. ಆದರೆ ಅಸತ್‌ಗೆ ಅಪರೋಕ್ಷಪ್ರತೀತಿವಿಷಯತ್ವವನ್ನು ಒಪ್ಪುವುದಿಲ್ಲ.''

ಈ ಆಕ್ಷೇಪಕ್ಕೂ ಸಹ ''**ಅಸತಃ ಪ್ರತೀತಿಂ ವಿನಾಽಸದ್ವೈಲಕ್ಷಣ್ಯಜ್ಞಾನಾನುಪಪತ್ತೇಃ**'' ಎಂಬ ಮಾತೇ ಉತ್ತರವಾಗಿದೆ. ಅದರ ಅಭಿಪ್ರಾಯ :- ಒಂದುವೇಳೆ ಅತ್ಯಂತಾಸತ್‌ಗೆ ಅಪರೋಕ್ಷಪ್ರತೀತಿವಿಷಯತ್ವ ಇಲ್ಲದೇ ಹೋದರೆ ಆಗ ವಸ್ತುತಃ ಪ್ರಾತಿಭಾಸಿಕವಾಗಿ ಅರ್ಥಕ್ರಿಯಾಅನರ್ಹವಾದ ರಜತದಲ್ಲಿ ಅಸತ್ ಆದ ಪ್ರಾತಿಭಾಸಿಕವೈಲಕ್ಷಣ್ಯ ಏನು ತೋರುತ್ತದೆ ಭ್ರಾಂತಿಕಾಲದಲ್ಲಿ, ಆ ಪ್ರಾತಿಭಾಸಿಕವೈಲಕ್ಷಣ್ಯವಿಷಯಕ ಅಪರೋಕ್ಷಜ್ಞಾನವು ಭ್ರಾಂತನಿಗೆ ಆಗದೇ ಹೋಗಬೇಕಾಗುತ್ತದೆ. ಭ್ರಾಂತನಿಗೆ ಪ್ರಾತಿಭಾಸಿಕವೈಲಕ್ಷಣ್ಯವಿಷಯಕಅಪರೋಕ್ಷಜ್ಞಾನ ಆಗುವುದಿಲ್ಲ ಎಂದಾದರೆ ಭ್ರಾಂತಿಕಾಲದಲ್ಲಿ ಅವನ ಪ್ರವೃತ್ತಿಯೇ ಉಪಪನ್ನವಾಗದೇ ಹೋಗಬೇಕಾಗುತ್ತದೆ ಎಂದು ಭಾವ.

**ಶ್ರೀವೇದೇಶತೀರ್ಥರ ವ್ಯಾಖ್ಯಾನ ವಿಶೇಷ**

ಶ್ರೀಮಟ್ಟೀಕಾಕೃತ್ಪಾದರ ಆಂತರ್ಯವನ್ನು ಶ್ರೀವೇದೇಶತೀರ್ಥರು ತಮ್ಮ ಟಿಪ್ಪಣಿಯಲ್ಲಿ ಸುಂದರವಾಗಿ ತಿಳಿಸಿಕೊಡುತ್ತಾರೆ :-

ಶುಕ್ತಿರೂಪ್ಯಾದಿಗಳನ್ನು ಪರರು ಪ್ರಾತಿಭಾಸಿಕ ಎಂದು ಅಂಗೀಕರಿಸಿರುತ್ತಾರೆ. ಆ ಪ್ರಾತಿಭಾಸಿಕವಾದ ರಜತವು ಪ್ರತೀತಿ(ಭ್ರಾಂತಿ)ಕಾಲದಲ್ಲಿ ಪ್ರಾತಿಭಾಸಿಕವೆಂದೇ ತೋರುತ್ತದೆಯೋ ? ಅಥವಾ ಪ್ರಾತಿಭಾಸಿಕವಿಲಕ್ಷಣವಾಗಿದೆಯೆಂದು ತೋರುತ್ತದೆಯೋ ?

ಪ್ರಾತಿಭಾಸಿಕವಾದ ರಜತವು ಪ್ರಾತಿಭಾಸಿಕವಾಗಿದೆಯೆಂದೇ ತೋರುವುದಾಗಿದ್ದರೆ, ಪ್ರಾತಿಭಾಸಿಕವಾದ ಪದಾರ್ಥ ಅರ್ಥಕ್ರಿಯಾಅನರ್ಹವಾದ್ದರಿಂದ

ಯಾವ ಪ್ರಯೋಜನಕ್ಕೂ ಬರುವುದಿಲ್ಲವಾದ್ದರಿಂದ ಭ್ರಾಂತನಾದ ವ್ಯಕ್ತಿ ಅದನ್ನು ತೆಗೆದುಕೊಳ್ಳಲು ಪ್ರವೃತ್ತನೇ ಆಗಬಾರದಿತ್ತು !

ಇನ್ನು ಪ್ರಾತಿಭಾಸಿಕವಾದ ರಜತವು ಭ್ರಾಂತಿಕಾಲದಲ್ಲಿ ಪ್ರಾತಿಭಾಸಿಕ-ವಿಲಕ್ಷಣವಾಗಿದೆಯೆಂದೇ ತೋರುತ್ತದೆ (ಆದ್ದರಿಂದ ಪ್ರವೃತ್ತಿಯು ಕೂಡುತ್ತದೆ) ಎನ್ನುವುದಾದರೆ, ಪ್ರಾತಿಭಾಸಿಕವಾದ ರಜತದಲ್ಲಿ ಏನು ಪ್ರಾತಿಭಾಸಿಕವೈಲಕ್ಷಣ್ಯ ತೋರುತ್ತದೆ ಆ ಪ್ರಾತಿಭಾಸಿಕವೈಲಕ್ಷಣ್ಯವು ಸತ್ ಎನ್ನುತ್ತೀರೋ ? ಅಸತ್ ಎನ್ನುತ್ತೀರೋ ?

ಪ್ರಾತಿಭಾಸಿಕವೈಲಕ್ಷಣ್ಯ ಸತ್ ಎನ್ನಲು ಬರುವುದಿಲ್ಲ. ವಸ್ತುತಃ ಪ್ರಾತಿಭಾಸಿಕ-ವಾದ ರಜತದಲ್ಲಿ ಪ್ರಾತಿಭಾಸಿಕವೈಲಕ್ಷಣ್ಯ (ಇರಲು) ಸತ್ ಆಗಲು ಸಾಧ್ಯವಿಲ್ಲ. ಪ್ರಾತಿಭಾಸಿಕವೂ ಆಗಿದೆ, ಪ್ರಾತಿಭಾಸಿಕವಿಲಕ್ಷಣವೂ ಆಗಿದೆ ಎಂದು ಹೇಳಿದಂತಾಗುವುದರಿಂದ ಅದು ವ್ಯಾಹತವಾಗುತ್ತದೆ.

ಇನ್ನು ಪ್ರಾತಿಭಾಸಿಕವೈಲಕ್ಷಣ್ಯ ಅಸತ್ ಎಂದರೆ, ವಸ್ತುತಃ ಪ್ರಾತಿಭಾಸಿಕವಾದ ರಜತದಲ್ಲಿ ಅಸತ್ ಆದ ಪ್ರಾತಿಭಾಸಿಕವೈಲಕ್ಷಣ್ಯವು ಭ್ರಾಂತಿಕಾಲದಲ್ಲಿ ತೋರುತ್ತದೆ ಎಂದು ಹೇಳಿದಂತಾಗುತ್ತದೆ. ಅಸತ್ ಆದ ಪ್ರಾತಿಭಾಸಿಕವೈಲಕ್ಷಣ್ಯವು ಭ್ರಾಂತಿರೂಪ ಅಪರೋಕ್ಷಜ್ಞಾನದಲ್ಲಿ ವಿಷಯವಾಗುತ್ತದೆ ಎಂದರೆ, ಅಸತ್‌ಗೆ ಅಪರೋಕ್ಷಜ್ಞಾನವಿಷಯತ್ವ ಒಪ್ಪಿದಂತಾಗುತ್ತದೆ.

ಆದ್ದರಿಂದ ''ಅಸತ್‌ಗೆ ಅಪರೋಕ್ಷಪ್ರತೀತಿವಿಷಯತ್ವವನ್ನು ಒಪ್ಪುವುದಿಲ್ಲ'' ಎಂದು ಹೇಳುವುದು ಸರಿಯಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ''ಅಸದ್ವಿಷಯಕಪರೋಕ್ಷಜ್ಞಾನವನ್ನು ಒಪ್ಪಿದರೂ ಸಹ ಅಪರೋಕ್ಷಜ್ಞಾನವನ್ನು ನಾವು ಒಪ್ಪುವುದಿಲ್ಲ'' ಎಂಬ ಅವರ ಶಂಕೆಗೆ ಅಸದ್ವಿಷಯಕಅಪರೋಕ್ಷಜ್ಞಾನವನ್ನು ಒಪ್ಪಲೇಬೇಕು ಎಂಬುದಾಗಿ ಒಪ್ಪಿಸಿ ಉತ್ತರ ಹೇಳಿದರು. ಪ್ರಕೃತ ಅಸದ್ವಿಷಯಕಅಪರೋಕ್ಷಜ್ಞಾನವನ್ನು ಒಪ್ಪದೇ ಇರಲು ಬೀಜವೇನು ? ಎಂದು ಪ್ರಶ್ನಿಸಿ ನಿರಾಕರಿಸುತ್ತಾರೆ -

**ಅಸದ್ವಿಷಯಕ ಅಪರೋಕ್ಷಜ್ಞಾನ ಒಪ್ಪಿದರೆ**
**ಎಲ್ಲ ಜ್ಞಾನಗಳಲ್ಲಿಯೂ ಅನಾಶ್ವಾಸಶಂಕೆ, ಅದರ ನಿರಾಕರಣೆ**

**ಟೀಕಾ: ಕಿಂನಿಬಂಧನಶ್ಚಾಯಮಸತೋಽಪರೋಕ್ಷಪ್ರತೀತಿಗೋಚರತಾಽ-ನಂಗೀಕಾರಃ । ಕ್ವಚಿದ್ಜ್ಞಾನಸ್ಯಾನಾಲಂಬನತ್ವೇಽನ್ಯತ್ರಾಪ್ಯನಾಶ್ವಾಸ**

**ಪ್ರಸಂಗ ಇತಿ ಚೇತ್ ತತ್ಕಿಂ ಪರೋಕ್ಷಪ್ರತೀತೇರಸದ್ವಿಷಯತ್ವೇ ನಾನಾಶ್ವಾಸಪ್ರಸಂಗಃ । ಸಮಾನಶ್ಚಾಯಂ ಪ್ರಸಂಗಃ ಪ್ರಾತಿಭಾಸಿಕವಿಷಯಪ್ರತ್ಯಯಾಂಗೀಕಾರೇಽಪಿ । ಬಾಧಕಾದ್ವಿವೇಕ ಇತಿ ಚೇತ್ ಸಮಂ ಪ್ರಕೃತೇಽಪಿ ।**

**ಅನುವಾದ :-** ಅಸತ್‌ಗೆ ಅಪರೋಕ್ಷಪ್ರತೀತಿವಿಷಯತ್ವವನ್ನು ಒಪ್ಪದಿರುವುದಕ್ಕೆ ಬೀಜವೇನು ? (ಯಾವ ಕಾರಣಕ್ಕೆ ಅಸತ್‌ಗೆ ಅಪರೋಕ್ಷಪ್ರತೀತಿವಿಷಯತ್ವವನ್ನು ಒಪ್ಪುತ್ತಿಲ್ಲ ನೀವು ?)

ಕೆಲವು ಜ್ಞಾನ ಅಸದ್ವಿಷಯಕ ಎಂದು ಅಂಗೀಕರಿಸಿದರೆ (ಅಸದ್ವಿಷಯಕ ಎಂದರೆ ನಿರ್ವಿಷಯಕ ಎಂದೇ ಪರ್ಯವಸಾನವಾಗಿ ಅಪ್ರಾಮಾಣ್ಯ ಬರುವುದರಿಂದ) ಇತರ ಜ್ಞಾನಗಳಲ್ಲಿಯೂ ಅನಾಶ್ವಾಸಪ್ರಸಂಗ (ಅಪ್ರಾಮಾಣ್ಯ-ಶಂಕೆ) ಬರುತ್ತದೆ. ಹಾಗಾದರೆ ಎಲ್ಲಿಯೂ ನಿಷ್ಕಂಪಪ್ರವೃತ್ತಿ ಕೂಡದೇ ಹೋಗಬೇಕಾಗುತ್ತದೆ. ಆದ್ದರಿಂದ ಅಸದ್ವಿಷಯಕಅಪರೋಕ್ಷಜ್ಞಾನ ಒಪ್ಪುವುದಿಲ್ಲ ಎನ್ನುವುದಾದರೆ,

ಅಸದ್ವಿಷಯಕಪರೋಕ್ಷಪ್ರತೀತಿ ಒಪ್ಪುವ ನಿಮ್ಮ ಪಕ್ಷದಲ್ಲಿ ಈ ವಿಧವಾದ ಅನಾಶ್ವಾಸಪ್ರಸಂಗ ಬರುವುದಿಲ್ಲವೇನು ? ಕೆಲವು ಪರೋಕ್ಷಜ್ಞಾನ ಅಸದ್ವಿಷಯಕ ಎಂದು ಅಂಗೀಕರಿಸಿದರೆ ಇತರಪರೋಕ್ಷಜ್ಞಾನಗಳಲ್ಲಿಯೂ ಅನಾಶ್ವಾಸಪ್ರಸಂಗ ಬಂದೇ ಬರುವುದಲ್ಲವೇ ? ಅರ್ಥಾತ್ ಅಸದ್ವಿಷಯಕಪರೋಕ್ಷಜ್ಞಾನವನ್ನು ಅಂಗೀಕರಿಸಿದರೆ ಕದಲೀಫಲವಿಷಯಕವಾದ ಪರೋಕ್ಷಜ್ಞಾನದಲ್ಲಿಯೂ ಅಸದ್ವಿಷಯಕತ್ವಶಂಕಾ ಬರುವುದರಿಂದ ಅಂತಹ ಕದಲೀಫಲವಿಷಯಕ ಪರೋಕ್ಷಜ್ಞಾನದಿಂದಲೂ ನಿಷ್ಕಂಪಪ್ರವೃತ್ತಿ ಆಗದೇ ಹೋಗಬೇಕಾಗುತ್ತದೆ ಎಂದು ಭಾವ.

ಮತ್ತು ಅಸದ್ವಿಷಯಕಪ್ರತೀತಿಯನ್ನು ಒಪ್ಪಿದರೆ ಇತರಪ್ರತೀತಿಗಳಲ್ಲಿಯೂ ಅನಾಶ್ವಾಸಪ್ರಸಂಗ ಬರುವಂತೆ, ಪ್ರಾತಿಭಾಸಿಕವಿಷಯಕಪ್ರತೀತಿಯನ್ನು ಒಪ್ಪಿದರೂ ಇತರ ಪ್ರತೀತಿಗಳಲ್ಲಿ ಅನಾಶ್ವಾಸಪ್ರಸಂಗ ಸಮಾನವೇ ಆಗಿದೆ. 'ಇದಂ ರಜತಂ' ಎಂಬ ಜ್ಞಾನ ಪ್ರಾತಿಭಾಸಿಕವಿಷಯಕ ಎನ್ನುವುದಾದರೆ 'ಅಯಂ ಘಟಃ' ಇತ್ಯಾದಿ ಜ್ಞಾನಗಳೂ ಪ್ರಾತಿಭಾಸಿಕವಿಷಯಕವಾಗಲಿ ಎಂಬ ಶಂಕೆ ಬಂದು ಅನಾಶ್ವಾಸಪ್ರಸಂಗ ಬರುವುದರಿಂದ 'ಅಯಂ ಘಟಃ' ಇತ್ಯಾದಿ

ಜ್ಞಾನಗಳಿಂದಲೂ ನಿಷ್ಕಂಪಪ್ರವೃತ್ತಿ ಆಗದೇ ಹೋಗಬೇಕಾದ ಅತಿಪ್ರಸಂಗ ಬಂದೇ ಬರುತ್ತದೆ ಎಂದು ಭಾವ.

ರಜತಜ್ಞಾನಕ್ಕೆ 'ನೇದಂ ರಜತಂ' ಎಂದು ಬಾಧಕಜ್ಞಾನ ಬರುತ್ತದೆ. ಘಟಾದಿಜ್ಞಾನಕ್ಕೆ ಹಾಗೆ ಬಾಧಕಜ್ಞಾನ ಬರುವುದಿಲ್ಲ. ಹಾಗಾಗಿ ಘಟಾದಿಜ್ಞಾನದಲ್ಲಿ ಬಾಧಕಜ್ಞಾನ ಇಲ್ಲವಾದ್ದರಿಂದ ವಿಶ್ವಾಸ ಮಾಡುತ್ತೇವೆ, ರಜತಜ್ಞಾನದಲ್ಲಿ ಬಾಧಕಜ್ಞಾನ ಇರುವುದರಿಂದ ವಿಶ್ವಾಸ ಮಾಡುವುದಿಲ್ಲ. ಹೀಗೆ ವಿವೇಕ ಯುಕ್ತವಾಗಿದೆ ಎಂದರೆ,

ಅಸದ್ವಿಷಯಕಅಪರೋಕ್ಷಜ್ಞಾನಪಕ್ಷದಲ್ಲಿಯೂ ಈ ವಿವೇಕ ಸಮಾನವೇ ಆಗಿದೆ.

ಅಸದ್ವಿಷಯಕಅಪರೋಕ್ಷಜ್ಞಾನವನ್ನು ಅಂಗೀಕರಿಸಿದಾಗಲೂ ಸಹ ಘಟಾದಿ ವಿಷಯಕಅಪರೋಕ್ಷಜ್ಞಾನದಲ್ಲಿಯೂ ಅಸದ್ವಿಷಯಕತ್ವಶಂಕೆ ಉಂಟಾಗಿ ಅನಾಶ್ವಾಸಪ್ರಸಂಗ ಬರುವುದಿಲ್ಲ. ಕಾರಣ- ರಜತಜ್ಞಾನದಲ್ಲಿ ಬಾಧಕ ಇರುವುದರಿಂದ ಅನಾಶ್ವಾಸ, ಘಟಾದಿಜ್ಞಾನಗಳಲ್ಲಿ ಬಾಧಕ ಇಲ್ಲದಿರುವುದರಿಂದ ವಿಶ್ವಾಸ ಎಂಬ ಈ ವಿಧವಾದ ವಿವೇಕ ಯುಕ್ತವೇ ಆಗಿದೆ ಎಂದು ಭಾವ.

**ಅವತಾರಿಕೆ :-** ಅಸದ್ವಿಷಯಕಜ್ಞಾನವನ್ನು ಅಂಗೀಕರಿಸಿದರೆ ಶೂನ್ಯವಾದಿಗಳು ಒಪ್ಪುವ ಜ್ಞಾನನಿರಾಲಂಬನತ್ವವನ್ನು (ನಿರ್ವಿಷಯಕಜ್ಞಾನವನ್ನು) ಒಪ್ಪಿದಂತಾಯಿತಲ್ಲವೇ ? ಎಂಬುದಾಗಿ ಆಕ್ಷೇಪ ಬಂದರೆ, ಅದಕ್ಕೆ ಉತ್ತರ ಹೇಳುತ್ತಾರೆ -

### ರಜತಜ್ಞಾನಕ್ಕೆ ಸವಿಷಯಕತ್ವಸಮರ್ಥನೆ

**ಟೀಕಾ : ನ ಚ ವಯಂ ಶೂನ್ಯವಾದಿನ ಇವ ರಜತಜ್ಞಾನಂ ನಿರಾಲಂಬನಂ ಬ್ರೂಮಃ । ಶುಕ್ತಿವಿಷಯತಾಂಗೀಕಾರಾತ್ । ಕೇವಲಂ ಸ್ವವಿಷಯಂ ಶುಕ್ತಿಕಾಶಕಲಮತ್ಯಂತಾಸದ್ರಜತತಯಾ ಅವಗಾಹತ ಇತ್ಯಸದ್ವಿಷಯಮುಚ್ಯತೇ ।**

**ರಜತಜ್ಞಾನಸ್ಯ ಶುಕ್ತಿಕಾವಿಷಯತ್ವಂ ಸಂವಿದ್ವಿರುದ್ಧಮಿತಿ ಚೇನ್ನ । ರಜತಜ್ಞಾನಸ್ಯೇತಿ ಕೋಽರ್ಥಃ ? ಯದಿ ರಜತವಿಷಯಸ್ಯೇತಿ ತದಾಽಸಿದ್ಧಿಃ । ಯದಿ ರಜತಮಿತಿ ಜ್ಞಾನಸ್ಯೇತಿ ತದಾ ಪರಸ್ಯೈವ ಸಂವಿದ್ವಿರೋಧಃ । ಯದಿದಂ ರಜತಮಿತ್ಯಮನಿಷಿ ಸಾ ಶುಕ್ತಿಕೈವೇತಿ ಪ್ರತೀತೇಃ । ಯದಾಕಾರಂ ಯದ್ವಿಜ್ಞಾನಂ ತತ್ತದ್ವಿಷಯಮಿತಿ ತು ಪ್ರಮಿತಿನಿಷ್ಠೇಯಂ ವ್ಯವಸ್ಥಾ ।**

**ಅನುವಾದ :-** ಶೂನ್ಯವಾದಿಗಳು ಜ್ಞಾನವನ್ನು ನಿರ್ವಿಷಯಕ ಎಂದು ಹೇಳುವಂತೆ ನಾವು ರಜತಜ್ಞಾನವನ್ನು ('ಇದಂ ರಜತಂ' ಎಂಬ ಭ್ರಮಜ್ಞಾನವನ್ನು) ನಿರ್ವಿಷಯಕ ಎಂದು ಹೇಳುವುದಿಲ್ಲ. ಕಿಂತು ಶುಕ್ತಿವಿಷಯಕ ಎಂದು ಅಂಗೀಕರಿಸುತ್ತೇವೆ. ರಜತಜ್ಞಾನವು ಶುಕ್ತಿವಿಷಯಕವಾಗಿದೆ ಎನ್ನುವುದಾದರೆ ಅಸದ್ವಿಷಯ ಎಂದು ಯಾಕೆ ಹೇಳುತ್ತೀರಿ ? ಎಂದರೆ, ಶುಕ್ತಿಜ್ಞಾನವು ತನ್ನಲ್ಲಿ ವಿಷಯವಾದ ಶುಕ್ತಿಯನ್ನೇ ಅತ್ಯಂತಅಸತ್‌ರಜತ ಎಂಬುದಾಗಿ ವಿಷಯೀಕರಿಸುತ್ತದೆ ಎನ್ನುವ ಕಾರಣಕ್ಕೆ ಶುಕ್ತಿಜ್ಞಾನವನ್ನು ಅಸದ್ವಿಷಯಕ ಎಂದು ಹೇಳುವುದಷ್ಟೇ. (ವಾಸ್ತವಿಕವಾಗಿ ಸತ್ ಆದ ಶುಕ್ತಿಯೇ ಅಲ್ಲಿ ವಿಷಯ, ಹೊರತು ಅಸತ್ ಆದ ರಜತವು ವಿಷಯವಲ್ಲ ಎಂದು ಭಾವ.)

ರಜತಜ್ಞಾನವು ಶುಕ್ತಿವಿಷಯಕವಾಗಿದೆ ಎಂದು ಹೇಳುವುದು ಸರಿಯಲ್ಲ. ಯಾವುದೋ ಜ್ಞಾನದಲ್ಲಿ ಮತ್ಯಾವುದೋ ವಿಷಯವಾಗಿದೆ ಎಂದರೆ ಅದು ಸಂವಿತ್ಸ್ವಭಾವಕ್ಕೆ [೧]ವಿರುದ್ಧವಾಗುತ್ತದೆ. ಅಥವಾ 'ರಜತಜ್ಞಾನವಾನ್ ಅಹಂ' ಎಂಬ ರಜತಜ್ಞಾನವಿಷಯಕಅನುವ್ಯವಸಾಯರೂಪಸಂವಿದ್ವಿರುದ್ಧವಾಗುತ್ತದೆ (ಅನುವ್ಯವಸಾಯದಲ್ಲಿ ಜ್ಞಾನವು ರಜತವಿಷಯಕವಾಗಿದೆ ಎಂದೇ ತೋರುವುದರಿಂದ, ರಜತಜ್ಞಾನಕ್ಕೆ ಶುಕ್ತಿವಿಷಯಕತ್ವವು ಅನುವ್ಯವಸಾಯ-ವಿರುದ್ಧವಾಗುತ್ತದೆ) ಅಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ವಿಕಲ್ಪ ಮಾಡುವ ಮೂಲಕ ಅದಕ್ಕೆ ಉತ್ತರ ಹೇಳುತ್ತಾರೆ -

---

೧ ಭಾಸಮಾನತ್ವದಿಂದ ಅತಿರಿಕ್ತವಾದ ವಿಷಯತ್ವ ಇಲ್ಲವಾದ್ದರಿಂದ (ಭಾಸಮಾನತ್ವವೇ ವಿಷಯತ್ವ ಆದ್ದರಿಂದ) ಅನ್ಯಾವಭಾಸಿಜ್ಞಾನದಲ್ಲಿ ಅನ್ಯಾವಭಾಸನವು ಸಂವಿದ್ವಿರುದ್ಧವಾಗುತ್ತದೆ. ಈ ಸಂವಿದ್ವಿರೋಧದ ಸ್ವರೂಪವನ್ನು 'ನಯವೀಥೀ' ಗ್ರಂಥದಲ್ಲಿ ಹೀಗೆ ಸ್ಪಷ್ಟಪಡಿಸಿದ್ದಾರೆ -

ಅತ್ರ ಬ್ರೂಮೋ ಯ ಏವಾರ್ಥೋ ಯಸ್ಯಾಂ ಸಂವಿದಿ ಭಾಸತೇ ।
ವೇದ್ಯಃ ಸ ಏವ ನಾನ್ಯಃ ಸ್ಯಾದ್ವೇದ್ಯಂ ವೇದ್ಯಸ್ಯ ಲಕ್ಷಣಮ್ ॥
ಇದಂ ರಜತಮಿತ್ಯತ್ರ ರಜತಂ ಚಾವಭಾಸತೇ ।
ತದೇವ ತೇನ ವೇದ್ಯಂ ಸ್ಯಾನ್ನ ಚ ಶುಕ್ತಿರವೇದನಾತ್ ॥
ತೇನಾನ್ಯಸ್ಯಾನ್ಯಥಾ ಭಾನಂ ಪ್ರತೀತ್ಯೈವ ಪರಾಹತಮ್ ।
ಪರಸ್ಮಿನ್ ಭಾಸಮಾನೇ ಹಿ ನ ಪರಂ ಭಾಸತೇ ಯತಃ ॥

(ಶ್ರೀಪಾಂಡುರಂಗೀ ಕೇಶವಾಚಾರ್ಯರ ಟಿಪ್ಪಣೀ)

ರಜತಜ್ಞಾನಕ್ಕೆ ಶುಕ್ತಿವಿಷಯಕತ್ವವು ಸಂವಿದ್ವಿರುದ್ಧ ಎನ್ನುತ್ತೀರಲ್ಲ, ರಜತಜ್ಞಾನಕ್ಕೆ ಎಂದರೆ ಅರ್ಥವೇನು ? ರಜತವಿಷಯಕಜ್ಞಾನಕ್ಕೆ ಎಂದು ಅರ್ಥ ಹೇಳುವುದಾದರೆ (ರಜತವಿಷಯಕಜ್ಞಾನಕ್ಕೆ ಶುಕ್ತಿವಿಷಯಕತ್ವವು ಸಂವಿದ್ವಿರುದ್ಧ ಎನ್ನುವುದಾದರೆ), ಅದು ಅಸಿದ್ಧ.

**''ಯತ್ಸನ್ನಿಕೃಷ್ಟಕರಣೇನ ಯತ್ ಜ್ಞಾನಂ ಜಾಯತೇ ಸ ತಸ್ಯ ವಿಷಯಃ''**

ಎಂಬುದಾಗಿ ವಿಷಯತ್ವದ ಪರಿಷ್ಕಾರ ಹೇಳುವುದರಿಂದ, ಜ್ಞಾನಜನಕ-ಸನ್ನಿಕರ್ಷಪ್ರತಿಯೋಗಿತ್ವರೂಪವಾದ ವಿಷಯತ್ವವು ರಜತದಲ್ಲಿ ಇಲ್ಲವಾದ್ದರಿಂದ ಜ್ಞಾನದಲ್ಲಿ ರಜತವಿಷಯಕತ್ವವೇ ಅಸಿದ್ಧ ಎಂದು ಭಾವ.

ರಜತಜ್ಞಾನಕ್ಕೆ ಎಂದರೆ 'ರಜತಂ' ಎಂಬ ಜ್ಞಾನಕ್ಕೆ ಎಂದರ್ಥ. ಅರ್ಥಾತ್ ರಜತೋಲ್ಲೇಖಿಜ್ಞಾನಕ್ಕೆ (ರಜತಾಕಾರಜ್ಞಾನಕ್ಕೆ) ಎಂದು ಅರ್ಥ ಎನ್ನುವುದಾದರೆ, ನಿಮಗೇ ಸಂವಿದ್ವಿರೋಧ ಬರುತ್ತದೆ.

**'ಯದಿದಂ ರಜತಮಿತ್ಯಮನಿಷಿ ಸಾ ಶುಕ್ತಿಕೈವ'**

(ನಾನು ಏನು 'ಇದು ರಜತ' ಎಂದು ತಿಳಿದಿದ್ದೆ, ಅದು ನಿಜವಾಗಿ ರಜತವಲ್ಲ, ಶುಕ್ತಿಯೇ ಅದು) ಎಂಬುದಾಗಿ ಪ್ರತೀತಿ (ಅನುಭವ) ಬರುವುದರಿಂದ, 'ರಜತಂ ಎಂಬ ಜ್ಞಾನ' 'ರಜತೋಲ್ಲೇಖಿಜ್ಞಾನ' ಎಂದರೆ ಅಲ್ಲಿ ರಜತವು ಕೇವಲ ಉಲ್ಲಿಖಿತ, ನಿಜವಾಗಿ ವಿಷಯವಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ. ಹಾಗಾಗಿ ರಜತೋಲ್ಲೇಖಿಜ್ಞಾನದಲ್ಲಿ ಶುಕ್ತಿ ವಿಷಯವಾಗಿದೆ ಎಂದು ಹೇಳಿದರೆ ಯಾವುದೇ ಸಂವಿದ್ವಿರೋಧ ಬರುವುದಿಲ್ಲ ಎಂದು ಭಾವ.

ಹೌದು, ಜ್ಞಾನವು ರಜತಾಕಾರವಾಗಿದೆ ಎಂದು ಹೇಳುವುದಾದರೆ ಜ್ಞಾನಕ್ಕೆ ರಜತವಿಷಯಕತ್ವವು ದುರ್ವಾರವಾಗುತ್ತದೆ. ಯಾಕೆಂದರೆ -

**''ಯದಾಕಾರಂ ಯತ್ಜ್ಞಾನಂ (ಯದ್ವಿಜ್ಞಾನಂ ಯದುಲ್ಲೇಖಿ) ತತ್ ತದ್ವಿಷಯಮ್''**

''ಯಾವ ಜ್ಞಾನದಲ್ಲಿ ಯಾವುದು (ಉಲ್ಲಿಖಿತವಾಗಿರುವುದೋ) ಆಕಾರ-ವಾಗಿರುವುದೋ ಅದು ಆ ಜ್ಞಾನಕ್ಕೆ ವಿಷಯ'' ಎಂಬುದಾಗಿ ವ್ಯಾಪ್ತಿ ಇರುವುದರಿಂದ, ರಜತಜ್ಞಾನಕ್ಕೆ ರಜತೋಲ್ಲೇಖಿತ್ವರೂಪವಾದ ರಜತಾಕಾರತ್ವ ಹೇಳುವುದಾದರೆ ರಜತವಿಷಯಕತ್ವವು ದುರ್ವಾರವಾಗುತ್ತದೆಯಲ್ಲವೇ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ -

**''ಯದಾಕಾರಂ ಯತ್ ಜ್ಞಾನಂ (ಯದ್ವಿಜ್ಞಾನಂ ಯದುಲ್ಲೇಖಿ) ತತ್ ತದ್ವಿಷಯಂ''**

ಎಂಬ ನೀವು ಹೇಳಿದ ವ್ಯಾಪ್ತಿಯು ಪ್ರಮಾಮಾತ್ರನಿಷ್ಠವಾದದ್ದು. (ಯಥಾರ್ಥಜ್ಞಾನಕ್ಕೆ ಮಾತ್ರ ಸಂಬಂಧಪಟ್ಟದ್ದು.) ಪ್ರಕೃತ ರಜತಜ್ಞಾನವು ಪ್ರಮಾ ಅಲ್ಲ. ಭ್ರಮರೂಪಜ್ಞಾನವಾಗಿದೆ. ಆದ್ದರಿಂದ 'ಯದಾಕಾರಂ ಯತ್ ವಿಜ್ಞಾನಂ.....' ಎಂಬ ವ್ಯಾಪ್ತಿಯು ರಜತಜ್ಞಾನಕ್ಕೆ ಸಂಬಂಧಪಡುವುದಿಲ್ಲ. ಭ್ರಮದಲ್ಲಿಯಾದರೂ ಅನ್ಯೋಲ್ಲೇಖಿತ್ವ ಇದ್ದರೂ ಸಹ ಅನ್ಯವಿಷಯಕತ್ವವು ಸಂಭವಿಸುವುದರಿಂದ, ರಜತಜ್ಞಾನವು ರಜತೋಲ್ಲೇಖಿಯಾಗಿದ್ದರೂ ಅನ್ಯ (ಶುಕ್ತಿ) ವಿಷಯಕ ಆಗಬಹುದಾಗಿದೆ. ಹಾಗಾಗಿ ಸಂವಿದ್ವಿರೋಧ ಬರುವುದಿಲ್ಲ.

ಅಂದಮೇಲೆ ಶೂನ್ಯವಾದಿಗಳು ಹೇಳುವಂತೆ ರಜತಜ್ಞಾನವನ್ನು ನಾವು ನಿರ್ವಿಷಯಕ ಎಂದು ಹೇಳುವುದಿಲ್ಲ. ಕಿಂತು ಶುಕ್ತಿವಿಷಯಕ ಎಂದೇ ಹೇಳುತ್ತೇವೆ. ಹಾಗಾಗಿ ''ಅಸದ್ವಿಷಯಕಜ್ಞಾನವನ್ನು ಅಂಗೀಕರಿಸಿದರೆ ಶೂನ್ಯವಾದಿಗಳು ಒಪ್ಪುವ ಜ್ಞಾನನಿರಾಲಂಬನತ್ವವನ್ನು (ನಿರ್ವಿಷಯಕಜ್ಞಾನವನ್ನು) ಒಪ್ಪಿದಂತಾಯಿತು'' ಎಂಬ ಅತಿಪ್ರಸಂಗ ನಮಗೆ ಬರುವುದಿಲ್ಲ ಎಂದು ಅಭಿಪ್ರಾಯ.

**ಟೀಕಾಃ ಏತೇನ ಅಪರೋಕ್ಷಜ್ಞಾನಸ್ಯೇಂದ್ರಿಯಸಮುತ್ಥತ್ವಾತ್, ಇಂದ್ರಿಯಾಣಾಂ ಚಾರ್ಥಸನ್ನಿಕೃಷ್ಟಾನಾಮೇವ ಜ್ಞಾನಹೇತುತ್ವಾತ್, ಅಸತಾ ಚ ಸನ್ನಿಕರ್ಷಾಯೋಗಾನ್ನಾಸದ್ವಿಷಯಾಪರೋಕ್ಷಜ್ಞಾನಂ ಇತಿ ಪರಾಸ್ತಮ್ । ಶುಕ್ತಿಸನ್ನಿಕೃಷ್ಟೇನೇಂದ್ರಿಯೇಣ ದೋಷವಶಾತ್ ರಜತತಯಾ ತಜ್ಞಾನಜನನಾಂಗೀಕಾರಾತ್ ।**

**ಅನುವಾದಃ-** ''ಅಪರೋಕ್ಷಜ್ಞಾನವು ಇಂದ್ರಿಯಗಳಿಂದ ಹುಟ್ಟುವಂತಹದ್ದಾಗಿದೆ. ಇಂದ್ರಿಯಗಳಾದರೋ ಪದಾರ್ಥದಿಂದ ಸನ್ನಿಕೃಷ್ಟವಾಗಿಯೇ ಜ್ಞಾನವನ್ನು ಹುಟ್ಟಿಸುತ್ತವೆ. ಅಸತ್ ಆದ ರಜತಾದಿಗಳೊಂದಿಗೆ ಇಂದ್ರಿಯಸನ್ನಿಕರ್ಷ ಆಗಲು ಸಾಧ್ಯವಿಲ್ಲವಾದ್ದರಿಂದ ಅಸದ್ವಿಷಯಕ ಅಪರೋಕ್ಷಜ್ಞಾನವೇ ಇಲ್ಲ''

ಎಂಬುದಾಗಿ ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ''ರಜತಜ್ಞಾನವು (ಭ್ರಮವು) ಶುಕ್ತಿವಿಷಯಕವಾಗಿದೆ'' ಎಂದು ಹೇಳುವುದರಿಂದಲೇನೇ ಕೆಲವರ ಆ ಅಭಿಪ್ರಾಯ ನಿರಾಕೃತವಾದಂತೆ ಆಗುತ್ತದೆ.

**''ಕೇವಲಂ ಸ್ವವಿಷಯಂ ಶುಕ್ತಿಕಾಶಕಲಂ ಅತ್ಯಂತಾಸದ್ರಜತತಯಾ ಅವಗಾಹತೇ ಇತಿ ಅಸದ್ವಿಷಯಮುಚ್ಯತೇ''**

ಎಂಬುದಾಗಿ ಈ ಶಂಕೆಗೆ ಹಿಂದೆ ಸಮಾಧಾನ ಹೇಳಿಯಾಗಿದೆ. ಶುಕ್ತಿಸನ್ನಿಕೃಷ್ಟವಾದ ಇಂದ್ರಿಯದಿಂದಲೇ ಸಾದೃಶ್ಯರೂಪದೋಷವಶಾತ್ 'ಇದಂ ರಜತಂ' ಎಂಬುದಾಗಿ ರಜತಜ್ಞಾನ ಹುಟ್ಟುತ್ತದೆ ಎಂದು ಅಂಗೀಕರಿಸುತ್ತೇವೆ. ರಜತರೂಪವಾದ ಅಸತ್‌ಗೆ ಸನ್ನಿಕರ್ಷಪ್ರತಿಯೋಗಿತ್ವರೂಪವಾದ ವಿಷಯತ್ವ ಇಲ್ಲದಿದ್ದರೂ ಉಲ್ಲಿಖಿತತ್ವರೂಪವಾದ ವಿಷಯತ್ವ ಇದೆಯಾದ್ದರಿಂದ ಅಸದ್ವಿಷಯಕಅಪರೋಕ್ಷಜ್ಞಾನ ಕೂಡಿಸಬಹುದು ಎಂದು ಅಭಿಪ್ರಾಯ.

**ಅವತಾರಿಕೆ :-** ಹಿಂದೆ ಅರ್ಥಾಪತ್ತಿಯನ್ನು ನಿರಾಕರಿಸುವಾಗ, ಬಾಧಾನ್ಯಥಾನುಪಪತ್ತಿಯಿಂದ ಸದ್ವೈಲಕ್ಷಣ್ಯವನ್ನು ಹೇಳಬೇಕಾದರೆ

**''ಯತ್ ಸತ್ ತನ್ನ ಬಾಧ್ಯತೇ''**

ಎಂಬುದಾಗಿ ವ್ಯಾಪ್ತಿ ಮೂಲಭೂತವಾಗಿ ಇರಬೇಕು. ಆದರೆ ಪಾರಮಾರ್ಥಿಕಸತ್ ಆದ ಬ್ರಹ್ಮನಿಗೂ ಸಹ ''ಅನ್ಯಥಾವಿಜ್ಞಾತಸ್ಯ ಸಮ್ಯಗ್ ವಿಜ್ಞಾನಗೋಚರತ್ವ'' ರೂಪವಾದ ಬಾಧವನ್ನು ಹೇಳಬಹುದಾದ್ದರಿಂದ ''ಯತ್ ಸತ್ ತನ್ನ ಬಾಧ್ಯತೇ'' ಎಂಬ ವ್ಯಾಪ್ತಿಯೇ ಇಲ್ಲ. ವ್ಯಾಪ್ತಿ ಇಲ್ಲವಾದ್ದರಿಂದ ಅರ್ಥಾಪತ್ತಿ ಸಾಧಕವಾಗುವುದಿಲ್ಲ ಎಂಬುದಾಗಿ ಹೇಳಿ ನಿರಾಕರಿಸಿದ್ದರು. ಈಗ ಅದರಮೇಲೆ ಶಂಕಿಸಿಕೊಂಡು ಉತ್ತರ ಕೊಡುತ್ತಾರೆ -

### ವಿಯದಾದಿಜಗತ್ತಿಗೆ ಜ್ಞಾನನಿವರ್ತ್ಯತ್ವವು ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲ

**ಟೀಕಾ : ನ ವಯಮನ್ಯಥಾವಿಜ್ಞಾತಸ್ಯ ಸಮ್ಯಗ್ವಿಜ್ಞಾನಗೋಚರತ್ವಂ ಬಾಧ್ಯತ್ವಂ ಬ್ರೂಮಃ । ಯೇನ ಸತಸ್ತದಸ್ತೀತಿ ವ್ಯಾಪ್ತಿಭಂಗಃ ಸ್ಯಾತ್ । ಕಿಂ ನಾಮ ಜ್ಞಾನನಿವರ್ತ್ಯತ್ವಮಿತ್ಯತ ಆಹ -**

**ಮೂಲ - ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್ ।**

**ನ ತಾವಜ್ಜ್ಞಾನನಿವರ್ತ್ಯತ್ವಮಂಬರಾದೌ ಪ್ರತ್ಯಕ್ಷಸಿದ್ಧಮ್ । ಅಪ್ರತೀತೇಃ । ನ ಚಾನಿರ್ವಚನೀಯತ್ವಹೇತುಸಿದ್ಧಮ್ । ಪರಸ್ಪರಾಶ್ರಯಪ್ರಸಂಗಾತ್ । ದೃಶ್ಯತ್ವಾದಯಸ್ತು ನಿರಸಿಷ್ಯಂತೇ ।**

**'ಜ್ಞಾತೇ ದ್ವೈತಂ ನ ವಿದ್ಯತೇ' ಇತ್ಯಾದ್ಯಾಗಮಸ್ಯಾನ್ಯಪರತ್ವಮನ್ಯತ್ರೋಪಪಾದಿತಮ್ । ಜ್ಞಾನಾನ್ಮೋಕ್ಷಾಭಿಧಾನಂ ಚಾನ್ಯಥೈವೋಪಪಾದಿತಮ್ । ಅತೋ ಜ್ಞಾನನಿವರ್ತ್ಯತ್ವಂ ಚೇದ್ಬಾಧ್ಯತ್ವಂ ತರ್ಹಿ ತಸ್ಯ ವಿಯದಾದಾವಭಾವಾತ್ ಕಸ್ಯಾನುಪಪತ್ಯಾ ತತ್ರ ಸದ್ವಿಲಕ್ಷಣತ್ವಪ್ರತಿಪತ್ತಿಃ ಸ್ಯಾತ್ ।**

**ಅನುವಾದ :-** ನಾವು ''ಅನ್ಯಥಾವಿಜ್ಞಾತಸ್ಯ ಸಮ್ಯಗ್‌ವಿಜ್ಞಾನಗೋಚರತ್ವಂ ಬಾಧ್ಯತ್ವಮ್'' ಎಂಬುದಾಗಿ ಬಾಧದ ಲಕ್ಷಣವನ್ನು ಹೇಳುವುದಿಲ್ಲ. ಒಂದುವೇಳೆ ಹಾಗೆ ಹೇಳುತ್ತಿದ್ದರೆ ಆಗ ಹಿಂದೆ ಹೇಳಿದಂತೆ ಪಾರಮಾರ್ಥಿಕಸತ್ ಆದ ಬ್ರಹ್ಮನಿಗೂ ಅಂತಹ ''ಅನ್ಯಥಾವಿಜ್ಞಾತಸ್ಯ ಸಮ್ಯಗ್ವಿಜ್ಞಾನಗೋಚರತ್ವ'' ರೂಪವಾದ ಬಾಧ್ಯತ್ವ ಬರುವುದರಿಂದ ವ್ಯಾಪ್ತಿಭಂಗ ಆಗುತ್ತಿತ್ತು. (''ಯತ್ ಸತ್ ತತ್ ನ ಬಾಧ್ಯತೇ'' ಎಂಬ ವ್ಯಾಪ್ತಿಗೆ ಆತ್ಮನಲ್ಲಿ ಭಂಗ ಬರುತ್ತಿತ್ತು.)

ಕಿಂತು ''ಜ್ಞಾನನಿವರ್ತ್ಯತ್ವಂ ಬಾಧ್ಯತ್ವಂ'' ಎಂಬುದಾಗಿ ಹೇಳುತ್ತೇವೆ. ಪಾರಮಾರ್ಥಿಕಸತ್ ಆದ ಬ್ರಹ್ಮನಲ್ಲಿ ಜ್ಞಾನನಿವರ್ತ್ಯತ್ವ ಇಲ್ಲ. ಆದ್ದರಿಂದ ''ಯತ್ ಸತ್ ತತ್ ನ ಬಾಧ್ಯತೇ'' ಎಂಬ ವ್ಯಾಪ್ತಿಗೆ ಭಂಗ ಬರುವುದಿಲ್ಲ.

ಪ್ರಕೃತ ಜಗತ್ತಿನಲ್ಲಿ ಜ್ಞಾನನಿವರ್ತ್ಯತ್ವ ಇದೆ. (ರಜತವು ಶುಕ್ತಿಜ್ಞಾನದಿಂದ ನಿವರ್ತ್ಯವಾಗುವಂತೆ ಜಗತ್ತು ಬ್ರಹ್ಮಜ್ಞಾನದಿಂದ ನಿವರ್ತ್ಯವಾಗುತ್ತದೆ.) 'ಜ್ಞಾನನಿವರ್ತ್ಯತ್ವ ಇರುವುದರಿಂದ ಜಗತ್ತು ಸತ್ ಅಲ್ಲ' ಎಂದು ಹೇಳುತ್ತೇವೆ. (ಜ್ಞಾನನಿವರ್ತ್ಯತ್ವಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದ್ವೈಲಕ್ಷಣ್ಯ ಹೇಳುತ್ತೇವೆ.)

ಈ ರೀತಿಯಾಗಿ ಶಂಕೆ ಬಂದರೆ, ಅದನ್ನು ನಿರಾಕರಿಸುತ್ತಾರೆ -

ಮೂಲ - ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್ ।

**ಮೂಲಾರ್ಥ :-** ಜಗತ್ತು ಬಾಧ್ಯವಾಗಿದೆ (ಜ್ಞಾನನಿವರ್ತ್ಯವಾಗಿದೆ) ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ.

''ಜಗತ್ತಿನಲ್ಲಿ ಜ್ಞಾನನಿವರ್ತ್ಯತ್ವ ಇದೆ. ಜ್ಞಾನನಿವರ್ತ್ಯತ್ವ ಇರುವುದರಿಂದ ಜಗತ್ತು ಸತ್ ಅಲ್ಲ'' ಎಂಬುದಾಗಿ ಹೇಳುವುದು ಸರಿಯಲ್ಲ. ಏಕೆಂದರೆ - ಜಗತ್ತಿನಲ್ಲಿ ಜ್ಞಾನನಿವರ್ತ್ಯತ್ವ ಇದೆ ಎಂಬುವುದು ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲ. ಅದು ಹೇಗೆಂದರೆ :-

**ಪ್ರಮಾಣ 1) ಪ್ರತ್ಯಕ್ಷ**

ಅಂಬರಾದಿ ಜಗತ್ತಿನಲ್ಲಿ ಜ್ಞಾನನಿವರ್ತ್ಯತ್ವವು ಪ್ರತ್ಯಕ್ಷಸಿದ್ಧವಾಗಿಲ್ಲ. ಅಂಬರಾದಿ ಜಗತ್ತಿನ ವಿಷಯದಲ್ಲಿ 'ಇದು ಜ್ಞಾನನಿವರ್ತ್ಯವಾಗಿದೆ' ಎಂಬುದಾಗಿ ಯಾರಿಗೂ ಪ್ರತೀತಿ ಬರುವುದಿಲ್ಲ. ಹಾಗಾಗಿ ಜ್ಞಾನನಿವರ್ತ್ಯತ್ವವು ಪ್ರತ್ಯಕ್ಷಸಿದ್ಧವಾಗಿಲ್ಲ.

**ಪ್ರಮಾಣ 2) ಅನುಮಾನ**

ಜ್ಞಾನನಿವರ್ತ್ಯತ್ವವು ಪ್ರತ್ಯಕ್ಷಸಿದ್ಧವಾಗದೇ ಹೋದರೂ ಅನುಮಾನಸಿದ್ಧ-ವಾಗಬಹುದು.

**''ಅಂಬರಾದಿಕಂ ಜ್ಞಾನನಿವರ್ತ್ಯಂ ಅನಿರ್ವಚನೀಯತ್ವಾತ್''**

ಎಂಬುದಾಗಿ ಅನಿರ್ವಚನೀಯತ್ವ ಹೇತುವಿನಿಂದ ಅಂಬರಾದಿಗಳಿಗೆ ಜ್ಞಾನನಿವರ್ತ್ಯತ್ವವನ್ನು ಸಾಧಿಸಬಹುದಲ್ಲವೇ ? ಎಂದು ಹೇಳುವುದು ಸರಿಯಲ್ಲ. ಏಕೆಂದರೆ - ಅಂಬರಾದಿಗಳಲ್ಲಿ ಅನಿರ್ವಚನೀಯತ್ವವು ಸಿದ್ಧವಾದರೆ ಅದರಿಂದ ಬಾಧ್ಯತ್ವವು ಸಿದ್ಧವಾಗುತ್ತದೆ. ಬಾಧ್ಯತ್ವವು ಸಿದ್ಧವಾದರೆ ತದನ್ಯಥಾನು-ಪಪತ್ತಿಯಿಂದ (ಸದ್ವೈಲಕ್ಷಣ್ಯವು) ಅನಿರ್ವಚನೀಯತ್ವವು ಸಿದ್ಧವಾಗುತ್ತದೆ. ಹೀಗೆ ಪರಸ್ಪರಾಶ್ರಯ (ಅನ್ಯೋನ್ಯಾಶ್ರಯ) ಪ್ರಸಂಗ ಇರುವುದರಿಂದ ಅನಿರ್ವಚನೀಯತ್ವ ಹೇತುವಿನಿಂದ ಜ್ಞಾನನಿವರ್ತ್ಯತ್ವವನ್ನು ಸಾಧಿಸುವುದು ಸರಿಯಲ್ಲ.

ಹಾಗಲ್ಲ ಅನಿರ್ವಚನೀಯತ್ವದಿಂದ ಬಾಧ್ಯತ್ವ ಸಿದ್ಧವಾಗುತ್ತದೆಯಾದರೂ, ಬಾಧ್ಯತ್ವದಿಂದ ಅನಿರ್ವಚನೀಯತ್ವ ಸಿದ್ಧವಾಗಬೇಕಾದ ಪ್ರಸಂಗ ಇಲ್ಲ. ಕಿಂತು

**''ಅಂಬರಾದಿಕಂ ಅನಿರ್ವಚನೀಯಂ ದೃಶ್ಯತ್ವಾತ್''**

ಎಂಬುದಾಗಿ ದೃಶ್ಯತ್ವಾದಿಹೇತುಗಳಿಂದ ಅನಿರ್ವಚನೀಯತ್ವ ಸಿದ್ಧವಾಗುತ್ತದೆ. ಆ ಅನಿರ್ವಚನೀಯತ್ವದಿಂದ ಜ್ಞಾನನಿವರ್ತ್ಯತ್ವ ಸಿದ್ಧವಾಗುತ್ತದೆ. ಆದ್ದರಿಂದ ಅನ್ಯೋನ್ಯಾಶ್ರಯಪ್ರಸಂಗ ಬರುವುದಿಲ್ಲ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ- ದೃಶ್ಯತ್ವಾದಿಹೇತುಗಳು ನಿರ್ದುಷ್ಟವಾಗಿದ್ದರೆ ಆಗ ಆ ದೃಶ್ಯತ್ವಾದಿಹೇತುಗಳಿಂದ ಅನಿರ್ವಚನೀಯತ್ವ ಸಿದ್ಧವಾಗುತ್ತಿತ್ತು. ಆದರೆ ದೃಶ್ಯತ್ವಾದಿ ಹೇತುಗಳೇ ನಿರ್ದುಷ್ಟವಲ್ಲ.

**''ದೃಶ್ಯತ್ವಾದ್ಯನುಮಾನೇಷ್ವಪ್ಯೇತ ಏವ ದೋಷಾಃ''**

ಎಂಬುದಾಗಿ ಮುಂದೆ ಅನೇಕದೋಷಗಳನ್ನು ಹೇಳಿ ದೃಶ್ಯತ್ವಾದಿಹೇತುಗಳನ್ನು ನಿರಾಕರಿಸುವವರಿದ್ದಾರೆ. ಆದ್ದರಿಂದ ದೃಶ್ಯತ್ವಾದಿಗಳಿಂದ ಅನಿರ್ವಚನೀಯತ್ವವನ್ನು ಸಾಧಿಸಲು ಬರುವುದಿಲ್ಲ. ಬಾಧಾನ್ಯಥಾನುಪಪತ್ತಿಯಿಂದಲೇ ಸಾಧಿಸಬೇಕು. ಹಾಗಾದರೆ ಹಿಂದೆ ಹೇಳಿದಂತೆ ಅನ್ಯೋನ್ಯಾಶ್ರಯದೋಷ ಬಂದೇ ಬರುತ್ತದೆ. ಆದ್ದರಿಂದ ಅನುಮಾನದಿಂದಲೂ ಜ್ಞಾನನಿವರ್ತ್ಯತ್ವವನ್ನು ಸಾಧಿಸಲು ಬರುವುದಿಲ್ಲ.

**ಪ್ರಮಾಣ 3) ಆಗಮ**

ಅಂಬರಾದಿಗಳು ಜ್ಞಾನನಿವರ್ತ್ಯವಾಗಿವೆ ಎಂಬ ವಿಷಯದಲ್ಲಿ ಪ್ರತ್ಯಕ್ಷ-ಅನುಮಾನಗಳು ಪ್ರಮಾಣವಾಗದೇ ಹೋದರೂ ಆಗಮವು ಪ್ರಮಾಣ-ವಾಗಬಹುದಾಗಿದೆ. ಮಾಂಡೂಕೋಪನಿಷತ್ತಿನಲ್ಲಿ -

**ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।**
**ಉಪದೇಶಾದಯಂ ವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥**

ಎಂಬುದಾಗಿ ಅಂಬರಾದಿಗಳಿಗೆ ಜ್ಞಾನನಿವರ್ತ್ಯತ್ವವನ್ನು ಹೇಳಲಾಗುತ್ತಿದೆ ಅಲ್ಲವೇ ?

ಈ ರೀತಿಯಾಗಿ ಆಗಮವನ್ನು ಶಂಕಿಸುವುದೂ ಸರಿಯಲ್ಲ. ಏಕೆಂದರೆ -

**ವಿಕಲ್ಪಃ** ಭೇದಪ್ರಪಂಚವು, **ಯದಿ ಅಜ್ಞಾನಾದಿನಾ ಕೇನಚಿತ್ ಕಲ್ಪಿತಃ ಸ್ಯಾತ್** ಒಂದುವೇಳೆ ಅಜ್ಞಾನಾದಿಗಳಿಂದಾಗಿ ಕೆಲವರಿಂದ ಕಲ್ಪಿತವಾಗಿರುವುದೇ ಆದರೆ, **ತರ್ಹಿ ನಿವರ್ತೇತ** ಆಗ ಆ ಭೇದಪ್ರಪಂಚವು ನಿವೃತ್ತವಾಗಬೇಕಿತ್ತು. **ನ ಚ ನಿವರ್ತತೇ** ಈಗಲಾದರೋ ನಿವೃತ್ತವಾಗುವುದಿಲ್ಲ. **ತಸ್ಮಾತ್ ನ ಕಲ್ಪಿತಃ** ಆದ್ದರಿಂದ ಭೇದಪ್ರಪಂಚವು ಕಲ್ಪಿತವಲ್ಲ. **ಅಯಮೇವ ಸತಾಂ ವಾದಃ** ಇದೇ ಸಜ್ಜನರ ವಾದವಾಗಿದೆ. ಯಾಕೆ ? **ಉಪದೇಶಾತ್** ಶ್ರುತ್ಯಾದಿಗಳಲ್ಲಿ ಹಾಗೆ ಉಪದೇಶ ಮಾಡಿದ್ದರಿಂದ. **'ದ್ವೈತಂ ನ ವಿದ್ಯತೇ' ಇತಿ ವಾದಸ್ತು** ಭೇದ ಇಲ್ಲ ಎಂಬ ವಾದವಾದರೋ, **ಅಜ್ಞಾತೇ** ತತ್ವಅಜ್ಞಾನದಶಾದಲ್ಲಿ ಅರ್ಥಾತ್ ಭೇದ ಇಲ್ಲ ಎಂಬ ವಾದವು ಅಜ್ಞಾನಿಗಳ ವಾದವಾಗಿದೆ.

ಈ ರೀತಿಯಾಗಿ ಅನ್ಯತ್ರ [೧]ಮಾಂಡೂಕಭಾಷ್ಯ ಅನುವ್ಯಾಖ್ಯಾನಾದಿಗಳಲ್ಲಿ 'ಜ್ಞಾತೇ ದ್ವೈತಂ ನ ವಿದ್ಯತೇ' ಎಂಬ ಶ್ರುತಿಗೆ ಅನ್ಯಾರ್ಥವನ್ನು ಉಪಪಾದಿಸಲಾಗಿದೆ. ಆದ್ದರಿಂದ ಅಂಬರಾದಿಜಗತ್ತು ಜ್ಞಾನನಿವರ್ತ್ಯವಾಗಿದೆ ಎಂಬ ವಿಷಯದಲ್ಲಿ ಈ ಶ್ರುತಿಯೂ ಪ್ರಮಾಣವಾಗುವುದಿಲ್ಲ.

**ಪ್ರಮಾಣ 4) ಅರ್ಥಾಪತ್ತಿ**

'ತರತಿ ಶೋಕಮಾತ್ಮವಿತ್' 'ದೃಷ್ಟ್ವೈವ ತಂ ಮುಚ್ಯತೇ' ಇತ್ಯಾದಿ ಶ್ರುತಿಗಳಲ್ಲಿ ಜ್ಞಾನದಿಂದ ಮೋಕ್ಷವು ಹೇಳಲ್ಪಡುತ್ತದೆ. ದುಃಖಾದಿಬಂಧನಿವೃತ್ತಿಯೇ ಮೋಕ್ಷ. ದುಃಖಾದಿಬಂಧವು ಅಜ್ಞಾನೋಪಾದಾನಕವಾಗಿದೆ. (ಅಜ್ಞಾನವೇ ಉಪಾದಾನಕಾರಣವಾಗಿ ಉಳ್ಳದ್ದಾಗಿದೆ.) ಅಜ್ಞಾನೋಪಾದಾನಕವಾದ ದುಃಖಾದಿಬಂಧಕ್ಕೆ ಸಾಕ್ಷಾತ್ ಜ್ಞಾನನಿವರ್ತ್ಯತ್ವ ಇಲ್ಲ. ಕಾರಣ -

**'ಜ್ಞಾನಂ ಅಜ್ಞಾನಸ್ಯೈವ ನಿವರ್ತಕಮ್'** ಎಂದು ವ್ಯಾಪ್ತಿ. ಜ್ಞಾನವು ಅಜ್ಞಾನಕ್ಕೆ ಮಾತ್ರ ಸಾಕ್ಷಾತ್ ನಿವರ್ತಕ ಎಂದು ನಿಯಮ. ಹಾಗಾಗಿ ದುಃಖಾದಿಬಂಧವು ಜ್ಞಾನದಿಂದ ಸಾಕ್ಷಾತ್ತಾಗಿ ನಿವರ್ತ್ಯವಾಗಲು ಸಾಧ್ಯವಿಲ್ಲ. ಹಾಗಾದರೆ ಆತ್ಮಜ್ಞಾನದಿಂದ ಅಜ್ಞಾನವು ನಿವೃತ್ತವಾಗಲು ಆ ಅಜ್ಞಾನೋಪಾದಾನಕವಾದ ಬಂಧವು ಸ್ವಯಮೇವ ನಿವೃತ್ತವಾಗುತ್ತದೆ ಎಂದೇ ಹೇಳಬೇಕು. ಆದ್ದರಿಂದ -

**''ಜ್ಞಾನಾತ್ ಮೋಕ್ಷಾಭಿಧಾನಂ ಬಂಧಸ್ಯ ಅಜ್ಞಾನೋಪಾದಾನಕತ್ವಂ ವಿನಾ ಅನುಪಪದ್ಯಮಾನಂ, ತಥಾ ಚ ಜ್ಞಾನಾನ್ಮೋಕ್ಷಾಭಿಧಾನಾನ್ಯಥಾನುಪಪತ್ತ್ಯಾ ಅಜ್ಞಾನೋಪಾದಾನಕಸ್ಯ ವಿಯದಾದಿಪ್ರಪಂಚಸ್ಯ ಜ್ಞಾನನಿವರ್ತ್ಯತ್ವಸಿದ್ಧಿಃ ॥''**

---

೧ ಅತೋ ವಿಕಲ್ಪಃ ಶರೀರಾದಿಸಂಬಂಧಃ ಕೇನಚಿದಜ್ಞಾನಾದಿನಾ ಕಾರಣೇನ ಕಲ್ಪಿತೋಽವ್ಯಪದೇಶಾನ್ನಿವರ್ತತೇ । ಅಯಂ ಸತಾಂ ವಾದಃ- ಜ್ಞಾತೇ ಸತಿ ಪರಬ್ರಹ್ಮಣಿ ದ್ವೈತಮನ್ಯಥಾಜ್ಞಾನಂ ನಿವರ್ತತ ಇತಿ ।

ವಿಕಲ್ಪೋ ದೇಹಬಂಧಾದಿಃ ಕೇನಚಿತ್ ಕಾರಣೇನ ತು ।
ಕಲ್ಪಿತೋ ವಿನಿವರ್ತೇತ ಗುರುವಾಕ್ಯಾದಸಂಶಯಃ ॥

ಏಷ ಏವ ಸತಾಂ ವಾದೋ ಜ್ಞಾತೇ ಬ್ರಹ್ಮಣಿ ತತ್ತ್ವತಃ ।
ನಿವರ್ತತೇಽನ್ಯಥಾಜ್ಞಾನಂ ತತ ಆನಂದಮೇತ್ಯಸೌ ॥ ಇತಿ ಚ ॥ ಮಾಂ.ಭಾಷ್ಯ.ದ್ವಿ.ಖಂಡ
॥ ಅನ್ಯತ್ರೇತಿ ॥ 'ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತಮ್ ।'

ಇತ್ಯಾದ್ಯಾಧ್ಯಾಯಾಂತಾನುವ್ಯಾಖ್ಯಾನತತ್ತ್ವನಿರ್ಣಯಾದಾವಿತ್ಯರ್ಥಃ ।
(ಶ್ರೀರಾಘವೇಂದ್ರಸ್ವಾಮಿಗಳವರ ತತ್ತ್ವೋದ್ಯೋತಟಿಪ್ಪಣೀ)

ಬಂಧಕ್ಕೆ ಅಜ್ಞಾನೋಪಾದಾನಕತ್ವ ಒಪ್ಪದ ಹೊರತು ಜ್ಞಾನದಿಂದ ಮೋಕ್ಷವನ್ನು ಹೇಳುವುದು ಉಪಪನ್ನವಾಗುವುದಿಲ್ಲ. ಹಾಗಾಗಿ ಜ್ಞಾನಾನ್ಮೋಕ್ಷಾಭಿಧಾನಾನ್ಯಥಾನುಪಪತ್ತಿಯಿಂದ ಅಜ್ಞಾನೋಪಾದನಕವಾದ ವಿಯದಾದಿಪ್ರಪಂಚಕ್ಕೆ ಜ್ಞಾನನಿವರ್ತ್ಯತ್ವವು ಸಿದ್ಧವಾಗುತ್ತದೆ.

ಆದ್ದರಿಂದ ಅಂಬರಾದಿ ಜಗತ್ತು ಜ್ಞಾನನಿವರ್ತ್ಯವಾಗಿದೆ ಎಂಬ ವಿಷಯದಲ್ಲಿ ಈ ಅರ್ಥಾಪತ್ತಿಯೇ ಪ್ರಮಾಣವಾಗುತ್ತದೆ ಅಲ್ಲವೇ ?

ಈ ರೀತಿಯಾಗಿ ಅರ್ಥಾಪತ್ತಿಯನ್ನು ಶಂಕಿಸಿದರೆ, ಅನ್ಯಥೈವೋಪಪತ್ತಿಯನ್ನು ಹೇಳುವ ಮೂಲಕ ಅರ್ಥಾಪತ್ತಿಯನ್ನು ನಿರಾಕರಿಸುತ್ತಾರೆ.

ಈ ಅರ್ಥಾಪತ್ತಿಗೆ ಎರಡು ರೀತಿಯಿಂದ ಉತ್ತರ ನೀಡುತ್ತಾರೆ -

**ಅ)** 'ತರತಿ ಶೋಕಮಾತ್ಮವಿತ್' 'ದೃಷ್ಟ್ವೈವ ತಂ ಮುಚ್ಯತೇ' ಇತ್ಯಾದಿಗಳಲ್ಲಿ ಬಂಧಕ್ಕೆ ಜ್ಞಾನದಿಂದ ನಿವೃತ್ತಿ ಹೇಳಿಯೇ ಇಲ್ಲ.

''**ಯಸ್ಯ ಪ್ರಸಾದಾತ್ ಪರಮಾರ್ತಿರೂಪಾದಸ್ಮಾತ್ ಸಂಸಾರಾನ್ಮುಚ್ಯತೇ ನಾಪರೇಣ**'' ಎಂಬುದಾಗಿ ಶ್ರುತಿಯು ಹೇಳುವಂತೆ ಪ್ರಸಾದದಿಂದಲೇ ಬಂಧನಿವೃತ್ತಿ ಸಾಧ್ಯ. 'ದೃಷ್ಟ್ವೈವ' ಇತ್ಯಾದಿಗಳಲ್ಲಿ ಜ್ಞಾನದಿಂದ ಬಂಧನಿವೃತ್ತಿ ಹೇಳಿದರೂ ''**ಜಿಜ್ಞಾಸೋತ್ಥಜ್ಞಾನಜಾತ್ ತತ್ಪ್ರಸಾದಾದೇವ ಮುಚ್ಯತೇ**'' ಎಂದು ಅನುವ್ಯಾಖ್ಯಾನದಲ್ಲಿ ತಿಳಿಸಿದಂತೆ ಜ್ಞಾನದಿಂದ ಪ್ರಸಾದ, ಪ್ರಸಾದದಿಂದ ಬಂಧನಿವೃತ್ತಿ, ಹೀಗೆಯೇ ಅಂಗೀಕರಿಸಬೇಕು. ಆದ್ದರಿಂದ ಬಂಧಕ್ಕೆ ಪ್ರಸಾದನಿವರ್ತ್ಯತ್ವ ಉಂಟೇ ಹೊರತು ಜ್ಞಾನನಿವರ್ತ್ಯತ್ವ ಇಲ್ಲ.

ಆ) ಅಥವಾ, ನೀವು ಹೇಳುವಂತೆ ಅಭ್ಯುಪಗಮವಾದದಿಂದ ಜ್ಞಾನನಿವರ್ತ್ಯತ್ವವನ್ನು ಒಪ್ಪಿದರೂ ಸಹ

ಗರುಡಧ್ಯಾನರೂಪಜ್ಞಾನದಿಂದ ಸತ್ಯವಾದ ವಿಷವು ನಿವರ್ತ್ಯವಾಗುವಂತೆ
ಸೇತುದರ್ಶನದಿಂದ ಸತ್ಯವಾದ ಪಾಪವು ನಿವರ್ತ್ಯವಾಗುವಂತೆ
ಸುಹೃದ್ದರ್ಶನದಿಂದ ಸತ್ಯವಾದ ದುಃಖವು ನಿವರ್ತ್ಯವಾಗುವಂತೆ
''ಆತ್ಮಜ್ಞಾನದಿಂದ ಸತ್ಯವಾದ ಬಂಧವು ನಿವರ್ತ್ಯವಾಗುತ್ತದೆ''
ಎಂಬುದಾಗಿ ಹೇಳಬಹುದಾಗಿದೆಯಾದ್ದರಿಂದ, ಬಂಧಕ್ಕೆ ಸತ್ಯತ್ವವನ್ನೇ

ಒಪ್ಪಿದರೂ ಜ್ಞಾನನಿವರ್ತ್ಯತ್ವವನ್ನು ಕೂಡಿಸಬಹುದಾದ್ದರಿಂದ ಅರ್ಥಾಪತ್ತಿಯು ಅನ್ಯಥೈವೋಪಪನ್ನವಾಗಿದೆ.

ಆದ್ದರಿಂದ ಜ್ಞಾನನಿವರ್ತ್ಯತ್ವವೇ ಬಾಧ್ಯತ್ವ ಎನ್ನುವುದಾದರೆ, ಆ ಜ್ಞಾನನಿವರ್ತ್ಯತ್ವವು ಪ್ರಕೃತ ವಿಯದಾದಿಗಳಲ್ಲಿ ಇಲ್ಲವಾದ್ದರಿಂದ, ಯಾವುದರ ಅನುಪಪತ್ತಿಯಿಂದ ವಿಯದಾದಿಪ್ರಪಂಚಕ್ಕೆ ಸದ್ವಿಲಕ್ಷಣತ್ವವನ್ನು ತಿಳಿಯಬೇಕು ?

ಜಗತ್ತಿನಲ್ಲಿ ಜ್ಞಾನನಿವರ್ತ್ಯತ್ವರೂಪ ಬಾಧ್ಯತ್ವ ಇರುತ್ತಿದ್ದರೆ ಆಗ ಆ ಜ್ಞಾನನಿವರ್ತ್ಯತ್ವರೂಪಬಾಧಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದ್ವೈಲಕ್ಷಣ್ಯವನ್ನು ಹೇಳಬಹುದಾಗಿತ್ತು. ಆದರೆ ವಿಯದಾದಿಜಗತ್ತಿನಲ್ಲಿ ಜ್ಞಾನನಿವರ್ತ್ಯತ್ವವೇ ಇಲ್ಲವಾದ್ದರಿಂದ ಬಾಧಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದ್ವೈಲಕ್ಷಣ್ಯವನ್ನು ಹೇಳುವುದು (ಸಾಧಿಸುವುದು) ಸರಿಯಲ್ಲ ಎಂದು ಭಾವ.

**ಅವತಾರಿಕೆ :-** ಬಾಧ್ಯತ್ವ ಎಂದರೆ ಜ್ಞಾನನಿವರ್ತ್ಯತ್ವ. ಜ್ಞಾನನಿವರ್ತ್ಯತ್ವ ಎಂದರೆ ಜ್ಞಾನನಾಶ್ಯತ್ವ ಎಂಬುದಾಗಿ ತಿಳಿದು ''ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್ ।'' ಎಂಬ ವಾಕ್ಯದ ಮೇಲೆ ಶಿಷ್ಯರು ಶಂಕಿಸುತ್ತಾರೆ -

### 'ನ ಚ ಬಾಧ್ಯಂ ಜಗತ್..' ಎಂಬ ಮೂಲದಲ್ಲಿ ಜಗತ್‌ಪದವನ್ನು ಇಟ್ಟಿದ್ದು ಸಾರ್ಥಕ

**ಟೀಕಾ :** **ನನು ಜ್ಞಾನನಿವರ್ತ್ಯತ್ವಮಸ್ಮಾಕಂ ಶುಕ್ತಿರಜತಾದೇರಪಿ ನಾಸ್ತಿ । ಯಥೋಕ್ತಂ 'ನ ಹಿ ನಾಶೋಽಸತೋ ಭವೇತ್' ಇತಿ । ಅತಃ ಕಿಂ ಜಗದ್ಗ್ರಹಣೇನ । ಮೈವಮ್ । ನ ಹಿ ಜ್ಞಾನನಿವರ್ತ್ಯತ್ವಂ ನಾಮ ಜ್ಞಾನೇನ ವಿನಾಶಃ ಪರಸ್ಯಾಭಿಮತಃ । ತೇನ 'ಅಧಿಷ್ಠಾನ-ಯಾಥಾತ್ಮ್ಯಜ್ಞಾನೇನಾವಿದ್ಯಾಯಾಂ ವಿಲೀನಾಯಾಂ ತದುಪಾದಾನಕಂ ರಜತಂ ಸ್ವಯಮೇವ ನಿವರ್ತತೇ' ಇತ್ಯಂಗೀಕೃತತ್ವಾತ್ । ಕಿಂ ನಾಮ- ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವಮ್ । ನ ಚ ತಚ್ಛುಕ್ತಿರಜತಾದೌ ನಾಸ್ತೀತಿ ಶಕ್ಯತೇ ವಕ್ತುಮ್ । ನಾತ್ರ ರಜತಮಭೂದಿತಿ ಪ್ರತಿಷೇಧಸ್ಯ ಪ್ರಮಿತತ್ವಾತ್ । ತತಃ ಸಾರ್ಥಕಂ ಜಗದ್ಗ್ರಹಣಮ್ ॥**

**ಅನುವಾದ :-** 'ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್' ಎಂಬ ವಾಕ್ಯದಲ್ಲಿ ಜಗದ್‌ಗ್ರಹಣ ಮಾಡಿದ್ದು (ಜಗತ್ತನ್ನು ಸ್ವೀಕರಿಸಿದ್ದು) ಸರಿಯಲ್ಲ.

ಏಕೆಂದರೆ- ಜಗತ್ ಎಂಬ ಪದವು ಸತ್ಯವಾದ ಜಗತ್ತಿಗೇ ಉಪಸ್ಥಾಪಕವಾಗಿದೆ ಹೊರತು ಅಸತ್ ಆದ ಶುಕ್ತಿರೂಪ್ಯಾದಿಗಳಿಗೆ ಉಪಸ್ಥಾಪಕವಾಗಿಲ್ಲ. ಹಾಗಾಗಿ ವಿಶೇಷನಿಷೇಧವು ಶೇಷವಿಧ್ಯನುಜ್ಞಾನರೂಪವಾದ್ದರಿಂದ

**''ಜಗತಿ ಬಾಧ್ಯತ್ವಂ ನಾಸ್ತಿ'' (ಜಗತ್ತಿನಲ್ಲಿ ಬಾಧ್ಯತ್ವಜ್ಞಾನನಾಶ್ಯತ್ವ ಇಲ್ಲ)**

ಎಂದು ಹೇಳಿದರೆ ಶುಕ್ತಿರಜತಾದಿಗಳಲ್ಲಿ ಬಾಧ್ಯತ್ವ ಜ್ಞಾನನಾಶ್ಯತ್ವ ಇದೆ ಎಂದು ಹೇಳಿದಂತಾಗುತ್ತದೆ. ಆದರೆ ಅದು ಸರಿಯಲ್ಲ. ನಮ್ಮ ಸಿದ್ಧಾಂತದಲ್ಲಿಯೂ ಸಹ ಜ್ಞಾನನಿವರ್ತ್ಯತ್ವವನ್ನು ಜ್ಞಾನನಾಶ್ಯತ್ವವನ್ನು ಶುಕ್ತಿರಜತಾದಿಗಳಿಗೂ ಸಹ ಅಂಗೀಕರಿಸಿಲ್ಲ. ಆಚಾರ್ಯರು ಶ್ರುತಿಪಾದ ಅನುವ್ಯಾಖ್ಯಾನದಲ್ಲಿ ಅದನ್ನು ಸ್ಪಷ್ಟಪಡಿಸಿದ್ದಾರೆ- **'ನ ಹಿ ನಾಶೋಽಸತೋ ಭವೇತ್'** ಅಸತ್‌ಗೆ ನಾಶ ಇರುವುದಿಲ್ಲ. ಹೀಗಾಗಿ ಅಸತ್ ಆದ ಶುಕ್ತಿರಜತಾದಿಗಳಿಗೆ ಜ್ಞಾನನಾಶ್ಯತ್ವವೂ (ಜ್ಞಾನದಿಂದ ನಾಶವೂ) ಇಲ್ಲ. ಅಂದಮೇಲೆ ಸತ್ ಆದ ಜಗತ್ತಿಗೂ ಜ್ಞಾನನಾಶ್ಯತ್ವ ಇಲ್ಲ. ಅಸತ್ ಆದ ಶುಕ್ತಿರಜತಾದಿಗಳಿಗೂ ಜ್ಞಾನನಾಶ್ಯತ್ವ ಇಲ್ಲ ಎಂದಮೇಲೆ 'ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್' ಎಂಬ ವಾಕ್ಯದಲ್ಲಿ ಜಗದ್ ಗ್ರಹಣ ಮಾಡಿದ್ದು ವ್ಯರ್ಥ ಅಲ್ಲವೇ ?

ಈ ವಿಧವಾದ ಶಂಕೆ ಸರಿಯಾದದ್ದಲ್ಲ. ಯಾಕೆಂದರೆ - ಜ್ಞಾನನಿವರ್ತ್ಯತ್ವ ಎಂದರೆ ಜ್ಞಾನನಾಶ್ಯತ್ವ ಎಂಬ ಅರ್ಥ ಪರರಿಗೆ ಸಮ್ಮತವಾಗಿಲ್ಲ. ಕಾರಣ -

**''ಅಧಿಷ್ಠಾನಯಾಥಾತ್ಮ್ಯಜ್ಞಾನೇನ ಅವಿದ್ಯಾಯಾಂ ವಿಲೀನಾಯಾಂ ತದುಪಾದಾನಕಂ ರಜತಂ ಸ್ವಯಮೇವ ನಿವರ್ತತೇ ।''**

''ಅಧಿಷ್ಠಾನದ ಯಾಥಾತ್ಮ್ಯಜ್ಞಾನದಿಂದ ಅವಿದ್ಯಾ ನಿವೃತ್ತವಾಗುತ್ತಿರಲು, ಅವಿದ್ಯೆ ಎಂಬ ಕಾರಣ ಉಪಾದಾನಕಾರಣ ನಾಶವಾದಾಗ ಆ ಅವಿದ್ಯೋಪಾದಾನಕವಾದ ಅವಿದ್ಯೆಯ ಕಾರ್ಯವಾದ ರಜತವು ಸ್ವಯಂ ನಿವೃತ್ತವಾಗುತ್ತದೆ.''

ಎಂಬುದಾಗಿ ಪರರು ಅಂಗೀಕರಿಸುತ್ತಾರೆ. ಅಂದರೆ ಅವರ ಈ ಮಾತಿನಿಂದ ''ಜ್ಞಾನನಾಶ್ಯತ್ವವು ಅವಿದ್ಯೆಯಲ್ಲಿ ಮಾತ್ರ ಇದೆ. ರಜತಕ್ಕೆ ಇಲ್ಲ'' ಎಂಬ ಅಂಶ ಸ್ಪಷ್ಟವಾಗುತ್ತದೆ. ಹಾಗಾಗಿ ಅಸತ್ ಆದ ರಜತದಲ್ಲಿ ಜ್ಞಾನನಾಶ್ಯತ್ವವನ್ನು ಪರರೂ ಅಂಗೀಕರಿಸಿಲ್ಲ.

ಹಾಗಾದರೆ ಪರರು ಶುಕ್ತಿರೂಪ್ಯಾದಿಗಳಲ್ಲಿ ಎಂತಹ ಬಾಧ್ಯತ್ವವನ್ನು ಅಂಗೀಕರಿಸುತ್ತಾರೆ ?

**ತತ್ತ್ವಮಸ್ಯಾದಿವಾಕ್ಯಾರ್ಥಸಮ್ಯಗ್‌ಧೀಜನ್ಮಮಾತ್ರತಃ ।**
**ಅವಿದ್ಯಾ ಸಹ ಕಾರ್ಯೇಣ ನಾಸೀದಸ್ತಿ ಭವಿಷ್ಯತಿ ॥**

ಎಂಬುದಾಗಿ ಅವರ ವಚನವೇ ಇರುವುದರಿಂದ

**''ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವಂ ಬಾಧ್ಯತ್ವಮ್''**

(ಅಧಿಷ್ಠಾನತ್ವೇನ ಪ್ರತಿಪನ್ನವಾದ ಜ್ಞಾತವಾದ, ಉಪಾಧಿಯಲ್ಲಿ ಶುಕ್ತಿಕಾದಿ-ಗಳಲ್ಲಿ, ಯಾವ ನಿಷೇಧ ಮಾಡುತ್ತೇವೆ 'ನೇದಂ ರಜತಂ' ಎಂಬುದಾಗಿ, ಆ ನಿಷೇಧಕ್ಕೆ ಪ್ರತಿಯೋಗಿಯಾಗಿದೆ ರಜತ.)

ಇದು 'ರಜತ ಬಾಧ್ಯವಾಗಿದೆ' ಎಂಬ ಮಾತಿನ ಅರ್ಥ ಎಂಬುದಾಗಿ ಪರರು ಅಂಗೀಕರಿಸುತ್ತಾರೆ. 'ನಾತ್ರ ರಜತಂ ಅಭೂತ್' ಎಂಬುದಾಗಿ ನಿಷೇಧವು ಪ್ರಮಿತವಾಗಿದೆಯಾದ್ದರಿಂದ, ಈ ವಿಧವಾದ ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವ ರೂಪವಾದ ಜ್ಞಾನನಿವರ್ತ್ಯತ್ವವು ಅಸತ್ ಆದ ಶುಕ್ತಿರೂಪ್ಯಾದಿಗಳಲ್ಲಿ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ.

ಆದರೆ 'ನಾತ್ರ ರಜತಂ ಅಭೂತ್' ಎಂಬ ನಿಷೇಧವು ಪ್ರಮಿತವಾದಂತೆ 'ನಾತ್ರ ಘಟಃ ಅಭೂತ್' ಇತ್ಯಾದಿ ನಿಷೇಧಗಳು ಪ್ರಮಿತವಾಗಿಲ್ಲವಾದ್ದರಿಂದ, ಈ ವಿಧವಾದ ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವರೂಪವಾದ ಜ್ಞಾನನಿವರ್ತ್ಯತ್ವವು ಸತ್ ಆದ ಜಗತ್ತಿನಲ್ಲಿ ಇಲ್ಲ. ಆದ್ದರಿಂದ ಜ್ಞಾನನಿವರ್ತ್ಯತ್ವ ರೂಪಬಾಧ್ಯತ್ವವು ಸತ್ ಆದ ಜಗತ್ತಿನಲ್ಲಿ ಇರದೇ, ಅಸತ್ ಆದ ಶುಕ್ತಿರೂಪ್ಯಾದಿ-ಗಳಲ್ಲಿ ಮಾತ್ರ ಇರುವುದರಿಂದ '**ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್**' ಎಂಬ ವಾಕ್ಯದಲ್ಲಿ ಜಗದ್ಗ್ರಹಣ ಮಾಡಿದ್ದು ಸಾರ್ಥಕವೇ ಆಗಿದೆ ಎಂದು ಭಾವ.

**ಟೀಕಾ: ಶುಕ್ತಿರಜತಾದ್ಯೇವಾರ್ಥಾಪತ್ತ್ಯಾ ಯದಿ ಸದಸದ್ವಿಲಕ್ಷಣತಯಾ ಸಿಷಾಧಯಿಷಿತಮ್, ತದೈತದ್ದೂಷಣಂ ನ ಘಟತ ಇತಿ ಚೇತ್ । ಮಾ ಘಟಿಷ್ಟ । ಪ್ರಾಗುಕ್ತದೂಷಣೇನಾರ್ಥಾಪತ್ತೇ-ರ್ದೂಷಿತತ್ವಾತ್ ॥**

**ಅನುವಾದ :-** ''ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್'' ಎಂಬ ವಾಕ್ಯದಿಂದ 'ಜಗತ್ತಿನಲ್ಲಿ ಬಾಧ್ಯತ್ವ ಇಲ್ಲವಾದ್ದರಿಂದ ಸದ್ವೈಲಕ್ಷಣ್ಯವೂ ಇಲ್ಲ' ಎಂಬುದಾಗಿ ಹೇಳಿದಿರಿ. ಆದರೆ ಘಟಪಟಾದಿಜಗತ್ತನ್ನು ವಿವಕ್ಷಿಸಿದಾಗ ಅಲ್ಲಿ ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವರೂಪವಾದ ಬಾಧ್ಯತ್ವ ಇಲ್ಲವಾದ್ದ-ರಿಂದ ಸದ್ವೈಲಕ್ಷಣ್ಯವೂ ಇಲ್ಲ ಎಂಬುದಾಗಿ ಹೇಳುವುದು ಸೂಕ್ತವಾಗುತ್ತದೆ. ಆದರೆ ಶುಕ್ತಿರಜತಾದಿಗಳನ್ನು ಮಾತ್ರ ವಿವಕ್ಷಿಸಿ, ಅರ್ಥಾಪತ್ತಿಯಿಂದ ಶುಕ್ತಿರಜತಾದಿಗಳಿಗೆ ಮಾತ್ರ ಸದಸದ್ವೈಲಕ್ಷಣ್ಯವನ್ನು ಸಾಧಿಸಲು ಹೊರಟಾಗ, (ಶುಕ್ತಿರಜತಾದಿಗಳಲ್ಲಿ ಪ್ರತಿಪನ್ನೋಪಾಧೌ ನಿಷೇಧಪ್ರತಿಯೋಗಿತ್ವರೂಪವಾದ ಬಾಧ್ಯತ್ವವೇ ಇರುವುದರಿಂದ) ''ಶುಕ್ತಿರಜತಾದಿಗಳಿಗೆ ಬಾಧ್ಯತ್ವ ಇಲ್ಲವಾದ್ದರಿಂದ ಸದಸದ್ವೈಲಕ್ಷಣ್ಯವು ಇಲ್ಲ'' ಎಂದು ಹೇಳಲು ಬರುವುದಿಲ್ಲ ಅಲ್ಲವೇ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಕಾರಣ- ಅಸತ್‌ಗೂ ಪರೋಕ್ಷ-ಪ್ರತೀತಿ-ಅಪರೋಕ್ಷಪ್ರತೀತಿಗಳನ್ನು ಸಮರ್ಥನೆ ಮಾಡಿದ್ದರಿಂದ ''**ಅಸಚ್ಚೇನ್ನ ಪ್ರತೀಯೇತ**'' ಎಂಬ ಮೂಲಭೂತವ್ಯಾಪ್ತಿಯೇ ಇಲ್ಲದ ಕಾರಣ ಅರ್ಥಾಪತ್ತಿಯೇ ಅನುಪಪನ್ನ ಎಂಬುದಾಗಿ ವ್ಯಾಪ್ತಿಭಂಗ-ವ್ಯಾಹತಿ ಮೊದಲಾದ ದೋಷಗಳನ್ನು ಹೇಳಿ ಅರ್ಥಾಪತ್ತಿಯನ್ನೇ ನಿರಾಕರಿಸಿದ್ದರಿಂದ, ಅರ್ಥಾಪತ್ತಿಯಿಂದ ಶುಕ್ತಿ-ರಜತಾದಿಗಳಿಗೂ ಸದಸದ್ವೈಲಕ್ಷಣ್ಯವನ್ನು ಸಾಧಿಸಲು ಬರುವುದಿಲ್ಲ ಎಂದು ಭಾವ.

## ಜ್ಞಾನನಿವರ್ತ್ಯತ್ವವೂ ಮಿಥ್ಯಾ ಎಂದರೆ ದೋಷನಿರೂಪಣೆ

**ಟೀಕಾಃ ಕಿಂಚ ಜಗತಿ ಸತ್ತಾನುಪಪತ್ತ್ಯರ್ಥಮುಪನ್ಯಸ್ತಂ ಬಾಧ್ಯತ್ವಂ ಪರೇಣ ಸತ್ಯಮಂಗೀಕ್ರಿಯತೇ ಮಿಥ್ಯಾ ವಾ । ಆದ್ಯೇಽಪಸಿದ್ಧಾಂತಾದಿ-ಪ್ರಸಂಗಾದ್ ದ್ವಿತೀಯ ಏವಾಂಗೀಕಾರ್ಯ ಇತ್ಯಾಹ -**

**ಮೂಲ :- ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ ।**

**ಅಪಿಶಬ್ದೋ ಯುಕ್ತಿಸಮುಚ್ಚಯಾರ್ಥಃ । ನ ಕೇವಲಂ ಜಗತ್, ಕಿಂತು ಬಾಧ್ಯತ್ವಮಪೀತಿ ವಾ । ತೇಷಾಂ ಹೀತಿ ಸತ್ಯತ್ವಾಂಗೀಕಾರೇಽಪಸಿದ್ಧಾಂತಾದಿಕಂ ಸೂಚಯತಿ । ಕಿಮತ ಇತ್ಯತ ಆಹ -**

**ಮೂಲ :- ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ ಸತ್ಯಂ ಸ್ಯಾತ್ ।**

**ಯದಾ ಜಗತೋ ಬಾಧ್ಯತ್ವಮಪಿ ಮಿಥ್ಯಾ ತದಾ ಆತ್ಮವನ್ಮಿಥ್ಯಾಭೂತಬಾಧ್ಯತ್ವೇನ ಜಗತೋಽಬಾಧ್ಯತ್ವಮೇವ ಸತ್ಯಂ ಸ್ಯಾತ್ । ತಥಾ ಚ ನ ಕೇವಲಂ ಪ್ರಮಾಣಾಭಾವೇನ ಜಗತೋ ಬಾಧ್ಯತ್ವಾಭಾವಃ । ಕಿಂ ನಾಮ ಪರನ್ಯಾಯೇನಾಪಿ । ನ ಕೇವಲಂ ಬಾಧ್ಯತ್ವಾಭಾವಾತ್ತದನುಪಪತ್ಯಾ ಸದ್ವಿಲಕ್ಷಣತ್ವಾಸಿದ್ಧಿಃ । ಪ್ರತ್ಯುತ ಅಬಾಧ್ಯತ್ವಸ್ಯ ಸತ್ಯತ್ವಾತ್ ಸತ್ಯತ್ವಮೇವ ಸಿದ್ಧ್ಯತಿ ।**

**ಅನುವಾದ :-** ಮತ್ತು, ಜಗತ್ತಿನಲ್ಲಿ ಸತ್ತ್ವಾನುಪಪತ್ತಿಗಾಗಿ (ಸದ್ವೈಲಕ್ಷಣ್ಯ ಹೇಳುವುದಕ್ಕಾಗಿ) ಹೇಳುತ್ತಿರುವ ಬಾಧ್ಯತ್ವ ಏನಿದೆ ಆ ಬಾಧ್ಯತ್ವವನ್ನು ಪರರು ಸತ್ಯ ಎಂದು ಅಂಗೀಕರಿಸುತ್ತಾರೆಯೋ ? ಮಿಥ್ಯಾ ಎಂದು ಅಂಗೀಕರಿಸುತ್ತಾರೆಯೋ?

ಸತ್ಯ ಎಂದು ಅಂಗೀಕರಿಸುವ ಮೊದಲನೇ ಪಕ್ಷದಲ್ಲಿ ಅಪಸಿದ್ಧಾಂತ, (ಬ್ರಹ್ಮ ಒಂದು ಸತ್ಯ , ಬಾಧ್ಯತ್ವ ಇನ್ನೊಂದು ಸತ್ಯ ಹೀಗೆ ಎರಡು ಸತ್ಯವಸ್ತುಗಳನ್ನು ಅಂಗೀಕರಿಸಿದಂತಾಗುವುದರಿಂದ ಅಪಸಿದ್ಧಾಂತ,) ಬ್ರಹ್ಮ ಒಂದೇ ಸತ್ಯ ಎಂದು ಹೇಳುವ 'ಏಕಮೇವಾದ್ವಿತೀಯಂ' ಇತ್ಯಾದಿಶ್ರುತಿವಿರೋಧ, ಬ್ರಹ್ಮನಿಗೆ ಸದ್ವಿತೀಯತ್ವ ಇತ್ಯಾದಿ ದೋಷಗಳು ಬರುವುದರಿಂದ ಬಾಧ್ಯತ್ವವನ್ನು ಸತ್ಯ ಎಂದು ಹೇಳಲು ಬರುವುದಿಲ್ಲ. ಹಾಗಾಗಿ ಬಾಧ್ಯತ್ವ ಮಿಥ್ಯೆಯಾಗಿದೆ ಎಂಬ ಎರಡನೇ ಪಕ್ಷವನ್ನೇ ಒಪ್ಪಬೇಕು ಎನ್ನುತ್ತಾರೆ ಆಚಾರ್ಯರು -

**ಮೂಲ :-ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ ।**

**ಮೂಲಾರ್ಥ :-** ಐಕ್ಯವಾದಿಗಳಾದ ಮಾಯಾವಾದಿಗಳಿಗೆ ಜಗತ್ತು ಮಿಥ್ಯೆಯಾದಂತೆ ಬಾಧ್ಯತ್ವವೂ ಸಹ ಮಿಥ್ಯೆಯೇ ಆಗಿದೆ.

'ಬಾಧ್ಯತ್ವಮಪಿ' ಎಂಬ ಮೂಲದಲ್ಲಿರುವ 'ಅಪಿ'ಶಬ್ದವು ಯುಕ್ತಿಯನ್ನು ಸಮುಚ್ಚಯ ಮಾಡುತ್ತದೆ. 'ಬ್ರಹ್ಮೈವ ಸತ್ಯಂ' ಸತ್ಯವಸ್ತು ಬ್ರಹ್ಮ ಒಬ್ಬನೇ ಎಂದು ಅಂಗೀಕರಿಸುವ ಪರಸಿದ್ಧಾಂತದಲ್ಲಿ (ಬಾಧ್ಯತ್ವವನ್ನು ಸತ್ಯ ಎಂದು ಹೇಳಿದರೆ ಅಪಸಿದ್ಧಾಂತಾದಿಗಳು ಬರುವ ಕಾರಣ) ಬಾಧ್ಯತ್ವವನ್ನು ಮಿಥ್ಯೆ ಎಂದೇ ಹೇಳಬೇಕು ಎಂಬುದಾಗಿ ಯುಕ್ತಿಯನ್ನು ಪರನ್ಯಾಯವನ್ನು ಸಮುಚ್ಚಯ ಮಾಡುತ್ತದೆ ಅಪಿಶಬ್ದ ಎಂದು ಭಾವ.

ಅಥವಾ, ನಿಮ್ಮ ಪ್ರಕಾರ ಕೇವಲ ಜಗತ್ತು ಮಾತ್ರ ಮಿಥ್ಯೆ ಅಲ್ಲ. ಕಿಂತು ಬಾಧ್ಯತ್ವವೂ ಮಿಥ್ಯೆಯಾಗಿದೆ, ಹೀಗೆ ಜಗತ್ತಿನ ಮಿಥ್ಯಾತ್ವವನ್ನು ಸಮುಚ್ಚಯ ಮಾಡುತ್ತದೆ ಅಪಿಶಬ್ದ.

'ತೇಷಾಂ ಹಿ' ಎಂದು ಹೇಳುವುದರಿಂದ ''ಬಾಧ್ಯತ್ವವನ್ನು ಸತ್ಯ ಎಂದು ಅಂಗೀಕರಿಸಿದರೆ ಅಪಸಿದ್ಧಾಂತಾದಿ ದೋಷಗಳು ಬರುತ್ತವೆ'' ಎಂಬ ವಿಚಾರವನ್ನು ಸೂಚಿಸುತ್ತಿದ್ದಾರೆ ಆಚಾರ್ಯರು.

ಆಯಿತು, ಬಾಧ್ಯತ್ವವೂ ಮಿಥ್ಯೆಯೇ ಆಗಿದೆ. ಮುಂದೇನು ? ಎಂಬುದಾಗಿ ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

**ಮೂಲ :- ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ ಸತ್ಯಂ ಸ್ಯಾತ್ ।**

**ಮೂಲಾರ್ಥ :- ಬಾಧ್ಯತ್ವವು ಮಿಥ್ಯೆಯಾದರೆ ''ಪರಸ್ಪರವಿರುದ್ಧಧರ್ಮಯೋಃ ಅನ್ಯತರನಿಷೇಧಸ್ಯ ಅನ್ಯತರವಿಧಿನಾ ವ್ಯಾಪ್ತತ್ವಾತ್'' ಎಂಬ ನಿಯಮದಂತೆ ಜಗತ್ತಿಗೆ ಅಬಾಧ್ಯತ್ವವೇ ಸತ್ಯವಾಗುತ್ತದೆ.**

ಯಾವಾಗ ಜಗತ್ತಿನ ಬಾಧ್ಯತ್ವವೂ ಸಹ ಮಿಥ್ಯೆಯಾಗುತ್ತದೆ ಆಗ ಆತ್ಮನಂತೆ (ಆತ್ಮನು ಮಿಥ್ಯಾಭೂತ ಬಾಧ್ಯತ್ವ ಉಳ್ಳವನಾದ್ದರಿಂದ ಸತ್ಯಭೂತ ಅಬಾಧ್ಯತ್ವ ಉಳ್ಳವನು ಹೇಗೋ ಅದರಂತೆ) ಜಗತ್ತು ಮಿಥ್ಯಾಭೂತ ಬಾಧ್ಯತ್ವ ಉಳ್ಳದ್ದಾದ್ದರಿಂದ ಜಗತ್ತಿನ ಅಬಾಧ್ಯತ್ವವೇ ಸತ್ಯವಾಗುತ್ತದೆ. ಹಾಗಾದರೆ ಕೇವಲ ಪ್ರಮಾಣ ಇಲ್ಲದ ಕಾರಣ ಜಗತ್ತಿನಲ್ಲಿ ಬಾಧ್ಯತ್ವವಿಲ್ಲ ಎಂದಷ್ಟೇ ಅಲ್ಲ. ಕಿಂತು [೧]ಪರನ್ಯಾಯದಿಂದಲೂ ಸಹ ಜಗತ್ತಿನಲ್ಲಿ ಬಾಧ್ಯತ್ವವನ್ನು ಒಪ್ಪಲು ಬರುವುದಿಲ್ಲ.

ಆದ್ದರಿಂದ ಕೇವಲ ಬಾಧ್ಯತ್ವ ಇಲ್ಲವಾದ್ದರಿಂದ ತದನುಪಪತ್ತಿಯಿಂದಾಗಿ ಸದ್ವಿಲಕ್ಷಣತ್ವ ಸಿದ್ಧಿಸುವುದಿಲ್ಲ ಎಂದಷ್ಟೇ ಅಲ್ಲ. ಕಿಂತು ಜಗತ್ತಿನಲ್ಲಿ ಬಾಧ್ಯತ್ವವು ಮಿಥ್ಯೆಯಾಗಿ ಅಬಾಧ್ಯತ್ವವು ಸತ್ಯವಾದ್ದರಿಂದ ಜಗತ್ತಿಗೆ ಸತ್ಯತ್ವವೇ ಸಿದ್ಧಿಸುತ್ತದೆ.

**ಅವತಾರಿಕೆ :-** 'ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ' ಎಂಬ ವಾಕ್ಯದಲ್ಲಿ ಬಾಧ್ಯತ್ವವು ಮಿಥ್ಯೆಯಾಗಿದೆ ಎಂದು ಹೇಳುವ ಮೂಲಕ ಜಗತ್ತಿನಲ್ಲಿ ಬಾಧ್ಯತ್ವಾ-ಭಾವವನ್ನು ಹೇಳಿದ್ದಾರೆ. ಮುಂದೆ ''ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ

೧. ಜಗತ್ತಿನಲ್ಲಿ ಒಪ್ಪಿದ ಬಾಧ್ಯತ್ವವು ಸತ್ಯ ಎಂದು ಅಂಗೀಕರಿಸಿದರೆ ಅಪಸಿದ್ಧಾಂತಾದಿಗಳು ಬರುವ ಕಾರಣ ಬಾಧ್ಯತ್ವವನ್ನು ಸತ್ಯ ಎಂದು ಅಂಗೀಕರಿಸಲು ಬರುವುದಿಲ್ಲ. ಕಿಂತು ಬಾಧ್ಯತ್ವವನ್ನು ಮಿಥ್ಯಾ ಎಂದೇ ಅಂಗೀಕರಿಸಬೇಕು, ಹೀಗೆ ಪರನ್ಯಾಯದಿಂದಲೂ ಸಹ ಎಂದರ್ಥ.

ಸತ್ಯಂ ಸ್ಯಾತ್'' ಎಂಬ ವಾಕ್ಯದಲ್ಲಿಯೂ ಸಹ ಬಾಧ್ಯತ್ವಾಭಾವವನ್ನೇ ಹೇಳುತ್ತಿದ್ದಾರೆ ಎಂಬುದಾಗಿ ಭ್ರಾಂತರಾಗಿ ವೈಯರ್ಥ್ಯವನ್ನು ಶಂಕಿಸಿಕೊಂಡು ಸಮಾಧಾನ ಹೇಳುತ್ತಾರೆ-

**ಟೀಕಾ: ನನು ಬಾಧ್ಯತ್ವಂ ಮಿಥ್ಯೇತ್ಯನೇನೈವ ಜಗತಿ ಬಾಧ್ಯತ್ವಾಸಿದ್ಧಿರುಕ್ತಾ । ತತ್ಕಿಮುತ್ತರೇಣ ವಾಕ್ಯೇನ ? ಮೈವಮ್ । ನ ಹಿ ಮಿಥ್ಯೇತ್ಯಸತ್ತ್ವಂ ಪರೋಽಂಗೀಕುರುತೇ । ಪರನ್ಯಾಯೇನ ಚೇಹ ದೂಷಣಮುಪಕ್ರಾಂತಮ್ । ಅತೋ ವ್ಯಾಪ್ತಿಬಲೇನೈವ ಬಾಧ್ಯತ್ವಾಭಾವಮಬಾಧ್ಯತಾಸತ್ಯತಯಾ ಸತ್ಯತ್ವಂ ಚೋಪಪಾದಯಿತುಮುತ್ತರೋ ಗ್ರಂಥಃ । ಅತ ಏವ 'ತಸ್ಯ ಚ ಮಿಥ್ಯಾತ್ವೇ ಬಾಧ್ಯತ್ವಾಭಾವಃ' ಇತಿ ನೋಕ್ತಮ್ ।**

**ಅನಿರ್ವಚನೀಯಸ್ಯ ನಿರಾಕ್ರಿಯಮಾಣತ್ವಾನ್ಮಿಥ್ಯಾತ್ವಮಸತ್ವಮೇವ ಪರ್ಯವಸ್ಯತೀತಿ ಬಾಧ್ಯತ್ವಾಸಿದ್ಧಿಃ ಪೂರ್ವವಾಕ್ಯೇನೈವ ಶಕ್ಯೋಪಪಾದನೇತಿ ಚೇತ್ । ಸತ್ಯಮ್ । ಮಾರ್ಗಾಂತರಮೇತದಿತ್ಯದೋಷಃ ।**

**ಅನುವಾದ :-** ಹೌದು, ಮಿಥ್ಯಾ ಎಂದರೆ ಅಸತ್ ಎಂದೇ ಅರ್ಥವಾದ್ದರಿಂದ 'ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ' ಎಂಬ ಪೂರ್ವವಾಕ್ಯದಲ್ಲಿಯೇ ಬಾಧ್ಯತ್ವವು ಮಿಥ್ಯೆಯಾಗಿದೆ ಎಂದು ಹೇಳುವ ಮೂಲಕ ಜಗತ್ತಿನಲ್ಲಿ ಬಾಧ್ಯತ್ವವಿಲ್ಲ ಎಂದು ಹೇಳಿಯಾಗಿದೆ. ಅಂದಮೇಲೆ 'ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ ಸತ್ಯಂ ಸ್ಯಾತ್' ಎಂಬ ಮುಂದಿನ ವಾಕ್ಯದಲ್ಲಿಯೂ ಸಹ ಜಗತ್ತಿನಲ್ಲಿ ಬಾಧ್ಯತ್ವವಿಲ್ಲ ಎಂದೇ ಹೇಳುವುದು ವ್ಯರ್ಥ ಅಲ್ಲವೇ ? ಹಿಂದಿನ ವಾಕ್ಯದಿಂದಲೇ ವಿಷಯ ಸಿದ್ಧವಾಗುವಾಗ ಮುಂದಿನ ವಾಕ್ಯ ಯಾಕೆ ಬೇಕು ?

ಈ ರೀತಿಯಾಗಿ ವೈಯರ್ಥ್ಯಶಂಕೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ- ಇಲ್ಲಿ ನಮ್ಮ ಸಿದ್ಧಾಂತಕ್ಕೆ ಅನುಸಾರವಾಗಿ ದೋಷವನ್ನು ಹೇಳುತ್ತಿಲ್ಲ. ಕಿಂತು ಪರನ್ಯಾಯದಿಂದ ದೋಷವನ್ನು ಹೇಳಲು ಹೊರಟಿರುವುದು. ಪರರ ಸಿದ್ಧಾಂತದಲ್ಲಿ ಮಿಥ್ಯಾ ಎನ್ನುವುದಕ್ಕೆ ಅಸತ್ ಎಂದು ಅರ್ಥ[೧] ಅಂಗೀಕರಿಸುವುದಿಲ್ಲ.

---

೧. ಮಿಥ್ಯಾ ಎನ್ನುವುದಕ್ಕೆ ಅಸತ್ ಎಂದು ಅರ್ಥ ಅಂಗೀಕರಿಸಿದ್ದರೆ ಆಗ 'ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ' ಎಂಬ ಪೂರ್ವವಾಕ್ಯದಲ್ಲಿಯೇ ಬಾಧ್ಯತ್ವವು ಮಿಥ್ಯೆಯಾಗಿದೆ ಎಂದು ಹೇಳುವ

ಆದ್ದರಿಂದ -

**ಯತ್ ಮಿಥ್ಯಾಭೂತಬಾಧ್ಯತಾಕಂ ನ ತತ್ ಬಾಧ್ಯಮ್ ।**
**ಯತ್ ಮಿಥ್ಯಾಭೂತಬಾಧ್ಯತಾಕಂ ತತ್ ಸತ್ಯಭೂತಾಬಾಧ್ಯತಾಕಮ್ ।**
**ಯತ್ ಸತ್ಯಭೂತಾಬಾಧ್ಯತಾಕಂ ತತ್ ಸತ್ಯಮ್, ಯಥಾ ಆತ್ಮಾ ॥**

ಎಂಬುದಾಗಿ ವ್ಯಾಪ್ತಿಬಲದಿಂದಲೇ ಜಗತ್ತಿನಲ್ಲಿ ಬಾಧ್ಯತ್ವಾಭಾವವನ್ನು ಹಾಗೂ ಅಬಾಧ್ಯತಾಸತ್ಯತ್ವದಿಂದ ಸತ್ಯತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ''ತಸ್ಯ ಚ ಮಿಥ್ಯಾತ್ವೇ ....'' ಎಂಬ ಮುಂದಿನ ವಾಕ್ಯ ಹೊರಟಿದೆ.

ಅನ್ನುವುದಕ್ಕಾಗಿಯೇ 'ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ' ಎಂದು ಹಿಂದೆ ಹೇಳಿ 'ತಸ್ಯ ಚ ಮಿಥ್ಯಾತ್ವೇ ಬಾಧ್ಯತ್ವಾಭಾವಃ' ಎಂಬುದಾಗಿ ಆಚಾರ್ಯರು ಹೇಳಲಿಲ್ಲ. (ಹಾಗೆ ಹೇಳಿದ್ದರೆ ಎರಡೂ ವಾಕ್ಯಗಳಲ್ಲಿಯೂ ಬಾಧ್ಯತ್ವಾಭಾವವನ್ನೇ ಹೇಳಿದಂತಾಗಿ ವೈಯರ್ಥ್ಯ ಬರುತ್ತಿತ್ತು.) ಕಿಂತು- **'ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ'** ಎಂಬ ಹಿಂದಿನ ವಾಕ್ಯದಲ್ಲಿ ಬಾಧ್ಯತ್ವ ಮಿಥ್ಯೆಯಾಗಿದೆ ಎಂದು ಹೇಳಿ,

**'ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ ಸತ್ಯಂ ಸ್ಯಾತ್'**

ಎಂಬ ಮುಂದಿನ ವಾಕ್ಯದಲ್ಲಿ ಅಬಾಧ್ಯತಾಸತ್ಯತ್ವವನ್ನು ಹೇಳಿ ಆದರಿಂದ ಜಗತ್ತಿಗೆ ಸತ್ಯತ್ವವನ್ನು ಸಮರ್ಥಿಸಿದ್ದಾರೆ. ಹೀಗೆ ಭಿನ್ನವಿಷಯಕತ್ವ ಇರುವುದರಿಂದ ವೈಯರ್ಥ್ಯ ಇಲ್ಲ ಎಂದು ಅಭಿಪ್ರಾಯ[೧].

---

ಮೂಲಕ (ಮಿಥ್ಯಾ ಎಂದರೆ ಅಸತ್ ಎಂದೇ ಅರ್ಥವಾದ್ದರಿಂದ) ಜಗತ್ತಿನಲ್ಲಿ ಬಾಧ್ಯತ್ವವಿಲ್ಲ ಎಂದು ಹೇಳಿಯಾಗಿದೆ. ಅಂದಮೇಲೆ 'ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ ಸತ್ಯಂ ಸ್ಯಾತ್' ಎಂಬ ಮುಂದಿನ ವಾಕ್ಯದಲ್ಲಿಯೂ ಸಹ ಜಗತ್ತಿನಲ್ಲಿ ಬಾಧ್ಯತ್ವವಿಲ್ಲ ಎಂದು ಹೇಳುವುದು ವ್ಯರ್ಥ ಅಲ್ಲವೇ ? ಎಂಬುದಾಗಿ ಶಂಕಿಸುವುದು ಸರಿಯಾಗುತ್ತಿತ್ತು ಎಂದು ಭಾವ.

೧ ''ಜಗತ್ ಸದ್ವಿಲಕ್ಷಣಂ ಬಾಧ್ಯತ್ವಾತ್, ಯಥಾ ಶುಕ್ತಿರಜತಮ್ ।

ಎಂಬುದಾಗಿ ಜಗತ್ತಿಗೆ ಸದ್ವೈಲಕ್ಷಣ್ಯವನ್ನು ನೀವು ಸಾಧಿಸಲು ಹೊರಟಾಗ,

''ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ''

ಎಂಬ ಹಿಂದಿನ ವಾಕ್ಯದಿಂದ ಬಾಧ್ಯತ್ವವು ಮಿಥ್ಯೆಯಾಗಿದೆ ಎಂದು ಉಪಪಾದಿಸಿ

''ತಸ್ಯ ಚ ಮಿಥ್ಯಾತ್ವೇಽಬಾಧ್ಯತ್ವಮೇವ ಸತ್ಯಂ ಸ್ಯಾತ್''

ಎಂಬ ಮುಂದಿನ ವಾಕ್ಯದಿಂದ ಬಾಧ್ಯತ್ವವು ಮಿಥ್ಯೆಯಾದರೆ ಅಬಾಧ್ಯತ್ವವು ಸತ್ಯವಾಗುತ್ತದೆ, ಅಬಾಧ್ಯತ್ವವು ಸತ್ಯವಾದರೆ ಜಗತ್ತು ಸತ್ಯವೇ ಆಗುತ್ತದೆ.

''ಜಗತ್ ಸತ್ಯಮೇವ ಸತ್ಯಭೂತಾಬಾಧ್ಯತಾಕತ್ವಾತ್ ಯಥಾ ಆತ್ಮಾ''

ಹೌದು, ಅನಿರ್ವಚನೀಯಪದಾರ್ಥವನ್ನು ನಿರಾಕರಣೆ ಮಾಡುತ್ತಿರುವುದರಿಂದ (ಅನಿರ್ವಚನೀಯ ಎಂದರೆ - ಮಿಥ್ಯೆಯಾಗಿರುವ, ಅಸತ್ ಆಗದ ವಸ್ತು ಎಂದರ್ಥ. ಅಂತಹ ಅನಿರ್ವಚನೀಯವಾದ ವಸ್ತು ಇಲ್ಲ ಎಂಬುದಾಗಿ ನಿರಾಕರಣೆ ಮಾಡುತ್ತಿರುವುದರಿಂದ) ಮಿಥ್ಯಾತ್ವ ಎಂದರೆ ಅಸತ್ವ ಎಂದೇ ಪರ್ಯವಸಾನ ಆಗುವುದರಿಂದ, ''**ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ**'' ಎಂಬ ಹಿಂದಿನ ವಾಕ್ಯದಿಂದಲೇ ಬಾಧ್ಯತ್ವಾಸಿದ್ಧಿಯನ್ನು ಉಪಪಾದಿಸಲು ಶಕ್ಯ ಅಲ್ಲವೇ? ಎಂಬುದಾಗಿ ಶಂಕೆ ಬಂದರೆ, ಅದು ಸತ್ಯವೇ.

ಮಿಥ್ಯಾತ್ವ ಎಂದರೆ ಅಸತ್ವ ಎಂದೇ ಪರ್ಯವಸಾನವಾದ್ದರಿಂದ ಹಿಂದಿನ ವಾಕ್ಯದಿಂದಲೇ ಬಾಧ್ಯತ್ವಾಸಿದ್ಧಿಯನ್ನು ಉಪಪಾದಿಸಿದಂತಾಗುತ್ತದೆ ಎನ್ನುವುದು ನಿಜವೇ. ಆದರೂ ಮತ್ತೊಂದು ಮಾರ್ಗದಿಂದ ಅಂದರೆ :- ''ತಸ್ಯ ಚ ಮಿಥ್ಯಾತ್ವೇऽಬಾಧ್ಯತ್ವಮೇವ ಸತ್ಯಂ ಸ್ಯಾತ್'' ಎಂಬ ಮುಂದಿನ ವಾಕ್ಯದಿಂದ ಅಬಾಧ್ಯತಾಸತ್ಯತ್ವವನ್ನು ಹೇಳುವ ಮೂಲಕವಾಗಿಯೂ ಬಾಧ್ಯತ್ವಾಸಿದ್ಧಿಯನ್ನು ಉಪಪಾದಿಸುತ್ತಿರುವುದರಿಂದ ವೈಯರ್ಥ್ಯದೋಷ ಇಲ್ಲ ಎಂದು ಅಭಿಪ್ರಾಯ.

**ಸಚ್ಛಬ್ದಾರ್ಥವಿಕಲ್ಪಾನುಪಪತ್ತಿಯಿಂದಲೂ ಜಗತ್ತಿಗೆ ಸದ್ವಿಲಕ್ಷಣತ್ವ ಉಪಪನ್ನವಲ್ಲ**

**ಟೀಕಾ : ನ ಕೇವಲಂ ಬಾಧ್ಯತ್ವಾಭಾವಾಜ್ಜಗತಿ ಸದ್ವಿಲಕ್ಷಣತ್ವಾನುಪಪತ್ತಿಃ । ಕಿಂತು ಸಚ್ಛಬ್ದಾರ್ಥವಿಕಲ್ಪಾನುಪಪತ್ತೇಶ್ಚ ಇತಿ ಭಾವೇನ ವಿಕಲ್ಪಮಾಹ -**

**ಮೂಲ :- ಸದ್ವಿಲಕ್ಷಣತ್ವಂ ಚ ಸಜ್ಜಾತಿವಿಲಕ್ಷಣತ್ವಂ ಸನ್ಮಾತ್ರವಿಲಕ್ಷಣತ್ವಂ ವಾ ।**

**ಇಹ ಕೇಚಿಜ್ಜಾತಿರೇವ ಪದಾರ್ಥ ಇತ್ಯಾತಿಷ್ಠಂತೇ । ಅಪರೇ ತು ಜಾತಿವಿಶಿಷ್ಟಾ ವ್ಯಕ್ತಿರಿತಿ ಮನ್ಯಂತೇ । ಅನ್ಯೇ ತು ಸ್ವರೂಪಮೇವೇತಿ ಸಂಗಿರಂತೇ । ತತ್ರಾದ್ಯೇ ಮತೇ ಸತ್ ಸತ್ತಾ ಜಾತಿಃ । ದ್ವಿತೀಯೇ ಸತ್ತಾವಿಶಿಷ್ಟಾ ವ್ಯಕ್ತಿಃ । ತದುಭಯಾಭಿಪ್ರಾಯೇಣೋಕ್ತಂ ಸಜ್ಜಾತೀತಿ । ಸತೋ ಜಾತಿಃ ಸಜ್ಜಾತಿಃ । ತಥಾ ಸತ್ವಂ ಜಾತಿರ್ಯಸ್ಯ ತತ್ಸಜ್ಜಾತೀತಿ । ತೃತೀಯಮತಾನುಸಾರೇಣೋಕ್ತಂ- ಸನ್ಮಾತ್ರೇತಿ । ಸನ್ಮಾತ್ರಂ ಸ್ವರೂಪೇಣೈವ ಸತ್ । ನ ಜಾತ್ಯಾ ।**

---

ಎಂಬುದಾಗಿ ಸತ್ಪ್ರತಿಪಕ್ಷತಾರೂಪ ದೋಷಾಂತರವನ್ನು ಮುಂದಿನ ವಾಕ್ಯದಲ್ಲಿ ಹೇಳುತ್ತಿರುವುದರಿಂದಲೂ ಮುಂದಿನ ವಾಕ್ಯ ಸಾರ್ಥಕ ಎಂದು ಭಾವ.

**ಅತ್ರ ಸಚ್ಛಬ್ದಾರ್ಥ ಏವ ವಿಕಲ್ಪ್ಯತೇ। ವೈಲಕ್ಷಣ್ಯೋಕ್ತಿಸ್ತ್ವನುವಾದ-ಮಾತ್ರಂ ದೂಷಣೋಕ್ತಿಸೌಕರ್ಯಾಯೇತಿ ಜ್ಞಾತವ್ಯಮ್ ।**

**ಅನುವಾದ :-** ಕೇವಲ ಬಾಧ್ಯತ್ವ ಇಲ್ಲವಾದ್ದರಿಂದ ಜಗತ್ತಿನಲ್ಲಿ ಸದ್ವಿಲಕ್ಷಣತ್ವ (ಇಲ್ಲ) ಅನುಪಪನ್ನ ಎಂದಷ್ಟೇ ಅಲ್ಲ. ಕಿಂತು ಸದ್ವಿಲಕ್ಷಣತ್ವ ಎನ್ನುವಲ್ಲಿ ಸತ್ ಶಬ್ದಾರ್ಥ ಏನು ? ಎಂದು ವಿಕಲ್ಪಿಸಿದಾಗ ಸತ್ ಶಬ್ದಾರ್ಥದ ನಿರ್ವಚನವನ್ನೂ ಮಾಡಲು ಬಾರದ ಕಾರಣ ಜಗತ್ತಿನಲ್ಲಿ ಸದ್ವಿಲಕ್ಷಣತ್ವ (ಇಲ್ಲ) ಅನುಪಪನ್ನವಾಗಿದೆ ಎಂಬ ಅಭಿಪ್ರಾಯದಿಂದ ಸತ್ ಶಬ್ದಾರ್ಥವನ್ನು ವಿಕಲ್ಪಿಸುತ್ತಾರೆ -

**ಮೂಲ :-** ಸದ್ವಿಲಕ್ಷಣತ್ವಂ ಚ ಸಜ್ಜಾತಿವಿಲಕ್ಷಣತ್ವಂ ಸನ್ಮಾತ್ರವಿಲಕ್ಷಣತ್ವಂ ವಾ ।

**ಮೂಲಾರ್ಥ -** ಸದ್ವಿಲಕ್ಷಣತ್ವ ಎಂದರೆ ಸತ್ತಾಜಾತಿವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರಾ ? ಸತ್ತಾಜಾತಿಮದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರಾ ? ಸ್ವರೂಪೇಣೈವ ಯತ್ ಸತ್ ತದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರಾ ?

★ ಇಲ್ಲಿ ಕೆಲವರು (ಭಟ್ಟಮತಾನುಸಾರಿಗಳು) ಜಾತಿಯೇ ಪದಾರ್ಥ ಎಂದು (ಘಟಶಬ್ದಕ್ಕೆ ಘಟತ್ವ ಎಂಬ ಜಾತಿಯೇ ವಾಚ್ಯಾರ್ಥ ಇತ್ಯಾದಿಯಾಗಿ) ಹೇಳುತ್ತಾರೆ.

★ ಇನ್ನು ಹಲವರಾದರೋ (ಗೌತಮಮತಾನುಸಾರಿಗಳಾದ ನೈಯಾಯಿಕರು) ಜಾತಿವಿಶಿಷ್ಟವಾದ ವ್ಯಕ್ತಿಯೇ ಪದಾರ್ಥ ಎಂಬುದಾಗಿ (ಘಟಶಬ್ದಕ್ಕೆ ಘಟತ್ವ-ಜಾತಿಯಿಂದ ವಿಶಿಷ್ಟವಾದ ಘಟವು ವಾಚ್ಯಾರ್ಥ ಇತ್ಯಾದಿಯಾಗಿ) ತಿಳಿಯುತ್ತಾರೆ.

★ ಮತ್ತೆ ಇತರರು (ಜರನ್ನೈಯಾಯಿಕರು) ಸ್ವರೂಪವೇ ಪದಾರ್ಥ (ಘಟಶಬ್ದಕ್ಕೆ ಘಟತ್ವಜಾತಿಯೂ ವಾಚ್ಯಾರ್ಥ ಅಲ್ಲ, ಘಟತ್ವಜಾತಿವಿಶಿಷ್ಟವಾದ ಘಟವೂ ವಾಚ್ಯಾರ್ಥವಲ್ಲ, ಕಿಂತು ಕೇವಲ ಘಟಸ್ವರೂಪ ವಾಚ್ಯಾರ್ಥ) ಎಂಬುದಾಗಿ ಅಭಿಪ್ರಾಯಪಡುತ್ತಾರೆ.

ಇದರಲ್ಲಿ ಈ ಮೂರು ಮತಗಳ ಮಧ್ಯೆ ಮೊದಲನೇ ಮತದಲ್ಲಿ (ಜಾತಿಯೇ ಪದಾರ್ಥ ಎಂದು ಹೇಳುವ ಮತದಲ್ಲಿ) ಸದ್ವಿಲಕ್ಷಣತ್ವ ಎನ್ನುವಲ್ಲಿ ಸತ್ ಎಂದರೆ ಸತ್ತಾಜಾತಿ ಎಂದು ಅರ್ಥ. ಎರಡನೇ ಮತದಲ್ಲಿ (ಜಾತಿವಿಶಿಷ್ಟವ್ಯಕ್ತಿಯೇ ಪದಾರ್ಥ ಎಂದು ಹೇಳುವ ಮತದಲ್ಲಿ) ಸದ್ವಿಲಕ್ಷಣತ್ವ ಎನ್ನುವಲ್ಲಿ ಸತ್ ಎಂದರೆ ಸತ್ತಾಜಾತಿವಿಶಿಷ್ಟವಾದ ವ್ಯಕ್ತಿ ಎಂದು ಅರ್ಥ.

ಈ ಎರಡೂ ಮತಗಳ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಆಚಾರ್ಯರು ಕೇಳಿದ್ದು ವಿಕಲ್ಪಿಸಿದ್ದು 'ಸಜ್ಜಾತಿವಿಲಕ್ಷಣತ್ವಂ' ಎಂದು.

ಜಾತಿಯೇ ಪದಾರ್ಥ ಎಂದು ಹೇಳುವ ಮೊದಲನೇ ಮತದ ಪ್ರಕಾರ 'ಸಜ್ಜಾತಿವಿಲಕ್ಷಣತ್ವಂ' ಎನ್ನುವುದಕ್ಕೆ -

**ಸತಃ ಜಾತಿಃ ಸಜ್ಜಾತಿಃ, ಸಜ್ಜಾತೇಃ ವಿಲಕ್ಷಣಂ ಸಜ್ಜಾತಿವಿಲಕ್ಷಣಂ, ತಸ್ಯ ಭಾವಃ ಸಜ್ಜಾತಿವಿಲಕ್ಷಣತ್ವಮ್ ॥**

ಎಂಬುದಾಗಿ ವಿಗ್ರಹ ಮಾಡಿಕೊಂಡು, ಸಜ್ಜಾತಿ ಅಂದರೆ ಸತ್‌ಪದಾರ್ಥದಲ್ಲಿ ಇರುವ ಸತ್ತಾಜಾತಿ ಎಂದು ವಿವಕ್ಷಿಸಿ, ಸದ್ವಿಲಕ್ಷಣತ್ವ ಎಂದರೆ ಸತ್ತಾಜಾತಿವಿಲಕ್ಷಣತ್ವ ಎಂಬುದಾಗಿ ಅರ್ಥ ಹೇಳುತ್ತೀರಾ ? ಎಂದು ವಿಕಲ್ಪ.

ಇನ್ನು ಜಾತಿವಿಶಿಷ್ಟವ್ಯಕ್ತಿಯೇ ಪದಾರ್ಥ ಎಂದು ಹೇಳುವ ಎರಡನೇ ಮತದ ಪ್ರಕಾರ ಸಜ್ಜಾತಿ ಎನ್ನುವಲ್ಲಿ ಸತ್ ಎನ್ನುವುದನ್ನು ಭಾವಪ್ರಧಾನನಿರ್ದೇಶ ಮಾಡಿಕೊಂಡು, ಸತ್ ಎಂದರೆ ಸತ್ತಾ(ಜಾತಿ) ಎಂದು ಅರ್ಥ ವಿವಕ್ಷಿಸಿ, 'ಸಜ್ಜಾತಿವಿಲಕ್ಷಣತ್ವಂ' ಎನ್ನುವುದಕ್ಕೆ -

**ಸತ್ತ್ವಂ (ಸತ್ತಾ) ಜಾತಿಃ ಯಸ್ಯ ತತ್ ಸಜ್ಜಾತಿ, ಸಜ್ಜಾತಿನಃ ವಿಲಕ್ಷಣಂ ಸಜ್ಜಾತಿವಿಲಕ್ಷಣಂ, ತಸ್ಯ ಭಾವಃ ಸಜ್ಜಾತಿವಿಲಕ್ಷಣತ್ವಮ್ ॥**

ಎಂಬುದಾಗಿ ವಿಗ್ರಹ ಮಾಡಿಕೊಂಡು ಸದ್ವಿಲಕ್ಷಣತ್ವ ಎಂದರೆ ಸತ್ತಾಜಾತಿಮದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರಾ ? ಎಂಬುದಾಗಿ ವಿಕಲ್ಪ.

ಇನ್ನು ಸ್ವರೂಪವೇ ಪದಾರ್ಥ ಎಂದು ಹೇಳುವ ಮೂರನೇ ಮತಕ್ಕೆ ಅನುಸಾರವಾಗಿ ಆಚಾರ್ಯರು ಕೇಳಿದ್ದು ವಿಕಲ್ಪಿಸಿದ್ದು 'ಸನ್ಮಾತ್ರವಿಲಕ್ಷಣತ್ವಂ' ಎಂದು. ಇಲ್ಲಿ ಸನ್ಮಾತ್ರ ಎಂದರೆ ಸತ್ತಾಜಾತಿಸಂಬಂಧ ಇಲ್ಲದೇ ಕೇವಲ ಸ್ವರೂಪತಃ ಸತ್ ಆದದ್ದು, ಹೊರತು ಸತ್ತಾಜಾತಿ ಇರುವುದರಿಂದ ಸತ್ ಶಬ್ದವಾಚ್ಯವಾದದ್ದಲ್ಲ ಎಂದರ್ಥ. ಹಾಗಾಗಿ ಈ ಮೂರನೇ ಮತದ ಪ್ರಕಾರ ಸದ್ವಿಲಕ್ಷಣತ್ವ ಎಂದರೆ

**ಸ್ವರೂಪೇಣೈವ ಯತ್ ಸತ್ ತದ್ವಿಲಕ್ಷಣತ್ವಮ್ ॥**

ಎಂದು ಅರ್ಥ ಹೇಳುತ್ತೀರಾ ? ಎಂಬುದಾಗಿ ವಿಕಲ್ಪ.

ಹಾಗಾದರೆ ಒಟ್ಟಿನಲ್ಲಿ ಸದ್ವಿಲಕ್ಷಣತ್ವ ಎಂದರೆ ೧) ಸತ್ತಾಜಾತಿವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರಾ ? ೨) ಸತ್ತಾಜಾತಿಮದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರಾ ? ೩) ಸ್ವರೂಪೇಣೈವ ಯತ್ ಸತ್ ತದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರಾ ? ಎಂಬುದಾಗಿ ವಿಕಲ್ಪಗಳನ್ನು ಮಾಡಿದಂತಾಯಿತು.

ಇಲ್ಲಿ ಸದ್ವಿಲಕ್ಷಣತ್ವ ಎನ್ನುವಲ್ಲಿ ಸತ್‌ಶಬ್ದಾರ್ಥ ಏನು ? ಸತ್ ಎಂದರೆ ಸತ್ತಾಜಾತಿ ಎಂದು ಅರ್ಥವೋ ? ಸತ್ತಾಜಾತಿವಿಶಿಷ್ಟವ್ಯಕ್ತಿ ಎಂದು ಅರ್ಥವೋ? ಸ್ವರೂಪಸತ್ ಎಂದು ಅರ್ಥವೋ ? ಎಂಬುದಾಗಿ ಸತ್‌ಶಬ್ದಾರ್ಥದಲ್ಲಿ ವಿಕಲ್ಪ ಮಾಡುತ್ತಿದ್ದಾರೆ ಆಚಾರ್ಯರು. ಹೊರತು ವೈಲಕ್ಷಣ್ಯದಲ್ಲಿ ವಿಕಲ್ಪ ಮಾಡುತ್ತಿಲ್ಲ. ವೈಲಕ್ಷಣ್ಯವನ್ನು ಕೇವಲ ಅನುವಾದ ಮಾಡುತ್ತಿದ್ದಾರೆ ಅಷ್ಟೇ. ಅದು - ಸತ್ತಾಜಾತಿಯಿಂದ ವೈಲಕ್ಷಣ್ಯ ಹೇಳಿದರೆ ಈ ದೋಷ, ಸತ್ತಾಜಾತಿವಿಶಿಷ್ಟ-ವ್ಯಕ್ತಿಯಿಂದ ವೈಲಕ್ಷಣ್ಯ ಹೇಳಿದರೆ ಇನ್ನೊಂದು ದೋಷ, ಸ್ವರೂಪಸತ್‌ನಿಂದ ವೈಲಕ್ಷಣ್ಯ ಹೇಳಿದರೆ ಮತ್ತೊಂದು ದೋಷ ಎಂಬುದಾಗಿ ದೋಷಗಳನ್ನು ಹೇಳಲು ಸೌಕರ್ಯ ಆಗುವುದಕ್ಕಾಗಿ ವೈಲಕ್ಷಣ್ಯವನ್ನು ಕೇವಲ ಅನುವಾದ ಮಾಡುತ್ತಿದ್ದಾರೆ. ಹೊರತು ವೈಲಕ್ಷಣ್ಯದಲ್ಲಿ ಯಾವುದೇ ವಿಕಲ್ಪ ಮಾಡುತ್ತಿಲ್ಲ. ಕೇವಲ ಸತ್‌ಶಬ್ದಾರ್ಥದಲ್ಲಿ ವಿಕಲ್ಪ ಮಾಡುತ್ತಿದ್ದಾರೆ ಎಂಬುದಾಗಿ ತಿಳಿಯಬೇಕು ಎಂದು ಭಾವ.

**ಟೀಕಾ : ನನು ಸತ್ಯಮಬಾಧ್ಯಮಿತಿ ಪರೇಣಾಂಗೀಕೃತಮ್ । ತದಪಿ ಕಸ್ಮಾನ್ನ ಶಂಕ್ಯತೇ । ಸತ್ಯಮ್ । ತಥಾ ಸತಿ 'ಯದಬಾಧ್ಯಂ ನ ತದ್ಬಾಧ್ಯತೇ' ಇತಿ ವ್ಯಾಪ್ಯವ್ಯಾಪಕಭಾವಾನುಪಪತ್ತಿಃ ಸ್ಫುಟೈವೇತಿ ನಿರ್ದಲತ್ವೇನ ಶಂಕಾನರ್ಹತ್ವಾತ್ ।**

**ಅನುವಾದ :-** ವಿವಿಧ ಮತಗಳಿಗೆ ಅನುಸಾರವಾಗಿ ಸತ್‌ಶಬ್ದಕ್ಕೆ ಸತ್ತಾಜಾತಿ, ಜಾತಿವಿಶಿಷ್ಟವ್ಯಕ್ತಿ, ಕೇವಲ ಸ್ವರೂಪಸತ್ ಎಂಬುದಾಗಿ ವಿವಿಧ ಅರ್ಥಗಳನ್ನು ಬುದ್ಧಿಯಲ್ಲಿಟ್ಟುಕೊಂಡು, ಸದ್ವಿಲಕ್ಷಣತ್ವ ಎಂದರೆ ಸತ್ತಾಜಾತಿವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ? ಸತ್ತಾಜಾತಿಮದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ? ಸ್ವರೂಪೇಣೈವ ಯತ್ ಸತ್ ತದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ? ಎಂಬುದಾಗಿ ವಿಕಲ್ಪಗಳನ್ನು ಮಾಡಿದ್ದೀರಿ.

ಅದರಂತೆ ಸತ್ ಶಬ್ದಕ್ಕೆ ಅಬಾಧ್ಯ ಎಂಬ ಅರ್ಥವನ್ನು ಅದ್ವೈತಿಗಳು

ಹೇಳುತ್ತಾರಾದ್ದರಿಂದ, ''ಸದ್ವಿಲಕ್ಷಣತ್ವ ಎಂದರೆ ಅಬಾಧ್ಯವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ?'' ಎಂಬುದಾಗಿ ಆ ಪಕ್ಷವನ್ನೂ ವಿಕಲ್ಪದಲ್ಲಿ ಯಾಕೆ ಸೇರಿಸಿಕೊಂಡಿಲ್ಲ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಯಾಕೆಂದರೆ - ನಿಜವೇ, ಸತ್ ಶಬ್ದಕ್ಕೆ ಅಬಾಧ್ಯ ಎಂದು ಅರ್ಥ ಹೇಳುವುದು ಸತ್ಯವೇ. ಆದರೆ ಹಾಗೆ ಸತ್ ಶಬ್ದಕ್ಕೆ ಅಬಾಧ್ಯ ಎಂಬ ಅರ್ಥವನ್ನು ವಿವಕ್ಷಿಸಿದರೆ

**'ಸಚ್ಚೇನ್ನ ಬಾಧ್ಯೇತ' 'ಯತ್ ಸತ್ ತತ್ ನ ಬಾಧ್ಯತೇ'**

ಎಂಬುದಾಗಿ ವ್ಯಾಪ್ತಿ ಉಪಪನ್ನವಾಗುವುದಿಲ್ಲ. ಯಾಕೆ ? ಸತ್ ಶಬ್ದಕ್ಕೆ ಅಬಾಧ್ಯ ಎಂದು ಅರ್ಥ ವಿವಕ್ಷಿಸಿದಾಗ ''ಯತ್ ಸತ್ ತತ್ ನ ಬಾಧ್ಯತೇ'' ಎಂದರೆ ''ಯತ್ ಅಬಾಧ್ಯಂ ತತ್ ನ ಬಾಧ್ಯತೇ'' ಎಂಬುದಾಗಿ ಹೇಳಿದಂತಾಗುತ್ತದೆ. ಅರ್ಥಾತ್ ಅಬಾಧ್ಯತ್ವವೇ ವ್ಯಾಪ್ಯ, ಅಬಾಧ್ಯತ್ವವೇ ವ್ಯಾಪಕ ಎಂದು ಹೇಳಿದಂತಾಗುತ್ತದೆ. ಆದರೆ ವ್ಯಾಪ್ಯವ್ಯಾಪಕಭಾವ ಹೇಳಬೇಕಾದರೆ ಭೇದವು ನಿಯಮೇನ ಆವಶ್ಯಕವಾದ್ದರಿಂದ, ಅಬಾಧ್ಯತ್ವವೇ ವ್ಯಾಪ್ಯ ಅಬಾಧ್ಯತ್ವವೇ ವ್ಯಾಪಕ ಆಗಲು ಸಾಧ್ಯವಿಲ್ಲ. ವ್ಯಾಪ್ಯವ್ಯಾಪಕಭಾವವು ಉಪಪನ್ನವಾಗುವುದಿಲ್ಲ. ಹೀಗೆ ಅರ್ಥಾಪತ್ತಿಗೆ ಮೂಲವಾದ ವ್ಯಾಪ್ತಿಯೇ ಅನುಪಪನ್ನವಾದ್ದರಿಂದ, ಈ ಪಕ್ಷವೇ ನಿರ್ದಲವಾಗಿದೆ. ಹಾಗಾಗಿ ''ಸದ್ವಿಲಕ್ಷಣತ್ವ ಎಂದರೆ ಅಬಾಧ್ಯವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ?'' ಎಂಬ ಪಕ್ಷ ಶಂಕೆ ಮಾಡಿಕೊಳ್ಳುವುದಕ್ಕೂ ಅರ್ಹವಾಗಿಲ್ಲ. ಆದ್ದರಿಂದ ಈ ಪಕ್ಷವನ್ನು ವಿಕಲ್ಪದಲ್ಲಿ ಸೇರಿಸಿಕೊಂಡಿಲ್ಲ ಎಂದು ಭಾವ.

**ಟೀಕಾ : ಆದ್ಯಪಕ್ಷದ್ವಯಂ ದೂಷಯತಿ –**

**ಮೂಲ :– ಜಾತ್ಯಂಗೀಕಾರೇ ಸದ್ಬಹುತ್ವಮ್ ।**

> **ಸಚ್ಛಬ್ದಾರ್ಥತ್ವೇನ ಸಚ್ಛಬ್ದಪ್ರವೃತ್ತಿನಿಮಿತ್ತತ್ವೇನ ವಾ ಸತ್ತಾಜಾತ್ಯಂಗೀಕಾರೇ ಸತಾಂ ಬಹುತ್ವಮನೇಕತ್ವಮಂಗೀಕರ್ತವ್ಯಂ ಸ್ಯಾತ್ । ಲಕ್ಷಣವ್ಯಾಘಾತಪ್ರಸಂಗೇನೈಕಸ್ಮಿನ್ನುಪದೇಶಾದಿನೈವ ಸಂಗತಿಗ್ರಹಣಾದ್ಯುಪಪತ್ಯಾ ವೈಯರ್ಥ್ಯಪ್ರಸಂಗೇನ ಚ ಜಾತಿವಾದಿಭಿರ್ಜಾತೇರನೇಕಾಶ್ರಯತಾಶ್ರಯಣಾತ್ । ಸದ್ಬಹುತ್ವಂ ಚ ಸದದ್ವೈತವಾದಿನಾಮನಿಷ್ಟಮ್ ।**

**ಅನುವಾದ :-** ''ಸದ್ವಿಲಕ್ಷಣತ್ವ ಎಂದರೆ ೧) ಸತ್ತಾಜಾತಿವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ? ೨) ಸತ್ತಾಜಾತಿಮದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ? ೩) ಸ್ವರೂಪೇಣೈವ ಯತ್ ಸತ್ ತದ್ವಿಲಕ್ಷಣತ್ವ ಎಂದು ಅರ್ಥ ಹೇಳುತ್ತೀರೋ ?'' ಎಂಬ ಮೂರು ಪಕ್ಷಗಳಲ್ಲಿ ಸತ್ತಾಜಾತಿವಿಲಕ್ಷಣತ್ವ - ಸತ್ತಾಜಾತಿಮದ್ವಿಲಕ್ಷಣತ್ವ ಎಂಬ ಮೊದಲನೇ ಎರಡು ಪಕ್ಷಗಳನ್ನು ಆಚಾರ್ಯರು ನಿರಾಕರಿಸುತ್ತಾರೆ -

**ಮೂಲ - ಜಾತ್ಯಂಗೀಕಾರೇ ಸದ್ಬಹುತ್ವಮ್ ।**

**ಮೂಲಾರ್ಥ :-** ಸತ್‌ಶಬ್ದದ ವಾಚ್ಯಾರ್ಥವಾಗಿ ಅಥವಾ ಸತ್‌ಶಬ್ದದ ಪ್ರವೃತ್ತಿನಿಮಿತ್ತವಾಗಿ ಸತ್ತಾಜಾತಿಯನ್ನು ಅಂಗೀಕರಿಸಿದರೆ ಸದ್ಬಹುತ್ವವನ್ನು (ಅನೇಕ ಸತ್‌ಪದಾರ್ಥಗಳನ್ನು) ಒಪ್ಪಬೇಕಾಗುತ್ತದೆ.

ಮೊದಲನೇ ಭಟ್ಟಮತದ ಪ್ರಕಾರ ಸತ್ತಾಜಾತಿಯು ಸತ್‌ಶಬ್ದದ ವಾಚ್ಯಾರ್ಥವಾಗಿದೆ. ಎರಡನೇ ನೈಯಾಯಿಕಮತದ ಪ್ರಕಾರ ಸತ್ತಾಜಾತಿಯು ಸತ್‌ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ('ಘಟಃ ಸನ್' ಎಂಬುದಾಗಿ ಘಟದಲ್ಲಿ ಸತ್‌ಶಬ್ದಪ್ರಯೋಗ ಇದೆ. ಘಟದಲ್ಲಿ ಸತ್‌ಶಬ್ದವು ಪ್ರವೃತ್ತವಾಗಲು ಘಟದಲ್ಲಿರುವ ಸತ್ತಾಜಾತಿಯೇ ನಿಮಿತ್ತವಾಗಿದೆ. ಘಟದಲ್ಲಿ ಸತ್ತಾಜಾತಿ ಇದೆ ಎಂಬ ಕಾರಣಕ್ಕೆ ಘಟವು ಸತ್‌ಶಬ್ದವಾಚ್ಯವಾಗಿದೆ ಎಂದು ಭಾವ.)

ಮೊದಲನೇ ಮತದಲ್ಲಿ ಸತ್ತಾಜಾತಿಯು ಸತ್‌ಶಬ್ದದ ವಾಚ್ಯಾರ್ಥವಾಗಿ ಅಂಗೀಕರಿಸಲ್ಪಟ್ಟಿದ್ದರೆ, ಎರಡನೇ ಮತದಲ್ಲಿ ಸತ್ತಾಜಾತಿಯು ಸತ್‌ಶಬ್ದದ ಪ್ರವೃತ್ತಿನಿಮಿತ್ತವಾಗಿ ಅಂಗೀಕರಿಸಲ್ಪಟ್ಟಿದೆ.

ಈ ರೀತಿಯಾಗಿ ಸತ್‌ಶಬ್ದದ ವಾಚ್ಯಾರ್ಥವಾಗಿ ಅಥವಾ ಸತ್‌ಶಬ್ದದ ಪ್ರವೃತ್ತಿನಿಮಿತ್ತವಾಗಿ ಸತ್ತಾಜಾತಿಯನ್ನು ಅಂಗೀಕರಿಸುವುದಾದರೆ, ಸತ್ ಪದಾರ್ಥಗಳಿಗೆ ಬಹುತ್ವವನ್ನು ಅನೇಕತ್ವವನ್ನು ಅನಿವಾರ್ಯವಾಗಿ ಅಂಗೀಕರಿಸಬೇಕಾಗುತ್ತದೆ. (ಅನೇಕ ಸತ್‌ಪದಾರ್ಥಗಳನ್ನು ಅನಿವಾರ್ಯವಾಗಿ ಅಂಗೀಕರಿಸ ಬೇಕಾಗುತ್ತದೆ.)

ಯಾಕೆ ? ಜಾತಿವಾದಿಗಳು (ಜಾತಿಯನ್ನು ಅಂಗೀಕರಿಸುವ ವಾದಿಗಳು) ಜಾತಿಗೆ ಅನೇಕಾಶ್ರಯತ್ವವನ್ನು (ಜಾತಿಯು ಅನೇಕಧರ್ಮಿಗಳಲ್ಲಿ ಇರುವಂತಹದ್ದು ಎಂದು) ಹೇಳುತ್ತಾರೆ. ಅದಕ್ಕೆ ಎರಡು ಕಾರಣಗಳು.

**ಕಾರಣ ೧)** ಜಾತಿಯು ಏಕಾಶ್ರಯವಾಗಿದೆ (ಒಂದೇ ಧರ್ಮಿಯಲ್ಲಿ ಇರುವಂತಹದ್ದಾಗಿದೆ) ಎಂದು ಹೇಳಿಬಿಟ್ಟರೆ '**ನಿತ್ಯಂ ಏಕಂ ಅನೇಕಾನುಗತಂ ಸಾಮಾನ್ಯಂ**' ಎಂಬುದಾಗಿ ಅನೇಕಾನುಗತತ್ವಘಟಿತವಾದ ಜಾತಿಲಕ್ಷಣವು ವ್ಯಾಹತವಾಗಬೇಕಾದ ಪ್ರಸಂಗ ಬರುತ್ತದೆ. (ಲಕ್ಷಣವಿರೋಧ ಬರುತ್ತದೆ.) ಆದ್ದರಿಂದ ಜಾತಿಯು ಅನೇಕಾಶ್ರಯವಾಗಿದೆ (ಅನೇಕಾನುಗತವಾಗಿದೆ) ಎಂದು ಹೇಳಬೇಕು.

**ಕಾರಣ ೨)** ನಮಗೆ ಸಂಗತಿಗ್ರಹಣವಾಗಬೇಕು ಪದ-ಪದಾರ್ಥಗಳಲ್ಲಿ ವಾಚ್ಯವಾಚಕಭಾವಜ್ಞಾನವಾಗಬೇಕು. ಉದಾ :- ಸಾಸ್ನಾದಿಮತ್ತ್ವವಿಶಿಷ್ಟವಾದ ವ್ಯಕ್ತಿ ಗೋಶಬ್ದವಾಚ್ಯವಾಗಿದೆ ಎಂಬ ಜ್ಞಾನ ಆಗಬೇಕು. ಅದು ಆಗುವುದು ಹೇಗೆ ? ಸಾಸ್ನಾದಿಮತ್ತ್ವವಿಶಿಷ್ಟವಾದ ವ್ಯಕ್ತಿಯನ್ನು ಬೆಟ್ಟು ಮಾಡಿ ತೋರಿಸಿ 'ಇಯಂ ಗೌಃ' ಎಂದು ಉಪದೇಶ ಮಾಡಿ ತಿಳಿಸಬೇಕು. ಅದರಿಂದ ವಾಚ್ಯವಾಚಕಭಾವ ತಿಳಿಯಲ್ಪಡುತ್ತದೆ. ಆದರೆ ಕೇವಲ ಒಂದು ಸಾಸ್ನಾದಿಮತ್ತ್ವವಿಶಿಷ್ಟವ್ಯಕ್ತಿಯಲ್ಲಿ ಗೋಶಬ್ದವಾಚ್ಯತ್ವಜ್ಞಾನ ಆಗಬೇಕಿಲ್ಲ. ಕಿಂತು ಜಗತ್ತಿನಲ್ಲಿ ಎಷ್ಟೆಷ್ಟು ಸಾಸ್ನಾದಿಮತ್ತ್ವವಿಶಿಷ್ಟವ್ಯಕ್ತಿಗಳಿವೆಯೋ ಆ ಎಲ್ಲದರಲ್ಲಿಯೂ ಗೋಶಬ್ದವಾಚ್ಯತ್ವಜ್ಞಾನ ಆಗಬೇಕಿದೆ. ಅದು ಹೇಗೆ ಸಾಧ್ಯ ? ಅದಕ್ಕಾಗಿ ಜಾತಿಯು ಅನೇಕಾನುಗತವಾಗಿದೆ ಎಂದು ಅಂಗೀಕರಿಸುತ್ತಾರೆ ಜಾತಿವಾದಿಗಳು. ಗೋತ್ವಜಾತಿಯು ಎಲ್ಲ ಗೋವುಗಳಲ್ಲಿಯೂ ಅನುಗತವಾಗಿ ಇರುವ ಧರ್ಮವಾಗಿದೆ. ಹೀಗಾಗಿ ಗೋತ್ವವಿಶಿಷ್ಟವಾದ ಒಂದು ಗೋವನ್ನು ಬೆಟ್ಟುಮಾಡಿ ತೋರಿಸಿ 'ಇಯಂ ಗೌಃ' ಎಂಬುದಾಗಿ ಉಪದೇಶ ಮಾಡಿ ತಿಳಿಸಿದಾಗ ಗೋತ್ವವು ಅನುಗತಸಾಮಾನ್ಯವಾದ್ದರಿಂದ ಆ ಗೋತ್ವಜಾತಿಯು ಎಲ್ಲೆಲ್ಲಿ ಇದೆಯೋ ಅದೆಲ್ಲವೂ ಗೋಶಬ್ದವಾಚ್ಯವಾಗಿದೆ ಎಂದು ತಿಳಿಯಲು ಸಾಧ್ಯವಾಗುತ್ತದೆ. ಇದಕ್ಕೆ ಜಾತಿಲಕ್ಷಣಪ್ರತ್ಯಾಸತ್ತಿ ಎಂದು ಕರೆಯುತ್ತಾರೆ.

ಹಾಗಾದರೆ ಸಂಗತಿಗ್ರಹಣವು ಎಲ್ಲ ಗೋವುಗಳಲ್ಲಿಯೂ ಗೋಶಬ್ದವಾಚ್ಯತ್ವ-ಜ್ಞಾನವು ಯಾವಾಗ ಸಾಧ್ಯವಾಗುತ್ತದೆ ? ಗೋತ್ವಜಾತಿಯು ಅನೇಕಾನುಗತ ಎಂದು ಒಪ್ಪಿದಾಗ ಸಂಗತಿಗ್ರಹಣ ಸಾಧ್ಯವಾಗುತ್ತದೆ. ಒಂದುವೇಳೆ ಗೋತ್ವಜಾತಿಯು (ಅನೇಕಾನುಗತವಾಗಿಲ್ಲ) ಏಕಾಶ್ರಿತವಾಗಿದೆ ಎಂದು ಹೇಳಿಬಿಟ್ಟರೆ, ಗೋತ್ವ-ವಿಶಿಷ್ಟವಾದ ಒಂದು ವ್ಯಕ್ತಿಯನ್ನು ಬೆಟ್ಟುಮಾಡಿ ತೋರಿಸಿ 'ಇಯಂ ಗೌಃ' ಎಂಬುದಾಗಿ ಉಪದೇಶ ಮಾಡುವುದರಿಂದಲೇ ಹಾಗೂ ವ್ಯಾಕರಣ-

ವ್ಯವಹಾರಗಳಿಂದಲೇ ಅಲ್ಲಿ ಸಂಗತಿಗ್ರಹಣ ಗೋಶಬ್ದವಾಚ್ಯತ್ವಜ್ಞಾನ ಉಂಟಾಗುವಾಗ ಅಲ್ಲಿ ಜಾತಿಯನ್ನು ಒಪ್ಪುವುದೇ ವ್ಯರ್ಥವಾಗಬೇಕಾಗುತ್ತದೆ.

ಜಾತಿವಾದಿಗಳು ಜಾತಿಯನ್ನು ಒಪ್ಪುವುದೇ ಜಾತಿಲಕ್ಷಣಪ್ರತ್ಯಾಸತ್ತಿಯಿಂದ ಸರ್ವತ್ರ ಸಂಗತಿಗ್ರಹಣ ಆಗುವುದಕ್ಕಾಗಿ. ಆದರೆ ಜಾತಿ ಅನೇಕಾನುಗತ ಅಲ್ಲ ಎಂದು ಹೇಳಿಬಿಟ್ಟರೆ, (ಒಂದೊಂದು ಗೋವಿನಲ್ಲಿ ಒಂದೊಂದು ಗೋತ್ವವನ್ನು ಹೇಳಿದರೆ,) ಉಪದೇಶಾದಿಗಳಿಂದಲೇ ಸಂಗತಿಗ್ರಹಣ ಆಗುವಾಗ ಸಂಗತಿಗ್ರಹಣಕ್ಕಾಗಿ ಅಲ್ಲಿ ಪ್ರತ್ಯೇಕ ಪ್ರತ್ಯೇಕ ಗೋತ್ವಜಾತಿಯನ್ನು ಒಪ್ಪುವುದು ವ್ಯರ್ಥವಾಗಬೇಕಾಗುತ್ತದೆ. ಆದ್ದರಿಂದ ಜಾತಿಯನ್ನು ಒಪ್ಪುವುದು ಸಾರ್ಥಕವಾಗುವುದಕ್ಕಾಗಿ (ಜಾತಿಯು ಅನೇಕಾನುಗತ ಎಂದು ಒಪ್ಪಿದರೆ ಜಾತಿಲಕ್ಷಣಪ್ರತ್ಯಾಸತ್ತಿಯಿಂದ ಸರ್ವತ್ರ ಸಂಗತಿಗ್ರಹಣ ಸಾಧ್ಯವಾಗುವುದರಿಂದ) ಜಾತಿಯು ಅನೇಕಾನುಗತವಾಗಿದೆ ಎಂದು ಹೇಳಬೇಕು.

ಅಂದಮೇಲೆ ಈ ಎರಡು ಕಾರಣಗಳಿಂದ ಜಾತಿಯು ಅನೇಕಾನುಗತವಾಗಿದೆ ಎಂದು ಒಪ್ಪಲೇಬೇಕಾದ್ದರಿಂದ, ಸತ್‌ಶಬ್ದದ ವ್ಯಾಖ್ಯಾರ್ಥವಾಗಿ ಅಥವಾ ಸತ್ ಶಬ್ದದ ಪ್ರವೃತ್ತಿನಿಮಿತ್ತವಾಗಿ ಸತ್ತಾಜಾತಿಯನ್ನು ಅಂಗೀಕರಿಸಿದರೆ, ಆ ಸತ್ತಾಜಾತಿಯು ಅನೇಕಾನುಗತವಾಗಿದೆ ಅರ್ಥಾತ್ ಅನೇಕಸತ್‌ಪದಾರ್ಥಗಳಲ್ಲಿ ಸತ್ತಾಜಾತಿ ಇದೆ ಎಂಬುದಾಗಿ ಸತ್ತಾಜಾತಿಗೆ ಆಶ್ರಯವಾಗಿ ಅನೇಕ ಸತ್ ಪದಾರ್ಥಗಳನ್ನು ಅಂಗೀಕರಿಸಬೇಕಾಗುತ್ತದೆ ಎಂದು ಭಾವ.

ಆಗಲಿ, ಅನೇಕ ಸತ್‌ಪದಾರ್ಥಗಳನ್ನು ಒಪ್ಪೋಣ !

**''ಸಚ್ಛಬ್ದಾರ್ಥತ್ವೇನ ಸಚ್ಛಬ್ದಪ್ರವೃತ್ತಿನಿಮಿತ್ತತ್ವೇನ ವಾ ಸತ್ತಾಜಾತಿಃ ಯದಾ ಅಂಗೀಕ್ರಿಯತೇ ತದಾ ಸತಾಂ ಬಹುತ್ವಂ ಅಂಗೀಕರ್ತವ್ಯಂ ಸ್ಯಾತ್''**

ಎಂಬುದಾಗಿ ನೀವು ಮಾಡಿದ ಆಪಾದನೆ ನಮಗೆ ಇಷ್ಟವೇ ಆಗಿದೆ (ಅನಿಷ್ಟಾಪಾದನೆ ಆಗಿಲ್ಲ) ಎಂದು ಇಷ್ಟಾಪತ್ತಿಯನ್ನು ಹೇಳಲು ಬರುವುದಿಲ್ಲ. ಕಾರಣ-ನೀವು ಅದ್ವೈತವಾದಿಗಳು ಸದದ್ವೈತವಾದಿಗಳು ಪಾರಮಾರ್ಥಿಕವಸ್ತು (ಸತ್‌ಪದಾರ್ಥ) ಒಂದೇ ಇರುವುದು ಎಂದು ಹೇಳುವವರು. ಹೀಗಾಗಿ ಸದ್ಬಹುತ್ವ ಅನೇಕ ಸತ್‌ಪದಾರ್ಥಗಳನ್ನು ಒಪ್ಪುವುದು ನಿಮಗೆ ಅನಿಷ್ಟಾಪಾದನವೇ ಆಗಿದೆ ಎಂದು ಅಭಿಪ್ರಾಯ.

**ಟೀಕಾ : ಅಥ ಬಹೂನಿ ವ್ಯಾವಹಾರಿಕಾಣಿ ಸಂತಿ ಸಂತೀತಿ ನೇದಮನಿಷ್ಟಮಿತಿ ಚೇತ್ । ಏವಂ ತರ್ಹಿ ಜಗದೇವ ಸದಿತಿ ನ ಸದ್ವಿಲಕ್ಷಣಮ್ ।**

**ಅಥ ಸದ್ಬಹುತ್ವಮನಂಗೀಕೃತ್ಯ ಶಶವಿಷಾಣಾದಿಪ್ರತಿಷೇಧವದಯಂ ಪ್ರತಿಷೇಧಃ ಕ್ರಿಯತ ಇತಿ ಚೇನ್ನ । ತಥಾ ಸತಿ ಜಾತಿಜಾತಿಮ-ದ್ವೈಲಕ್ಷಣ್ಯಸಾಧನೇಽರ್ಥಾಂತರತಾದಿಪ್ರಸಂಗಾತ್ ॥**

**ಅನುವಾದ :-** ಮಾಯಾವಾದಿಗಳು ಇಲ್ಲಿ ಶಂಕಿಸುತ್ತಾರೆ -

''ಸತ್‌ಶಬ್ದದ ವಾಚ್ಯಾರ್ಥವಾಗಿ ಅಥವಾ ಸತ್‌ಶಬ್ದದ ಪ್ರವೃತ್ತಿನಿಮಿತ್ತವಾಗಿ ಸತ್ತಾಜಾತಿಯನ್ನು ಅಂಗೀಕರಿಸುವುದಾದರೆ ಅನೇಕ ಸತ್‌ಪದಾರ್ಥಗಳನ್ನು ಅಂಗೀಕರಿಸಬೇಕಾಗುತ್ತದೆ''

ಎಂಬುದಾಗಿ ನೀವು ಮಾಡುತ್ತಿರುವ ಆಪಾದನೆಯು ನಮಗೆ ಇಷ್ಟಾಪಾದನವೇ ಆಗಿದೆ. ಯಾಕೆಂದರೆ - ವ್ಯಾವಹಾರಿಕಸತ್ ಆದ ಘಟ-ಪಟ ಮುಂತಾದ ಅನೇಕ ಪದಾರ್ಥಗಳನ್ನು ನಾವು ಅಂಗೀಕರಿಸಿಯೇ ಅಂಗೀಕರಿಸಿದ್ದೇವೆ. ಹಾಗಾಗಿ ''ಅನೇಕಸತ್‌ಪದಾರ್ಥಗಳನ್ನು ಅಂಗೀಕರಿಸಬೇಕಾಗುತ್ತದೆ'' ಎಂಬ ನಿಮ್ಮ ಆಪಾದನೆ ನಮಗೆ ಇಷ್ಟವೇ ಆಗಿದೆ (ಅನಿಷ್ಟವಾಗಿಲ್ಲ) !

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಕಾರಣ - ಘಟಪಟಾದಿ ಅನೇಕ ಸತ್‌ಪದಾರ್ಥಗಳನ್ನು ಅಂಗೀಕರಿಸುವುದರಿಂದ ಸದ್ಬಹುತ್ವ ಇಷ್ಟವೇ ಆಗಿದೆ ಎನ್ನುವುದಾದರೆ, ಘಟಪಟಾದಿಜಗತ್ತು ನಿಮ್ಮ ಪ್ರಕಾರ ಸತ್ ಆಯಿತೇ ಹೊರತು ಸದ್ವಿಲಕ್ಷಣ ಆಗಲಿಲ್ಲ. ಹಾಗಾಗಿ 'ಬಾಧ ಬರುವುದರಿಂದ ಘಟಪಟಾದಿಜಗತ್ತು ಸದ್ವಿಲಕ್ಷಣವಾಗಿದೆ' ಎಂಬುದಾಗಿ ಬಾಧಾನ್ಯಥಾನುಪಪತ್ತಿಯಿಂದ ಜಗತ್ತಿಗೆ ಸದ್ವೈಲಕ್ಷಣ್ಯವನ್ನು ನೀವು ಸಾಧಿಸುವುದು ಅನುಪಪನ್ನವಾಗಬೇಕಾಗುತ್ತದೆ ಎಂದು ಭಾವ.

ಇದರ ಮೇಲೆ ಹೀಗೆ ಆಕ್ಷೇಪಿಸುತ್ತಾರೆ- ''ಘಟಃ ಶಶವಿಷಾಣಂ ನ'' 'ಘಟವು ಶಶವಿಷಾಣ ಅಲ್ಲ' ಎಂಬುದಾಗಿ ಶಶವಿಷಾಣವನ್ನು ನಿಷೇಧಿಸುತ್ತೇವೆ. ಹಾಗೆ ಶಶವಿಷಾಣದ ಪ್ರತಿಷೇಧ ಮಾಡಬೇಕಾದರೆ ಶಶವಿಷಾಣವನ್ನು ಒಪ್ಪಬೇಕೇ? (ಶಶವಿಷಾಣ ಇದೆ ಎಂದು ಒಪ್ಪಬೇಕೇ ?) ಏನಿಲ್ಲ. ಶಶವಿಷಾಣವನ್ನು ಒಪ್ಪದಿದ್ದರೂ ಶಶವಿಷಾಣದ ಪ್ರತಿಷೇಧ ಮಾಡುತ್ತೇವೆ ಅಲ್ಲವೇ ? ಅದರಂತೆಯೇ ''ಜಗತ್ತು ಸತ್ ಅಲ್ಲ'' ಎಂಬುದಾಗಿ ಸತ್‌ನ ನಿಷೇಧ ಮಾಡಬೇಕಾದರೆ ಸತ್

ಅನ್ನು ಒಪ್ಪಲೇಬೇಕೇ ? ಏನಿಲ್ಲ. ಸದ್ಬಹುತ್ವವನ್ನು ಅನೇಕ ಸತ್‌ಪದಾರ್ಥಗಳನ್ನು ಒಪ್ಪದಿದ್ದರೂ ಸತ್‌ನ ಪ್ರತಿಷೇಧ ಮಾಡುತ್ತೇವೆ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ - ಜಗತ್ತು ಬ್ರಹ್ಮನಂತೆ ಸತ್ಯವಾಗಿದೆಯೋ ? ಇಲ್ಲವೋ ? ಎಂಬುದಾಗಿ ವಿಪ್ರತಿಪತ್ತಿ ಬಂದಾಗ, ಸತ್ಯವಾಗಿದೆ ಎಂದಾದರೂ ಸಾಧನೆ ಮಾಡಬೇಕು ಅಥವಾ ಸತ್ಯವಲ್ಲ ಎಂದಾದರೂ ಸಾಧನೆ ಮಾಡಬೇಕು. ಅದೆರಡನ್ನೂ ಮಾಡದೇ ಸತ್ತಾಜಾತಿಯಿಂದ ವಿಲಕ್ಷಣವಾಗಿದೆ, ಸತ್ತಾಜಾತಿ ಉಳ್ಳದ್ದರಿಂದ ವಿಲಕ್ಷಣವಾಗಿದೆ ಎಂಬುದಾಗಿ ಸಾಧಿಸಿದರೆ ಪ್ರಕೃತಕ್ಕೆ ಅನುಪಯುಕ್ತವಾದದ್ದನ್ನು ಸಾಧಿಸಿದಂತಾಗುವುದರಿಂದ ಅರ್ಥಾಂತರತಾದೋಷ ಬರುತ್ತದೆ.

ಮತ್ತು ಸಿದ್ಧಾಂತದಲ್ಲಿ ಸತ್ತಾಜಾತಿಯನ್ನು ಒಪ್ಪಿದರೂ ಅದು ಅಧಿಕರಣಸ್ವರೂಪವಾಗಿದೆ ಎಂದು ಅಂಗೀಕರಿಸಲಾಗಿದೆ. ಅಧಿಕರಣದಿಂದ ಅತಿರಿಕ್ತವಾದ ಸತ್ತಾವನ್ನು ಅಂಗೀಕರಿಸಿಲ್ಲ. ಹಾಗಾಗಿ ಜಗತ್ತಿನಲ್ಲಿ ಸತ್ತಾ ಇದ್ದರೂ ಜಗತ್ತು ಸತ್ತಾರೂಪವೇ ಹೊರತು ಸತ್ತಾವತ್ (ಸತ್ತಾ ಉಳ್ಳದ್ದು) ಅಲ್ಲ. ಹೀಗೆ ಜಗತ್ತಿನಲ್ಲಿ ಸತ್ತಾಜಾತಿಮದ್ವೈಲಕ್ಷಣ್ಯ ನಮಗೆ ಸಿದ್ಧವೇ ಆಗಿದ್ದರಿಂದ, ಸಿದ್ಧವಾದ ಸತ್ತಾಜಾತಿಮದ್ವೈಲಕ್ಷಣ್ಯವನ್ನು ಸಾಧಿಸಿದರೆ ಸಿದ್ಧಸಾಧನತಾ ದೋಷವೂ ಬರುತ್ತದೆ. (ಆದಿಪದದಿಂದ ಸಿದ್ಧಸಾಧನತಾದೋಷವನ್ನು ತಿಳಿಸುತ್ತಿದ್ದಾರೆ.)

ಈ ರೀತಿಯಾಗಿ ಅರ್ಥಾಂತರತಾ-ಸಿದ್ಧಸಾಧನತಾ ದೋಷಗಳು ಬರುವುದರಿಂದ ''ಸದ್ಬಹುತ್ವ ಒಪ್ಪದಿದ್ದರೂ ಶಶವಿಷಾಣಪ್ರತಿಷೇಧದಂತೆ ಸತ್‌ನ ಪ್ರತಿಷೇಧ ಮಾಡುತ್ತೇವೆ'' ಎಂಬುದಾಗಿ ಆಕ್ಷೇಪ ಮಾಡುವುದು ಸರಿಯಲ್ಲ. ಅಂದಮೇಲೆ ಸತ್‌ಶಬ್ದದ ವಾಚ್ಯಾರ್ಥವಾಗಿ ಅಥವಾ ಸತ್‌ಶಬ್ದದ ಪ್ರವೃತ್ತಿನಿಮಿತ್ತವಾಗಿ ಸತ್ತಾಜಾತಿಯನ್ನು ಅಂಗೀಕರಿಸುವುದಾದರೆ ಸದ್ಬಹುತ್ವಾಪತ್ತಿ ಬರುವುದರಿಂದ, ಸದ್ವಿಲಕ್ಷಣತ್ವ ಎಂದರೆ ಸತ್ತಾಜಾತಿವಿಲಕ್ಷಣತ್ವ ಹಾಗೂ ಸತ್ತಾಜಾತಿಮದ್ವಿಲಕ್ಷಣತ್ವ ಎಂಬ ಎರಡು ಪಕ್ಷಗಳೂ ಸಮಂಜಸವಲ್ಲ ಎಂದು ಸಿದ್ಧವಾಗುತ್ತದೆ.

**ಟೀಕಾ : ತೃತೀಯಂ ದೂಷಯತಿ –**

**ಮೂಲ :– ಸನ್ಮಾತ್ರವಿಲಕ್ಷಣತ್ವಂ ಚೇತ್ ಸಿದ್ಧಸಾಧನತಾ ।**

**ಚೇಚ್ಛಬ್ದೋ ಯದ್ಯರ್ಥೇ । ಸದ್ವಿಲಕ್ಷಣತ್ವಶಬ್ದಾರ್ಥಸ್ತರ್ಹೀತಿ ಶೇಷಃ । ಸಿದ್ಧಸಾಧನತಾ ಅರ್ಥಾಪತ್ತೇರಿತಿ ಶೇಷಃ । ಕಥಮಿತ್ಯತ ಆಹ-**

**ಮೂಲ :- ಬ್ರಹ್ಮವೈಲಕ್ಷಣ್ಯಾಂಗೀಕಾರಾತ್ ।**

**ಸತ್ತಾಸಂಬಂಧಮಂತರೇಣ ಸ್ವರೂಪತ ಏವ ಸತ್ ಬ್ರಹ್ಮೈವ ಪರೇಣಾಂಗೀಕೃತಮ್ । ತದ್ವೈಲಕ್ಷಣ್ಯಂ ಚ ತದ್ವಿಪರೀತಲಕ್ಷಣ-ಯೋಗೋ ವಾ ತಲ್ಲಕ್ಷಣರಾಹಿತ್ಯಂ ವಾ ತತ್ತಾದಾತ್ಮ್ಯಾಭಾವೋ ವಾ । ತತ್ಸರ್ವಂ ಜಗತ್ಯಸ್ಮಾಭಿರಂಗೀಕೃತಮೇವೇತಿ ಕಥಂ ನ ಸಿದ್ಧಸಾಧನತಾ ।**

**ಅನುವಾದ :-** ಸದ್ವಿಲಕ್ಷಣತ್ವ ಎಂದರೆ ಸತ್ತಾಜಾತಿವಿಲಕ್ಷಣತ್ವ ಹಾಗೂ ಸತ್ತಾಜಾತಿಮದ್ವಿಲಕ್ಷಣತ್ವ ಎಂಬ ಎರಡು ಪಕ್ಷಗಳನ್ನು ನಿರಾಕರಿಸಿ ಪ್ರಕೃತ ಸದ್ವಿಲಕ್ಷಣತ್ವ ಎಂದರೆ ಸ್ವರೂಪೇಣೈವ ಯತ್ ಸತ್ ತದ್ವಿಲಕ್ಷಣತ್ವ ಎಂಬ ಮೂರನೇ ಪಕ್ಷವನ್ನು ನಿರಾಕರಿಸುತ್ತಾರೆ -

**ಮೂಲ - ಸನ್ಮಾತ್ರವಿಲಕ್ಷಣತ್ವಂ ಚೇತ್ ಸಿದ್ಧಸಾಧನತಾ ।**

**ಮೂಲಾರ್ಥ - ಸದ್ವಿಲಕ್ಷಣತ್ವ ಎಂದರೆ ಸನ್ಮಾತ್ರವಿಲಕ್ಷಣತ್ವ ಎಂದು ಅರ್ಥ ಹೇಳುವುದಾದರೆ ಆಗ ನಿಮ್ಮ ಅರ್ಥಾಪತ್ತಿಗೆ ಸಿದ್ಧಸಾಧನತಾ ದೋಷ ಬರುತ್ತದೆ.**

ಮೂಲದಲ್ಲಿ 'ಚೇತ್' ಶಬ್ದವು 'ಯದಿ' ಎಂಬ ಅರ್ಥದಲ್ಲಿದೆ. (ಚೇತ್ ಶಬ್ದಕ್ಕೆ ಯದಿ ಎಂದು ಅರ್ಥ.) ಮೂಲದಲ್ಲಿ 'ಸನ್ಮಾತ್ರವಿಲಕ್ಷಣತ್ವಂ ಚೇತ್' ಎಂದಿದೆ. ಅಲ್ಲಿ ''ಸದ್ವಿಲಕ್ಷಣತ್ವಶಬ್ದಾರ್ಥಃ ತರ್ಹಿ'' ಎಂಬುದನ್ನು ಶೇಷ ಮಾಡಿಕೊಳ್ಳಬೇಕು. ಮೂಲದಲ್ಲಿ 'ಸಿದ್ಧಸಾಧನತಾ' ಎಂದಿದೆ. ಅಲ್ಲಿ 'ಅರ್ಥಾಪತ್ತೇಃ' ಎಂದು ಶೇಷ ಮಾಡಿಕೊಳ್ಳಬೇಕು. ನೀವು ಹೇಳುವ ಅರ್ಥಾಪತ್ತಿಗೆ ಸಿದ್ಧಸಾಧನತಾ ದೋಷ ಬರುತ್ತದೆ ಎಂದು ಅನ್ವಯ ಮಾಡಿಕೊಳ್ಳಬೇಕು. ಹಾಗಾದರೆ -

**''ಸನ್ಮಾತ್ರವಿಲಕ್ಷಣತ್ವಂ ಸದ್ವಿಲಕ್ಷಣತ್ವಶಬ್ದಾರ್ಥಃ ಚೇತ್ ತರ್ಹಿ ಅರ್ಥಾಪತ್ತೇಃ ಸಿದ್ಧಸಾಧನತಾ''**

ಎಂಬುದಾಗಿ ಮೂಲದ ಪೂರ್ಣ ಅನ್ವಯ ಮಾಡಿದಂತಾಗುತ್ತದೆ.

''ಸದ್ವಿಲಕ್ಷಣತ್ವ ಎಂದರೆ ಸನ್ಮಾತ್ರವಿಲಕ್ಷಣತ್ವ ಎಂದು ಅರ್ಥ ಹೇಳುವುದಾದರೆ ನಿಮ್ಮ ಅರ್ಥಾಪತ್ತಿಗೆ ಸಿದ್ಧಸಾಧನತಾದೋಷ ಬರುತ್ತದೆ'' ಎಂದು ಹೇಳಿದಿರಿ. ಅರ್ಥಾಪತ್ತಿಗೆ ಸಿದ್ಧಸಾಧನತಾದೋಷ ಹೇಗೆ ಬರುತ್ತದೆ ? ಎಂಬುದಾಗಿ ಪ್ರಶ್ನೆ ಬಂದರೆ, ಆಚಾರ್ಯರು ಅದನ್ನು ನಿರೂಪಿಸುತ್ತಾರೆ -

**ಮೂಲ - ಬ್ರಹ್ಮವೈಲಕ್ಷಣ್ಯಾಂಗೀಕಾರಾತ್ ।**

**ಮೂಲಾರ್ಥಃ- ಸನ್ಮಾತ್ರನಾದವನು (ಸತ್ತಾಜಾತಿಯ ಸಂಬಂಧವಿಲ್ಲದೇ ಸ್ವರೂಪತ ಏವ ಸತ್ ಆದವನು) ಬ್ರಹ್ಮ. ಅಂತಹ ಬ್ರಹ್ಮನಿಂದ ವೈಲಕ್ಷಣ್ಯವನ್ನು ಜಗತ್ತಿಗೆ ನಾವು ಅಂಗೀಕರಿಸಿದ್ದರಿಂದ ಅರ್ಥಾಪತ್ತಿಗೆ ಸಿದ್ಧಸಾಧನತಾ ಬರುತ್ತದೆ.**

ಸತ್ತಾಜಾತಿಯ ಸಂಬಂಧ ಇಲ್ಲದೇ ಸ್ವರೂಪತ ಏವ ಸತ್ ಆದವನು ಬ್ರಹ್ಮ ಒಬ್ಬನೇ ಎಂಬುದಾಗಿ ಪರರು ಅಂಗೀಕರಿಸಿದ್ದಾರೆ. ಅಂತಹ ಬ್ರಹ್ಮನಿಂದ [೧]ವೈಲಕ್ಷಣ್ಯ ಎಂದರೆ ಬ್ರಹ್ಮವಿಪರೀತಲಕ್ಷಣಯೋಗ (ಬ್ರಹ್ಮನ ಲಕ್ಷಣಗಳಿಗೆ ವಿರುದ್ಧವಾದ ಪರಿಚ್ಛಿನ್ನಸತ್ತಾಕತ್ವಾದಿಲಕ್ಷಣಗಳ ಸಂಬಂಧ) ಎಂದಾಗಲೀ ಅಥವಾ ಬ್ರಹ್ಮಲಕ್ಷಣರಾಹಿತ್ಯ (ಬ್ರಹ್ಮನ ಲಕ್ಷಣಗಳು ಇಲ್ಲದಿರುವಿಕೆ) ಎಂದಾಗಲೀ ಅಥವಾ ತತ್ತಾದಾತ್ಮ್ಯಾಭಾವ (ಬ್ರಹ್ಮಲಕ್ಷಣಗಳುಳ್ಳವನಿಂದ ಭೇದ) ಎಂದಾಗಲೀ ಹೇಳಬೇಕು. ಈ ಮೂರುವಿಧವಾದ ವೈಲಕ್ಷಣ್ಯವನ್ನೂ ಜಗತ್ತಿನಲ್ಲಿ ನಾವು ಅಂಗೀಕರಿಸಿಯೇ ಇದ್ದೇವೆ ಆದ್ದರಿಂದ ಸಿದ್ಧಸಾಧನತಾ ಹೇಗೆ ಬರುವುದಿಲ್ಲ?

★ ಬ್ರಹ್ಮನ ಲಕ್ಷಣಗಳು ಅಪರಿಚ್ಛಿನ್ನಸತ್ತಾಕತ್ವ-ಸ್ವತಂತ್ರತ್ವ-ಗುಣಪೂರ್ಣತ್ವ-ದೋಷದೂರತ್ವಾದಿಗಳು. ಇವುಗಳಿಗೆ ವಿರುದ್ಧವಾದ ಪರಿಚ್ಛಿನ್ನಸತ್ತಾಕತ್ವ- ಅಸ್ವತಂತ್ರತ್ವ-ಅಲ್ಪಗುಣತ್ವ-ದೋಷವತ್ವ ಮೊದಲಾದ ಲಕ್ಷಣಗಳನ್ನು ಜಗತ್ತಿನಲ್ಲಿ ನಾವು ಅಂಗೀಕರಿಸಿಯೇ ಇದ್ದೇವೆ.

★ಬ್ರಹ್ಮನ ಲಕ್ಷಣಗಳಾದ ಅಪರಿಚ್ಛಿನ್ನಸತ್ತಾಕತ್ವಾದಿಗಳು ಜಗತ್ತಿನಲ್ಲಿ ಇಲ್ಲ ಎಂಬುದಾಗಿಯೂ ನಾವು ಅಂಗೀಕರಿಸಿಯೇ ಇದ್ದೇವೆ.

★ಬ್ರಹ್ಮನ ಲಕ್ಷಣಗಳು ಅಪರಿಚ್ಛಿನ್ನಸತ್ತಾಕತ್ವಾದಿಗಳು. ಅವುಗಳುಳ್ಳವನು ಬ್ರಹ್ಮನೇ. ಅವನಿಂದ ಭೇದವನ್ನು ಜಗತ್ತಿಗೆ ನಾವು ಅಂಗೀಕರಿಸಿಯೇ ಇದ್ದೇವೆ.

---

೧ ವೈಲಕ್ಷಣ್ಯ ಎನ್ನುವಲ್ಲಿ ನಞ್‌ಗೆ ಸಮಾನಾರ್ಥಕವಾದ ವಿ ಎಂಬ ಉಪಸರ್ಗಕ್ಕೆ ತದ್ವಿರುದ್ಧ-ತದಭಾವ-ತದನ್ಯ ಎಂಬ ಮೂರು ಅರ್ಥಗಳನ್ನು ವಿವಕ್ಷಿಸಿ ಮೂರುಪಕ್ಷಗಳನ್ನು ಹೇಳುತ್ತಿದ್ದಾರೆ.

ಈ ರೀತಿಯಾಗಿ ಮೂರುವಿಧವಾದ ಬ್ರಹ್ಮವೈಲಕ್ಷಣ್ಯವನ್ನೂ ಜಗತ್ತಿನಲ್ಲಿ ನಾವು ಅಂಗೀಕರಿಸಿಯೇ ಇದ್ದೇವೆಯಾದ್ದರಿಂದ ಸನ್ಮಾತ್ರವಿಲಕ್ಷಣತ್ವವು (ಸ್ವರೂಪತ ಏವ ಸತ್ ಆದ ಬ್ರಹ್ಮನಿಂದ ವೈಲಕ್ಷಣ್ಯವು) ನಮಗೆ ಸಿದ್ಧವೇ ಆಗಿದೆ. ಅಂತಹ ಸಿದ್ಧವಾದ ಸನ್ಮಾತ್ರವಿಲಕ್ಷಣತ್ವವನ್ನೇ ಪುನಃ ಅರ್ಥಾಪತ್ತಿಯಿಂದ ಸಾಧಿಸಿದರೆ (ಬಾಧಾನ್ಯಥಾನುಪಪತ್ತಿಯಿಂದ ಸದ್ವೈಲಕ್ಷಣ್ಯವನ್ನು ಸನ್ಮಾತ್ರವಿಲಕ್ಷಣತ್ವವನ್ನು ಸಾಧಿಸಿದರೆ) ಅರ್ಥಾಪತ್ತಿಗೆ ಸಿದ್ಧಸಾಧನತಾದೋಷ ಬರುತ್ತದೆ. ಆದ್ದರಿಂದ ಸದ್ವಿಲಕ್ಷಣತ್ವ ಎಂದರೆ ಸನ್ಮಾತ್ರವಿಲಕ್ಷಣತ್ವ ಎಂಬ ಮೂರನೇ ಪಕ್ಷವೂ ಸಮಂಜಸವಲ್ಲ ಎಂದು ಅಭಿಪ್ರಾಯ.

**ಅವತಾರಿಕೆ :-** ಸದ್ವಿಲಕ್ಷಣತ್ವ ಎಂದರೆ ಸತ್ತಾಜಾತಿವಿಲಕ್ಷಣತ್ವ - ಸತ್ತಾಜಾತಿಮದ್ವಿಲಕ್ಷಣತ್ವ - ಸನ್ಮಾತ್ರವಿಲಕ್ಷಣತ್ವ ಎಂಬ ಮೂರು ಪಕ್ಷಗಳೂ ಸಮಂಜಸವಲ್ಲ ಎಂಬುದಾಗಿ ವಿಕಲ್ಪಿಸಿಕೊಂಡ ಮೂರು ಪಕ್ಷಗಳನ್ನೂ ನಿರಾಕರಿಸಿದ ನಂತರ, ಪರವಾದಿಗಳು ಶಂಕಿಸುತ್ತಾರೆ -

**ಟೀಕಾಃ ಸದ್ವಾದಿನಾ ಜಗತೋ ಯತ್ಸತ್ತ್ವಮಂಗೀಕ್ರಿಯತೇ ತದಭಾವಃ ಸದ್ವಿಲಕ್ಷಣತ್ವಮಿತಿ ಚೇನ್ನ । ಸದ್ವಾದಿನಾ ಪ್ರತಿಪನ್ನೋಪಾಧೌ ನಿಷೇಧಾನರ್ಹತ್ವಲಕ್ಷಣಸ್ಯ ಸತ್ತ್ವಸ್ಯಾಂಗೀಕೃತತ್ವಾತ್ । ತತ್ರ ಚ ದೋಷಸ್ಯೋಕ್ತತ್ವಾತ್ ।**

**ತದೇವಂ ನಾನಿರ್ವಚನೀಯೇ ಪ್ರಮಾಣಮಸ್ತೀತಿ ಸ್ಥಿತಮ್ ।**

**ಅನುವಾದ :-** ಹಾಗಾದರೆ ಸದ್ವಿಲಕ್ಷಣತ್ವ ಎಂದರೆ ಇದಾವುದನ್ನೂ ನಾವು ಹೇಳುವುದಿಲ್ಲ. ಕಿಂತು - ಸದ್ವಾದಿಗಳಾದ ನೀವು ಜಗತ್ತಿಗೆ ಎಂತಹ ಸತ್ತ್ವವನ್ನು ಅಂಗೀಕರಿಸುತ್ತೀರೋ ತದಭಾವವೇ ಸದ್ವಿಲಕ್ಷಣತ್ವ (ಅಂತಹ ಸತ್ತ್ವ ಇಲ್ಲದಿರುವುದೇ ಜಗತ್ತು ಸದ್ವಿಲಕ್ಷಣವಾಗಿದೆ ಎನ್ನುವುದರ ಅರ್ಥ) ಎಂದು ಹೇಳುತ್ತೇವೆ. ಆಗ ನೀವು ಒಪ್ಪಿದ್ದಕ್ಕೆ ವಿರುದ್ಧವಾಗಿ ಹೇಳಿದಂತಾಗುವುದರಿಂದ ಸಿದ್ಧಸಾಧನತಾದಿ ದೋಷಗಳು ಬರುವುದಿಲ್ಲ ಎಂಬುದಾಗಿ ಪರವಾದಿಗಳು ಶಂಕಿಸಿದರೆ, ಅದು ಸರಿಯಲ್ಲ.

ಯಾಕೆಂದರೆ - ಸದ್ವಾದಿಗಳಾದ ನಾವು (ಜಗತ್ತನ್ನು ಸತ್ ಎಂದು ಹೇಳುವ ನಾವು) ''ಪ್ರತಿಪನ್ನೋಪಾಧೌ ನಿಷೇಧಾನರ್ಹತ್ವ'' ರೂಪವಾದ ಸತ್ತ್ವವನ್ನು ಜಗತ್ತಿಗೆ ಅಂಗೀಕರಿಸುತ್ತೇವೆ. ಪ್ರಕೃತ ನೀವು ಅಂತಹ 'ಪ್ರತಿಪನ್ನೋಪಾಧೌ

ನಿಷೇಧಾನರ್ಹತ್ವ'ರೂಪವಾದ ಸತ್ವದ ಅಭಾವವೇ ಸದ್ವಿಲಕ್ಷಣತ್ವ ಎಂದು ಹೇಳುವುದಾದರೆ, ''ಪ್ರತಿಪನ್ನೋಪಾಧೌ ನಿಷೇಧಾರ್ಹತ್ವಂ ಬಾಧ್ಯತ್ವಂ'' ಎಂದು ಹೇಳಿದಂತಾಗುತ್ತದೆ. ಆದರೆ ಜಗತ್ತಿನಲ್ಲಿ ಇಂತಹ ಪ್ರತಿಪನ್ನೋಪಾಧೌ ನಿಷೇಧಾನರ್ಹತ್ವರೂಪಸತ್ವ ಇಲ್ಲ ಅಥವಾ ಪ್ರತಿಪನ್ನೋಪಾಧೌ ನಿಷೇಧಾರ್ಹತ್ವ-ರೂಪ ಬಾಧ್ಯತ್ವ ಇದೆ ಎಂಬುದನ್ನು

**''ನ ಚ ಬಾಧ್ಯಂ ಜಗದಿತ್ಯತ್ರ ಕಿಂಚಿನ್ಮಾನಮ್''**

**''ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ''**

ಇತ್ಯಾದಿ ವಾಕ್ಯಗಳಿಂದ ಪ್ರಮಾಣಾಭಾವಾದಿ ದೋಷಗಳನ್ನು ಹೇಳಿ ನಿರಾಕರಿಸಿ ಆಗಿದೆ. ಆದ್ದರಿಂದ ''ಸದ್ವಾದಿಗಳಾದ ನೀವು ಜಗತ್ತಿನಲ್ಲಿ ಎಂತಹ ಸತ್ವವನ್ನು ಅಂಗೀಕರಿಸುತ್ತೀರೋ ಅದರ ಅಭಾವವೇ ಸದ್ವೈಲಕ್ಷಣ್ಯ ಎಂದು ಹೇಳುತ್ತೇವೆ'' ಎಂಬುದಾಗಿ ಹೇಳುವುದು ಸಮಂಜಸವಲ್ಲ.

ಅಂದಮೇಲೆ ಸದ್ವಿಲಕ್ಷಣತ್ವವೇ ಅನಿರೂಪ್ಯವಾಗಿರುವುದರಿಂದ ಬಾಧಾನ್ಯ-ಥಾನುಪಪತ್ತಿಯಿಂದ ಸದ್ವೈಲಕ್ಷಣ್ಯವನ್ನು ಹೇಳಲು ಬರುವುದಿಲ್ಲ. ಅರ್ಥಾತ್ ಅನಿರ್ವಚನೀಯವಿಷಯದಲ್ಲಿ ಅರ್ಥಾಪತ್ತಿಯನ್ನು ಪ್ರಮಾಣವಾಗಿ ಉದಾಹರಿಸಲು ಬರುವುದಿಲ್ಲ ಎಂದಾಯಿತು. ಹಾಗಾಗಿ ಅನಿರ್ವಚನೀಯ ವಸ್ತುವಿಷಯದಲ್ಲಿ ಪ್ರತ್ಯಕ್ಷವಾಗಲೀ, ಅನುಮಾನವಾಗಲೀ, ಆಗಮವಾಗಲೀ, ಅರ್ಥಾಪತ್ತಿಯಾಗಲೀ ಯಾವುದೇ ಪ್ರಮಾಣ ಇಲ್ಲ ಎಂದು ಸ್ಫುಟವಾಗಿ ಸಿದ್ಧವಾಗುತ್ತದೆ.

### ಬಾಧಕ ತೋರಿಸುವ ಮೂಲಕವೂ ಅನಿರ್ವಚನೀಯವಸ್ತುನಿರಾಕರಣೆ

**ಟೀಕಾ :** **ಏವಂ ಸಾಧಕಪ್ರಮಾಣಾಭಾವೇನಾನಿರ್ವಚನೀಯಂ ನಿರಸ್ಯ ಬಾಧಕೇನಾಪಿ ನಿರಾಚಷ್ಟೇ –**

**ಮೂಲ – ನ ಚ ಕಯಾऽಪಿ ಯುಕ್ತ್ಯಾ ಮಾನೇನ ವಾ ಭೇದನಿರಾಕರಣಂ ಭವತಿ।**

**ಯದಿ ವಿಯದಾದಿಕಮನಿರ್ವಚನೀಯಮಂಗೀಕ್ರಿಯತೇ ತದಾ ''ಭೇದಸ್ಯ ಭೇದಿನೋ ಭಿನ್ನತ್ವೇऽನವಸ್ಥಾಪ್ರಸಂಗಃ । ಅಭಿನ್ನತ್ವೇ ಭೇದಭೇದಿನೋರನ್ಯತರಾಭಾವಪ್ರಸಂಗಃ ।'' ಇತ್ಯಾದಿಕಯಾ ಯುಕ್ತ್ಯಾ ''ಮಾಯಾಮಾತ್ರಮಿದಂ ದ್ವೈತಂ'' ಇತ್ಯಾದಿನಾ**

**ಮಾನೇನ ವಾ ಯತ್ಪರೇಣ ಸ್ವಶಾಸ್ತ್ರೇ ಭೇದನಿರಾಕರಣಂ ಕ್ರಿಯತೇ ತದನುಪಪನ್ನಂ ಸ್ಯಾತ್ ।**

**ಅನುವಾದ :-** ಇಲ್ಲಿಯವರೆಗೆ ಅನಿರ್ವಚನೀಯವಸ್ತುವಿಷಯದಲ್ಲಿ ಪ್ರತ್ಯಕ್ಷ ಮೊದಲಾದ ಯಾವುದೇ ಪ್ರಮಾಣ ಇಲ್ಲ ಎಂಬುದಾಗಿ ಸಾಧಕಪ್ರಮಾಣಾಭಾವದಿಂದ ಅನಿರ್ವಚನೀಯವಸ್ತುವನ್ನು ನಿರಾಕರಣೆ ಮಾಡಿ, ಪ್ರಕೃತ ಅನಿರ್ವಚನೀಯವಸ್ತು ಒಪ್ಪಿದರೆ ಬಾಧಕ ಇದೆ ಎಂಬುದಾಗಿ ಬಾಧಕಪ್ರದರ್ಶನ ಮೂಲಕವಾಗಿಯೂ ಅನಿರ್ವಚನೀಯವಸ್ತುವನ್ನು ನಿರಾಕರಿಸುತ್ತಾರೆ -

**ಮೂಲ :-ನ ಚ ಕಯಾಽಪಿ ಯುಕ್ತ್ಯಾ ಮಾನೇನ ವಾ ಭೇದನಿರಾಕರಣಂ ಭವತಿ ।**

**ಮೂಲಾರ್ಥ :- ಯಾವುದೇ ಯುಕ್ತಿಯಿಂದಾಗಲೀ ಅಥವಾ 'ಮಾಯಾಮಾತ್ರಮಿದಂ ದ್ವೈತಂ' ಇತ್ಯಾದಿ ಪ್ರಮಾಣದಿಂದ ಆಗಲೀ ಭೇದವನ್ನು ನಿರಾಕರಿಸಲು ಬರುವುದಿಲ್ಲ.**

ಪರವಾದಿಗಳು ತಮ್ಮ ಶಾಸ್ತ್ರದಲ್ಲಿ ಯುಕ್ತಿಯಿಂದ ಹಾಗೂ ಆಗಮಪ್ರಮಾಣದಿಂದ ಭೇದದ ನಿರಾಕರಣೆ ಮಾಡಿದ್ದಾರೆ. ಅದು ಹೇಗೆಂದರೆ-

**ಯುಕ್ತಿಯಿಂದ ಭೇದನಿರಾಕರಣೆ**

ಘಟದಲ್ಲಿ ಪಟಭೇದವಿದೆ. ಅಲ್ಲಿ ಭೇದಕ್ಕೂ ಭೇದಿಗೂ (ಪಟಭೇದಕ್ಕೂ ಘಟಕ್ಕೂ) ಭೇದ ಹೇಳುತ್ತೀರೋ ? ಅಭೇದ ಹೇಳುತ್ತೀರೋ ?

ಭೇದಕ್ಕೂ ಭೇದಿಗೂ (ಪಟಭೇದಕ್ಕೂ ಘಟಕ್ಕೂ) ಭೇದ ಹೇಳುವುದಾದರೆ ಘಟದಲ್ಲಿ ಪಟಭೇದದ ಭೇದವಿದೆ ಎಂದಾಯಿತು. ಅಲ್ಲಿಯೂ ಮತ್ತೆ ಭೇದ - ಭೇದಿಗಳಿಗೆ ಭೇದವನ್ನೇ ಹೇಳಬೇಕು. ಹೀಗೆಯೇ ಹೇಳುತ್ತಾ ಹೋದರೆ ಭೇದಪರಂಪರೆ ಬೆಳೆಯುತ್ತಾ ಅನವಸ್ಥಾ ದೋಷ ಬರುತ್ತದೆ. ಹಾಗಾಗಿ ಭೇದ-ಭೇದಿಗಳಿಗೆ ಭೇದ ಹೇಳಲು ಬರುವುದಿಲ್ಲ.

ಇನ್ನು ಭೇದ-ಭೇದಿಗಳಿಗೆ ಅಭೇದ ಹೇಳೋಣವೆಂದರೆ ಅದೂ ಸರಿಯಾಗುವುದಿಲ್ಲ. ಏಕೆಂದರೆ :- ಭೇದ-ಭೇದಿಗಳಿಗೆ ಅಭೇದ ಹೇಳಿದರೆ ಘಟ-ಪಟಭೇದ ಎರಡೂ ಒಂದೇ ಎಂದಾಯಿತು. ಎರಡೂ ಒಂದೇ ಆದರೆ ಅನ್ಯತರಾಭಾವಪ್ರಸಂಗ. ಅರ್ಥಾತ್ ಘಟ-ಪಟಭೇದ ಎರಡೂ ಒಂದೇ ಆದರೆ ಒಂದು ಘಟವಿರಬೇಕು, ಇಲ್ಲವೇ ಪಟಭೇದವಿರಬೇಕು. ಘಟ ಹಾಗೂ

ಪಟಭೇದ ಎರಡೂ ಇರಲು ಸಾಧ್ಯವಿಲ್ಲ. (ಅರ್ಥಾತ್ 'ಘಟದಲ್ಲಿ ಪಟಭೇದ-ವಿದೆ' ಎಂಬುದಾಗಿ ಹೇಳಲು (ಘಟಶಬ್ದ-ಪಟಭೇದಶಬ್ದ ಎರಡೂ ಶಬ್ದಗಳನ್ನು ಏಕಕಾಲಕ್ಕೆ ಪ್ರಯೋಗ ಮಾಡಲು) ಬರುವುದಿಲ್ಲ.

ಆದ್ದರಿಂದ ಭೇದ-ಭೇದಿಗಳಿಗೆ ಭೇದವನ್ನೂ ಹೇಳಲು ಬರುವುದಿಲ್ಲ. ಅಭೇದವನ್ನೂ ಹೇಳಲು ಬರುವುದಿಲ್ಲ. ಹೀಗಾಗಿ ಭೇದವನ್ನು ಒಪ್ಪುವುದೇ ಸಮಂಜಸವಲ್ಲ. ಇದು ಯುಕ್ತಿಯಿಂದ ಭೇದದ ನಿರಾಕರಣೆ.

**ಆಗಮಪ್ರಮಾಣದಿಂದ ಭೇದನಿರಾಕರಣೆ**

ಜೊತೆಗೆ -

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥**

ಎಂಬುದಾಗಿ ಮಾಂಡೂಕೋಪನಿಷತ್ತು 'ಮಾಯಾಮಾತ್ರಮಿದಂ ದ್ವೈತಂ' ''ಭೇದವು ಕೇವಲ ಮಾಯಾಮಾತ್ರವಾಗಿದೆ. ವಾಸ್ತವಿಕವಾಗಿ ಭೇದವಿಲ್ಲ. ಅಭೇದವೇ ಸತ್ಯ'' ಎಂದು ಸ್ಪಷ್ಟವಾಗಿ ಭೇದವನ್ನು ನಿರಾಕರಿಸುತ್ತಿದೆ.

ಆದ್ದರಿಂದಲೂ ಭೇದವನ್ನು ಒಪ್ಪುವುದು ಸಮಂಜಸವಲ್ಲ.

ಈ ರೀತಿಯಾಗಿ ಪರವಾದಿಗಳು ತಮ್ಮ ಶಾಸ್ತ್ರದಲ್ಲಿ ಯುಕ್ತಿಯಿಂದ ಹಾಗೂ ಆಗಮಪ್ರಮಾಣದಿಂದ ಭೇದದ ನಿರಾಕರಣೆ ಮಾಡಿದ್ದಾರೆ. ಆದರೆ ಒಂದುವೇಳೆ ವಿಯದಾದಿಗಳು ಅನಿರ್ವಚನೀಯವಾಗಿವೆ ಎಂದು ಅಂಗೀಕರಿಸುವುದೇ ಆದರೆ, ಆಗ ಈ ಹಿಂದೆ ಹೇಳಿದ ಯುಕ್ತಿಯಿಂದ ಆಗಲೀ ಅಥವಾ ''ಮಾಯಾಮಾತ್ರಮಿದಂ ದ್ವೈತಂ'' ಇತ್ಯಾದಿ ಆಗಮದಿಂದ ಆಗಲೀ ಪರರು ತಮ್ಮ ಶಾಸ್ತ್ರದಲ್ಲಿ ಏನು ಭೇದನಿರಾಕರಣೆ ಮಾಡಿದ್ದಾರೆ ಅದು (ಭೇದವನ್ನು ನಿರಾಕರಿಸುವುದು) ಅನುಪಪನ್ನವಾಗಬೇಕಾಗುತ್ತದೆ.

(ಅನಿರ್ವಚನೀಯವಸ್ತುವನ್ನು ಅಂಗೀಕರಿಸಿದರೆ ಭೇದನಿರಾಕರಣೆ ಯಾಕೆ ಅನುಪಪನ್ನವಾಗುತ್ತದೆ ? ಎಂಬುದನ್ನು ಇಲ್ಲಿಯೇ ಮುಂದೆ ''**ಅಂಗೀಕ್ರಿಯ-ಮಾಣತ್ವಾತ್**'' ಎಂಬ ವಾಕ್ಯದಿಂದ ತೋರಿಸಿಕೊಡುವವರಿದ್ದಾರೆ.)

**ಅವತಾರಿಕೆ :-** ಇದರ ಮಧ್ಯದಲ್ಲಿ 'ಯುಕ್ತ್ಯಾ ಮಾನೇನ ವಾ' ಎಂಬುದಾಗಿ ಆಚಾರ್ಯರು ಹೇಗೆ ಹೇಳಿದರು ? ಎಂಬುದಾಗಿ ಪ್ರಶ್ನೆ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

**ಟೀಕಾ: ನನು ಯುಕ್ತೇರ್ಮಾನತ್ವೇ ಕಥಂ ಪೃಥಗ್ಗ್ರಹಣಮ್ । ಅಮಾನತ್ವೇ ಕಥಂ ನಿರಾಕರಣಾದ್ಯಂಗಮಿತಿ ಚೇತ್ । ಇತ್ಥಮ್ । ಯುಕ್ತಿರಾಗ-ಮೇತಿಕರ್ತವ್ಯತಾತ್ವೇನ ಸ್ವಯಮಮಾನಮಪಿ ನಿರಾಕರಣಾದ್ಯಂಗಂ ಭವತೀತಿ ಪರೇಣಾಂಗೀಕೃತಮ್ । ತದನುವಾದಶ್ಚಾಯಮಿತಿ ।**

**ಅನುವಾದ :-** ಹೌದು, ಆಚಾರ್ಯರು 'ಯುಕ್ತ್ಯಾ ಮಾನೇನ ವಾ' ಎಂದು ಹೇಗೆ ಹೇಳಿದರು? ಏಕೆಂದರೆ, ಯುಕ್ತಿಯನ್ನು ಪ್ರಮಾಣ ಎಂದು ಒಪ್ಪುತ್ತೀರೋ? ಇಲ್ಲವೋ ? ಯುಕ್ತಿಯನ್ನು ಪ್ರಮಾಣ ಎಂದು ಒಪ್ಪುವುದಾದರೆ 'ಮಾನೇನ' ಎನ್ನುವುದರಿಂದಲೇ ಯುಕ್ತಿಯ ಸಂಗ್ರಹವೂ ಆಗುವಾಗ ''ಯುಕ್ತ್ಯಾ ಮಾನೇನ ವಾ'' ಎಂಬುದಾಗಿ ಯುಕ್ತಿಯನ್ನು ಪ್ರತ್ಯೇಕವಾಗಿ ಏಕೆ ಹಿಡಿದರು ? ಇನ್ನು ಯುಕ್ತಿ ಪ್ರಮಾಣವಲ್ಲ ಎನ್ನುವುದಾದರೆ ಅದು ನಿರಾಕರಣೆಗೆ ಅಂಗವಾದರೂ ಹೇಗೆ ಆಗುತ್ತದೆ ? (ಅಪ್ರಮಾಣವಾದ ಯುಕ್ತಿಯಿಂದ ಭೇದವನ್ನು ಹೇಗೆ ನಿರಾಕರಿಸಲು ಬರುತ್ತದೆ?) ಹಾಗಾಗಿ ಯುಕ್ತಿ ಪ್ರಮಾಣವಾಗಿದೆ ಅಥವಾ ಪ್ರಮಾಣವಾಗಿಲ್ಲ ಎಂಬ ಎರಡೂ ಪಕ್ಷಗಳಲ್ಲಿಯೂ ಅನುಪಪತ್ತಿ ಇದ್ದೇ ಇದೆ ಅಲ್ಲವೇ ?

ಈ ರೀತಿಯಾಗಿ ಆಚಾರ್ಯರ ಶಬ್ದಪ್ರಯೋಗದ ಮೇಲೆ ಆಕ್ಷೇಪ ಬಂದರೆ, ಅದಕ್ಕೆ ಇಷ್ಟು ಸಮಾಧಾನ :-

ಪರವಾದಿಗಳು ಯುಕ್ತಿಯ ಬಗ್ಗೆ ಈ ರೀತಿ ಅಭಿಪ್ರಾಯ ತಿಳಿಸುತ್ತಾರೆ -

ಯುಕ್ತಿಯು ತಾನು ಸ್ವತಃ ಅಪ್ರಮಾಣವಾದರೂ ಸಹ ಆಗಮಕ್ಕೆ ಇತಿಕರ್ತವ್ಯತಾ ಆಗಿದೆ. ಅರ್ಥಾತ್ ಸಹಕಾರಿಯಾಗಿದೆ.

**ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ ।**
**ಇತಿಕರ್ತವ್ಯತಾಸ್ಥಾನಂ ಮೀಮಾಂಸಾ ಪೂರಯಿಷ್ಯತಿ ॥**

ಎಂಬ ವಚನದಂತೆ ಯುಕ್ತಿಯು ಆಗಮರೂಪಪ್ರಮಾಣಕ್ಕೆ ಅನುಕೂಲ-ವಾಗುತ್ತದೆ, [೧]ಸಹಕಾರಿಯಾಗುತ್ತದೆ. ವೇದದ ಅರ್ಥವನ್ನು ನಿರ್ಣಯಿಸಲು

೧ ಸಹಕಾರಿಯಾಗುತ್ತದೆ ಎಂದರೆ ವಿಪರೀತಶಂಕಾನಿವರ್ತಕವಾಗುತ್ತದೆ ಎಂದರ್ಥ. ಹೀಗೆ

ನಿರ್ಣಾಯಕಸ್ಥಾನದಲ್ಲಿ ನಿಲ್ಲುತ್ತದೆ ಯುಕ್ತಿ ಎಂದು ಭಾವ. ಹೀಗೆ ಯುಕ್ತಿಯು ಸ್ವಯಂ ತಾನು ಅಪ್ರಮಾಣವಾದರೂ ಸಹ ಆಗಮಕ್ಕೆ ಇತಿಕರ್ತವ್ಯತಾ (ಸಹಕಾರಿ) ಆಗಿದ್ದರಿಂದ ನಿರಾಕರಣಾದಿಗಳಿಗೆ ಅಂಗವಾಗುತ್ತದೆ ಎಂಬುದಾಗಿ ಪರರು ಅಂಗೀಕರಿಸುತ್ತಾರೆ.

ಹಾಗಾಗಿ ಯುಕ್ತಿಯು ಪ್ರಮಾಣವಲ್ಲದಿದ್ದರೂ ಆಗಮಕ್ಕೆ ಇತಿಕರ್ತವ್ಯತಾ ಆದ್ದರಿಂದ ನಿರಾಕರಣಾಂಗವಾಗುತ್ತದೆ ಎಂದು ಪರರು ಅಂಗೀಕರಿಸಿದ್ದರಿಂದ ಅದರ ಅನುವಾದವನ್ನು ಆಚಾರ್ಯರು ಇಲ್ಲಿ ಮಾಡುತ್ತಿದ್ದಾರೆ. ಅರ್ಥಾತ್

**''ನ ಚ ಕಯಾಽಪಿ ಯುಕ್ತ್ಯಾ ಮಾನೇನ ವಾ''**

ಎಂಬ ಆಚಾರ್ಯರ ವಾಕ್ಯವು ಪರರ ವಾಕ್ಯದ ಅರ್ಥತಃ ಅನುವಾದ-ರೂಪವಾಗಿದೆ. ಆದ್ದರಿಂದ 'ಯುಕ್ತಿಯು ಪ್ರಮಾಣವಲ್ಲದಿದ್ದರೂ ನಿರಾಕರಣೆಗೆ ಅಂಗವಾಗುತ್ತದೆ' ಎಂಬ ಪರರ ಅಭಿಪ್ರಾಯವನ್ನು ಅಂತರಂಗದಲ್ಲಿಟ್ಟುಕೊಂಡು 'ಯುಕ್ತ್ಯಾ ಮಾನೇನ ವಾ' ಎಂಬುದಾಗಿ ಆಚಾರ್ಯರು ಯುಕ್ತಿಯನ್ನು ಪ್ರತ್ಯೇಕವಾಗಿ ಗ್ರಹಿಸಿದ್ದು ಸಮಂಜಸವೇ ಆಗಿದೆ ಎಂದು ಅಭಿಪ್ರಾಯ.

**ಟೀಕಾ: ಕುತೋಽನಿರ್ವಚನೀಯವಾದಿನೋ ಭೇದನಿರಾಕರಣಂ ನ ಸಂಭವತೀತ್ಯತ ಆಹ–**

**ಮೂಲ – ಅಂಗೀಕ್ರಿಯಮಾಣತ್ವಾತ್ ।**

**ಅನಿರ್ವಚನೀಯತ್ವಂ ಹಿ ಸದಸದ್ವಿಲಕ್ಷಣತ್ವಮ್ । ವೈಲಕ್ಷಣ್ಯಂ ಚ ಭೇದೋ ವಾ ಭೇದವ್ಯಾಪ್ತಂ ವಾ । ಏವಂ ಚಾನಿರ್ವಚನೀಯ-ಮಂಗೀಕುರ್ವತಾ ಭೇದಸ್ಯಾಂಗೀಕ್ರಿಯಮಾಣತ್ವಾದ್ ಅಂಗೀಕಾರ-ನಿರಾಕರಣಯೋರ್ವ್ಯಾಹತತ್ವಾನ್ನ ಭೇದನಿರಾಕರಣಂ ಸಂಭವತಿ । ಇಷ್ಯತೇ ಚ ತತ್ । ಅತೋ ನಾನಿರ್ವಚನೀಯಾಂಗೀಕಾರೋ ಯುಕ್ತಃ । ಸದಸದ್ವಿಲಕ್ಷಣತ್ವಂ ನಾಮ ಸತ್ವಾಸತ್ವಾನಾಧಾರತ್ವಂ, ನ ಭೇದ ಇತಿ ಚೇನ್ನ । ಸತ್ವವಿಕಲ್ಪನಿರಾಕರಣೇನ ನಿರಸ್ತತ್ವಾತ್ । ನಿರಾಕರಿಷ್ಯಮಾಣತ್ವಾಚ್ಚ ।**

---

ಯುಕ್ತಿಯಿಂದ ವಿಪರೀತಶಂಕಾ ನಿವೃತ್ತವಾದಾಗ ಆಗಮವು ಸ್ವಯಂ ತಾನೇ ತನ್ನ ಪ್ರತಿಪಾದ್ಯ ಅರ್ಥವನ್ನು ಸಾಧಿಸುತ್ತದೆ ಎಂದು ಭಾವ. (ನಾರೋಪಂತ ಟಿಪ್ಪಣೀ)

**ಅನುವಾದ :-** ''ಒಂದುವೇಳೆ ವಿಯದಾದಿಗಳು ಅನಿರ್ವಚನೀಯವಾಗಿವೆ ಎಂದು ಅಂಗೀಕರಿಸುವುದಾದರೆ ಆಗ ಯುಕ್ತಿಯಿಂದಾಗಲೀ ಆಗಮಪ್ರಮಾಣ-ದಿಂದಾಗಲೀ ಪರರು ತಮ್ಮ ಶಾಸ್ತ್ರದಲ್ಲಿ ಏನು ಭೇದನಿರಾಕರಣೆ ಮಾಡಿದ್ದಾರೆ ಅದು ಅನುಪಪನ್ನವಾಗಬೇಕಾಗುತ್ತದೆ'' ಎಂಬುದಾಗಿ ಹೇಳಿದಿರಿ. ಆದರೆ ಅನಿರ್ವಚನೀಯವಸ್ತುವನ್ನು ಅಂಗೀಕರಿಸಿದರೆ ಭೇದನಿರಾಕರಣೆ ಯಾಕೆ ಕೂಡುವುದಿಲ್ಲ? (ಅನಿರ್ವಚನೀಯವಸ್ತುವನ್ನು ಒಪ್ಪುವುದಕ್ಕೂ ಭೇದನಿರಾಕರಣೆ ಅನುಪಪನ್ನವಾಗುವುದಕ್ಕೂ ಏನು ಸಂಬಂಧ ?) ಎಂದು ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

**ಮೂಲ :- ಅಂಗೀಕ್ರಿಯಮಾಣತ್ವಾತ್ ।**

**ಮೂಲಾರ್ಥ :- ಅನಿರ್ವಚನೀಯವಸ್ತುವನ್ನು ಒಪ್ಪುವ ಮೂಲಕ (ಸದಸದ್ವಿ-ಲಕ್ಷಣತ್ವವನ್ನು ಹೇಳುವ ಮೂಲಕ) ಭೇದವನ್ನು ನೀವೇ ಅಂಗೀಕರಿಸಿದ್ದರಿಂದ, ಭೇದವನ್ನು ಅಂಗೀಕರಿಸಿ ನಿರಾಕರಿಸುವುದು ವ್ಯಾಹತವಾಗುತ್ತದೆ. ಆದ್ದರಿಂದ ಅನಿರ್ವಚನೀಯವಾದಿಗಳಾದ ನಿಮಗೆ ಭೇದನಿರಾಕರಣೆ ಉಪಪನ್ನವಾಗುವುದಿಲ್ಲ.**

ಅನಿರ್ವಚನೀಯವಸ್ತುವನ್ನು ನೀವು ಅಂಗೀಕರಿಸುತ್ತಿದ್ದೀರಿ. ಅನಿರ್ವಚನೀಯತ್ವ ಎಂದರೆ ಸದಸದ್ವಿಲಕ್ಷಣತ್ವ. ವಿಲಕ್ಷಣತ್ವ (ವೈಲಕ್ಷಣ್ಯ) ಎಂದರೆ ಭೇದ. ಅಥವಾ [೧]ಭೇದವ್ಯಾಪ್ತವಾದದ್ದು. ಹೀಗಾಗಿ ಅನಿರ್ವಚನೀಯವಸ್ತುವನ್ನು ಅಂಗೀಕರಿಸುವ ನೀವು ಭೇದವನ್ನು ಅಂಗೀಕರಿಸಿದಂತೆಯೇ ಆಯಿತು. (ಅನಿರ್ವಚನೀಯತ್ವ ಸದಸದ್ವಿಲಕ್ಷಣತ್ವ ಎಂದರೆ ಸದ್‌ಭೇದ ಅಸದ್‌ಭೇದ ಎಂದೇ ಅರ್ಥವಾದ್ದರಿಂದ ಭೇದವನ್ನು ಅಂಗೀಕರಿಸಿದಂತಾಯಿತು. ಅಥವಾ ವೈಲಕ್ಷಣ್ಯವು ಭೇದವ್ಯಾಪ್ತವಾಗಿದೆ ಎಂಬ ಪಕ್ಷದಲ್ಲಿ ವ್ಯಾಪ್ತವಾದ ವೈಲಕ್ಷಣ್ಯ (ಸದಸದ್ವೈಲಕ್ಷಣ್ಯ) ಒಪ್ಪಿದ ಮೇಲೆ ವ್ಯಾಪಕವಾದ ಭೇದವನ್ನು ಒಪ್ಪಿದಂತೆಯೇ ಆಯಿತು.)

ಈ ರೀತಿಯಾಗಿ ಭೇದವನ್ನು ಅಂಗೀಕಾರ ಮಾಡಿ ಮತ್ತೆ ಯುಕ್ತಿಯಿಂದ ಹಾಗೂ ಆಗಮದಿಂದ ಭೇದದ ನಿರಾಕರಣೆ ಮಾಡಿದರೆ ವ್ಯಾಹತವಾಗುತ್ತದೆ. ಆದ್ದರಿಂದ ಭೇದದ ನಿರಾಕರಣೆ ಕೂಡುವುದಿಲ್ಲ. ಈಗಲಾದರೋ ಭೇದದ

---

೧ ವೈಲಕ್ಷಣ್ಯ ಎಂದರೆ ವಿರುದ್ಧವಾದ ಲಕ್ಷಣಗಳು ಎಂದು ಅರ್ಥ ಇಟ್ಟುಕೊಂಡರೆ 'ಯತ್ರ ವಿರುದ್ಧಲಕ್ಷಣಾನಿ ತತ್ರ ಭೇದಃ' (ಎಲ್ಲಿ ವಿರುದ್ಧಲಕ್ಷಣಗಳಿರುವವೋ ಅಲ್ಲಿ ಭೇದ ಇರುತ್ತದೆ) ಎಂಬುದಾಗಿ ವ್ಯಾಪ್ತಿ ಇರುವುದರಿಂದ, ವೈಲಕ್ಷಣ್ಯವು ಭೇದವ್ಯಾಪ್ತವಾಗಿದೆ ಎಂದು ಭಾವ.

ನಿರಾಕರಣೆಯನ್ನು [೧]ಮಾಡುತ್ತೀರಿ. ಅಂದಮೇಲೆ ಅನಿರ್ವಚನೀಯವಸ್ತುವನ್ನು ಅಂಗೀಕರಿಸುವುದು ಯುಕ್ತವಲ್ಲ ಎಂದು ಅಭಿಪ್ರಾಯ.

ಅದು ಹಾಗಲ್ಲ. ಅನಿರ್ವಚನೀಯತ್ವ ಎಂದರೆ ಸದಸದ್ವಿಲಕ್ಷಣತ್ವ ಎನ್ನುವುದು ಸರಿಯೇ. ಆದರೆ ಸದಸದ್ವಿಲಕ್ಷಣತ್ವ ಎಂದರೆ ಸದ್‌ಭೇದ ಅಸದ್‌ಭೇದ ಎಂದು ಹೇಳುವುದಿಲ್ಲ. (ಹಾಗೆ ಹೇಳುವುದಾದರೆ ಭೇದವನ್ನು ಅಂಗೀಕರಿಸಿದಂತಾಗಿ ಅಂಗೀಕಾರ-ನಿರಾಕರಣೆಗಳು ವ್ಯಾಹತವಾಗುವ ಪ್ರಸಂಗ ಬರುತ್ತಿತ್ತು.) ಕಿಂತು ಸದಸದ್ವಿಲಕ್ಷಣತ್ವ ಎಂದರೆ ಸತ್ತ್ವಾಸತ್ತ್ವಾನಾಧಾರತ್ವ ಎಂದು ಹೇಳುತ್ತೇವೆ. ಹಾಗಾಗಿ ಸತ್ತ್ವಾಸತ್ತ್ವಾನಾಧಾರತ್ವ ಎಂಬ ಪಕ್ಷದಲ್ಲಿ ಭೇದವನ್ನು ಅಂಗೀಕರಿಸಿದಂತಾಗುವುದಿಲ್ಲ-ವಾದ್ದರಿಂದ ಭೇದನಿರಾಕರಣೆ ವ್ಯಾಹತವಾಗುವುದಿಲ್ಲ ಮತ್ತು ಅನಿರ್ವಚನೀಯ-ವಸ್ತುವನ್ನು ಒಪ್ಪುವುದೂ ಉಪಪನ್ನವಾಗುತ್ತದೆ ಎಂಬುದಾಗಿ ಶಂಕೆ ಮಾಡಿದರೆ, ಅದು ಸರಿಯಲ್ಲ.

ಯಾಕೆಂದರೆ - ಸದಸದ್ವಿಲಕ್ಷಣತ್ವ ಎಂದರೆ ಸತ್ತ್ವಾಸತ್ತ್ವಾನಾಧಾರತ್ವ ಎಂಬುದಾಗಿ ಹೇಳಬೇಕಾದರೆ ಮೊದಲು ಸತ್ತ್ವ-ಅಸತ್ತ್ವಗಳ ನಿರ್ವಚನ ಮಾಡಬೇಕು. ಆದರೆ, ಸದ್ವಿಲಕ್ಷಣತ್ವ ಎಂದರೆ ಏನು? ಎಂದು ಕೇಳುತ್ತಾ -

**ಸದ್ವಿಲಕ್ಷಣತ್ವಂ ಚ ಸಜ್ಜಾತಿವಿಲಕ್ಷಣತ್ವಂ ಸನ್ಮಾತ್ರವಿಲಕ್ಷಣತ್ವಂ ವಾ ।**

ಎಂಬ ವಾಕ್ಯದಿಂದ ಹಿಂದೆಯೇ ಸತ್ತ್ವವಿಕಲ್ಪಗಳನ್ನು ಮಾಡಿ ನಿರಾಕರಿಸಿಯಾಗಿದೆ.

ಸತ್ತ್ವಾನಾಧಾರತ್ವ ಎಂದರೆ ಸತ್ತಾಜಾತ್ಯನಾಧಾರತ್ವ ಎಂದು ಹೇಳುತ್ತೀರೋ? ಬ್ರಹ್ಮತ್ವಾನಾಧಾರತ್ವ ಎಂದು ಹೇಳುತ್ತೀರೋ? ಸತ್ತ್ವಾನಾಧಾರತ್ವ ಎಂದರೆ ಸತ್ತಾಜಾತ್ಯನಾಧಾರತ್ವ ಎಂದು ಹೇಳುವುದಾದರೆ ಹಿಂದೆ ಹೇಳಿದಂತೆ ಸದ್ಬಹುತ್ವಾಪತ್ತಿ. (ಅನೇಕ ಸತ್‌ಪದಾರ್ಥಗಳನ್ನು ಅಂಗೀಕರಿಸಬೇಕಾಗುತ್ತದೆ). ಸತ್ತ್ವಾನಾಧಾರತ್ವ ಎಂದರೆ ಬ್ರಹ್ಮತ್ವಾನಾಧಾರತ್ವ ಎಂದು ಹೇಳುವುದಾದರೆ ವಿಯದಾದಿಪ್ರಪಂಚದಲ್ಲಿ ಬ್ರಹ್ಮತ್ವ ಇಲ್ಲದ ಕಾರಣ, ಪ್ರಪಂಚದಲ್ಲಿ ಬ್ರಹ್ಮತ್ವಾನಾಧಾರತ್ವ ನಮಗೆ ಸಿದ್ಧವೇ ಆಗಿದ್ದರಿಂದ ಸಿದ್ಧಸಾಧನತಾ ಬರುತ್ತದೆ. ಇನ್ನು ಅಸತ್ತ್ವಾನಾಧಾರತ್ವ ಎಂದಾಗ, ಪ್ರಪಂಚದಲ್ಲಿ ಅಸತ್ತ್ವ ಇಲ್ಲವಾದ್ದರಿಂದ

---

೧ ಭೇದದ ನಿರಾಕರಣೆಯನ್ನು ಮಾಡದಿದ್ದರೆ ಅದ್ವೈತವಾದಿತ್ವವೇ ಉಪಪನ್ನವಾಗುವುದಿಲ್ಲ. ಪ್ರಕೃತ ಅದ್ವೈತವಾದಿಗಳಾಗಿರುವ ನೀವು ಭೇದನಿರಾಕರಣೆ ಮಾಡುತ್ತಿದ್ದೀರಿ ಎನ್ನುವುದು ಸ್ಪಷ್ಟ. (ಶ್ರೀವೇದೇಶತೀರ್ಥರ ವ್ಯಾಖ್ಯಾನ)

ಅಸತ್ತ್ವಾನಾಧಾರತ್ವವು ನಮಗೆ ಸಿದ್ಧವೇ ಆದ ಕಾರಣ, ಅಸತ್ತ್ವಾನಾಧಾರತ್ವ ವಿಷಯದಲ್ಲಿಯೂ ಸಿದ್ಧಸಾಧನತಾ ಬರುತ್ತದೆ ಇತ್ಯಾದಿಯಾಗಿ ಸತ್ತ್ವಾನಾಧಾರತ್ವ-ಅಸತ್ತ್ವಾನಾಧಾರತ್ವ ಪಕ್ಷಗಳನ್ನು ಈ ಹಿಂದೆಯೇ ನಿರಾಕರಿಸಿಯಾಗಿದೆ ಎಂದು ಭಾವ.

ಮತ್ತು -

**''ಸತ್ತ್ವಾಸತ್ತ್ವರೂಪವಿಧಿಸಮುಚ್ಚಯಸ್ಯ ಏಕತ್ರ ವಿರುದ್ಧತ್ವವತ್ ತನ್ನಿಷೇಧ-ಸಮುಚ್ಚಯಸ್ಯಾಪಿ ಜಗತಿ ವಿರುದ್ಧತ್ವಾತ್''**

ಎಂಬ ವಾಕ್ಯದಿಂದ ಮುಂದೆಯೂ ನಿರಾಕರಣೆ ಮಾಡುವವರಿದ್ದಾರೆ. ಆದ್ದರಿಂದ ಸದಸದ್ವಿಲಕ್ಷಣತ್ವ ಎಂದರೆ ಸತ್ತ್ವಾಸತ್ತ್ವಾನಾಧಾರತ್ವ ಎಂದು ಹೇಳಲು ಬರುವುದಿಲ್ಲ.

ಅಂದಮೇಲೆ ಅನಿರ್ವಚನೀಯತ್ವ ಎಂದರೆ ಸದಸದ್ವಿಲಕ್ಷಣತ್ವ ಎಂಬ ಪಕ್ಷದಲ್ಲಿ (ವೈಲಕ್ಷಣ್ಯ ಎಂದರೆ ಭೇದ ಅಥವಾ ಭೇದವ್ಯಾಪ್ತ ಎಂಬ ಎರಡೂ ಪಕ್ಷಗಳಲ್ಲಿಯೂ) ಭೇದವನ್ನು ಅಂಗೀಕರಿಸಿದಂತೆಯೇ ಆಗುವುದರಿಂದ, ಭೇದವನ್ನು ಅಂಗೀಕರಿಸಿ ನಿರಾಕರಿಸುವುದು ವ್ಯಾಹತವಾಗುವ ಕಾರಣ, ಅನಿರ್ವಚನೀಯವಸ್ತುವನ್ನು ಒಪ್ಪುವುದು ಸರಿಯಲ್ಲ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ''ಸದಸದ್ವೈಲಕ್ಷಣ್ಯವನ್ನು ಹೇಳುವ ಮೂಲಕ ಭೇದವನ್ನು ಅಂಗೀಕರಿಸಿ ಪುನಃ ಭೇದವನ್ನು ನಿರಾಕರಿಸಿದರೆ ವಿರೋಧ ಬರುತ್ತದೆ'' ಎಂಬುದಾಗಿ ನಾವು ವಿರೋಧದೋಷವನ್ನು ಹೇಳಿದಾಗ, ಆ ವಿರೋಧವನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ -

**ಟೀಕಾ : ಸದಸದ್ವಿಲಕ್ಷಣತ್ವಂ ಮಿಥ್ಯಾಭೂತಮಂಗೀಕ್ರಿಯತೇ । ಭೇದಸ್ತು ಪಾರಮಾರ್ಥಿಕ ಏವ ನಿರಾಕ್ರಿಯತೇ । ತತ್ಕಥಂ ಭೇದಾಂಗೀಕಾರ-ನಿರಾಕರಣಯೋರ್ವಿರೋಧಃ ? ನ ಹಿ ಮಿಥ್ಯಾಭೂತಂ ಚಂದ್ರಭೇದಮಂಗೀಕೃತ್ಯ ಪಾರಮಾರ್ಥಿಕತನ್ನಿರಾಸೇ ವಿರೋಧೋ ಭವತೀತ್ಯತ ಆಹ -**

**ಮೂಲ :- ಅನಿರ್ವಚನೀಯಾಸಿದ್ಧೇಶ್ಚ ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯವಿಲಕ್ಷಣತ್ವಮೇವ ಸತ್ಯಂ ಸ್ಯಾತ್ ।**

**ಯದಿ ವಿರೋಧಪರಿಹಾರಾಯ ಜಗತಃ ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯಂಗೀಕ್ರಿಯತೇ ತದಾ ಅನಿರ್ವಚನೀಯಸ್ಯೋಕ್ತರೀತ್ಯಾ ಪ್ರಮಾಣಾಭಾವೇನಾಸಿದ್ಧೇರ್ಮಿಥ್ಯಾಶಬ್ದಸ್ಯ ತದರ್ಥತ್ವಾನುಪಪತ್ತ್ಯಾ ಅಸದರ್ಥತ್ವೇ ಚಾಂಗೀಕಾರ್ಯೇ ಜಗತಃ ಸದಸದಾತ್ಮಕತ್ವಂ ಸತ್ಯಂ ಪ್ರಸಜ್ಯತೇ । ಸ್ತಂಭೇ ಸ್ತಂಭವೈಲಕ್ಷಣ್ಯಸ್ಯಾಸತ್ವೇ ಸ್ತಂಭಾತ್ಮಕತ್ವಸ್ಯ ಸತ್ಯತ್ವವದಿತಿ ।**

**ಅನುವಾದ:-** ಸದಸದ್ವಿಲಕ್ಷಣತ್ವವನ್ನು ಅಂಗೀಕರಿಸಿ ಭೇದವನ್ನು ನಿರಾಕರಿಸಿದರೆ ವಿರೋಧ ಬರುವುದಿಲ್ಲ. ಹೇಗೆಂದರೆ- ಸಮಾನಸತ್ತಾಕವಾದ ಭಾವ-ಅಭಾವಗಳಲ್ಲಿ ಮಾತ್ರ ವಿರೋಧ ಉಂಟಾಗುತ್ತದೆ. ಪ್ರಕೃತ ಪಾರಮಾರ್ಥಿಕವಾದ ಭೇದವನ್ನು ಅಂಗೀಕರಿಸಿ ಪಾರಮಾರ್ಥಿಕವಾದ ಭೇದವನ್ನೇ ನಿರಾಕರಿಸುವುದಾದರೆ ವಿರೋಧ ಬರುತ್ತಿತ್ತು. ಆದರೆ ನಾವು ಈಗ ಹಾಗೆ ಮಾಡುತ್ತಿಲ್ಲ. ಮಿಥ್ಯಾಭೂತವಾದ ಸದಸದ್ವಿಲಕ್ಷಣತ್ವವನ್ನು (ಭೇದವನ್ನು) ಅಂಗೀಕರಿಸುತ್ತೇವೆ. ಪಾರಮಾರ್ಥಿಕವಾದ ಭೇದವನ್ನು ನಿರಾಕರಿಸುತ್ತೇವೆ. ಅಂದಮೇಲೆ ಅಂಗೀಕರಿಸುವ ಭೇದ, ನಿರಾಕರಿಸುವ ಭೇದ ಎರಡೂ ಭಿನ್ನಭಿನ್ನಸತ್ತಾಕವಾದ್ದರಿಂದ, ಭೇದಾಂಗೀಕಾರ-ಭೇದನಿರಾಕರಣೆಗಳಲ್ಲಿ ವಿರೋಧ ಹೇಗೆ ಬರಲು ಸಾಧ್ಯ? ಮಿಥ್ಯಾಭೂತವಾದ ಚಂದ್ರಭೇದವನ್ನು ಅಂಗೀಕರಿಸಿ ಪಾರಮಾರ್ಥಿಕವಾದ ಚಂದ್ರಭೇದವನ್ನು ನಿರಾಕರಿಸಿದರೆ ವಿರೋಧ ಬರುವುದಿಲ್ಲ ಅಲ್ಲವೇ ?

ಈ ರೀತಿಯಾಗಿ ವಿರೋಧಪರಿಹಾರ ಮಾಡಿಕೊಳ್ಳುವ ಪ್ರಯತ್ನ ಮಾಡಿದರೆ ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

**ಮೂಲ:-** ಅನಿರ್ವಚನೀಯಾಸಿದ್ಧೇಶ್ಚ ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯವಿಲಕ್ಷಣತ್ವಮೇವ ಸತ್ಯಂ ಸ್ಯಾತ್ ।

**ಮೂಲಾರ್ಥ:-** ಹಿಂದೆ ಹೇಳಿದ ಪ್ರಕಾರ ಪ್ರಮಾಣ ಇಲ್ಲದ ಕಾರಣ ಅನಿರ್ವಚನೀಯವಸ್ತುವೇ ಅಸಿದ್ಧವಾದ್ದರಿಂದ, ಜಗತ್ತಿಗೆ ಸದ್ವಿಲಕ್ಷಣತ್ವ-ಅಸದ್ವಿಲಕ್ಷಣತ್ವಗಳು ಮಿಥ್ಯಾ (ಅಸತ್) ಎಂದು ಹೇಳಿದರೆ ಅವಿಲಕ್ಷಣತ್ವವೇ (ಸದಸದಾತ್ಮಕತ್ವವೇ) ಸತ್ಯವಾಗಬೇಕಾಗುತ್ತದೆ.

ಒಂದುವೇಳೆ ವಿರೋಧಪರಿಹಾರ ಮಾಡಿಕೊಳ್ಳುವುದಕ್ಕಾಗಿ ಜಗತ್ತಿನ ಸದ್ವಿಲಕ್ಷಣತ್ವ ಹಾಗೂ ಅಸದ್ವಿಲಕ್ಷಣತ್ವ ಎರಡೂ ಮಿಥ್ಯಾ ಎಂದು

ಅಂಗೀಕರಿಸುವುದಾದರೆ, ಆಗ ಹಿಂದೆ ಹೇಳಿದ ಪ್ರಕಾರ ಪ್ರತ್ಯಕ್ಷಾದಿ ಯಾವ ಪ್ರಮಾಣವೂ ಇಲ್ಲದ ಕಾರಣ ಅನಿರ್ವಚನೀಯವಾದ ವಸ್ತು ಸಿದ್ಧವಾಗಿಲ್ಲ-ವಾದ್ದರಿಂದ, ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ಎಂದು ಅರ್ಥ ಹೇಳಲು ಬಾರದ ಕಾರಣ, ಮಿಥ್ಯಾಶಬ್ದಕ್ಕೆ ಅಸತ್ ಎಂಬ ಅರ್ಥವನ್ನೇ ಅಂಗೀಕರಿಸಬೇಕಾದ್ದರಿಂದ ಜಗತ್ತಿಗೆ ಸದಸದಾತ್ಮಕತ್ವವು ಸತ್ಯವಾಗಬೇಕಾಗುತ್ತದೆ.

''ಪರಸ್ಪರವಿರುದ್ಧಯೋಃ ಅನ್ಯತರನಿಷೇಧಸ್ಯ ಅನ್ಯತರವಿಧಿನಾ ವ್ಯಾಪ್ತತ್ವಾತ್'' ಎಂಬ ನಿಯಮದಂತೆ ಜಗತ್ತಿನಲ್ಲಿರುವ ಸದ್ವೈಲಕ್ಷಣ್ಯವು ಮಿಥ್ಯಾ (ಅಸತ್) ಎಂದಾದರೆ ಜಗತ್ತಿಗೆ ಸತ್ತ್ವವು ಪ್ರಾಪ್ತವಾಗುತ್ತದೆ. ಅದರಂತೆ ಅಸದ್ವೈಲಕ್ಷಣ್ಯವು ಮಿಥ್ಯಾ (ಅಸತ್) ಎಂದಾದರೆ ಅಸತ್ವವು ಪ್ರಾಪ್ತವಾಗುತ್ತದೆ. ಹೀಗೆ ಸದ್ವೈಲಕ್ಷಣ್ಯ-ಅಸದ್ವೈಲಕ್ಷಣ್ಯಗಳು ಮಿಥ್ಯಾ(ಅಸತ್) ಎಂದು ಹೇಳಿದರೆ ಸತ್ತ್ವ-ಅಸತ್ವಗಳು (ಸದಸದಾತ್ಮಕತ್ವವು) ಸತ್ಯ ಎಂದಾಗಬೇಕಾಗುತ್ತದೆ. ಸ್ತಂಭದಲ್ಲಿ ಸ್ತಂಭ-ವೈಲಕ್ಷಣ್ಯವು ಅಸತ್ ಆದರೆ ಸ್ತಂಭಾತ್ಮಕತ್ವವು ಸತ್ಯವಾದಂತೆ ಎಂದು ಭಾವ.

**ಅವತಾರಿಕೆ :-** ''ಅನಿರ್ವಚನೀಯಾಸಿದ್ಧೇಶ್ಚ ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯವಿಲಕ್ಷಣತ್ವಮೇವ ಸತ್ಯಂ ಸ್ಯಾತ್ ।''ಎಂಬ ವಾಕ್ಯಕ್ಕೆ ''ಪ್ರಮಾಣ ಇಲ್ಲದ ಕಾರಣ ಅನಿರ್ವಚನೀಯವಸ್ತು ಅಸಿದ್ಧವಾಗಿದೆ. ಹಾಗಾಗಿ ಮಿಥ್ಯಾಶಬ್ದಕ್ಕೆ ಅಸತ್ ಎಂದೇ ಅರ್ಥ ಬರುವುದರಿಂದ ಸದ್ವಿಲಕ್ಷಣತ್ವ-ಅಸದ್ವಿಲಕ್ಷಣತ್ವಗಳು ಮಿಥ್ಯಾ ಎಂದರೆ ಅವಿಲಕ್ಷಣತ್ವವೇ ಸತ್ಯವಾಗಬೇಕಾಗುತ್ತದೆ''

ಎಂಬುದಾಗಿ ಒಂದುರೀತಿ ವ್ಯಾಖ್ಯಾನ ಮಾಡಿ, ಆ ವ್ಯಾಖ್ಯಾನಪಕ್ಷದಲ್ಲಿ ''ಅನಿರ್ವಚನೀಯಾಸಿದ್ಧೇಶ್ಚ'' ಎನ್ನುವಲ್ಲಿನ ಚಶಬ್ದಕ್ಕೆ ಅಸ್ವಾರಸ್ಯ ತಿಳಿದು, ಪ್ರಕೃತ ಅದೇ ವಾಕ್ಯಕ್ಕೆ ಮತ್ತೊಂದು ರೀತಿಯಿಂದ ವ್ಯಾಖ್ಯಾನ ಮಾಡುತ್ತಾರೆ -

**ಲಕ್ಷಣಾನುಪಪತ್ತಿಯಿಂದಲೂ ಅನಿರ್ವಚನೀಯವಸ್ತುನಿರಾಕರಣೆ**

**ಟೀಕಾ: ಅಥವಾ ಅನಿರ್ವಚನೀಯಂ ಸಾಧಕಪ್ರಮಾಣಾಭಾವೇನ ಬಾಧಕ-ಸದ್ಭಾವೇನ ಚ ನಿರಾಕೃತ್ಯ ಲಕ್ಷಣಾನುಪಪತ್ತ್ಯಾಽಪಿ ನಿರಾಕರೋತಿ -**

**ಮೂಲ :- ಅನಿರ್ವಚನೀಯಾಸಿದ್ಧೇಶ್ಚ ।**

**ಅನಿರ್ವಚನೀಯಮಿತ್ಯನಿರ್ವಚನೀಯಲಕ್ಷಣಮ್ । ತಸ್ಯಾಸಿದ್ಧೇಶ್ಚ ನ ಚ ಭೇದೇ ವಿಕಲ್ಪೋ ಯುಜ್ಯತ ಇತಿ ಸಂಬಂಧಃ । ತಥಾಹಿ, ನ**

**ತಾವನ್ನಿರ್ವಚನಾನರ್ಹತ್ವಮನಿರ್ವಚನೀಯತ್ವಮ್ । ಮೂಕೀಭಾವಪ್ರಸಂಗೇನಾಸಂಭವಿತ್ವಾತ್ । ನಾಪಿ ಸತ್ವಾಸತ್ವಾಭ್ಯಾಂ ನಿರ್ವಕ್ತುಮಶಕ್ಯತ್ವಲಕ್ಷಣಮ್ । ಪ್ರತ್ಯೇಕಂ ಸದಸತೋರನಿರ್ವಚನೀಯತಾಪಾತಾತ್ । ಸಮುಚ್ಚಿತಸ್ಯ ತಥಾತ್ವೇ ಸತೋಽಸತಶ್ಚ ಸದಸದಾತ್ಮಕತ್ವಾಭಾವೇನ ತತ್ಪ್ರಸಂಗಾನಿವಾರಣಾತ್ ।**

**ಅನುವಾದ :-** 'ಲಕ್ಷಣಪ್ರಮಾಣಾಭ್ಯಾಂ ವಸ್ತುನಿರ್ಣಯಃ' ಎಂಬ ನಿಯಮದಂತೆ ಯಾವುದೇ ಒಂದು ವಸ್ತು ಸಿದ್ಧವಾಗಬೇಕಾದರೂ ಲಕ್ಷಣ-ಪ್ರಮಾಣ ಎರಡೂ ಇರಬೇಕು. (ಆ ವಸ್ತುವಿನ ವಿಷಯದಲ್ಲಿ ಸಾಧಕಪ್ರಮಾಣ, ಮತ್ತು ಆ ವಸ್ತುವಿನ ಲಕ್ಷಣ ಎರಡೂ ಇರಬೇಕು.) ಆ ಹಿನ್ನಲೆಯಲ್ಲಿ ಈವರೆಗೆ ''ನ ಚಾನಿರ್ವಚನೀಯೇ ಕಿಂಚಿನ್ಮಾನಮ್'' ಇತ್ಯಾದಿಯಾಗಿ ಸಾಧಕಪ್ರಮಾಣಾಭಾವದಿಂದ (ಅನಿರ್ವಚನೀಯವಸ್ತುವಿಷಯದಲ್ಲಿ ಯಾವುದೇ ಸಾಧಕಪ್ರಮಾಣ ಇಲ್ಲ ಎಂದು ತೋರಿಸುವ ಮೂಲಕ) ಹಾಗೂ ''ನ ಚ ಕಯಾಽಪಿ ಯುಕ್ತ್ಯಾ....'' ಇತ್ಯಾದಿಯಾಗಿ ಬಾಧಕಸದ್ಭಾವದಿಂದಲೂ ಸಹ ಅನಿರ್ವಚನೀಯವಸ್ತುವನ್ನು ನಿರಾಕರಿಸಿ, ಪ್ರಕೃತದಲ್ಲಿ ಲಕ್ಷಣಾನುಪಪತ್ತಿಯಿಂದಲೂ ಸಹ (ಅನಿರ್ವಚನೀಯವಸ್ತುವಿನ ಲಕ್ಷಣವನ್ನು ಹೇಳಲು ಬರುವುದಿಲ್ಲವಾದ್ದರಿಂದಲೂ ಸಹ) ಅನಿರ್ವಚನೀಯವಸ್ತುವನ್ನು ನಿರಾಕರಿಸುತ್ತಾರೆ -

ಮೂಲ :- ಅನಿರ್ವಚನೀಯಾಸಿದ್ಧೇಶ್ಚ ।

**ಮೂಲಾರ್ಥ:- ಅನಿರ್ವಚನೀಯದ ಲಕ್ಷಣವನ್ನು ಹೇಳಲು ಬರುವುದಿಲ್ಲ-ವಾದ್ದರಿಂದಲೂ ಸಹ ಭೇದವಿಷಯದಲ್ಲಿ ವಿಕಲ್ಪ ಕೂಡುವುದಿಲ್ಲ.**

ಮೂಲದಲ್ಲಿ ಅನಿರ್ವಚನೀಯ ಎನ್ನುವುದಕ್ಕೆ ಅನಿರ್ವಚನೀಯಲಕ್ಷಣ ಎಂದು ಅರ್ಥ ವಿವಕ್ಷಿತ. ಅಂತಹ ಅನಿರ್ವಚನೀಯಲಕ್ಷಣವು ಅಸಿದ್ಧ-ವಾದ್ದರಿಂದಲೂ ಸಹ ''**ನ ಚ ಭೇದೇ ವಿಕಲ್ಪೋ ಯುಜ್ಯತೇ**'' ಪಾರಮಾರ್ಥಿಕ-ಭೇದವು ಸಾಧ್ಯವೋ ? ಅನಿರ್ವಚನೀಯಭೇದವು ಸಾಧ್ಯವೋ ? ಎಂದು ಭೇದವಿಷಯದಲ್ಲಿ ವಿಕಲ್ಪವು ಕೂಡುವುದಿಲ್ಲ ಎಂಬುದಾಗಿ [೧]ಸಂಬಂಧ (ಅನ್ವಯ)

೧ 'ಅನಿರ್ವಚನೀಯಾಸಿದ್ಧೇಶ್ಚ' ಎಂಬ ಈ ವಾಕ್ಯಕ್ಕೂ 'ನ ಚ ಭೇದೇ ವಿಕಲ್ಪೋ ಯುಜ್ಯತೇ' ಎಂಬ ವಾಕ್ಯಕ್ಕೂ ಸಂಬಂಧ (ಅನ್ವಯ) ತಿಳಿಯಬೇಕು ಎಂದರ್ಥ.
''ಅನಿರ್ವಚನೀಯಾಸಿದ್ಧೇಶ್ಚ ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ....'' ಎಂಬ ದೀರ್ಘವಾಕ್ಯದಲ್ಲಿ 'ಅನಿರ್ವಚನೀಯಾಸಿದ್ಧೇಶ್ಚ' ಎನ್ನುವುದನ್ನೇ ಪ್ರತ್ಯೇಕವಾಗಿ ವಿಭಾಗ

ತಿಳಿಯಬೇಕು. ಅನಿರ್ವಚನೀಯಲಕ್ಷಣವು ಯಾಕೆ ಅಸಿದ್ಧ ? ಎಂದರೆ, ಅದನ್ನು ನಿರೂಪಿಸುತ್ತಾರೆ-

**ಲಕ್ಷಣ 1)**

ಅನಿರ್ವಚನೀಯಲಕ್ಷಣ ಏನೆಂದು ಹೇಳುತ್ತೀರಿ ? ಮೊದನೆಯದಾಗಿ 'ನಿರ್ವಚನಾನರ್ಹತ್ವಂ ಅನಿರ್ವಚನೀಯತ್ವಂ' (ಯಾವುದನ್ನು ನಿರ್ವಚನ ಮಾಡಲು ಬರುವುದಿಲ್ಲ ಅದು ಅನಿರ್ವಚನೀಯ) ಎಂಬುದಾಗಿ ಲಕ್ಷಣ ಹೇಳಲು ಬರುವುದಿಲ್ಲ. ಕಾರಣ - ಜಗತ್ತು ಅನಿರ್ವಚನೀಯ ಎಂದರೆ ಜಗತ್ತನ್ನು ನಿರ್ವಚನ ಮಾಡಲು ಬರುವುದಿಲ್ಲ ಎಂದು ಹೇಳಿದಂತಾಗುತ್ತದೆ. ಆದರೆ 'ಅನಿರ್ವಚನೀಯ' ಎಂಬ ಪದದಿಂದಲೇ ಜಗತ್ತಿನ ನಿರ್ವಚನ ಮಾಡುವುದರಿಂದ ವ್ಯಾಹತಿ ಬರುವ ಪ್ರಸಂಗದ ಭಯದಿಂದಾಗಿ ಜಗತ್ತಿನ ನಿರ್ವಚನ ಮಾಡದೇ (ಅಭಿಲಪನಾದಿಗಳನ್ನು ಮಾಡದೇ) ಮೂಕರಂತೆ ಸುಮ್ಮನೆ ಇರಬೇಕಾಗುತ್ತದೆ. ಆದ್ದರಿಂದ 'ನಿರ್ವಚನಾನರ್ಹತ್ವಂ ಅನಿರ್ವಚನೀಯತ್ವಂ' ಎಂಬ ಲಕ್ಷಣ ಅಸಂಭವಿಯಾಗಿದೆ.

**ಲಕ್ಷಣ 2**

''ಸತ್ತ್ವಾಸತ್ತ್ವಾಭ್ಯಾಂ ನಿರ್ವಕ್ತುಮಶಕ್ಯತ್ವಂ ಅನಿರ್ವಚನೀಯತ್ವಂ'' ಎಂದು ಲಕ್ಷಣ ಹೇಳುತ್ತೇವೆ. ಅಂದರೆ ಯಾವುದನ್ನು ಸತ್ ಎಂಬುದಾಗಿಯೂ ನಿರ್ವಚನ ಮಾಡಲು ಬರುವುದಿಲ್ಲ ಮತ್ತು ಅಸತ್ ಎಂಬುದಾಗಿಯೂ ನಿರ್ವಚನ ಮಾಡಲು ಬರುವುದಿಲ್ಲ ಅದು ಅನಿರ್ವಚನೀಯ ಎಂಬುದಾಗಿ ಲಕ್ಷಣ ಹೇಳುತ್ತೇವೆ ಎಂದರೆ, ಅದೂ ಸರಿಯಲ್ಲ. ಕಾರಣ- ಹೀಗೆ ಹೇಳಿದಾಗ ಸತ್ತ್ವೇನ ನಿರ್ವಕ್ತುಮಶಕ್ಯತ್ವ (ಸತ್ ಎಂಬುದಾಗಿ ನಿರ್ವಚನ ಮಾಡಲು ಬರುವುದಿಲ್ಲ)

---

ಮಾಡಿ (ಅದೊಂದನ್ನೇ ಪ್ರತ್ಯೇಕ ವಾಕ್ಯವಾಗಿ ವಿವಕ್ಷಿಸಿ) ವ್ಯಾಖ್ಯಾನ ಮಾಡುತ್ತಿದ್ದಾರೆ. ಹಾಗೆ ವಾಕ್ಯವಿಭಾಗ ಮಾಡಿಕೊಂಡಾಗ 'ಅನಿರ್ವಚನೀಯಾಸಿದ್ಧೇಶ್ಚ' ಎನ್ನುವುದು ಹೇತುವಾದ ಕಾರಣ, ಇದಕ್ಕೆ ಸಾಧ್ಯ ಯಾವುದು ? (ಅನಿರ್ವಚನೀಯಾಸಿದ್ಧೇಶ್ಚ ಅನಿರ್ವಚನೀಯಲಕ್ಷಣವು ಅಸಿದ್ಧವಾದ್ದರಿಂದ, ಮುಂದೇನು?) ಎಂದು ಆಕಾಂಕ್ಷೆ ಬರುತ್ತದೆ. ಅದಕ್ಕಾಗಿ ಟೀಕಾಕೃತ್ಪಾದರು 'ಅನಿರ್ವಚನೀಯಾಸಿದ್ಧೇಶ್ಚ' ಎಂಬ ಹೇತುವಾಕ್ಯಕ್ಕೆ 'ನ ಚ ಭೇದೇ ವಿಕಲ್ಪೋ ಯುಜ್ಯತೇ' ಎಂಬ ಸಾಧ್ಯವಾಕ್ಯದೊಂದಿಗೆ ಸಂಬಂಧ ತಿಳಿಸುತ್ತಿದ್ದಾರೆ. ಆದ್ದರಿಂದ –

''ಅನಿರ್ವಚನೀಯಾಸಿದ್ಧೇಶ್ಚ ನ ಚ ಭೇದೇ ವಿಕಲ್ಪೋ ಯುಜ್ಯತೇ''

ಎಂಬುದಾಗಿ ಅನ್ವಯ ತಿಳಿಯಬೇಕು ಎಂದು ಅಭಿಪ್ರಾಯ.

ಹಾಗೂ ಅಸತ್ತ್ವೇನ ನಿರ್ವಕ್ತುಮಶಕ್ಯತ್ವ (ಅಸತ್ ಎಂಬುದಾಗಿ ನಿರ್ವಚನ ಮಾಡಲು ಬರುವುದಿಲ್ಲ) ಎಂದು ಎರಡು ಲಕ್ಷಣಗಳನ್ನು ಹೇಳಿದಂತಾಗುತ್ತದೆ. ಹಾಗೆ ಹೇಳಿದರೆ ಅಸತ್ತನ್ನು ಸತ್ ಎಂಬುದಾಗಿ ನಿರ್ವಚನ ಮಾಡಲು ಬರುವುದಿಲ್ಲವಾದ್ದರಿಂದ 'ಸತ್ತ್ವೇನ ನಿರ್ವಕ್ತುಮಶಕ್ಯತ್ವ' ಎಂಬ ಲಕ್ಷಣ ಅಸತ್ತಿನಲ್ಲಿ ಬರುತ್ತದೆಯಾದ್ದರಿಂದ ಅಸತ್ ಅನಿರ್ವಚನೀಯವಾಗಬೇಕಾಗುತ್ತದೆ. ಅದರಂತೆಯೇ ಸತ್ತನ್ನು ಅಸತ್ ಎಂಬುದಾಗಿ ನಿರ್ವಚನ ಮಾಡಲು ಬರುವುದಿಲ್ಲವಾದ್ದರಿಂದ 'ಅಸತ್ತ್ವೇನ ನಿರ್ವಕ್ತುಮಶಕ್ಯತ್ವ' ಎಂಬ ಲಕ್ಷಣ ಸತ್ತಿನಲ್ಲಿ ಬರುತ್ತದೆಯಾದ್ದರಿಂದ ಸತ್ ಅನಿರ್ವಚನೀಯವಾಗಬೇಕಾಗುತ್ತದೆ. ಆದ್ದರಿಂದ 'ಸತ್ತ್ವಾಸತ್ತ್ವಾಭ್ಯಾಂ ನಿರ್ವಕ್ತುಮಶಕ್ಯತ್ವಂ ಅನಿರ್ವಚನೀಯತ್ವಂ' ಎಂಬುದಾಗಿಯೂ ಲಕ್ಷಣ ಹೇಳಲು ಬರುವುದಿಲ್ಲ.

**ಲಕ್ಷಣ 3**

''ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಮಶಕ್ಯತ್ವಂ ಅನಿರ್ವಚನೀಯತ್ವಂ'' ಎಂದು ಲಕ್ಷಣ ಹೇಳುತ್ತೇವೆ. ಸತ್‌ಪದಾರ್ಥದಲ್ಲಿ ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಇದ್ದರೂ ಸಹ (ಸತ್ತ್ವೇನ ನಿರ್ವಕ್ತುಮಶಕ್ಯತ್ವ ಇಲ್ಲವಾದ್ದರಿಂದ) ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಮಶಕ್ಯತ್ವ ಇಲ್ಲ. ಅದರಂತೆ ಅಸತ್‌ನಲ್ಲಿ ಸತ್ತ್ವೇನ ನಿರ್ವಕ್ತುಮಶಕ್ಯತ್ವ ಇದ್ದರೂ ಸಹ (ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಇಲ್ಲವಾದ್ದರಿಂದ) ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಮಶಕ್ಯತ್ವ ಇಲ್ಲ. ಆದ್ದರಿಂದ ಹಿಂದಿನ ದೋಷ ಬರುವುದಿಲ್ಲ ಎಂದರೆ, ಈ ಲಕ್ಷಣವೂ ಸರಿಯಲ್ಲ. ಏಕೆಂದರೆ - ಸತ್‌ಪದಾರ್ಥವು ಸದಸದಾತ್ಮಕವಾಗಿದ್ದರೆ ಆಗ ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಂ ಶಕ್ಯವಾಗುತ್ತಿತ್ತು. ಆದರೆ ಸತ್‌ಪದಾರ್ಥ ಕೇವಲ ಸದಾತ್ಮಕವಾಗಿದೆ, ಅಸದಾತ್ಮಕವಾಗಿಲ್ಲ. ಹಾಗಾಗಿ ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಂ ಶಕ್ಯತ್ವಾಭಾವ ಸತ್‌ನಲ್ಲಿ ಬರುವುದರಿಂದ ಸತ್ ಪದಾರ್ಥ ಅನಿರ್ವಚನೀಯವಾಗಬೇಕಾಗುತ್ತದೆ. ಅದರಂತೆಯೇ ಅಸತ್ ಸದಸದಾತ್ಮಕವಾಗಿದ್ದರೆ ಆಗ ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಂ ಶಕ್ಯವಾಗುತ್ತಿತ್ತು. ಆದರೆ ಅಸತ್ ಕೇವಲ ಅಸದಾತ್ಮಕವಾಗಿದೆ, ಸದಾತ್ಮಕವಾಗಿಲ್ಲ. ಹಾಗಾಗಿ ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಂ ಶಕ್ಯತ್ವಾಭಾವ ಅಸತ್‌ನಲ್ಲಿ ಬರುವುದರಿಂದ ಅಸತ್ ಕೂಡ ಅನಿರ್ವಚನೀಯವಾಗಬೇಕಾಗುತ್ತದೆ. ಹಾಗಾಗಿ ಸತ್-ಅಸತ್‌ಗಳು ಅನಿರ್ವಚನೀಯವಾಗಬೇಕಾಗುತ್ತದೆ ಎಂಬ ಹಿಂದಿನ ದೋಷ ನಿವಾರಣೆಯಾಗುವುದಿಲ್ಲ. ಆದ್ದರಿಂದ 'ಸತ್ತ್ವವಿಶಿಷ್ಟಾಸತ್ತ್ವೇನ ನಿರ್ವಕ್ತುಮಶಕ್ಯತ್ವಂ

ಅನಿರ್ವಚನೀಯತ್ವಂ' ಎಂಬುದಾಗಿಯೂ ಲಕ್ಷಣ ಹೇಳಲು ಬರುವುದಿಲ್ಲ ಎಂದು ಭಾವ.

**ಟೀಕಾ : ಸತ್ತ್ವೇನ ನಿರ್ವಕ್ತುಮಶಕ್ಯತ್ವೇ ಸತ್ಯಸತ್ತ್ವೇನ ನಿರ್ವಕ್ತುಮಶಕ್ಯತ್ವಮಿತಿ ಚೇನ್ನ । ಸದಸದಾತ್ಮಕತಾವತ್ ಪ್ರತಿಷೇಧಸಮುಚ್ಚಯಸ್ಯಾಪಿ ವಿರುದ್ಧತ್ವೇನಾಸಂಭವಿತ್ವಾತ್ । ಅನಿರ್ವಚನೀಯವಾದಿನೋ ವಿರೋಧೋಽಸಿದ್ಧ ಇತಿ ಚೇನ್ನ । ಅನಿರ್ವಚನೀಯಸಿದ್ಧೌ ವಿರೋಧಾಸಿದ್ಧಿಃ । ತತೋ ಲಕ್ಷಣಸಿದ್ಧ್ಯಾ ಅನಿರ್ವಚನೀಯಸಿದ್ಧಿರಿತಿ ಪರಸ್ಪರಾಶ್ರಯಪ್ರಸಂಗಾತ್ ।**

**ಅನುವಾದ :-**

**ಲಕ್ಷಣ ೪**

'ಸತ್ತ್ವೇನ ನಿರ್ವಕ್ತುಮಶಕ್ಯತ್ವೇ ಸತಿ ಅಸತ್ತ್ವೇನ ನಿರ್ವಕ್ತುಮಶಕ್ಯತ್ವಂ ಅನಿರ್ವಚನೀಯತ್ವಂ' ಎಂಬುದಾಗಿ ಲಕ್ಷಣ ಹೇಳುತ್ತೇವೆ. ಅನಿರ್ವಚನೀಯತ್ವ ಎಂದರೆ 'ಸತ್ತ್ವೇನ ನಿರ್ವಕ್ತುಮಶಕ್ಯತ್ವದಿಂದ ಸಹಿತವಾದ ಅಸತ್ತ್ವೇನ ನಿರ್ವಕ್ತುಮಶಕ್ಯತ್ವ' ಎಂದು ಹೇಳುತ್ತೇವೆ. ಅರ್ಥಾತ್ ಯಾವ ಒಂದೇ ವಸ್ತುವಿನಲ್ಲಿ ಸತ್ತ್ವೇನ ನಿರ್ವಕ್ತುಮಶಕ್ಯತ್ವ- ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಎರಡೂ ಇವೆಯೋ ಅದು ಅನಿರ್ವಚನೀಯಪದಾರ್ಥ ಎಂಬುದಾಗಿ ಹೇಳುತ್ತೇವೆ ಎಂದರೆ, ಈ ರೀತಿಯಾಗಿಯೂ ಹೇಳಲು ಬರುವುದಿಲ್ಲ.

ಯಾಕೆಂದರೆ- ಸತ್ತ್ವ-ಅಸತ್ತ್ವಗಳು ವಿರುದ್ಧವಾದ್ದರಿಂದ ಒಂದೇ ವಸ್ತುವಿನಲ್ಲಿ ಸತ್ತ್ವ-ಅಸತ್ತ್ವಗಳನ್ನು (ಒಂದೇ ವಸ್ತುವಿಗೆ ಸದಸದಾತ್ಮಕತ್ವವನ್ನು) ಹೇಗೆ ಹೇಳಲು ಬರುವುದಿಲ್ಲವೋ, ಅದರಂತೆಯೇ ಸತ್ತ್ವೇನ ನಿರ್ವಕ್ತುಮಶಕ್ಯತ್ವ- ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಎರಡೂ ವಿರುದ್ಧವಾದ್ದರಿಂದ ಒಂದೇ ವಸ್ತುವಿನಲ್ಲಿ ಸತ್ತ್ವೇನ ನಿರ್ವಕ್ತುಮಶಕ್ಯತ್ವ-ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಎರಡನ್ನೂ ಹೇಳಲು ಬರುವುದಿಲ್ಲ.

ಅಂದರೆ :- ಸತ್ತ್ವೇನ ನಿರ್ವಕ್ತುಮಶಕ್ಯತ್ವ - ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಎರಡನ್ನೂ ಒಂದೇ ವಸ್ತುವಿಗೆ ಹೇಳಿದರೆ, ಸತ್ತ್ವಾಭಾವ-ಅಸತ್ತ್ವಾಭಾವ ಎರಡನ್ನೂ ಒಂದೇ ವಸ್ತುವಿಗೆ [೧]ಹೇಳಿದಂತಾಗುತ್ತದೆ. ಆದರೆ ಸತ್ತ್ವ-ಅಸತ್ತ್ವಗಳು ವಿರುದ್ಧ-

೧ ಸತ್ತ್ವೇನ ನಿರ್ವಕ್ತುಮಶಕ್ಯತ್ವ ಹೇಳಿದರೆ ಸತ್ತ್ವಾಭಾವ ಹೇಳಿದಂತಾಗುತ್ತದೆ. ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಹೇಳಿದರೆ ಅಸತ್ತ್ವಾಭಾವ ಹೇಳಿದಂತಾಗುತ್ತದೆ ಎಂದು ಭಾವ.

ವಾದ್ದರಿಂದ ಒಂದೇ ವಸ್ತುವಿನಲ್ಲಿ ಸತ್ತ್ವ-ಅಸತ್ತ್ವಗಳನ್ನು ಹೇಗೆ ಹೇಳಲು ಬರುವುದಿಲ್ಲವೋ ಅದರಂತೆಯೇ ಸತ್ತ್ವಾಭಾವ-ಅಸತ್ತ್ವಾಭಾವಗಳೆರಡೂ ವಿರುದ್ಧವಾದ್ದರಿಂದ ಒಂದೇ ವಸ್ತುವಿನಲ್ಲಿ ಸತ್ತ್ವಾಭಾವ-ಅಸತ್ತ್ವಾಭಾವ ಎರಡನ್ನೂ ಹೇಳಲು ಬರುವುದಿಲ್ಲ ಎಂದು ಅಭಿಪ್ರಾಯ.

ಹಾಗಲ್ಲ, ಸತ್ತ್ವ-ಅಸತ್ತ್ವಗಳು ವಿರುದ್ಧವಾದರೂ ಸಹ ಸತ್ತ್ವಾಭಾವ- ಅಸತ್ತ್ವಾಭಾವಗಳು ವಿರುದ್ಧವಲ್ಲ. ಯಾಕೆಂದರೆ- ಸತ್ತ್ವ-ಅಸತ್ತ್ವಗಳು ಒಂದೇ ವಸ್ತುವಿನಲ್ಲಿ ಇರುವುದಿಲ್ಲವಾದ್ದರಿಂದ ಅವು ವಿರುದ್ಧವಾದರೂ ಸಹ, ಅನಿರ್ವಚನೀಯವಾದ ಜಗತ್ತಿನಲ್ಲಿ ಹಾಗೂ ಶುಕ್ತಿರಜತಾದಿಗಳಲ್ಲಿ ಸತ್ತ್ವಾಭಾವ- ಅಸತ್ತ್ವಾಭಾವಗಳು ಇರುವುದರಿಂದ ಸತ್ತ್ವಾಭಾವ-ಅಸತ್ತ್ವಾಭಾವಗಳು ವಿರುದ್ಧವೇನಲ್ಲ ? ಎಂಬುದಾಗಿ ಶಂಕಿಸುವುದು ಸರಿಯಲ್ಲ.

ಹಾಗೆ ಹೇಳುವುದಾದರೆ ಅನ್ಯೋನ್ಯಾಶ್ರಯ ಬರುತ್ತದೆ. ಹೇಗೆಂದರೆ - ಅನಿರ್ವಚನೀಯವಸ್ತು ಸಿದ್ಧವಾದರೆ, ಅಲ್ಲಿ ಸತ್ತ್ವಾಭಾವ-ಅಸತ್ತ್ವಾಭಾವಗಳು ಇರುವ ಕಾರಣ ವಿರೋಧ ಇಲ್ಲ ಎಂದು ಸಿದ್ಧವಾಗುತ್ತದೆ. ಸತ್ತ್ವಾಭಾವ-ಅಸತ್ತ್ವಾಭಾವಗಳಲ್ಲಿ ವಿರೋಧ ಇಲ್ಲ ಎಂದು ಸಿದ್ಧವಾದರೆ, ಸತ್ತ್ವೇನ ನಿರ್ವಕ್ತುಮಶಕ್ಯತ್ವದಿಂದ ಸಹಿತವಾದ ಅಸತ್ತ್ವೇನ ನಿರ್ವಕ್ತುಮಶಕ್ಯತ್ವ ಎಂಬ ಲಕ್ಷಣಸಿದ್ಧವಾಗಿ ಅನಿರ್ವಚನೀಯವಸ್ತು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುವುದರಿಂದ ಸತ್ತ್ವಾಭಾವ-ಅಸತ್ತ್ವಾಭಾವಗಳು ವಿರುದ್ಧವಲ್ಲ ಎಂದು ಶಂಕಿಸಲು ಬರುವುದಿಲ್ಲ. ಹಾಗಾಗಿ 'ಸತ್ತ್ವೇನ ನಿರ್ವಕ್ತುಮಶಕ್ಯತ್ವೇ ಸತಿ ಅಸತ್ತ್ವೇನ ನಿರ್ವಕ್ತುಮಶಕ್ಯತ್ವಂ ಅನಿರ್ವಚನೀಯತ್ವಂ' ಎಂಬುದಾಗಿಯೂ ಅನಿರ್ವಚನೀಯ ಲಕ್ಷಣ ಹೇಳಲು ಬರುವುದಿಲ್ಲ ಎಂದು ಭಾವ.

**ಟೀಕಾ: ಸ್ಯಾದಯಂ ವಿರೋಧಃ । ಯದಿ ನಿಷೇಧಸಮುಚ್ಚಯಸ್ತಾತ್ತ್ವಿಕಃ ಸ್ಯಾತ್ । ನ ಚೈತದಸ್ತಿ । ತಸ್ಯಾಪಿ ಮಿಥ್ಯಾತ್ವಾಂಗೀಕಾರಾದಿತ್ಯತ ಆಹ-**

**ಮೂಲಃ- ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯವಿಲಕ್ಷಣತ್ವಮೇವ ಸತ್ಯಂ ಸ್ಯಾತ್ ।**

**ನಿಷೇಧಸಮುಚ್ಚಯಪಕ್ಷನಿರಾಕರಣಸೂಚನಾರ್ಥಂ ದ್ವಿರ್ವಿಲಕ್ಷಣತ್ವಗ್ರಹಣಮ್ । ಅನ್ಯಥಾ ಸದಸದ್ವಿಲಕ್ಷಣತ್ವಮಿತ್ಯವಕ್ಷ್ಯತ್ ।**

**ನನು ಪ್ರಪಂಚ ಏವ ಧರ್ಮಿ ನಾಸ್ತಿ। ಕಸ್ಯ ಸದಸದಾತ್ಮಕತ್ವಮಾಪದ್ಯೇತ ಇತಿ ಚೇನ್ನ। ಪರೇಣಾಪ್ಯಸತ್ವಸ್ಯಾನಂಗೀಕೃತತ್ವಾತ್।**

**ಅನುವಾದ :-** ''ಸತ್ವ-ಅಸತ್ವಗಳು ವಿರುದ್ಧವಾದ್ದರಿಂದ ಒಂದೇ ವಸ್ತುವಿನಲ್ಲಿ ಸತ್ವ-ಅಸತ್ವಗಳನ್ನು ಹೇಗೆ ಹೇಳಲು ಬರುವುದಿಲ್ಲವೋ ? ಅದರಂತೆಯೇ ಸತ್ವಾಭಾವ-ಅಸತ್ವಾಭಾವ ಎರಡೂ ವಿರುದ್ಧವಾದ್ದರಿಂದ ಒಂದೇ ವಸ್ತುವಿನಲ್ಲಿ ಸತ್ವಾಭಾವ-ಅಸತ್ವಾಭಾವ ಎರಡನ್ನೂ ಹೇಳಲು ಬರುವುದಿಲ್ಲ''

ಎಂಬುದಾಗಿ ಹೇಳಿದಿರಿ. ಆದರೆ ಈ ರೀತಿ ವಿರೋಧಶಂಕೆ ಮಾಡುವುದು ಸರಿಯಲ್ಲ. ಏಕೆಂದರೆ ವಸಂತ-ಗ್ರೀಷ್ಮಗಳು ವಿರುದ್ಧವಾದರೂ ಸಹ ಸ್ವಪ್ನಕಾಲದಲ್ಲಿ ಎರಡರ ಸಮಾಗಮವಾಗುತ್ತದೆ. ಅವುಗಳಲ್ಲಿ ಅವಿರೋಧವನ್ನು (ವಿರೋಧಾ-ಭಾವವನ್ನು) ಕಾಣುತ್ತೇವೆ. ಯಾಕೆ ? ತಾತ್ವಿಕವಾದ ವಸಂತ-ಗ್ರೀಷ್ಮಗಳು ವಿರುದ್ಧವಾದ್ದರಿಂದ ಏಕತ್ರ ಸಮಾವೇಶಗೊಳ್ಳಲು ಸಾಧ್ಯವಿಲ್ಲದಿದ್ದರೂ ಸಹ ಸ್ವಪ್ನದಲ್ಲಿ ಕಾಣುವ ವಸಂತ-ಗ್ರೀಷ್ಮಗಳು ಅತಾತ್ವಿಕವಾದ್ದರಿಂದ ಅಂತೆಯೇ ವಿರುದ್ಧವಲ್ಲವಾದ್ದರಿಂದ ಅತಾತ್ವಿಕವಾದ ವಸಂತ-ಗ್ರೀಷ್ಮಗಳು ಏಕತ್ರ ಸಮಾವೇಶಗೊಳ್ಳಲು ಅನುಪಪತ್ತಿ ಇಲ್ಲ. ಅಂದಮೇಲೆ ತಾತ್ವಿಕವಾದವುಗಳಲ್ಲಿ ವಿರೋಧವೇ ಹೊರತು ಅತಾತ್ವಿಕವಾದವುಗಳಲ್ಲಿ ಯಾವುದೇ ವಿರೋಧವಿಲ್ಲ ಎಂಬ ಅಂಶ ಇದರಿಂದ ಸ್ಪಷ್ಟವಾಗುತ್ತದೆ.

ಪ್ರಕೃತದಲ್ಲಿ ಸತ್ವಾಭಾವ-ಅಸತ್ವಾಭಾವಗಳಲ್ಲಿಯೂ ವಿರೋಧ ಯಾವಾಗ ಬರುತ್ತಿತ್ತು ? ಸತ್ವಾಭಾವ-ಅಸತ್ವಾಭಾವಗಳು ತಾತ್ವಿಕವಾಗಿದ್ದರೆ ಆಗ ವಿರೋಧ ಬರುತ್ತಿತ್ತು. ಆದರೆ ಸತ್ವಾಭಾವ-ಅಸತ್ವಾಭಾವಗಳು ತಾತ್ವಿಕವಾಗಿಲ್ಲ. ಸ್ವಪ್ನಕಾಲದ ವಸಂತ-ಗ್ರೀಷ್ಮಗಳಂತೆ ಅತಾತ್ವಿಕವಾಗಿವೆ. ಅರ್ಥಾತ್ ಮಿಥ್ಯೆಯಾಗಿವೆ. ಅಂದಮೇಲೆ ಮಿಥ್ಯಾಭೂತವಾದ ಸತ್ವಾಭಾವ-ಅಸತ್ವಾಭಾವಗಳಲ್ಲಿ ವಿರೋಧ ಇಲ್ಲವಾದ್ದರಿಂದ ಒಂದೇ ವಸ್ತುವಿನಲ್ಲಿ ಸತ್ವಾಭಾವ-ಅಸತ್ವಾಭಾವ ಎರಡನ್ನೂ ಹೇಳಲು ಬಂದೇ ಬರುತ್ತದೆ ಎಂಬುದಾಗಿ ಆಕ್ಷೇಪ ಬಂದರೆ, ದೋಷ ಹೇಳುವ ಮೂಲಕ ಆಚಾರ್ಯರು ಅದನ್ನು ನಿರಾಕರಿಸುತ್ತಾರೆ -

**ಮೂಲ :- ಸದ್ವಿಲಕ್ಷಣತ್ವಮಸದ್ವಿಲಕ್ಷಣತ್ವಂ ಚ ಮಿಥ್ಯೇತ್ಯವಿಲಕ್ಷಣತ್ವಮೇವ ಸತ್ಯಂ ಸ್ಯಾತ್।**

**ಮೂಲಾರ್ಥ:- ಸದ್ವಿಲಕ್ಷಣತ್ವ-ಅಸದ್ವಿಲಕ್ಷಣತ್ವಗಳು (ಸತ್ತ್ವಾಭಾವ-ಅಸತ್ತ್ವಾಭಾವಗಳು) ಮಿಥ್ಯಾ ಎಂದು ಅಂಗೀಕರಿಸಿದರೆ ಜಗತ್ತಿಗೆ ಅವಿಲಕ್ಷಣತ್ವವೇ ಸದಸದಾತ್ಮಕತ್ವವೇ ಸತ್ಯವಾಗಬೇಕಾಗುತ್ತದೆ.**

ಹೌದು, ಸದ್ವಿಲಕ್ಷಣತ್ವ-ಅಸದ್ವಿಲಕ್ಷಣತ್ವಗಳು ಮಿಥ್ಯಾ ಎಂದಾದರೆ ಜಗತ್ತು ಸದಸದಾತ್ಮಕವಾಗಬೇಕಾಗುತ್ತದೆ ಎಂಬುದಾಗಿ ಸದಸದಾತ್ಮಕತ್ವವನ್ನು ಆಪಾದಿಸುತ್ತಿದ್ದೀರಿ. ಆದರೆ ಸತ್ತ್ವಸಮುಚ್ಚಿತಅಸತ್ತ್ವದ ಅಭಾವವನ್ನು ನಿರಾಕರಿಸಿದರೂ ಸಹ ಈ ಸದಸದಾತ್ಮಕತ್ವಾಪಾದನವು [೧]ಉಪಪನ್ನವಾಗುವುದರಿಂದ

**''ಸದ್ವಿಲಕ್ಷಣತ್ವಮಸದ್ವಿಲಕ್ಷತ್ವಂ ಚ ಮಿಥ್ಯಾ ....''**

ಎಂಬ ಮೂಲವನ್ನು ನಿಷೇಧಸಮುಚ್ಚಯನಿರಾಕರಣಪರವಾಗಿ ಹೇಗೆ ವ್ಯಾಖ್ಯಾನ ಮಾಡುತ್ತೀರಿ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಕಾರಣ- [೨]ನಾವು ಹೀಗೆ ವ್ಯಾಖ್ಯಾನ ಮಾಡುವುದಕ್ಕೆ ಒಂದು ಜ್ಞಾಪಕ ಉಂಟು. ಅದೇನೆಂದರೆ -

ಇಲ್ಲಿ ನಿಷೇಧಸಮುಚ್ಚಯಪಕ್ಷವನ್ನು (ಸತ್ತ್ವಾಭಾವ-ಅಸತ್ತ್ವಾಭಾವಗಳನ್ನು ಏಕತ್ರ) ನಿರಾಕರಿಸುತ್ತಿದ್ದಾರೆಯೇ ಹೊರತು ಸತ್ತ್ವಸಮುಚ್ಚಿತಅಸತ್ತ್ವದ ಅಭಾವ (ಪಕ್ಷ)ವನ್ನು ನಿರಾಕರಿಸುತ್ತಿಲ್ಲ ಆಚಾರ್ಯರು. ಅದು ಹೇಗೆ ತಿಳಿಯುತ್ತದೆ ? ಎಂದರೆ, ಈ ನಿಷೇಧಸಮುಚ್ಚಯಪಕ್ಷದ ನಿರಾಕರಣೆಯನ್ನು ಸೂಚಿಸುವುದಕ್ಕಾಗಿಯೇ ಆಚಾರ್ಯರು ''**ಸದ್ವಿಲಕ್ಷಣತ್ವಂ ಅಸದ್ವಿಲಕ್ಷಣತ್ವಂ ಚ**'' ಎಂಬುದಾಗಿ ಎರಡು ವಿಲಕ್ಷಣತ್ವಗಳನ್ನು ಪ್ರತ್ಯೇಕವಾಗಿ ಗ್ರಹಣ ಮಾಡಿದ್ದಾರೆ. (ಸದ್ವಿಲಕ್ಷಣತ್ವ-ಅಸದ್ವಿಲಕ್ಷಣತ್ವಗಳನ್ನು ಪ್ರತ್ಯೇಕವಾಗಿ ಗ್ರಹಿಸಿದ್ದರಿಂದ ಸತ್ತ್ವಾಭಾವ - ಅಸತ್ತ್ವಾಭಾವಗಳನ್ನು ನಿರಾಕರಿಸುತ್ತಿರುವುದು ಸೂಚಿತವಾಗುತ್ತಿದೆ.) ಒಂದುವೇಳೆ ಸತ್ತ್ವಸಮುಚ್ಚಿತಅಸತ್ತ್ವದ ಅಭಾವವನ್ನು ನಿರಾಕರಿಸುವ ಅಭಿಪ್ರಾಯ ಇದ್ದದ್ದೇ ಆದರೆ

**''ಸದಸದ್ವಿಲಕ್ಷಣತ್ವಂ ಮಿಥ್ಯಾ ಇತಿ ಅವಿಲಕ್ಷಣತ್ವಮೇವ ಸತ್ಯಂ ಸ್ಯಾತ್''**

---

೧ ಜಗತ್ತಿಗೆ ಸತ್ತ್ವಸಮುಚ್ಚಿತಅಸತ್ತ್ವದ ಅಭಾವವನ್ನು ಹೇಳುವುದಾದರೆ ಜಗತ್ತು ಸದಸದಾತ್ಮಕವಾಗಬೇಕಾಗುತ್ತದೆ ಎಂಬುದಾಗಿಯೂ ಆಪಾದನೆ ಮಾಡಲು ಬರುವುದರಿಂದ

೨ ಶ್ರೀಮಟ್ಟೀಕಾಕೃತ್ಪಾದರು

ಎಂಬುದಾಗಿ ವಾಕ್ಯಪ್ರಯೋಗ ಮಾಡುತ್ತಿದ್ದರು ಆಚಾರ್ಯರು. ಪ್ರಕೃತ 'ಸದಸದ್ವಿಲಕ್ಷಣತ್ವಂ' ಎಂದು ಹೇಳದೇ 'ಸದ್ವಿಲಕ್ಷಣತ್ವಂ-ಅಸದ್ವಿಲಕ್ಷಣತ್ವಂ ಚ' ಎಂದು ಎರಡು ವಿಲಕ್ಷಣತ್ವಗಳನ್ನು ಪ್ರತ್ಯೇಕ ಗ್ರಹಿಸುತ್ತಿದ್ದಾರೆ ಎಂದಮೇಲೆ ನಿಷೇಧಸಮುಚ್ಚಯಪಕ್ಷದ ನಿರಾಕರಣೆಯೇ (ಸತ್ತ್ವಾಭಾವ-ಅಸತ್ತ್ವಾಭಾವಗಳನ್ನು ನಿರಾಕರಿಸುವುದೇ) ಆಚಾರ್ಯರಿಗೆ ಸಮ್ಮತವಾಗಿದೆ ಎಂದು ತಿಳಿದುಬರುತ್ತದೆ ಎಂದು ಭಾವ.

ಹೌದು, ''ಸದ್ವಿಲಕ್ಷಣತ್ವ-ಅಸದ್ವಿಲಕ್ಷಣತ್ವಗಳು (ಸತ್ತ್ವಾಭಾವ-ಅಸತ್ತ್ವಾ-ಭಾವಗಳು) ಮಿಥ್ಯಾ ಎಂದು ಅಂಗೀಕರಿಸಿದರೆ ಜಗತ್ತು ಸದಸದಾತ್ಮಕವಾಗ-ಬೇಕಾಗುತ್ತದೆ'' ಎಂಬುದಾಗಿ ಜಗತ್ತಿಗೆ ಸದಸದಾತ್ಮಕತ್ವವನ್ನು ಆಪಾದಿಸುವುದು ಸರಿಯಲ್ಲ. ಏಕೆಂದರೆ- ಜಗತ್ತು ಮಿಥ್ಯೆಯಾಗಿದೆ. ಮಿಥ್ಯಾ ಎಂಬ ಶಬ್ದಕ್ಕೆ ಅಸತ್ ಎಂದು ಅರ್ಥ ಇರುವುದರಿಂದ, ಪ್ರಪಂಚವು ಮಿಥ್ಯೆಯಾಗಿದೆ ಎಂದು ಹೇಳಿದರೆ ಪ್ರಪಂಚವು ಅಸತ್ ಆಗಿದೆ ಅರ್ಥಾತ್ ಪ್ರಪಂಚವೇ ಇಲ್ಲ ಎಂದೇ ಹೇಳಿದಂತಾಗುತ್ತದೆ. ಹಾಗಾಗಿ ಪ್ರಪಂಚ ಎಂಬ ಧರ್ಮಿಯೇ ಇಲ್ಲ ಎಂದಮೇಲೆ ಯಾವುದಕ್ಕೆ ಸದಸದಾತ್ಮಕತ್ವವನ್ನು ಆಪಾದಿಸುತ್ತೀರಿ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ಮಿಥ್ಯಾತ್ವವಾದಿಗಳಾದ ಪರರೂ ಸಹ ಮಿಥ್ಯಾ ಎಂಬ ಶಬ್ದಕ್ಕೆ ಅಸತ್ ಎಂಬ ಅರ್ಥವನ್ನು ಅಂಗೀಕರಿಸಿಲ್ಲ. ಜಗತ್ತು ಮಿಥ್ಯೆ ಎನ್ನುವ ಪರರು ಮಿಥ್ಯಾಶಬ್ದಕ್ಕೆ ಅನಿರ್ವಚನೀಯ ವ್ಯಾವಹಾರಿಕಸತ್ ಎಂಬ ಅರ್ಥವನ್ನೇ ಅಂಗೀಕರಿಸಿದ್ದಾರೆ ಹೊರತು ಅಸತ್ ಎಂಬ ಅರ್ಥವನ್ನು ಅಂಗೀಕರಿಸಿಲ್ಲ. ಅಂದರೆ - ಜಗತ್ತನ್ನು ವ್ಯಾವಹಾರಿಕಸತ್ ಎಂದೇ ಹೇಳುತ್ತಾರೆಯೇ ಹೊರತು ಅಸತ್ ಎಂದು ಹೇಳುವುದಿಲ್ಲ. ಹೀಗಾಗಿ ಜಗತ್ತು ಮಿಥ್ಯೆಯಾದರೂ ವ್ಯಾವಹಾರಿಕಸತ್ ಆದ್ದರಿಂದ, ಅಸತ್ ಆಗದ ಕಾರಣ ಜಗತ್ತಿಗೆ ಸದಸದಾತ್ಮಕತ್ವವನ್ನು ಆಪಾದಿಸುತ್ತಿರುವುದು ಸಮಂಜಸವೇ ಆಗಿದೆ ಎಂದು ಅಭಿಪ್ರಾಯ.

**ಹೇತು-ದೃಷ್ಟಾಂತಗಳ ವಿಷಯದಲ್ಲಿಯೂ ವಿಕಲ್ಪ-ದೋಷಗಳ ನಿರಾಕರಣೆ**

**ಟೀಕಾ : ಏವಮನಿರ್ವಚನೀಯಾಸಿದ್ಧ್ಯಾ ಸಾಧ್ಯಭೇದವಿಷಯವಿಕಲ್ಪ-ನಿರಾಸೇನಾಪಸಿದ್ಧಾಂತಾದಿಪ್ರತಿಜ್ಞಾದೋಷನಿರಾಕರಣಂ ಕೃತಮ್ । ಏತಮೇವ ನ್ಯಾಯಂ ಹೇತ್ವಾದಿದೋಷನಿರಾಸೇ ಅತಿದಿಶತಿ -**

**ಮೂಲಃ- ಏವಮೇವ ಹೇತ್ವಾದಿಷ್ವಪಿ ವಿಕಲ್ಪೋ ನಿರಾಕರಣೀಯಃ।**

**ಅತ್ರ ಹೇತುಶಬ್ದೇನ ತದರ್ಥೋ ಮುಕ್ತತ್ವಮುಚ್ಯತೇ। ಆದಿಪದೇನ ದೃಷ್ಟಾಂತಗತೇ ಮುಕ್ತತ್ವಭಿನ್ನತ್ವೇ ಗೃಹ್ಯೇತೇ । ವಿಷಯಸಪ್ತಮೀ ಚೇಯಮ್।**

**ಕಿಮನಿರ್ವಚನೀಯಂ ಮುಕ್ತತ್ವಂ ಹೇತೂಕ್ರಿಯತೇ ಉತ ಪಾರಮಾರ್ಥಿಕಮ್ । ಆದ್ಯೇ ವಾದ್ಯಸಿದ್ಧಿಃ । ದ್ವಿತೀಯೇ ಪ್ರತಿವಾದ್ಯಸಿದ್ಧಿಃ । ''ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ।'' ಇತಿ ತೇನಾಂಗೀಕೃತತ್ವಾತ್।**

**ಅನುವಾದ :-** 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬುದಾಗಿ ನಾವು ಭೇದಸಾಧನೆ ಮಾಡಿದಾಗ, ''ಅನಿರ್ವಚನೀಯಭೇದವನ್ನು ಸಾಧಿಸುತ್ತೀರೋ? ಪಾರಮಾರ್ಥಿಕಭೇದವನ್ನು ಸಾಧಿಸುತ್ತೀರೋ ?'' ಎಂಬುದಾಗಿ ವಿಕಲ್ಪ ಮಾಡಿ, ''ಅನಿರ್ವಚನೀಯಭೇದವನ್ನು ಸಾಧಿಸುವುದಾದರೆ ಅಪಸಿದ್ಧಾಂತ ಬರುತ್ತದೆ. ಪಾರಮಾರ್ಥಿಕಭೇದವನ್ನು ಸಾಧಿಸುವುದಾದರೆ ಪರರೀತ್ಯಾ ಸಾಧ್ಯವೈಕಲ್ಯ ಬರುತ್ತದೆ'' ಎಂಬುದಾಗಿ ಅಪಸಿದ್ಧಾಂತಾದಿದೋಷಗಳನ್ನು ಹೇಳಿ ಪರರು ನಮ್ಮ ಅನುಮಾನದ ಪ್ರತಿಜ್ಞೆಯನ್ನು ನಿರಾಕರಿಸಿದಾಗ,

**''ಅನಿರ್ವಚನೀಯಸ್ಯ ಸರ್ವತ್ರಾಪ್ರಸಿದ್ಧತ್ವಾದೇವ''**
**''ನ ಚಾನಿರ್ವಚನೀಯೇ ಕಿಂಚಿನ್ಮಾನಮ್''**

ಇತ್ಯಾದಿ ವಾಕ್ಯಗಳಿಂದ ಪ್ರಮಾಣ ಇಲ್ಲದ ಕಾರಣ ಅನಿರ್ವಚನೀಯವಸ್ತುವೇ ಅಪ್ರಸಿದ್ಧವಾದ್ದರಿಂದ ''ಅನಿರ್ವಚನೀಯಭೇದವು ಸಾಧ್ಯವೋ? ಪಾರಮಾರ್ಥಿಕಭೇದವು ಸಾಧ್ಯವೋ ?'' ಎಂಬ ವಿಕಲ್ಪವೇ ಅನುಪಪನ್ನ ಎಂಬುದಾಗಿ ಸಾಧ್ಯ(ವಾದ)ಭೇದವಿಷಯಕವಿಕಲ್ಪವನ್ನು ನಿರಾಕರಿಸುವ ಮೂಲಕ ಅಪಸಿದ್ಧಾಂತಾದಿ ಪ್ರತಿಜ್ಞಾದೋಷಗಳ ನಿರಾಕರಣೆಯನ್ನು ಈ ರೀತಿಯಾಗಿ ಇಲ್ಲಿಯವರೆಗೆ ಮಾಡಿದರು.

ಪ್ರತಿಜ್ಞಾದೋಷನಿರಾಕರಣೆಗೆ ಯಾವ ನ್ಯಾಯವನ್ನು (ಅನಿರ್ವಚನೀಯವಸ್ತ್ವಪ್ರಸಿದ್ಧಿಯನ್ನು) ಅನುಸರಿಸಿದರೋ ಅದೇ ನ್ಯಾಯವನ್ನು[೧]ಹೇತ್ವಾಭಾಸಾದಿ-

---

೧ ಮುಕ್ತತ್ವರೂಪಹೇತು, ನಿಗಡಬಂಧಮುಕ್ತರೂಪದೃಷ್ಟಾಂತ, ಅವುಗಳಲ್ಲಿರುವ ಮುಕ್ತತ್ವಾದಿಗಳ

ದೋಷನಿರಾಕರಣೆಗೂ ಅತಿದೇಶ ಮಾಡುತ್ತಾರೆ (ಅದೇ ನ್ಯಾಯವನ್ನು ಬಳಸಿ ಹೇತ್ವಾಭಾಸಾದಿದೋಷಗಳ ನಿರಾಕರಣೆಯನ್ನೂ ಮಾಡುತ್ತಾರೆ) -

**ಮೂಲ :- ಏವಮೇವ ಹೇತ್ವಾದಿಷ್ವಪಿ ವಿಕಲ್ಪೋ ನಿರಾಕರಣೀಯಃ।**

**ಮೂಲಾರ್ಥ :- ಅನಿರ್ವಚನೀಯಾಪ್ರಸಿದ್ಧಿ ರೂಪವಾದ ಅದೇ ನ್ಯಾಯದಿಂದಲೇ ಹೇತುವಾದ ಮುಕ್ತತ್ವದ ವಿಷಯದಲ್ಲಿ ಹಾಗೂ ದೃಷ್ಟಾಂತಗತವಾದ ಮುಕ್ತತ್ವ-ಭಿನ್ನತ್ವಗಳ ವಿಷಯದಲ್ಲಿಯೂ [೧]ವಿಕಲ್ಪ-ದೋಷಗಳನ್ನು ನಿರಾಕರಿಸಬೇಕು.**

ಹೌದು, ಪಂಚಮ್ಯಂತವಾದ ಅಥವಾ ತೃತೀಯಾಂತವಾದ ಲಿಂಗವಚನಕ್ಕೆ ಹೇತು ಎಂದು ಕರೆಯುತ್ತಾರೆ. ಅಂತಹ ವಿಭಕ್ತ್ಯಂತ ಲಿಂಗವಚನದ ವಿಷಯದಲ್ಲಿ ಪರರು ವಿಕಲ್ಪವನ್ನು ಮಾಡಿಲ್ಲವಾದ್ದರಿಂದ, ಮಾಡದಿರುವ ಆ ವಿಕಲ್ಪದ ನಿರಾಕರಣೆಗಾಗಿ ಅತಿದೇಶ ಮಾಡುವುದು ಸರಿಯಲ್ಲ ಅಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಇಷ್ಟು ಸಮಾಧಾನ - ವಿಭಕ್ತ್ಯಂತ ಲಿಂಗವಚನವೇ ಹೇತು ನಿಜ. ಆದರೆ ಪ್ರಕೃತದಲ್ಲಿ ಲಿಂಗವಚನವಾಚಕವಾದ ಹೇತುಶಬ್ದದಿಂದ ಹೇತ್ವರ್ಥವಾದ ಲಿಂಗವು ಮುಕ್ತತ್ವವು ಲಕ್ಷಣಾವೃತ್ತಿಯಿಂದ[೨] ಪ್ರತಿಪಾದ್ಯವಾಗಿದೆ. ಮುಕ್ತತ್ವವಿಷಯದಲ್ಲಿ ವಿಕಲ್ಪ ಮಾಡಿದ್ದರಿಂದ, ಹೇತ್ವರ್ಥದ ವಿಕಲ್ಪನಿರಾಕರಣೆಗಾಗಿ ಅತಿದೇಶ ಮಾಡುವುದು ಸರಿಯೇ ಆಗಿದೆ ಎಂದು ಭಾವ.

ಮೂಲದಲ್ಲಿ 'ಹೇತ್ವಾದಿಷು' ಎಂದು ಆದಿಶಬ್ದವನ್ನು ಪ್ರಯೋಗಿಸಿದ್ದಾರೆ. ಆದಿಪದದಿಂದ ದೃಷ್ಟಾಂತಗತವಾದ ಮುಕ್ತತ್ವ-ಭಿನ್ನತ್ವಗಳನ್ನು ಸ್ವೀಕರಿಸಬೇಕು. ಮತ್ತು ಹೇತ್ವಾದಿಷು ಎನ್ನುವಲ್ಲಿನ ಸಪ್ತಮೀವಿಭಕ್ತಿಯು ವಿಷಯಾರ್ಥಕವಾಗಿದೆ. (ಸಪ್ತಮೀವಿಭಕ್ತಿಗೆ ವಿಷಯ ಎಂದು ಅರ್ಥ.) ಹೇತುವಿನ ವಿಷಯದಲ್ಲಿಯೂ ವಿಕಲ್ಪವನ್ನು ನಿರಾಕರಿಸಬೇಕು, ಆದಿಪದದಿಂದ ದೃಷ್ಟಾಂತಗತವಾದ ಮುಕ್ತತ್ವ-ಭಿನ್ನತ್ವಗಳ ವಿಷಯದಲ್ಲಿಯೂ ವಿಕಲ್ಪವನ್ನು ನಿರಾಕರಿಸಬೇಕು ಎಂದು ಅಭಿಪ್ರಾಯ.

ಏನದು ಹೇತುವಿಷಯದಲ್ಲಿ ವಿಕಲ್ಪ-ದೋಷಗಳು ? ದೃಷ್ಟಾಂತಗತ ಮುಕ್ತತ್ವ-ಭಿನ್ನತ್ವವಿಷಯದಲ್ಲಿ ಏನು ವಿಕಲ್ಪ-ದೋಷಗಳು ? ಅದನ್ನು ತೋರಿಸುತ್ತಾರೆ -

---

ವಿಷಯದಲ್ಲಿ ಪರರು ಯಾವ ದೋಷವನ್ನು ಹೇಳಿದ್ದಾರೆಯೋ ಆ ದೋಷಗಳ ನಿರಾಕರಣೆಗೂ

೧ ಆ ವಿಕಲ್ಪ-ದೋಷಗಳ ಪ್ರಕಾರ ಅನುವಾದದಲ್ಲಿ ವಿವೃತವಾಗಿದೆ.

೨ 'ಮುಕ್ತತ್ವಾತ್' ಎಂಬ ಪಂಚಮ್ಯಂತವಾದ ಲಿಂಗವಚನವು ಹೇತುವಾದರೂ ಸಹ, ಪ್ರಕೃತ ಹೇತುಶಬ್ದದಿಂದ ಆ ಹೇತುವಿನ ಲಿಂಗವಚನದ ಅರ್ಥವಾದ ಲಿಂಗವನ್ನು ಮುಕ್ತತ್ವವನ್ನು ಲಕ್ಷಣಾವೃತ್ತಿಯಿಂದ ಸ್ವೀಕರಿಸುತ್ತೇವೆ.

''ವಿಮತೋ ಭಿನ್ನೋ ಮುಕ್ತತ್ವಾತ್'' ಎಂಬುದಾಗಿ ಮುಕ್ತತ್ವವನ್ನು ಹೇತುವನ್ನಾಗಿ ಮಾಡಿದ್ದೀರಿ. ಅನಿರ್ವಚನೀಯವಾದ ಮುಕ್ತತ್ವವನ್ನು ಹೇತುವನ್ನಾಗಿ ಮಾಡುತ್ತೀರೋ ? ಪಾರಮಾರ್ಥಿಕವಾದ ಮುಕ್ತತ್ವವನ್ನು ಹೇತುವನ್ನಾಗಿ ಮಾಡುತ್ತೀರೋ?

ಅನಿರ್ವಚನೀಯವಾದ ಮುಕ್ತತ್ವವನ್ನು ಹೇತುವನ್ನಾಗಿ ಮಾಡಿದರೆ, ವಾದಿಗಳಾದ (ದ್ವೈತಿಗಳಾದ) ನಿಮ್ಮ ಸಿದ್ಧಾಂತದಲ್ಲಿ ಅನಿರ್ವಚನೀಯವಾದ ವಸ್ತುವೇ ಅಪ್ರಸಿದ್ಧವಾದ್ದರಿಂದ ಅನಿರ್ವಚನೀಯವಾದ ಮುಕ್ತತ್ವವು ಅಸಿದ್ಧವಾಗಿದೆ, ಅರ್ಥಾತ್ ಅನುಮಾನಕ್ಕೆ ಸ್ವರೂಪಾಸಿದ್ಧಿದೋಷ ಬರುತ್ತದೆ.

ಪಾರಮಾರ್ಥಿಕವಾದ ಮುಕ್ತತ್ವವನ್ನು ಹೇತುವನ್ನಾಗಿ ಮಾಡಿದರೆ,

**ನ ಮುಮುಕ್ಷುರ್ನ ವೈ ಮುಕ್ತಃ ಇತ್ಯೇಷಾ ಪರಮಾರ್ಥತಃ ।**

ಎಂಬುದಾಗಿ ಪ್ರತಿವಾದಿಗಳು ಅಂಗೀಕರಿಸಿದ್ದರಿಂದ ಅರ್ಥಾತ್ ಪಾರಮಾರ್ಥಿಕವಾದ ಮುಕ್ತತ್ವವನ್ನು ಪ್ರತಿವಾದಿಗಳು (ಅದ್ವೈತಿಗಳು) ಅಂಗೀಕರಿಸಿಲ್ಲವಾದ್ದರಿಂದ ಪ್ರತಿವಾದಿಮತರೀತ್ಯಾ ಸ್ವರೂಪಾಸಿದ್ಧದೋಷ ಬರುತ್ತದೆ. ಹೇತುವಾದ ಮುಕ್ತತ್ವವಿಷಯದಲ್ಲಿ ಈ ರೀತಿ ವಿಕಲ್ಪ-ದೋಷಗಳು.

**ಟೀಕಾ : ಏವಂ ದೃಷ್ಟಾಂತೇಽಪಿ ಮುಕ್ತತ್ವಭಿನ್ನತ್ವೇ ಯದ್ಯನಿರ್ವಚನೀಯೇ ವಿವಕ್ಷಿತೇ ತದಾ ವಾದಿನಂ ಪ್ರತಿ ದೃಷ್ಟಾಂತಸ್ಯ ಸಾಧನಾದಿವಿಕಲತಾ । ಯದಾ ಪಾರಮಾರ್ಥಿಕೇ ತದಾ ಪ್ರತಿವಾದಿನಂ ಪ್ರತಿ ತಥಾ । ತತ್ಸಾಧನೇ ಪುನಃ ದೃಷ್ಟಾಂತಾನುಸರಣೇಽನವಸ್ಥೇತಿ ।**

**ಆಸತಾಮೇತೇ ವಿಕಲ್ಪದೋಷಾಃ । ವಿಕಲ್ಪ ಏವಾಯಂ ಪುರೋವದನಿರ್ವಚನೀಯಾಸಿದ್ಧ್ಯಾ ನಿರಾಕರಣೀಯ ಇತಿ ।**

**ಅನುವಾದ :-** ಅದರಂತೆಯೇ ದೃಷ್ಟಾಂತಗತ ಮುಕ್ತತ್ವ-ಭಿನ್ನತ್ವವಿಷಯದಲ್ಲಿಯೂ ವಿಕಲ್ಪ-ದೋಷಗಳನ್ನು ತಿಳಿಯುವುದು. ಅದು ಹೇಗೆಂದರೆ-ದೃಷ್ಟಾಂತನಾದ ನಿಗಡಮುಕ್ತನಲ್ಲಿ ಮುಕ್ತತ್ವ-ಭಿನ್ನತ್ವಗಳು (ಹೇತು-ಸಾಧ್ಯಗಳು) ಇವೆ. ಆ ದೃಷ್ಟಾಂತಗತವಾದ ಮುಕ್ತತ್ವ-ಭಿನ್ನತ್ವಗಳು ಅನಿರ್ವಚನೀಯವಾದವುಗಳೋ ? ಪಾರಮಾರ್ಥಿಕವಾದವುಗಳೋ ?

ಅನಿರ್ವಚನೀಯವಾದ ಮುಕ್ತತ್ವ-ಭಿನ್ನತ್ವಗಳನ್ನು ಹೇಳುವುದಾದರೆ, ವಾದಿಗಳಾದ (ದ್ವೈತಿಗಳಾದ) ನಿಮ್ಮ ಸಿದ್ಧಾಂತದಲ್ಲಿ ಅನಿರ್ವಚನೀಯವಾದ

ವಸ್ತುವೇ ಅಪ್ರಸಿದ್ಧವಾದ್ದರಿಂದ ಅನಿರ್ವಚನೀಯವಾದ ಮುಕ್ತತ್ವ-ಭಿನ್ನತ್ವಗಳು ದೃಷ್ಟಾಂತದಲ್ಲಿ ಅಸಿದ್ಧವಾಗಿವೆ. ಹಾಗಾಗಿ ಸಾಧ್ಯವೈಕಲ್ಯ- ಸಾಧನವೈಕಲ್ಯ-ದೋಷಗಳು ಬರುತ್ತವೆ.

ಇನ್ನು ಪಾರಮಾರ್ಥಿಕವಾದ ಮುಕ್ತತ್ವ-ಭಿನ್ನತ್ವಗಳನ್ನು ಹೇಳುವುದಾದರೆ, ಪಾರಮಾರ್ಥಿಕವಾದ ಮುಕ್ತತ್ವ-ಭಿನ್ನತ್ವಗಳನ್ನು (ಪರವಾದಿಗಳು) ಅದ್ವೈತಿಗಳು ಅಂಗೀಕರಿಸಿಲ್ಲವಾದ್ದರಿಂದ ಪ್ರತಿವಾದಿರೀತ್ಯಾ ಸಾಧ್ಯವೈಕಲ್ಯ-ಸಾಧನವೈಕಲ್ಯ-ದೋಷಗಳು ಬರುತ್ತವೆ.

**ನಿಗಡಮುಕ್ತಃ ಪಾರಮಾರ್ಥಿಕಮುಕ್ತತ್ವ-ಭಿನ್ನತ್ವವಾನ್ ತಾದೃಶಾಬಾಧಿತ-ಧೀವಿಷಯತ್ವಾತ್ ಸಮ್ಮತಪಾಶಮುಕ್ತವತ್ ।**

ಎಂಬುದಾಗಿ ದೃಷ್ಟಾಂತದಲ್ಲಿ ಪಾರಮಾರ್ಥಿಕವಾದ ಮುಕ್ತತ್ವ-ಭಿನ್ನತ್ವಗಳನ್ನು ಸಾಧಿಸುತ್ತೇವೆ (ಹಾಗಾಗಿ ಸಾಧ್ಯವೈಕಲ್ಯ-ಸಾಧನವೈಕಲ್ಯಗಳು ಬರುವುದಿಲ್ಲ) ಎಂದರೆ, ಅದು ಸರಿಯಲ್ಲ. ಕಾರಣ-ಯಾವ ರೀತಿಯಾಗಿ ಮೊದಲನೇ ಅನುಮಾನದಲ್ಲಿ ಪಕ್ಷನಾದ ಮುಕ್ತನಲ್ಲಿ ಭಿನ್ನತ್ವವನ್ನು ಸಾಧಿಸಲು ದೃಷ್ಟಾಂತ (ನಿಗಡಮುಕ್ತ) ಅಪೇಕ್ಷಿತವಾಗಿದೆಯೋ ಅದೇ ರೀತಿಯಾಗಿ ದೃಷ್ಟಾಂತನಾದ ನಿಗಡಮುಕ್ತನಲ್ಲಿ ಭಿನ್ನತ್ವ-ಮುಕ್ತತ್ವಗಳನ್ನು ಸಾಧಿಸಲೂ ಮತ್ತೊಂದು ದೃಷ್ಟಾಂತ ಅಂಗೀಕರಿಸಬೇಕಾಗುತ್ತದೆ. ಆ ಮತ್ತೊಂದು ದೃಷ್ಟಾಂತದಲ್ಲಿಯೂ ಪುನಃ ಭಿನ್ನತ್ವ-ಮುಕ್ತತ್ವಗಳನ್ನು ಸಾಧಿಸಲು ಇನ್ನೊಂದು ದೃಷ್ಟಾಂತ ಅಂಗೀಕರಿಸಬೇಕು. ಹೀಗೆ ದೃಷ್ಟಾಂತಪರಂಪರೆಯಿಂದ ಅನವಸ್ಥಾ ಬರುತ್ತದೆ.

ಈ ರೀತಿಯಾಗಿ ದೃಷ್ಟಾಂತಗತ ಮುಕ್ತತ್ವ-ಭಿನ್ನತ್ವ ವಿಷಯದಲ್ಲಿಯೂ ವಿಕಲ್ಪ-ದೋಷಗಳು.

ಹೇತುವಾದ ಮುಕ್ತತ್ವವಿಷಯದಲ್ಲಿ ಹಾಗೂ ದೃಷ್ಟಾಂತಗತವಾದ ಮುಕ್ತತ್ವ-ಭಿನ್ನತ್ವಗಳ ವಿಷಯದಲ್ಲಿ ಈ ವಿಧವಾದ ವಿಕಲ್ಪ-ದೋಷಗಳನ್ನು ನಿರಾಕರಿಸಬೇಕು ಎಂಬುದಾಗಿ ಆಚಾರ್ಯರು ಹೇಳುತ್ತಿದ್ದಾರೆ -

**ಮೂಲ :- ಏವಮೇವ ಹೇತ್ವಾದಿಷ್ವಪಿ ವಿಕಲ್ಪೋ ನಿರಾಕರಣೀಯಃ ।**

ಈ ರೀತಿಯಾದ ವಿಕಲ್ಪಗಳು ಹಾಗೂ ದೋಷಗಳು ಹಾಗೆ ಇರಲಿ. ಮೊಟ್ಟಮೊದಲು ಈ ವಿಧವಾದ ವಿಕಲ್ಪವೇ ಉಪಪನ್ನವಾಗುವುದಿಲ್ಲ. ಅಂದರೆ-ಅನಿರ್ವಚನೀಯವಾದ ವಸ್ತುವೇ ಅಪ್ರಸಿದ್ಧವಾದ್ದರಿಂದ 'ಅನಿರ್ವಚನೀಯವಾದ

ಭೇದ ಸಾಧ್ಯವೋ ? ಪಾರಮಾರ್ಥಿಕವಾದ ಭೇದ ಸಾಧ್ಯವೋ?' ಎಂಬ ಹಿಂದಿನ ವಿಕಲ್ಪ ಹೇಗೆ ನಿರಾಕೃತವಾಗಿದೆ, ಅದರಂತೆಯೇ ಪ್ರಕೃತದಲ್ಲಿಯೂ ಅನಿರ್ವಚನೀಯವಾದ ವಸ್ತುವೇ ಅಪ್ರಸಿದ್ಧವಾದ್ದರಿಂದ 'ಅನಿರ್ವಚನೀಯವಾದ ಮುಕ್ತತ್ವ ಹೇತುವೋ ? ಪಾರಮಾರ್ಥಿಕವಾದ ಮುಕ್ತತ್ವ ಹೇತುವೋ?' ಎಂಬುದಾಗಿ ಹೇತುವಿನ ವಿಷಯದಲ್ಲಿಯೂ ವಿಕಲ್ಪವನ್ನು ನಿರಾಕರಿಸಬೇಕು. ಮತ್ತು 'ದೃಷ್ಟಾಂತಗತವಾದ ಮುಕ್ತತ್ವ-ಭಿನ್ನತ್ವಗಳು ಅನಿರ್ವಚನೀಯ-ವಾದದ್ದೋ? ಪಾರಮಾರ್ಥಿಕವಾದದ್ದೋ?' ಎಂಬುದಾಗಿ ದೃಷ್ಟಾಂತಗತ ಮುಕ್ತತ್ವ-ಭಿನ್ನತ್ವಗಳ ವಿಷಯದಲ್ಲಿಯೂ ವಿಕಲ್ಪವನ್ನು ನಿರಾಕರಿಸಬೇಕು ಎಂದು ಭಾವ.

**ಅವತಾರಿಕೆ :-** ಸಾಧ್ಯವಾದ ಭೇದದ ವಿಷಯದಲ್ಲಿ ವಿಕಲ್ಪ-ದೋಷಗಳನ್ನು ನಿರಾಕರಿಸಿ ''ಏವಮೇವ ಹೇತ್ವಾದಿಷ್ವಪಿ ವಿಕಲ್ಪೋ ನಿರಾಕರಣೀಯಃ'' ಎಂಬುದಾಗಿ ಹೇತ್ವಾದಿಗಳ ವಿಷಯದಲ್ಲಿಯೂ ವಿಕಲ್ಪ-ದೋಷಗಳ ನಿರಾಕರಣೆ-ಯನ್ನು ಅತಿದೇಶ ಮಾಡಿದರು. ಪ್ರಕೃತ ಆ ಅತಿದೇಶ ಸರಿಯಲ್ಲ ಎಂಬುದಾಗಿ ಶಂಕೆ ಮಾಡಿಕೊಂಡು ಸಮಾಧಾನ ಹೇಳುತ್ತಾರೆ -

**ಟೀಕಾ : ನನ್ವತ್ರಾಧಿಕಾಶಂಕಾಭಾವಾತ್ ಕಿಮತಿದೇಶೇನ ? ಉದಾಹರಣ-ಭೇದೇನಾತಿದೇಶೇ ತ್ವಪರ್ಯವಸಾನಂ ಸ್ಯಾತ್ । ಸತ್ಯಮ್ । ತಥಾಪ್ಯೇಕತ್ರೋಕ್ತೋ ನ್ಯಾಯೋಽನ್ಯತ್ರಾನುಸಂಧೇಯ ಇತಿ ಮಂದಾನ್ ವ್ಯುತ್ಪಾದಯಿತುಮತಿದೇಶ ಇತ್ಯದೋಷಃ ।**

**ಅನುವಾದ :-** ಸಾಧ್ಯವಿಷಯದಲ್ಲಿ ಮಾಡಿದ ವಿಕಲ್ಪ-ದೋಷಗಳ ನಿರಾಕರಣೆಯನ್ನು ಹೇತ್ವಾದಿಗಳ ವಿಷಯದಲ್ಲಿಯೂ 'ಏವಮೇವ' ಎಂಬುದಾಗಿ ಆಚಾರ್ಯರು ಅತಿದೇಶ ಮಾಡುತ್ತಿದ್ದಾರೆ. ಆದರೆ ಹಾಗೆ ಅತಿದೇಶ ಮಾಡುತ್ತಿರುವುದು ಸರಿಯಲ್ಲ. ಏಕೆಂದರೆ - ಎಲ್ಲಿ ಶಂಕೆಯಲ್ಲಿ ಆಧಿಕ್ಯ ಇರುತ್ತದೆ (ಅಧಿಕಶಂಕೆ ಇರುತ್ತದೆ), ಪರಿಹಾರವೂ ಅವಿಶಿಷ್ಟವಾಗಿರುತ್ತದೆ ಅಂತಹ ಸಂದರ್ಭದಲ್ಲಿ ಮಾತ್ರ ಅತಿದೇಶ ಪ್ರವೃತ್ತವಾಗುತ್ತದೆ ಎಂದು ನಿಯಮವಿದೆ. ಪ್ರಕೃತದಲ್ಲಿ ಸಾಧ್ಯವಿಷಯಕ ವಿಕಲ್ಪ-ದೋಷಗಳ ನಿರಾಕರಣೆ ಹಾಗೂ ಹೇತ್ವಾದಿವಿಷಯಕ ವಿಕಲ್ಪ-ದೋಷಗಳ ನಿರಾಕರಣೆ ಎರಡನ್ನೂ ನೋಡಿದಾಗ ಹೇತ್ವಾದಿವಿಷಯದಲ್ಲಿ ಅಧಿಕಶಂಕೆ (ಸಾಧ್ಯವಿಷಯದಲ್ಲಿ ಮಾಡಿದ ವಿಕಲ್ಪ-

ದೋಷಗಳ ನಿರಾಕರಣೆಗಿಂತಲೂ ಹೆಚ್ಚಿನ ವಿಕಲ್ಪ-ದೋಷಗಳ ನಿರಾಕರಣೆ) ಇಲ್ಲವಾದ್ದರಿಂದ ಆಚಾರ್ಯರು ಅತಿದೇಶ ಏಕೆ ಮಾಡುತ್ತಿದ್ದಾರೆ?

ಅದು ಹಾಗಲ್ಲ. ಹಿಂದೆ ಸಾಧ್ಯವಿಷಯದಲ್ಲಿ ವಿಕಲ್ಪ-ದೋಷಗಳ ನಿರಾಕರಣೆ ಮಾಡಿದ್ದು. ಈಗ ಹೇತು-ದೃಷ್ಟಾಂತಗಳ ವಿಷಯದಲ್ಲಿ ವಿಕಲ್ಪ-ದೋಷಗಳ ನಿರಾಕರಣೆ ಮಾಡುತ್ತಿರುವುದು. ಹಾಗಾಗಿ ಉದಾಹರಣಭೇದ ಇರುವುದರಿಂದ ಅತಿದೇಶ ಉಪಪನ್ನವಾಗುತ್ತದೆ ಎನ್ನುವುದಾದರೆ, ಅದು ಸರಿಯಲ್ಲ. ಯಾಕೆಂದರೆ ಹಾಗೆ ಉದಾಹರಣಭೇದದಿಂದ ಅತಿದೇಶ ಮಾಡುವುದಾದರೆ ''ಅನಿರ್ವಚನೀಯವಾದ ವ್ಯಾಪ್ತಿ ವಿವಕ್ಷಿತವೋ ? ಪಾರಮಾರ್ಥಿಕವಾದ ವ್ಯಾಪ್ತಿ ವಿವಕ್ಷಿತವೋ ?'' ಇತ್ಯಾದಿಯಾಗಿ ವ್ಯಾಪ್ತ್ಯಾದಿಗಳ ವಿಷಯದಲ್ಲಿಯೂ ವಿಕಲ್ಪ-ದೋಷಗಳ ನಿರಾಕರಣೆ ಮಾಡಬೇಕಾಗುವುದರಿಂದ, ಹಾಗೆ ಒಂದೊಂದು ವಿಷಯದಲ್ಲಿಯೂ ವಿಕಲ್ಪ-ದೋಷಗಳ ನಿರಾಕರಣೆ ಮಾಡುತ್ತಾ ಹೋದರೆ ಅನವಸ್ಥಾ ಬರಬೇಕಾಗುತ್ತದೆ !

ಆದ್ದರಿಂದ ಉದಾಹರಣಭೇದದಿಂದ ಅತಿದೇಶ ಉಪಪನ್ನವಾಗುವುದಿಲ್ಲ. ಅಂದಮೇಲೆ ಅಧಿಕಶಂಕೆ, ಪರಿಹಾರದಲ್ಲಿ ಅವಿಶಿಷ್ಟತೆ ಇಲ್ಲದ ಕಾರಣ ಆಚಾರ್ಯರು ಅತಿದೇಶ ಹೇಗೆ ಮಾಡುತ್ತಿದ್ದಾರೆ ?

ಸತ್ಯವೇ. ಎಲ್ಲಿ ಶಂಕೆಯಲ್ಲಿ ಆಧಿಕ್ಯವಿರುತ್ತದೆ, ಪರಿಹಾರವೂ ಅವಿಶಿಷ್ಟವಾಗಿರುತ್ತದೆ ಅಂತಹ ಸಂದರ್ಭದಲ್ಲಿ ಮಾತ್ರ ಅತಿದೇಶ ಮಾಡಬೇಕು ಎಂಬ ನಿಯಮ ಸತ್ಯವೇ. ಆದರೂ ಸಹ (ಶಂಕೆಯಲ್ಲಿ ಆಧಿಕ್ಯ-ಪರಿಹಾರದಲ್ಲಿ ಅವಿಶಿಷ್ಟತಾಗಳು ಇಲ್ಲದಿದ್ದರೂ ಸಹ) ಒಂದುಕಡೆ ಹೇಳಿದ ನ್ಯಾಯವನ್ನು ಬೇರೆಕಡೆಯಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕು ಎಂಬುದಾಗಿ ಮಂದರಿಗೆ ತಿಳಿಸುವುದಕ್ಕಾಗಿ ಆಚಾರ್ಯರು ಅತಿದೇಶ ಮಾಡುತ್ತಿದ್ದಾರೆ. ಹೀಗಾಗಿ ಯಾವುದೇ ದೋಷವಿಲ್ಲ ಎಂದು ಅಭಿಪ್ರಾಯ.

### 'ಬಂಧವೇ ಪಾರಮಾರ್ಥಿಕವಾಗಿ ಇಲ್ಲ' ಎಂಬ ಪರರ ಶಂಕೆ

**ಟೀಕಾ : ಅಥಾಪಿ ಸ್ಯಾತ್ । ನಾನೇನಾನುಮಾನೇನ ಮುಕ್ತೌ ಭೇದಃ ಸಿದ್ಧ್ಯತಿ । ಅಸಿದ್ಧೇಃ ಪ್ರಮಾಣವಿರೋಧಾಚ್ಚ । ತಥಾಹಿ, ಏಕಸ್ಯೈವ ಪರಮಾರ್ಥಸತಃ ಪರಬ್ರಹ್ಮಣೋಽನಾದ್ಯವಿದ್ಯಾವಿಲಸಿತೋ ಹಿ ಜೀವೇಶ್ವರಜಡರೂಪೋಽಯಂ ಭೇದಪ್ರಪಂಚಃ । ನ**

**ಪರಮಾರ್ಥಃ । ಬ್ರಹ್ಮೈವಾವಿದ್ಯಾದಿಪ್ರತಿಬಿಂಬಿತಂ ಖಲು ಬಾಲೈರ್ಜೀವ ಇತಿ ಈಶ್ವರ ಇತಿ ಚಾಭಿಲಪ್ಯತೇ । ಜಡಪ್ರಪಂಚಸ್ತು ಸ್ವರೂಪೇಣೈವಾವಿದ್ಯೋಪಾದಾನಕೋ ಬ್ರಹ್ಮವಿವರ್ತಃ ।**

**ಅತ್ರ ಚ ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್ । ವಿಮತಾ ಆತ್ಮಾನಃ ಪರಮಾತ್ಮನಸ್ತತ್ತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್ ಇತ್ಯಾದ್ಯನುಮಾನಂ ಮಾನಮ್ । 'ವಾಚಾರಂಭಣಂ ವಿಕಾರೋ ನಾಮಧೇಯಂ' 'ನಾನ್ಯೋಽತೋಽಸ್ತಿ ದೃಷ್ಟಾ' ಇತ್ಯಾದಿಶ್ರುತಿಶ್ಚ ।**

**ಸೈವಾವಿದ್ಯಾ ಕರ್ತೃತ್ವಭೋಕ್ತೃತ್ವದೋಷಸಂಸರ್ಗಾಧ್ಯಾಸಪ್ರವಾಹ-ರೂಪಸಂಸಾರಸ್ಯೋಪಾದಾನಮ್ । ಸಂಸಾರನಿವರ್ತಕೇನ ಚಾತ್ಮಜ್ಞಾನೇನಾವಶ್ಯಮವಿದ್ಯಾ ನಿಬರ್ಹಣೀಯಾ । ಸತಿ ಚೈವಂ ಬಂಧಸ್ಯೈವ ಪರಮಾರ್ಥತೋಽಭಾವಾತ್ ಕುತೋ ಮುಕ್ತತ್ವಮ್ । ಕುತೋ ವಾ ಮುಕ್ತೌ ಭೇದಃ ಸ್ಯಾತ್ । ಬಹುಜೀವವಾದೇ ಭೇದೇ ವಿದ್ಯಮಾನೇಽಪಿ ನಾಸೌ ಮುಕ್ತಪ್ರತೀತಿಗೋಚರ ಇತಿ ನ ತಸ್ಯ ನಿಯಮ್ಯತ್ವೋಪಯೋಗಿತ್ವಮ್ ಇತಿ ।**

**ಅನುವಾದ :-** ಆದರೂ ಸಹ 'ವಿಮತೋ ಭಿನ್ನೋ ಮುಕ್ತತ್ವಾತ್' ಎಂಬ ಈ ಅನುಮಾನದಿಂದ ಮುಕ್ತಿಯಲ್ಲಿ ಭೇದವು ಸಿದ್ಧಿಸುವುದಿಲ್ಲ. ಯಾಕೆಂದರೆ - ಈ ಅನುಮಾನಕ್ಕೆ ಅಸಿದ್ಧಿದೋಷ ಹಾಗೂ ಪ್ರಮಾಣವಿರೋಧ ಬರುತ್ತದೆ.

ಅದು ಹೇಗೆಂದರೆ :- ಪರಬ್ರಹ್ಮನು ಏಕನಾಗಿದ್ದಾನೆ. (ಸಜಾತೀಯಭೇದ-ವಿಜಾತೀಯಭೇದ-ಸ್ವಗತಭೇದಗಳಿಂದ ಶೂನ್ಯನಾಗಿದ್ದಾನೆ.) ಪಾರಮಾರ್ಥಿಕ-ಸತ್ ಆಗಿದ್ದಾನೆ. ಇಂತಹ ಪರಬ್ರಹ್ಮನಿಗೆ (ಪರಬ್ರಹ್ಮಸ್ವರೂಪಕ್ಕೆ) ಅನಾದಿಯಾದ ಭಾವರೂಪವಾದ ಅವಿದ್ಯೆಯು ಆವರಕವಾಗಿದೆ.

ಅಂತಹ ಅವಿದ್ಯೆಯಿಂದ ವಿಲಸಿತವಾಗಿದೆ (ಪ್ರತಿಭಾತವಾಗಿದೆ) ಜೀವ-ಈಶ್ವರ -ಜಡ ರೂಪವಾದ ಈ ಭೇದಪ್ರಪಂಚವು. ಯಾವ ಕಾರಣ ಜೀವಾದಿಪ್ರಪಂಚವು ಅವಿದ್ಯಾವಿಲಸಿತವಾಗಿದೆಯೋ ಆ ಕಾರಣ ಪಾರಮಾರ್ಥಿಕವಾಗಿಲ್ಲ. ಜೀವ-ಈಶ್ವರ-ಜಡ ಈ ಮೂರೂ ಅವಿದ್ಯಾವಿಲಸಿತ ಹೇಗೆ ಎಂದರೆ, ಬ್ರಹ್ಮನೇ ಅವಿದ್ಯಾಪ್ರತಿಬಿಂಬಿತನಾದಾಗ ಅಜ್ಞಾನಿಗಳಿಂದ (ಯಾರಿಗೆ ಅವಿದ್ಯಾನಿವೃತ್ತಿ

ಆಗಿಲ್ಲ ಅವರಿಂದ) ಜೀವ ಎಂಬುದಾಗಿ ಕರೆಯಲ್ಪಡುತ್ತಾನೆ (ವ್ಯವಹರಿಸಲ್ಪಡುತ್ತಾನೆ), ಮಾಯಾಪ್ರತಿಬಿಂಬಿತನಾದಾಗ ಈಶ್ವರ ಎಂಬುದಾಗಿ ಕರೆಯಲ್ಪಡುತ್ತಾನೆ (ವ್ಯವಹರಿಸಲ್ಪಡುತ್ತಾನೆ). ಬ್ರಹ್ಮನಿಂದ ಭಿನ್ನವಾಗಿ ಜೀವ-ಈಶ್ವರ ಇಲ್ಲ ಎಂದು ಭಾವ. ಇನ್ನು ಉಳಿದ ಜಡಪ್ರಪಂಚವಾದರೂ ಸ್ವರೂಪದಿಂದಲೇ [೧]ಅವಿದ್ಯೋಪಾದಾನಕವಾಗಿದೆ, [೨]ಬ್ರಹ್ಮವಿವರ್ತವಾಗಿದೆ ಬ್ರಹ್ಮನಲ್ಲಿ ಆರೋಪಿತವಾಗಿದೆ. ಶುಕ್ತಿಯಲ್ಲಿ ರಜತವು ಆರೋಪಿತವಾದಂತೆ (ಶುಕ್ತಿಯಿಂದ ಭಿನ್ನವಾಗಿ ರಜತವು ಹೇಗೆ ಇಲ್ಲವೋ ಅದರಂತೆ) ಬ್ರಹ್ಮನಲ್ಲಿ ಜಡಪ್ರಪಂಚವು ಆರೋಪಿತವಾಗಿದೆ (ಬ್ರಹ್ಮನಿಂದ ಭಿನ್ನವಾಗಿ ಜಡಪ್ರಪಂಚವು ಇಲ್ಲ) ಎಂದು ಭಾವ.

ಈ ವಿಷಯದಲ್ಲಿ (ಜಡಪ್ರಪಂಚವು ಬ್ರಹ್ಮನಲ್ಲಿ ಆರೋಪಿತವಾಗಿದೆ, ಮಿಥ್ಯೆಯಾಗಿದೆ ಎಂಬ ವಿಷಯದಲ್ಲಿ)

**''[೩]ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್**

---

೧ ಅವಿದ್ಯಾಸಮಸತ್ತಾಕವಾಗಿದೆ, ಅವಿದ್ಯಾಪರಿಣಾಮರೂಪವಾಗಿದೆ ಎಂದರ್ಥ.

೨ ಬ್ರಹ್ಮವಿವರ್ತಃ ಬ್ರಹ್ಮನು ಅಧಿಷ್ಠಾನನಾಗಿದ್ದಾನೆ, ಜಗತ್ತು ಬ್ರಹ್ಮನಲ್ಲಿ ಆರೋಪಿತವಾಗಿದೆ ಎಂದರ್ಥ.

ಶ್ರೀಜನಾರ್ದನೀಯ ವಿಶೇಷ- ''ಬ್ರಹ್ಮವಿವರ್ತ ಇತಿ ॥ ಅಯಮಾಶಯಃ- ಉಪಾದಾನಂ ದ್ವಿವಿಧಮ್ । ಪರಿಣಾಮ್ಯುಪಾದಾನಂ, ವಿವರ್ತೋಪಾದಾನಂ ಚೇತಿ । ತತ್ರ ಅವಿದ್ಯಾ ಪ್ರಪಂಚಸ್ಯ ಪರಿಣಾಮ್ಯುಪಾದಾನಂ, ಘಟಸ್ಯ ಮೃತ್ಪಿಂಡ ಇವ । ಬ್ರಹ್ಮಾ ತು ಜಡಸ್ಯ ವಿವರ್ತೋಪಾದಾನಂ, ಶುಕ್ತಿರೂಪ್ಯಂ ಪ್ರತಿ ಶುಕ್ತಿರಿವ । ವಿವರ್ತೋ ನಾಮ ಆರೋಪಾಧಿಷ್ಠಾನಮಿತಿ ।'' (ಶ್ರೀಜನಾರ್ದನಭಟ್ಟರ ವ್ಯಾಖ್ಯಾನ)

ಉಪಾದಾನಕಾರಣವು ಎರಡುವಿಧವಾಗಿದೆ. ೧. ಪರಿಣಾಮಿ ಉಪಾದಾನಕಾರಣ. ೨. ವಿವರ್ತೋಪಾದಾನಕಾರಣ. ಘಟಕ್ಕೆ ಮೃತ್ಪಿಂಡವು ಉಪಾದಾನಕಾರಣ ಎಂದರೆ, ಮೃತ್ಪಿಂಡವೇ ಘಟಾತ್ಮನಾ ಪರಿಣಾಮವಾಗುವುದರಿಂದ ಮೃತ್ಪಿಂಡವು ಪರಿಣಾಮಿ ಉಪಾದಾನಕಾರಣ ಎಂದರ್ಥ. ಅದರಂತೆ ಅವಿದ್ಯೆಯು ಪ್ರಪಂಚಕ್ಕೆ ಪರಿಣಾಮಿ ಉಪಾದಾನಕಾರಣವಾಗಿದೆ. ಇನ್ನು ಶುಕ್ತಿಯು ರಜತವನ್ನು ಕುರಿತು ಉಪಾದಾನಕಾರಣವಾಗಿದೆ ಎಂದರೆ, ವಿವರ್ತೋಪಾದಾನಕಾರಣವಾಗಿದೆ ರಜತಭ್ರಮಕ್ಕೆ ಅಧಿಷ್ಠಾನವಾಗಿದೆ ಎಂದರ್ಥ. ಅದರಂತೆ ಬ್ರಹ್ಮನು ಜಗತ್ತನ್ನು ಕುರಿತು ವಿವರ್ತೋಪಾದಾನಕಾರಣನಾಗಿದ್ದಾನೆ ಜಗದ್ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆ ಎಂದು ಅಭಿಪ್ರಾಯ. ಬ್ರಹ್ಮನು ಜಗದ್ಭ್ರಮಕ್ಕೆ ಅಧಿಷ್ಠಾನನಾಗಿದ್ದಾನೆ ಎಂದರೆ ಜಗತ್ತು ಬ್ರಹ್ಮನಲ್ಲಿ ಆರೋಪಿತವಾಗಿದೆ ಎಂದು ಪರ್ಯವಸಾನವಾಗುತ್ತದೆ.

೩ ವಿವಾದಪದ ಎಂದರೆ ಸಂಶಯಕ್ಕೆ ವಿಷಯವಾದದ್ದು ಧರ್ಮಿಯಾದದ್ದು ಎಂದರ್ಥ. ಪ್ರಕೃತ ಯಾವ ಸಂಶಯ ತೆಗೆದುಕೊಳ್ಳಬೇಕು ? ಎಂದರೆ, ಮಿಥ್ಯಾತ್ವ (ಸಾಧ್ಯ) ಎಂಬ ಒಂದು

**ಶುಕ್ತಿರಜತವತ್ ।**'' ಎಂಬ ಅನುಮಾನ ಹಾಗೂ ''[೧]**ವಾಚಾರಂಭಣಂ ವಿಕಾರೋ ನಾಮಧೇಯಮ್**'' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿವೆ.

ಬ್ರಹ್ಮನಿಂದ ಭಿನ್ನರಾಗಿ ಜೀವ-ಈಶ್ವರರಿಲ್ಲ (ಜೀವ-ಈಶ್ವರರು ಬ್ರಹ್ಮನಿಂದ ಅಭಿನ್ನರಾಗಿದ್ದಾರೆ) ಎಂಬ ವಿಷಯದಲ್ಲಿ

''[೨]**ವಿಮತಾಃ ಆತ್ಮಾನಃ,** [೩]**ಪರಮಾತ್ಮನಃ ತತ್ತ್ವತಃ ನ ಭಿದ್ಯಂತೇ, ಆತ್ಮತ್ವಾತ್, ಪರಮಾತ್ಮವತ್ ।**'' ಎಂಬ ಅನುಮಾನ ಹಾಗೂ ''[೪]**ನಾನ್ಯೋಽತೋಽಸ್ತಿ ದ್ರಷ್ಟಾ**'' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿವೆ.

ಬ್ರಹ್ಮಸ್ವರೂಪಕ್ಕೆ ಆವರಕವಾದ ಅದೇ ಅವಿದ್ಯೆಯೇ ಕರ್ತೃತ್ವ-ಭೋಕ್ತೃತ್ವ-ದೋಷಸಂಸರ್ಗಾಧ್ಯಾಸಪ್ರವಾಹರೂಪವಾದ ಸಂಸಾರಕ್ಕೆ ಉಪಾದಾನಕಾರಣ-ವಾಗಿದೆ. (ಸಂಸಾರಬಂಧವು ಅವಿದ್ಯೋಪಾದಾನಕವಾಗಿದೆ ಅವಿದ್ಯಾಕಾರ್ಯ-ವಾಗಿದೆ, ಅವಿದ್ಯಾಪರಿಣಾಮರೂಪವಾಗಿದೆ, ಮಿಥ್ಯೆಯಾಗಿದೆ.)

---

ಕೋಟಿಯನ್ನು ಹೇಳಿದ್ದರಿಂದ ಅದಕ್ಕೆ ವಿರುದ್ಧವಾದ ಸತ್ಯತ್ವ ಎಂಬ ಇನ್ನೊಂದು ಕೋಟಿಯನ್ನು ತೆಗೆದುಕೊಳ್ಳಬೇಕು ಎಂದು ತಿಳಿಯುತ್ತದೆ. ಹಾಗಾದರೆ ಸತ್ಯವಾಗಿದೆಯೋ ? ಮಿಥ್ಯೆಯಾಗಿದೆಯೋ ? ಎಂಬುದಾಗಿ ಸತ್ಯತ್ವ-ಮಿಥ್ಯಾತ್ವಕೋಟಿಕವಾದ ಸಂಶಯಕ್ಕೆ ವಿಷಯವಾದ. ಬ್ರಹ್ಮ-ಅಸತ್-ಪ್ರಾತಿಭಾಸಿಕಗಳಿಂದ ಭಿನ್ನವಾದ, ಘಟಪಟಾದಿಜಗತ್ತು ಎಂದು ಅರ್ಥ.

೧ ಛಾಂದೋಗ್ಯೋಪನಿಷತ್ (೬-೧-೬) ತಂದೆ ಉದ್ದಾಲಕರು ಮಗ ಶ್ವೇತಕೇತುವಿಗೆ ಉಪದೇಶ ಮಾಡುವ ಪ್ರಸಂಗ. ವಿಕಾರಃ ಅವಿದ್ಯಾಪರಿಣಾಮರೂಪವಾದ ಘಟಶರಾವಾದಿ ಜಗತ್ತು ವಾಚಾರಂಭಣಂ, ವಾಗಾಲಂಬನಮಾತ್ರಂ ಕೇವಲ ವಾಕ್‌ನಿಂದ ಆರಬ್ಧವಾಗುತ್ತದೆಯಷ್ಟೇ, ವಾಸ್ತವವಾಗಿ ಘಟ-ಶರಾವ-ಉದಂಜನ ಎಂಬುದಾಗಿ ವಸ್ತುಗಳಿಲ್ಲ. ನಾಮಧೇಯಂ, ನಾಮಮಾತ್ರಂ ಹ್ಯೇತತ್ ಕೇವಲ ಹೆಸರಿಗಷ್ಟೇ ಇದು, ನಿಜವಾಗಿ ಜಗತ್ತು ಇಲ್ಲ, ಜಗತ್ತು ಮಿಥ್ಯೆಯಾಗಿದೆ ಎಂಬುದಾಗಿ ಶ್ರುತಿಯು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುತ್ತಿದೆ ಎಂದು ಪ್ರತಿವಾದಿ(ಅದ್ವೈತಿ)ಗಳ ವ್ಯಾಖ್ಯಾನ.

(ತತ್ತ್ವೋದ್ಯೋತಟಿಪ್ಪಣೀ-ಶ್ರೀಜನಾರ್ದನಭಟ್ಟವ್ಯಾಖ್ಯಾ)

(ನ್ಯಾಯಾಮೃತಕಂಟಕೋದ್ಧಾರ - ವಾಚಾರಂಭಣಶ್ರುತ್ಯರ್ಥವಿವರಣೆ)

೨ ಪರಮಾತ್ಮನಿಂದ ಭಿನ್ನರೋ ? ಅಭಿನ್ನರೋ ? ಎಂಬ ವಿಮತಿಗೆ (ಸಂಶಯಕ್ಕೆ) ವಿಷಯರಾದ ಜೀವರು ಎಂದರ್ಥ. ಅಂತಃಕರಣದಿಂದ ಭಿನ್ನರಾಗಿದ್ದು 'ಅಹಂ' ಎಂದು ಪ್ರತೀಯಮಾನರಾದ ಜೀವರು ಎಂದು ಭಾವ. (ಶ್ರೀವಿಜಯೀಂದ್ರತೀರ್ಥರ ಟಿಪ್ಪಣೀ)

೩ ಪರಮಾತ್ಮಪ್ರತಿಯೋಗಿಕಪಾರಮಾರ್ಥಿಕಭೇದಾಭಾವವಂತಃ ಇತ್ಯರ್ಥಃ । ಪರಮಾತ್ಮನಿಂದ ಪಾರಮಾರ್ಥಿಕವಾಗಿ ಭಿನ್ನರಾಗಿಲ್ಲ ಎಂದು ಹಾರ್ದ.

೪ ಬೃಹದಾರಣ್ಯಕ (೩-೭-೨೩) ಅತಃ ಅಂತರ್ಯಾಮಿಯಾಗಿ ಪ್ರಕೃತನಾದ ಬ್ರಹ್ಮನಿಂದ ಅನ್ಯಃ ಭಿನ್ನನಾದ ದ್ರಷ್ಟಾ ಜೀವನು ನ ಇಲ್ಲ ಎಂದು ಶ್ರುತ್ಯರ್ಥ. (ದ್ವೈತದ್ಯುಮಣಿ ಟಿಪ್ಪಣೀ)

ಸಂಸಾರನಿವರ್ತಕವಾದ ಆತ್ಮಜ್ಞಾನದಿಂದ (ಬ್ರಹ್ಮಸಾಕ್ಷಾತ್ಕಾರದಿಂದ) ಈ ಅವಿದ್ಯೆಯು ನಿಬರ್ಹಣೀಯವಾಗಿದೆ (ನಿವರ್ತ್ಯವಾಗಿದೆ).

''ಜ್ಞಾನಂ ಅಜ್ಞಾನಸ್ಯೈವ ನಿವರ್ತಕಂ'' ಎಂಬ ನಿಯಮದಂತೆ ಜ್ಞಾನದಿಂದ ಅಜ್ಞಾನದ ನಿವೃತ್ತಿಯಾಗುತ್ತದೆ.

**'ವಿಭೇದಜನಕೇऽಜ್ಞಾನೇ ನಾಶಮಾತ್ಯಂತಿಕಂ ಗತೇ ।**
**ಆತ್ಮನೋ ಬ್ರಹ್ಮಣೋऽಭೇದಮಸಂತಂ ಕಃ ಕರಿಷ್ಯತಿ ॥'**
**'ತರತಿ ಶೋಕಮಾತ್ಮವಿತ್'**

ಇತ್ಯಾದಿ ಶ್ರುತಿಗಳು ಹೇಳುವಂತೆ ಆತ್ಮಜ್ಞಾನದಿಂದ ಸಂಸಾರಕ್ಕೆ ಉಪಾದಾನ-ಕಾರಣವಾದ ಅವಿದ್ಯೆಯು ನಾಶವಾಗುತ್ತದೆ. ಉಪಾದಾನಕಾರಣ ನಾಶವಾದರೆ ಕಾರ್ಯವು ಸ್ವಯಂ ನಷ್ಟವಾಗುವುದರಿಂದ, ಆತ್ಮಜ್ಞಾನದಿಂದ ಅವಿದ್ಯಾ ನಾಶವಾದರೆ ಅವಿದ್ಯೋಪಾದಾನಕವಾದ ಸಂಸಾರವು ಸ್ವಯಂನಾಶವಾಗುತ್ತದೆ. ಹೀಗೆ ಆತ್ಮಜ್ಞಾನವು ಅಜ್ಞಾನನಿವೃತ್ತಿದ್ವಾರಾ ಸಂಸಾರನಿವರ್ತಕವಾಗುತ್ತದೆ. ಅರ್ಥಾತ್ ಸಂಸಾರಬಂಧವು ಅವಿದ್ಯೋಪಾದಾನಕವಾಗಿ ಮಿಥ್ಯೆಯಾಗಿದೆ. ಸಂಸಾರಬಂಧವು ಮಿಥ್ಯೆಯಾದ್ದರಿಂದ ಮುಕ್ತತ್ವವು ಪಾರಮಾರ್ಥಿಕವಲ್ಲ.

ಆಯಿತು, ಸಂಸಾರಬಂಧವು ಅವಿದ್ಯೋಪಾದಾನಕವಾದ್ದರಿಂದ ಮಿಥ್ಯೆಯಾಗಲಿ. ಆದರೆ ಬಂಧಾಭಾವರೂಪವಾದ ಮುಕ್ತತ್ವವು ಪಾರಮಾರ್ಥಿಕ ಏಕೆ ಆಗಬಾರದು? ಎಂದು ಶಂಕಿಸುವಂತಿಲ್ಲ. ಏಕೆಂದರೆ- ಮುಕ್ತಿಯು (ಬಂಧಪ್ರಧ್ವಂಸವು) ನಿಯಮೇನ ಬಂಧಸತ್ತಾಪೂರ್ವಕವಾಗಿದೆ. (ಪ್ರತಿಯೋಗಿಯು ಸತ್ ಆಗಿದ್ದರೆ ಮಾತ್ರ ಧ್ವಂಸ ಹೇಳಲು ಬರುತ್ತದೆ.) ಪಾರಮಾರ್ಥಿಕವಾಗಿ ಬಂಧವೇ ಇಲ್ಲದೇ ಹೋದರೆ ಬಂಧಧ್ವಂಸರೂಪವಾದ ಮುಕ್ತಿಯೂ ಉಪಪನ್ನವಾಗುವುದಿಲ್ಲ. ವಾಸ್ತವಿಕವಾಗಿ ನಿಗಡಬಂಧದ ಸ್ಪರ್ಶವೇ ಯಾವನಿಗೆ ಆಗಿಲ್ಲ (ಯಾವನು ಒಮ್ಮೆಯೂ ಜೈಲಿಗೆ ಹೋಗಿಲ್ಲ) ಅವನನ್ನು ನಿಗಡಮುಕ್ತ ಎಂಬುದಾಗಿ ಕರೆಯಲು ಬರುವುದಿಲ್ಲ. ಹಾಗೆ ಬಂಧವೇ ಸತ್ಯವಾಗಿಲ್ಲ ಎಂದಮೇಲೆ ಸಂಸಾರಮುಕ್ತ ಹೇಗೆ ಇರಲು ಸಾಧ್ಯ ? ಮುಕ್ತಿಯೇ ಕೂಡುವುದಿಲ್ಲ ಎಂದಮೇಲೆ ಮುಕ್ತಿಯಲ್ಲಿ ಭೇದವಾದರೂ ಹೇಗೆ ಇರಲು ಸಾಧ್ಯ ?

ಅಂದಮೇಲೆ (ಸಂಸಾರಬಂಧವೇ ಸತ್ ಆಗದ ಕಾರಣ ಮುಕ್ತಿಯೇ ಅನುಪಪನ್ನವಾದ್ದರಿಂದ) ಸಂಸಾರಬಂಧನಿವೃತ್ತಿರೂಪವಾದ ಮುಕ್ತತ್ವವೇ

(ಹೇತುವೇ) ಸತ್ಯವಾಗಿಲ್ಲ ಅಸಿದ್ಧವಾಗಿದೆ. ಮುಕ್ತಿಯಲ್ಲಿ ಭೇದವೂ ಇನ್ನೂ ಅಸಿದ್ಧವಾಗಿದೆ. ಹೀಗಾಗಿ ನಿಮ್ಮ ಅನುಮಾನಕ್ಕೆ ಸ್ವರೂಪಾಸಿದ್ಧಿದೋಷ ಬರುತ್ತದೆ.

ಮತ್ತು ಬ್ರಹ್ಮ-ಜೀವರಿಗೆ ಭೇದ ಹೇಳುವುದಾದರೆ

''**ವಿಮತಾಃ ಆತ್ಮಾನಃ, ಪರಮಾತ್ಮನಃ ತತ್ತ್ವತೋ ನ ಭಿದ್ಯಂತೇ, ಆತ್ಮತ್ವಾತ್ ಪರಮಾತ್ಮವತ್**''

''**ನಾನ್ಯೋಽತೋಽಸ್ತಿ ದ್ರಷ್ಟಾ**'' ಇತ್ಯಾದಿ ಈ ಹಿಂದೆ ಹೇಳಿದ ಅನುಮಾನ-ಶ್ರುತ್ಯಾದಿಪ್ರಮಾಣಗಳ ವಿರೋಧವೂ ಬರುತ್ತದೆ.

ಏಕಜೀವವಾದದಲ್ಲಿ ಬ್ರಹ್ಮನೇ ಜೀವಭಾವ ತಾಳುವುದರಿಂದ ಜೀವ-ಪರಮಾತ್ಮಭೇದ ಇಲ್ಲದಿದ್ದರೂ ಸಹ, ಬಹುಜೀವವಾದದಲ್ಲಿ ಮುಕ್ತ-ಪರಮಾತ್ಮರಲ್ಲಿ ಭೇದ ಇರುವುದರಿಂದ ಅವರ ಮತದಲ್ಲಿ ನಿಯಮ್ಯ-ನಿಯಾಮಕಭಾವ ಉಪಪನ್ನವಾಗುವುದರಿಂದ ಭೇದಾಭಾವದಿಂದ ಮುಕ್ತತ್ವಾ-ಭಾವದ ಆಕ್ಷೇಪ ಸರಿಯಾಗುವುದಿಲ್ಲ ಎಂಬುದಾಗಿ ಪ್ರಶ್ನೆ ಬಂದರೆ,

ಸತ್ಯವೇ. ಬಹುಜೀವವಾದದಲ್ಲಿ ಭೇದ ಇದೆ. (ಮುಕ್ತ-ಪರಮಾತ್ಮರಲ್ಲಿ ಭೇದವಿದೆ.) ಆದರೂ ಸಹ ಆ ಭೇದವು ಮುಕ್ತಪ್ರತೀತಿಗೋಚರವಾಗುವುದಿಲ. ಉದಾಹರಣೆಗೆ :- ಲೋಕದಲ್ಲಿ ಮಾಯಾಮಯವಾದ (ಐಂದ್ರಜಾಲಿಕವಾದ) ಗಜ-ತುರಗಾದಿಗಳನ್ನು ನೋಡುತ್ತಿರುವ ಅನೇಕರಲ್ಲಿ ಯಾವನಿಗೆ ಕಾರಣವಿಶೇಷ-ದಿಂದ ಮಾಯಾ ನಿವೃತ್ತವಾಗುವುದೋ ಅವನೊಬ್ಬನೇ ಆ ಮಾಯಾಮಯ ಗಜ-ತುರಗಾದಿಗಳನ್ನು ನೋಡುವುದಿಲ್ಲ. ಉಳಿದವರೆಲ್ಲ ನೋಡಿಯೇ ನೋಡುತ್ತಾರೆ. ಅದರಂತೆ ಯಾವನಿಗೆ ಭೇದದರ್ಶನಕಾರಣವಾದ ಅಜ್ಞಾನವು ನಿವೃತ್ತವಾಗುವುದೋ ಅವನು ಮಾತ್ರವೇ ಭೇದವನ್ನು ಕಾಣುವುದಿಲ್ಲ. ಉಳಿದವರಿಗೆ ಭೇದದರ್ಶನ ಇದ್ದೇ ಇರುತ್ತದೆ. ಹೀಗಾಗಿ ಭೇದವು ಇದ್ದರೂ ಮುಕ್ತಪ್ರತೀತಿಗೋಚರವಾಗುವುದಿಲ್ಲ ಎಂದು ಬೇರೆ ಗ್ರಂಥಗಳಲ್ಲಿ ಪ್ರತಿಪಾದಿಸಿದ್ದರಿಂದ, ಭೇದ ಇದ್ದಮಾತ್ರಕ್ಕೆ ನಿಯಮ್ಯ-ನಿಯಾಮಕಭಾವ ಯುಕ್ತವಾಗುವುದಿಲ್ಲ. ಆದ್ದರಿಂದ ಭೇದಾಭಾವದಿಂದ ಮುಕ್ತತ್ವಾಭಾವವನ್ನು ಆಕ್ಷೇಪಿಸಿದ್ದು ಸರಿಯೇ ಇದೆ.

ಅಂದಮೇಲೆ ಈ ಹಿಂದೆ ಉದಾಹರಿಸಿದ ಅನುಮಾನ-ಶ್ರುತಿ ಪ್ರಮಾಣಗಳ ಆಧಾರದಲ್ಲಿ ಸಂಸಾರಬಂಧವೇ ಸತ್ ಆಗದ ಕಾರಣ ಸಂಸಾರಬಂಧನಿವೃತ್ತಿ-

ರೂಪವಾದ ಮುಕ್ತತ್ವವೇ (ಹೇತುವೇ) ಅಸಿದ್ಧವಾಗಿದೆ. ''ವಿಮತೋ ಭಿನ್ನೋ ಮುಕ್ತತ್ವಾತ್'' ಎಂಬ ನಿಮ್ಮ ಅನುಮಾನಕ್ಕೆ ಸ್ವರೂಪಾಸಿದ್ಧಿದೋಷ ಬರುತ್ತದೆ. ಮತ್ತು ಜೀವ-ಬ್ರಹ್ಮರಿಗೆ ಭೇದ ಹೇಳಿದರೆ

**''ವಿಮತಾಃ ಆತ್ಮಾನಃ ......'' ''ನಾನ್ಯೋಽತೋಽಸ್ತಿ ದ್ರಷ್ಟಾ''**

ಇತ್ಯಾದಿ ಪ್ರಮಾಣಗಳ ವಿರೋಧವೂ ಬರುತ್ತದೆ ಎಂದು ಆಕ್ಷೇಪ.

**ಪೂರ್ವೋಕ್ತಶಂಕಾನಿರಾಕರಣೆಗಾಗಿ ಮಿಥ್ಯಾತ್ವಾದಿಸಾಧಕ-ದೃಶ್ಯತ್ವಾದ್ಯನುಮಾನಗಳಲ್ಲಿ ಅಪ್ರಸಿದ್ಧವಿಶೇಷಣತ್ವಾದಿದೋಷಗಳ ಅತಿದೇಶ**

**ಟೀಕಾಃ ತತ್ರ ತಾವದನುಮಾನನಿರಾಸಾಯೋಕ್ತದೋಷಾನತಿದಿಶತಿ -**

**ಮೂಲ :- ದೃಶ್ಯತ್ವಾದ್ಯನುಮಾನೇಷ್ವಪ್ಯೇತ ಏವ ದೋಷಾಃ ।**

**''ವಿವಾದಪದಮನಿರ್ವಚನೀಯಂ ಬಾಧ್ಯತ್ವಾತ್'' ಇತ್ಯಾದೇರ್ಯೇಽ-ಪ್ರಸಿದ್ಧವಿಶೇಷಣತ್ವಾದಯೋ ದೋಷಾ ಉಕ್ತಾ ಏತ ಏವ ದೃಶ್ಯತ್ವಾದ್ಯ-ನುಮಾನೇಷ್ವಪಿ ದ್ರಷ್ಟವ್ಯಾಃ ।**

**ತಥಾಹಿ - ಮಿಥ್ಯಾಶಬ್ದೇನಾನಿರ್ವಚನೀಯತ್ವಮುಚ್ಯತೇ ಅಸತ್ತ್ವಂ ವಾ । ನಾದ್ಯಃ । ಅಪ್ರಸಿದ್ಧವಿಶೇಷಣತ್ವಾಪಾತಾತ್ । ನ ದ್ವಿತೀಯಃ । ಅಪಸಿದ್ಧಾಂತಪ್ರಸಂಗಾತ್ । ಅಥಾನಿರ್ವಚನೀಯಾಸತೋಃ ಸಮಾನಂ ಮಿಥ್ಯಾತ್ವಂ, ತಸ್ಮಿನ್ನನೇನಾನುಮಾನೇನ ಸಿದ್ಧೇಽಸತ್ತ್ವೇ ಚ ಬಾಧಿತೇಽನಿರ್ವಾಚ್ಯತಾಸಿದ್ಧಿರಿತಿ ಚೇನ್ನ । ಮಿಥ್ಯಾತ್ವಸಾಮಾನ್ಯ-ಸ್ಯೋಭಯಸಂಪ್ರತಿಪನ್ನಸ್ಯಾಭಾವಾತ್ ।**

**ಅನುವಾದ :-** ಆಕ್ಷೇಪಕಾರರು ಈ ಹಿಂದೆ ಹೇಳಿದ ಪ್ರಮಾಣಗಳಲ್ಲಿ (ಪ್ರಮಾಣತ್ವೇನ ಅಭಿಮತವಾದವುಗಳಲ್ಲಿ) ಮೊದಲಿಗೆ (ಕ್ರಮವಾಗಿ) ''ವಿವಾದ-ಪದಂ ಮಿಥ್ಯಾ ದೃಶ್ಯತ್ವಾತ್'' ಎಂಬ ಅನುಮಾನವನ್ನು ನಿರಾಕರಿಸುವುದಕ್ಕಾಗಿ ಬಾಧ್ಯತ್ವಾದಿ ಅನುಮಾನಗಳಿಗೆ ಹೇಳಿದ ದೋಷಗಳನ್ನೇ ಆಚಾರ್ಯರು ಅತಿದೇಶ ಮಾಡುತ್ತಾರೆ -

ಮೂಲ :- ದೃಶ್ಯತ್ವಾದ್ಯನುಮಾನೇಷ್ವಪ್ಯೇತ ಏವ ದೋಷಾಃ ।

**ಮೂಲಾರ್ಥ :-** ''ವಿವಾದಪದಂ ಅನಿರ್ವಚನೀಯಂ ಬಾಧ್ಯತ್ವಾತ್'' ಇತ್ಯಾದಿ ಅನುಮಾನಗಳಿಗೆ ಹಿಂದೆ ಅಪ್ರಸಿದ್ಧವಿಶೇಷಣತ್ವಾದಿ ಯಾವ ದೋಷಗಳು ಹೇಳಲ್ಪಟ್ಟಿವೆಯೋ ಅದೇ ದೋಷಗಳನ್ನು ದೃಶ್ಯತ್ವಾದ್ಯನು- ಮಾನಗಳಲ್ಲಿಯೂ ತಿಳಿಯಬೇಕು.

ಅದು ಹೇಗೆಂದರೆ- ಜಡಪ್ರಪಂಚವು ಮಿಥ್ಯೆಯಾಗಿದೆ (ಬ್ರಹ್ಮನಲ್ಲಿ ಆರೋಪಿತವಾಗಿದೆ) ಎಂಬ ವಿಷಯದಲ್ಲಿ

**''ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್ ।''**

ಎಂಬ ಅನುಮಾನವನ್ನು ಪ್ರಮಾಣವಾಗಿ ಉದಾಹರಿಸಿದ್ದೀರಿ. ಆದರೆ ಈ ಅನುಮಾನವೇ ಸರಿಯಲ್ಲ. ಯಾಕೆಂದರೆ- ಈ ಅನುಮಾನದಲ್ಲಿ ಮಿಥ್ಯಾತ್ವವನ್ನು ಸಾಧ್ಯವನ್ನಾಗಿ ಮಾಡಿದ್ದೀರಿ. ಮಿಥ್ಯಾತ್ವ ಎಂದರೆ ಏನು ? ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂದು ಹೇಳುತ್ತೀರೋ ? ಅಸತ್ವ ಎಂದು ಹೇಳುತ್ತೀರೋ? ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂದು ಹೇಳಲು ಬರುವುದಿಲ್ಲ. ಕಾರಣ - ಅನಿರ್ವಚನೀಯವಾದ ಪದಾರ್ಥವೇ ಈವರೆಗೆ ಸಿದ್ಧವಾಗದ ಕಾರಣ ಸಾಧ್ಯವಾದ ಅನಿರ್ವಚನೀಯತ್ವವು ಅಪ್ರಸಿದ್ಧವಾದ್ದರಿಂದ ಅನುಮಾನಕ್ಕೆ ಅಪ್ರಸಿದ್ಧವಿಶೇಷಣತಾ ದೋಷ ಬರುತ್ತದೆ. ಇನ್ನು ಮಿಥ್ಯಾತ್ವ ಎಂದರೆ ಅಸತ್ವ ಎಂದು ಹೇಳಲೂ ಬರುವುದಿಲ್ಲ. ಕಾರಣ - ನಿಮ್ಮ ಪೂರ್ವಾಚಾರ್ಯರೆಲ್ಲರೂ ಜಗತ್ತಿಗೆ ಅಸದ್ವಿಲಕ್ಷಣತ್ವವನ್ನು ಅಂಗೀಕರಿಸಿದ್ದಾರೆ. ಪ್ರಕೃತ ಅದಕ್ಕೆ ವಿರುದ್ಧವಾಗಿ ಅಸತ್ವವನ್ನು ಸಾಧಿಸಿದರೆ ಅಪಸಿದ್ಧಾಂತದೋಷ ಬರುತ್ತದೆ.

ಹಾಗಲ್ಲ, ಮಿಥ್ಯಾತ್ವವು ಅನಿರ್ವಚನೀಯ-ಅಸತ್ ಎರಡರಲ್ಲಿಯೂ ಸಮಾನವಾಗಿದೆ(ಸಾಧಾರಣವಾಗಿದೆಅನುಗತವಾಗಿದೆ). ಅಂತಹಅನಿರ್ವಚನೀಯ- ಅಸತ್ ಉಭಯಾನುಗತವಾದ ಮಿಥ್ಯಾತ್ವವು ಜಗತ್ತಿಗೆ ಈ ಅನುಮಾನದಿಂದ ಸಿದ್ಧವಾಗುತ್ತಿರಲು, (ಜಗತ್ತಿಗೆ ಅನಿರ್ವಚನೀಯತ್ವ-ಅಸತ್ವ ಎರಡೂ ಪ್ರಸಕ್ತ- ವಾಗುತ್ತಿರಲು) ಅಸತ್ವವನ್ನು ಹೇಳಿದರೆ ಬಾಧಿತವಾಗುವ ಕಾರಣ ಪರಿಶಿಷ್ಟವಾದ ಅನಿರ್ವಚನೀಯತ್ವವೇ ಸಿದ್ಧವಾಗುತ್ತದೆ ಎಂದು ಶಂಕೆ ಬಂದರೆ, ಅದೂ ಸರಿಯಲ್ಲ. ಈ ರೀತಿ ಯಾವಾಗ ಹೇಳಬಹುದಿತ್ತು? ಮಿಥ್ಯಾತ್ವವು ಅನಿರ್ವಚನೀಯ-ಅಸತ್ ಎರಡರಲ್ಲಿಯೂ ಸಾಧಾರಣವಾಗಿದ್ದರೆ ಹೀಗೆ ಹೇಳಬಹುದಿತ್ತು. ಆದರೆ ಉಭಯವಾದಿಗಳಿಗೂ ಸಂಪ್ರತಿಪನ್ನವಾದ,

ಅನಿರ್ವಚನೀಯಅಸತ್ ಸಾಧಾರಣವಾದ ಮಿಥ್ಯಾತ್ವಸಾಮಾನ್ಯವೇ ಇಲ್ಲ. ಆದ್ದರಿಂದ ಮಿಥ್ಯಾತ್ವ ಎಂದರೆ ಅನಿರ್ವಚನೀಯತ್ವ ಎಂದಾಗಲೀ, ಅಸತ್ವ ಎಂದಾಗಲೀ ಹೇಳಲು ಬರುವುದಿಲ್ಲ.

**ಟೀಕಾಃ ಸದ್ವಿವೇಕಸ್ಯ ಮಿಥ್ಯಾಭಾವಸ್ಯ ಸಾಧ್ಯತ್ವಾನ್ನಾಪ್ರಸಿದ್ಧವಿಶೇಷಣತಾ ನಾಪಸಿದ್ಧಾಂತೋಽಪೀತಿ ಚೇತ್ । ಕಿಮಿದಂ ಸತ್ । ಜಾತಿರ್ವಾ ಜಾತಿಮದ್ವಾ ಸ್ವರೂಪಸದ್ವಾ । ಪ್ರಥಮದ್ವಿತೀಯಯೋಃ ಸದ್ಬಹುತ್ವಾಪತ್ತಿಃ । ತೃತೀಯೇ ಬ್ರಹ್ಮವಿವೇಕಸ್ಯ ಮಯಾಽಪ್ಯಂಗೀಕೃತತ್ವಾತ್ ಸಿದ್ಧಸಾಧನತಾ ಭೇದನಿರಾಕರಣಾನುಪಪತ್ತಿಶ್ಚ ।**

**ಅನುವಾದ :-** ಮಿಥ್ಯಾತ್ವ ಎಂದರೆ ಸದ್ವಿವೇಕ ಎಂದು ಹೇಳುತ್ತೇವೆ. ಆ ಸದ್ವಿವೇಕವನ್ನು ವಾದಿಗಳಾದ ನೀವು ಶಶವಿಷಾಣಾದಿಗಳಲ್ಲಿ ಒಪ್ಪಿದ್ದರಿಂದ ಅಪ್ರಸಿದ್ಧವಿಶೇಷಣತಾ ಬರುವುದಿಲ್ಲ. ಸದಸದ್ವಿಲಕ್ಷಣವಾದಿಗಳಾದ ನಮ್ಮ ಪೂರ್ವಾಚಾರ್ಯರು ಸದ್ವಿವೇಕವನ್ನು ಜಗತ್ತಿನಲ್ಲಿ ಅಂಗೀಕರಿಸಿದ್ದಾರೆಯಾದ್ದರಿಂದ (ಪೂರ್ವಾಚಾರ್ಯರಿಗೆ ಸಮ್ಮತವಾದದ್ದನ್ನೇ ಸಾಧಿಸುತ್ತಿರುವುದರಿಂದ) ಅಪಸಿದ್ಧಾಂತವೂ ಬರುವುದಿಲ್ಲ. ಆದ್ದರಿಂದ ಮಿಥ್ಯಾತ್ವ ಎಂದರೆ ಸದ್ವಿವೇಕ ಎಂದು ಹೇಳುತ್ತೇವೆ ಎಂದರೆ,

ಸದ್ವಿವೇಕ ಎನ್ನುವಲ್ಲಿ ಸತ್ ಎಂದರೆ ಏನು ಹೇಳುತ್ತೀರಿ ? ಸತ್ ಎಂದರೆ ಸತ್ತಾಜಾತಿ ಎಂದು ಹೇಳುತ್ತೀರೋ ? ಸತ್ತಾಜಾತಿಯುಳ್ಳ ಸದ್ವಸ್ತು ಎಂದು ಹೇಳುತ್ತೀರೋ ? ಸ್ವರೂಪಸತ್ ಎಂದು ಹೇಳುತ್ತೀರೋ ?

ಸತ್ ಎಂದರೆ ಸತ್ತಾಜಾತಿ ಅಥವಾ ಸತ್ತಾಜಾತಿಯುಳ್ಳ ವಸ್ತು ಎಂದು ಹೇಳುವ ಮೊದಲನೇ-ಎರಡನೇ ಪಕ್ಷಗಳಲ್ಲಿ ಸದ್ಬಹುತ್ವ ಬರಬೇಕಾಗುತ್ತದೆ.

''**ಜಾತ್ಯಂಗೀಕಾರೇ ಸದ್ಬಹುತ್ವಮ್**'' ಎಂದು ಹಿಂದೆ ಹೇಳಿದಂತೆ, ಜಾತಿಯು ಅನೇಕಾನುಗತವಾದ್ದರಿಂದ ಸತ್ತಾಜಾತಿಯನ್ನು ಒಪ್ಪುವುದಾದರೆ ಸತ್ತಾಜಾತಿಗೆ ಆಶ್ರಯವಾದ ಅನೇಕ ಸತ್‌ಪದಾರ್ಥಗಳನ್ನು ಅಂಗೀಕರಿಸಬೇಕಾಗುತ್ತದೆ ಎಂದು ಭಾವ. ಇನ್ನು ಸತ್ ಎಂದರೆ ಸ್ವರೂಪಸತ್ ಎಂದು ಹೇಳುವ ಮೂರನೇ ಪಕ್ಷದಲ್ಲಿ ಸ್ವರೂಪಸತ್ ಆದ ಬ್ರಹ್ಮನಿಂದ ವಿವೇಕ(ಭೇದ)ವನ್ನು ಜಗತ್ತಿಗೆ ನಾವೂ ಅಂಗೀಕರಿಸಿದ್ದರಿಂದ ಅನುಮಾನಕ್ಕೆ ಸಿದ್ಧಸಾಧನತಾದೋಷ ಬರುತ್ತದೆ.

ಮತ್ತು ಈ ಪಕ್ಷದಲ್ಲಿ ಸದ್ವಿವೇಕ (ಸದ್ವೈಲಕ್ಷಣ್ಯ) ರೂಪವಾದ ಭೇದವನ್ನು ಅಂಗೀಕರಿಸಿದಂತಾಗುವುದರಿಂದ,

''**ಭೇದಃ ಭೇದಿಭ್ಯಾಂ ಭಿನ್ನೋ ವಾ ಅಭಿನ್ನೋ ವಾ**''

ಇತ್ಯಾದಿಯಾಗಿ ಸ್ವಗ್ರಂಥದಲ್ಲಿ ಏನು ಭೇದನಿರಾಕರಣೆಯನ್ನು ಮಾಡಿದ್ದೀರಿ ಅದೂ ಅನುಪಪನ್ನವಾಗಬೇಕಾಗುತ್ತದೆ. (ಭೇದವನ್ನು ಅಂಗೀಕರಿಸಿ ಭೇದವನ್ನು ನಿರಾಕರಿಸುವುದು ವ್ಯಾಹತವಾಗುವುದರಿಂದ ಅನುಪಪನ್ನ ಎಂದು ಭಾವ.) ಆದ್ದರಿಂದ ಮಿಥ್ಯಾತ್ವ ಎಂದರೆ ಸದ್ವಿವೇಕ ಎಂದು ಹೇಳುವುದೂ ಸರಿಯಲ್ಲ.

**ಟೀಕಾ: ಬಾಧ್ಯತ್ವಂ ಮಿಥ್ಯಾತ್ವಮಿತಿ ಚೇನ್ನ । ಬಾಧ್ಯತ್ವಮಪಿ ಹಿ ತೇಷಾಂ ಮಿಥ್ಯಾ।ಸತ್ಯತ್ವೇ ದೃಶ್ಯತ್ವಾದೀನಾಂತೇನೈವಾನೈಕಾಂತ್ಯಾಪಾತಾತ್। ದೃಶ್ಯತ್ವಾದ್ಯಭಾವೇ ಚಾಸಾಧ್ಯತ್ವಾದ್ಯಾಪತ್ತೇಃ । ಬಾಧ್ಯತ್ವಸ್ಯ ಚ ಮಿಥ್ಯಾತ್ವೇ ಅಬಾಧ್ಯತ್ವಮೇವ ಸತ್ಯಂ ಸ್ಯಾತ್ ಆತ್ಮವತ್ ।**

**ಅನುವಾದ :-** ಮಿಥ್ಯಾತ್ವ ಎಂದರೆ ಬಾಧ್ಯತ್ವ ಎಂದು ಹೇಳುತ್ತೇವೆ ಎಂದರೆ, ಅದೂ ಸರಿಯಲ್ಲ. ಏಕೆಂದರೆ ನಿಮ್ಮ ಮತದಲ್ಲಿ ಬಾಧ್ಯತ್ವವೂ ಮಿಥ್ಯೆಯೇ ಆಗಿದೆ. ಇಲ್ಲ ಬಾಧ್ಯತ್ವವು ಸತ್ಯ ಎನ್ನುವುದಾದರೆ, ದೃಶ್ಯತ್ವಾದಿ ಹೇತುಗಳಿಗೆ ಅಲ್ಲಿಯೇ ವ್ಯಭಿಚಾರ ಬರಬೇಕಾಗುತ್ತದೆ. ಬಾಧ್ಯತ್ವವು ಸತ್ಯವಾದ್ದರಿಂದ ಅಲ್ಲಿ ಮಿಥ್ಯಾತ್ವ ಸಾಧ್ಯವಿಲ್ಲ. ಆದರೆ ದೃಶ್ಯತ್ವಾದಿಗಳು ಇರುವುದರಿಂದ ವ್ಯಭಿಚಾರ ಬರುತ್ತದೆ. ಬಾಧ್ಯತ್ವದಲ್ಲಿ ದೃಶ್ಯತ್ವಾದಿಗಳು ಇಲ್ಲ ಎನ್ನುವುದಾದರೆ ಬಾಧ್ಯತ್ವವು ಸಾಧ್ಯವೇ ಆಗದೇ ಹೋಗಬೇಕಾಗುತ್ತದೆ. ಯಾಕೆಂದರೆ ಅನುಮಿತಿರೂಪ-ಜ್ಞಾನದಲ್ಲಿ ವಿಷಯವಾದದ್ದೇ ಸಾಧ್ಯ. ಪ್ರಕೃತ ಬಾಧ್ಯತ್ವದಲ್ಲಿ ದೃಶ್ಯತ್ವವೇ ಇಲ್ಲ ಎಂದರೆ ಬಾಧ್ಯತ್ವವು ಜ್ಞಾನವಿಷಯವೇ ಅಲ್ಲ ಎಂದಂತಾಗಿ ಅನುಮಿತಿರೂಪ-ಜ್ಞಾನವಿಷಯತ್ವ ರೂಪಸಾಧ್ಯತ್ವವೇ ಕೂಡದೇ ಹೋಗಬೇಕಾಗುತ್ತದೆ. ಆದ್ದರಿಂದ ಬಾಧ್ಯತ್ವದಲ್ಲಿ ದೃಶ್ಯತ್ವ ಹೇಳಲೇಬೇಕು. ಹಾಗಾದರೆ ದೃಶ್ಯತ್ವಾದಿಹೇತುಗಳಿಗೆ ಬಾಧ್ಯತ್ವದಲ್ಲಿಯೇ ವ್ಯಭಿಚಾರ ಬರುತ್ತದೆ. ಹೀಗಾಗಿ ಬಾಧ್ಯತ್ವವನ್ನು ಸತ್ಯ ಎಂದು ಹೇಳಲು ಬರುವುದಿಲ್ಲ. ಕಿಂತು ಮಿಥ್ಯೆ ಎಂದೇ ಹೇಳಬೇಕು. ಜಗತ್ತಿನಲ್ಲಿ ಬಾಧ್ಯತ್ವವು ಮಿಥ್ಯೆ ಎಂದಾದರೆ ಅಬಾಧ್ಯತ್ವವೇ ಸತ್ಯವಾಗುತ್ತದೆ. ಆತ್ಮನಲ್ಲಿ ಬಾಧ್ಯತ್ವವು ಮಿಥ್ಯೆಯಾಗಿದ್ದರಿಂದ ಅಬಾಧ್ಯತ್ವವು ಸತ್ಯವಾದಂತೆ. ಆದ್ದರಿಂದ ಮಿಥ್ಯಾತ್ವ ಎಂದರೆ ಬಾಧ್ಯತ್ವ ಎಂದು ಹೇಳಲೂ ಬರುವುದಿಲ್ಲ.

ಅಂದಮೇಲೆ ಮಿಥ್ಯಾತ್ವರೂಪ ಸಾಧ್ಯದ ನಿರ್ವಚನವನ್ನೇ ಮಾಡಲು ಬರುವುದಿಲ್ಲ ನಿಮಗೆ.

**ಟೀಕಾ: ಕಿಂಚ ದೃಶ್ಯತ್ವಾದಯಃ ಸತ್ಯಾಶ್ಚೇನ್ಮಾಯಾವಾದಿನೋಽಸಿದ್ಧಾಃ । ತೈರೇವಾನೈಕಾಂತ್ಯಂ ಚ । ಯದ್ಯಸಂತೋಽನಿರ್ವಾಚ್ಯಾ ವಾ ತದಾ ತತ್ತ್ವವಾದಿನೋಽಸಿದ್ಧಾಃ । ನ ಚ ಸತ್ಯಾಸತ್ಯಯೋರ್ದೃಶ್ಯತ್ವಾದಿ-ಸಾಮಾನ್ಯಮುಭಯಸಂಪ್ರತಿಪನ್ನಮಸ್ತೀತ್ಯೇಷಾ ದಿಕ್।**

**ಅನುವಾದ :-** ಮತ್ತು ದೃಶ್ಯತ್ವಾದಿಹೇತುಗಳು ಸತ್ಯವೋ ? ಅಸತ್ಯವೋ ?

ದೃಶ್ಯತ್ವಾದಿಗಳು ಸತ್ಯ ಎನ್ನುವುದಾದರೆ ಮಾಯಾವಾದಿಗಳಾದ ನಿಮಗೆ ಅಸಿದ್ಧವಾಗಿವೆ. (ಮಾಯಾವಾದಿಗಳಾದ ನೀವು ಸತ್ಯವಾದ ದೃಶ್ಯತ್ವಾದಿಗಳನ್ನು ಒಪ್ಪಿಲ್ಲ.) ಹೀಗಾಗಿ ನಿಮ್ಮ ಪ್ರಕಾರ ಅಸಿದ್ಧಿದೋಷ ಬರುತ್ತದೆ. ಮತ್ತು ದೃಶ್ಯತ್ವಾದಿಗಳು ಸತ್ಯ ಎಂದರೆ, ಅಲ್ಲಿ ಮಿಥ್ಯಾತ್ವ ಇಲ್ಲ ಎಂದಾಯಿತು. ದೃಶ್ಯತ್ವಾದಿಗಳಲ್ಲಿ ದೃಶ್ಯತ್ವಾದಿಗಳನ್ನು ಒಪ್ಪಲೇಬೇಕು. ಹಾಗಾಗಿ ಮಿಥ್ಯಾತ್ವ-ರೂಪಸಾಧ್ಯ ಇಲ್ಲದ ದೃಶ್ಯತ್ವಾದಿಗಳಲ್ಲಿ ದೃಶ್ಯತ್ವಾದಿಹೇತುವಿರುವ ಕಾರಣ ದೃಶ್ಯತ್ವಾದಿಗಳಿಗೆ ದೃಶ್ಯತ್ವಾದಿಗಳಲ್ಲಿಯೇ ವ್ಯಭಿಚಾರವೂ ಬರುತ್ತದೆ. ಆದ್ದರಿಂದ ದೃಶ್ಯತ್ವಾದಿಗಳನ್ನು ಸತ್ಯ ಎನ್ನಲು ಬರುವುದಿಲ್ಲ.

ಇನ್ನು ದೃಶ್ಯತ್ವಾದಿಗಳು ಅಸತ್ಯ ಎನ್ನುವುದಾದರೆ ಅಥವಾ ಅನಿರ್ವಚನೀಯ ಎನ್ನುವುದಾದರೆ, ತತ್ತ್ವವಾದಿಗಳಾದ ನಮಗೆ ಅಸಿದ್ಧವಾಗಿವೆ. (ತತ್ತ್ವವಾದಿಗಳಾದ ನಾವು ದೃಶ್ಯತ್ವಾದಿಗಳನ್ನು ಅಸತ್-ಅನಿರ್ವಚನೀಯ ಎಂದು ಒಪ್ಪಿಲ್ಲ.) ಹಾಗಾಗಿ ನಮ್ಮ ಪ್ರಕಾರ ಅಸಿದ್ಧಿದೋಷ ಬರುತ್ತದೆ.

ಹಾಗಲ್ಲ. ಸತ್ಯವಾದ ದೃಶ್ಯತ್ವಾದಿಗಳನ್ನಾಗಲೀ, ಮಿಥ್ಯಾಭೂತವಾದ ದೃಶ್ಯತ್ವಾದಿಗಳನ್ನಾಗಲೀ ಹೇತುತ್ವೇನ ವಿವಕ್ಷಿಸುವುದಿಲ್ಲ. ಕಿಂತು ಸತ್ಯ-ಅಸತ್ಯ ಉಭಯಾನುಗತ ದೃಶ್ಯತ್ವತ್ವಾವಚ್ಛಿನ್ನವಾದ ದೃಶ್ಯತ್ವಾದಿಸಾಮಾನ್ಯವನ್ನು ಹೇತುತ್ವೇನ ವಿವಕ್ಷಿಸುತ್ತೇವೆ. ಹೀಗೆ ಸಾಮಾನ್ಯವಾಗಿ ಪ್ರಯೋಗಿಸಲ್ಪಟ್ಟ ಹೇತುವನ್ನು ವಿಶೇಷವಿಕಲ್ಪಗಳಿಂದ ನಿರಾಕರಿಸುವುದು ಸರಿಯಲ್ಲ. ಹಾಗೆ ನಿರಾಕರಿಸುವುದಾದರೆ ಎಲ್ಲ ಸದನುಮಾನಗಳೂ ನಿರಾಕೃತವಾಗಬೇಕಾಗುತ್ತದೆ. ಆದ್ದರಿಂದ ದೃಶ್ಯತ್ವಾದಿಗಳು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. ಕಿಂತು ಉಭಯಾನುಗತ ದೃಶ್ಯತ್ವತ್ವಾವಚ್ಛಿನ್ನವಾದ ದೃಶ್ಯತ್ವಾದಿಸಾಮಾನ್ಯರೂಪವಾಗಿವೆ

ಎಂಬುದಾಗಿ ಪ್ರಶ್ನೆ ಬಂದರೆ, ಅದು ಸರಿಯಲ್ಲ. ಬಾಷ್ಪಾರೋಪಿತಧೂಮ ಎಂಬ ಆಶ್ರಯವೇ ಅಸಿದ್ಧವಾದ್ದರಿಂದ ಬಾಷ್ಪಾರೋಪಿತಧೂಮ-ಸತ್ಯಧೂಮ ಇವುಗಳಲ್ಲಿ ಅನುಗತವಾದ ಧೂಮತ್ವಸಾಮಾನ್ಯ ಹೇಗೆ ಇಲ್ಲವೋ ಅದರಂತೆ ಅನಿರ್ವಚನೀಯ ಎಂಬ ಆಶ್ರಯವೇ ಅಸಿದ್ಧವಾದ್ದರಿಂದ ಸತ್ಯ-ಅನಿರ್ವಚನೀಯ ಇವುಗಳಲ್ಲಿ ಸಾಧಾರಣವಾದ ದೃಶ್ಯತ್ವತ್ವವೂ ಅಸಂಭಾವಿತವಾಗಿದೆ. ಆದ್ದರಿಂದ ದೃಶ್ಯತ್ವಾದಿಗಳು ಉಭಯಾನುಗತ ದೃಶ್ಯತ್ವತ್ವಾವಚ್ಛಿನ್ನ ದೃಶ್ಯತ್ವಸಾಮಾನ್ಯ-ರೂಪವಾಗಿವೆ ಎಂದು ಹೇಳಲು ಬರುವುದಿಲ್ಲ. ಹಾಗಾಗಿ ದೃಶ್ಯತ್ವಾದಿಗಳ ನಿಷ್ಕೃಷ್ಟಸ್ವರೂಪವನ್ನು ಹೇಳಲು ಬರುವುದಿಲ್ಲ.

ಆದ್ದರಿಂದ ಮಿಥ್ಯಾತ್ವರೂಪಸಾಧ್ಯದ ನಿರ್ವಚನವನ್ನೂ ಮಾಡಲು ಬರುವುದಿಲ್ಲ, ದೃಶ್ಯತ್ವಾದಿ ಹೇತುಗಳ ಸ್ವರೂಪವನ್ನೂ ವಿವೇಚಿಸಲು ಬರುವುದಿಲ್ಲವಾದ್ದರಿಂದ

"**ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್**" ಎಂಬ ಅನುಮಾನ ಸರಿಯಲ್ಲಎಂದು ಸಿದ್ಧವಾಗುತ್ತದೆ.

## ದೃಶ್ಯತ್ವಾನುಮಾನಕ್ಕೆ ಆತ್ಮನಲ್ಲಿ ವ್ಯಭಿಚಾರಸಮರ್ಥನೆ

**ಟೀಕಾ: ಏವಂ ಸಾಮಾನ್ಯತೋಽನುಮಾನಾನಿ ನಿರಸ್ಯ ವಿಶೇಷತೋ ನಿರಾಚಿಕೀರ್ಷುರ್ದೃಶ್ಯತ್ವಾನುಮಾನಸ್ಯ ತಾವದ್ ದೋಷಾಂತರಮಾಹ -**

**ಮೂಲ :- ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕತಾ ಚ ।**

**ಶುಕ್ತಿರಜತಾದೇಃ ಸಪಕ್ಷಸ್ಯೇವ ವಿಪಕ್ಷಸ್ಯಾತ್ಮನೋಽಪಿ ದೃಶ್ಯತ್ವಾದನೈಕಾಂತಿಕತಾ ಸಾಧ್ಯಮಿಥ್ಯಾತ್ವಸಂಬಂಧನಿಯಮಾಭಾವಶ್ಚ ದೃಶ್ಯತ್ವಸ್ಯ ಭವತಿ । ಅನೈಕಾಂತಿಕಶ್ಚೋರ್ಧ್ವತ್ವಾದಿವತ್ ಸಂದೇಹಹೇತುತ್ವಾನ್ನ ಸಾಧ್ಯಂ ಸಾಧಯತಿ ।**

**ನನ್ವಾತ್ಮನೋ ದೃಶ್ಯತ್ವಮೇವ ಕುತ ಇತಿ ಚೇನ್ನ । 'ಆತ್ಮಾ ವಾ ಅರೇ ದ್ರಷ್ಟವ್ಯಃ' 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ' ಇತ್ಯಾದಿಶ್ರುತೇಃ ।**

**ಅನುವಾದ :-** ಈ ರೀತಿಯಾಗಿ ದೃಶ್ಯತ್ವ-ಜಡತ್ವ-ಪರಿಚ್ಛಿನ್ನತ್ವ ಅನುಮಾನಗಳನ್ನು ಸಾಮಾನ್ಯವಾಗಿ ನಿರಾಕರಿಸಿ, (ಸಾಧ್ಯ-ಹೇತುಗಳ ಬಗ್ಗೆ ವಿಕಲ್ಪಪೂರ್ವಕವಾಗಿ ಅಸಿದ್ಧಿ ಮೊದಲಾದ ದೋಷಗಳನ್ನು ಹೇಳಿ ನಿರಾಕರಿಸಿ) ಪ್ರಕೃತ

ಪ್ರತಿಯೊಂದು ಅನುಮಾನವನ್ನೂ ವಿಶೇಷವಾಗಿ ನಿರಾಕರಿಸಲು ಇಚ್ಛಿಸಿದವರಾಗಿ ಮೊದಲಿಗೆ (ಜಡತ್ವ-ಪರಿಚ್ಛಿನ್ನತ್ವ ಅನುಮಾನಗಳಿಗೆ ದೋಷಗಳನ್ನು ಹೇಳುವ ಮೊದಲು) ದೃಶ್ಯತ್ವಾನುಮಾನಕ್ಕೆ ಮತ್ತೊಂದು ದೋಷವನ್ನು ಹೇಳುತ್ತಾರೆ -

**ಮೂಲ - ಆತ್ಮನೋऽಪಿ ದೃಶ್ಯತ್ವಾದನೈಕಾಂತಿಕತಾ ಚ।**

**ಮೂಲಾರ್ಥ:- ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ದೃಶ್ಯತ್ವ ಇರುವಂತೆ ವಿಪಕ್ಷನಾದ ಆತ್ಮನಲ್ಲಿಯೂ ದೃಶ್ಯತ್ವ ಇರುವುದರಿಂದ ವ್ಯಭಿಚಾರವೂ ಬರುತ್ತದೆ.**

''ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್'' ಎಂಬ ನಿಮ್ಮ ಅನುಮಾನದಲ್ಲಿ ಮಿಥ್ಯಾತ್ವಸಾಧ್ಯವು ಶುಕ್ತಿರಜತದಲ್ಲಿ ನಿಶ್ಚಿತವಾದ್ದರಿಂದ ಶುಕ್ತಿರಜತವು ಸಪಕ್ಷವಾಗಿದೆ. ಆತ್ಮನಲ್ಲಿ ಮಿಥ್ಯಾತ್ವಸಾಧ್ಯವು ಇಲ್ಲವಾದ್ದರಿಂದ ಆತ್ಮನು ವಿಪಕ್ಷನಾಗಿದ್ದಾನೆ.

ಪ್ರಕೃತ ಸಪಕ್ಷವಾದ ಶುಕ್ತಿರಜತಾದಿಗಳಲ್ಲಿ ದೃಶ್ಯತ್ವಹೇತು ಇರುವಂತೆ, ವಿಪಕ್ಷನಾದ ಆತ್ಮನಲ್ಲಿಯೂ ದೃಶ್ಯತ್ವ ಇರುವುದರಿಂದ ದೃಶ್ಯತ್ವಾನುಮಾನಕ್ಕೆ ಅನೈಕಾಂತಿಕತಾದೋಷವೂ ಸಾಧ್ಯವಾದ ಮಿಥ್ಯಾತ್ವದ ಜೊತೆ ನಿಯಮೇನ ಸಂಬಂಧವಿಲ್ಲ ಎಂಬ ದೋಷವೂ ಬರುತ್ತದೆ.

ಈ ರೀತಿ ಹೇಳುವುದರಿಂದ ''ಅಸಿದ್ಧಿ-ಅವ್ಯಾಪ್ತಿಗಳು ಮಾತ್ರವೇ ಹೇತು-ದೋಷವಾದ್ದರಿಂದ ಅನೈಕಾಂತಿಕತಾವು ಹೇಗೆ ಹೇತುದೋಷವಾಗುತ್ತದೆ?'' ಎಂಬ ಶಂಕೆಗೆ ಉತ್ತರ ನೀಡಿದಂತಾಯಿತು. ಕಾರಣ- ''ಅನೈಕಾಂತಿಕತಾ ಸಾಧ್ಯಸಂಬಂಧನಿಯಮಾಭಾವ'' ಎಂದು ವಿವರಣೆ ಕೊಟ್ಟಿರುವುದರಿಂದ ಅನೈಕಾಂತಿಕತಾವು ಅವ್ಯಾಪ್ತಿಯಲ್ಲಿಯೇ ಅಂತರ್ಭಾವವಾಗುತ್ತದೆ ಎಂದು ಉತ್ತರದ [೧]ಆಶಯ.

ಹೌದು, ದೃಶ್ಯತ್ವ ಹೇತುವಿಗೆ ಸಾಧ್ಯದ ಜೊತೆಗೂ ಸಂಬಂಧ ಇರುವುದರಿಂದ ಸಾಧ್ಯಸಾಧಕವಾಗಬಹುದಲ್ಲ? ಎಂಬ ಶಂಕೆ ಸರಿಯಲ್ಲ.

ಹೇತುವಿಗೆ ಸಾಧ್ಯದ ಸಂಬಂಧವೂ ಇದೆ, ಸಾಧ್ಯಾಭಾವದ ಸಂಬಂಧವೂ ಇದೆ ಎಂದಾದರೆ - ಊರ್ಧ್ವತಾ ಎಂಬ ಧರ್ಮಕ್ಕೆ ಸ್ಥಾಣುತ್ವದ ಜೊತೆಗೂ ಸಂಬಂಧವಿದೆ, ಪುರುಷತ್ವದ ಜೊತೆಗೂ ಸಂಬಂಧವಿದೆ ಎಂದಾದಾಗ,

---

೧ (ಶ್ರೀವೇದೇಶತೀರ್ಥರ ವ್ಯಾಖ್ಯಾನ)

ಉಭಯಸಂಬದ್ಧವಾದ ಊರ್ಧ್ವತಾ ಕಂಡರೆ, ಸ್ಥಾಣುವೋ ? ಪುರುಷನೋ ? ಎಂದು ಸಂಶಯ ಬರುವಂತೆ, ಸಾಧ್ಯ-ಸಾಧ್ಯಾಭಾವ ಉಭಯಸಂಬದ್ಧವಾದ ದೃಶ್ಯತ್ವ ಇದ್ದರೆ ಸಾಧ್ಯವಿದೆಯೋ ? ಸಾಧ್ಯಾಭಾವವಿದೆಯೋ ? ಎಂಬುದಾಗಿ ಸಂಶಯ ಬರುತ್ತದೆ. ಹೊರತು ಸಾಧ್ಯವೇ ಇದೆ ಎಂದು ನಿಶ್ಚಯಜ್ಞಾನ (ಅನುಮಿತಿ) ಬರುವುದಿಲ್ಲ. ಅನೈಕಾಂತಿಕತಾವು ಹೀಗೆ ಸಂದೇಹಕ್ಕೆ ಕಾರಣವಾಗುವುದರಿಂದ ಸಾಧ್ಯಸಾಧಕವಾಗುವುದಿಲ್ಲ ಎಂದು ಭಾವ.

ಹೌದು, 'ವಿಪಕ್ಷನಾದ ಆತ್ಮನಲ್ಲಿಯೂ ದೃಶ್ಯತ್ವ ಇರುವುದರಿಂದ ಅನೈಕಾಂತಿಕತಾ' ಎಂದು ಹೇಳಿದ್ದೀರಿ. ಆದರೆ ಆತ್ಮನಲ್ಲಿ ದೃಶ್ಯತ್ವ ಇರುತ್ತಿದ್ದರೆ ಆಗ ಅನೈಕಾಂತಿಕತಾ ಹೇಳಬಹುದಿತ್ತು. ಆತ್ಮನಲ್ಲಿ ದೃಶ್ಯತ್ವ ಇದೆ ಹೇಗೆ ಸಿದ್ಧವಾಗಿದೆ ? (ಯಾವ ಪ್ರಮಾಣದಿಂದ ಆತ್ಮನಿಗೆ ದೃಶ್ಯತ್ವ ಸಿದ್ಧವಾಗಿದೆ ?)

ಈ ವಿಧವಾದ ಶಂಕೆ ಬೇಡ.

**೧) ''[೧]ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ''**

**೨) ''[೨]ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ।''**

ಇತ್ಯಾದಿ [೩]ಶ್ರುತಿಗಳಿಂದ ಆತ್ಮನಿಗೆ ದೃಶ್ಯತ್ವವು ಸಿದ್ಧವಾಗಿದೆ.

**ಅವತಾರಿಕೆ :-** ಈವರೆಗೆ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಮೊದಲಾದ ಸಾಧಕಪ್ರಮಾಣಗಳನ್ನು ಕೊಟ್ಟು ಆತ್ಮನಿಗೆ ದೃಶ್ಯತ್ವವನ್ನು ಸಮರ್ಥಿಸಿದರು. ಪ್ರಕೃತ ಆತ್ಮನಿಗೆ ದೃಶ್ಯತ್ವವನ್ನು ಒಪ್ಪದಿದ್ದರೆ ಬಾಧಕವನ್ನು ತೋರಿಸುವ ಮೂಲಕವಾಗಿಯೂ ಆತ್ಮನಿಗೆ ದೃಶ್ಯತ್ವವನ್ನು ಸಮರ್ಥಿಸುತ್ತಾರೆ -

---

೧ (ಬೃಹದಾರಣ್ಯಕೋಪನಿಷತ್ ೪-೪-೫ ಮೈತ್ರೇಯೀಬ್ರಾಹ್ಮಣ)

೨ (ಕಾಠಕೋಪನಿಷತ್ ೧-೩-೧೨)

೩ ''ಆತ್ಮಾ ವಾ ಅರೇ ದ್ರಷ್ಟವ್ಯಃ'' ಇತ್ಯಾದಿಗಳಲ್ಲಿ ತವ್ಯಪ್ರತ್ಯಯವನ್ನು,
''ದೃಶ್ಯತೇ ಬುದ್ಧ್ಯಾ'' ಇತ್ಯಾದಿಗಳಲ್ಲಿ ತಿಙ್ನ್ನು,
''ತಮೇವ ಧೀರೋ ವಿಜ್ಞಾಯ'' ಇತ್ಯಾದಿಗಳಲ್ಲಿ ದ್ವಿತೀಯಾವನ್ನು
'ತಯೋರೇವ ಕೃತ್ಯಕ್ತಖಲರ್ಥಾಃ' 'ಭಾವಕರ್ಮಣೋಃ' 'ಕರ್ಮಣಿ ದ್ವಿತೀಯಾ'
ಎಂಬುದಾಗಿ ಕರ್ಮಾರ್ಥದಲ್ಲಿ ಅನುಶಾಸನ ಮಾಡಿದ್ದರಿಂದ ಆತ್ಮನಿಗೆ ದೃಶ್ಯತ್ವ ಶ್ರುತಿಸಿದ್ಧವಾಗಿದೆ ಎಂದು ಭಾವ. (ಶ್ರೀವಿಜಯೀಂದ್ರತೀರ್ಥರ ವ್ಯಾಖ್ಯಾ)

## ಆತ್ಮನಿಗೆ ದೃಶ್ಯತ್ವ ಒಪ್ಪದಿದ್ದರೆ ಬಾಧಕಪ್ರದರ್ಶನ

**ಟೀಕಾ :** ವಿಪಕ್ಷೇ ಬಾಧಕಂ ಚಾಹ -

**ಮೂಲ :- ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ತಜ್ಞಾನತ್ವಮ್ ।**

ತಜ್ಞಾನತ್ವೇನಾಭಿಮತಸ್ಯೇತಿ ಶೇಷಃ । ಭವತೀತಿ ವಕ್ಷ್ಯಮಾಣೇನ ಸಂಬಂಧಃ । ಪ್ರಕೃತತ್ವಾತ್ ದೃಶ್ಯತ್ವಮಿತಿ ವಕ್ತವ್ಯೇ ದೃಕ್ಕರ್ಮತ್ವಮಿತಿ ದೃಶ್ಯತ್ವವ್ಯಾಖ್ಯಾನಮತಿಪ್ರಸಂಗಸ್ಫುಟೀಕರಣಾರ್ಥಮ್ ।

ತದಯಮರ್ಥಃ । ಯದ್ಯಾತ್ಮನೋ ದೃಶ್ಯತ್ವಂ ನ ಸ್ಯಾತ್ ತದಾ ವೇದಾಂತವಾಕ್ಯಜನಿತವಿಜ್ಞಾನಸ್ಯಾತ್ಮಜ್ಞಾನತ್ವಂ ನ ಸ್ಯಾತ್ । ದೃಶಿಂ ಪ್ರತಿ ಕರ್ಮತ್ವಂ ಹಿ ದೃಶ್ಯತ್ವಮ್ । ಆತ್ಮಕರ್ಮಕಂ ಜ್ಞಾನಮೇವಾತ್ಮಜ್ಞಾನಮ್ । ತಥಾ ಚಾತ್ಮನೋ ದೃಶ್ಯತ್ವಾಭಾವೇ ಕಥಮಾತ್ಮಜ್ಞಾನಂ ಸಂಭವೇತ್ । ಅಕರ್ಮಣಃ ಕರ್ಮತಯಾ ಜ್ಞಾನವ್ಯಾವರ್ತಕತ್ವೇ ವ್ಯಾಘಾತಾತ್ ।

**ಅನುವಾದ :-** ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸದೇ ಹೋದರೆ ಬಾಧಕವನ್ನೂ ಹೇಳುತ್ತಾರೆ -

ಮೂಲ :- ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ತಜ್ಞಾನತ್ವಮ್ ।

**ಮೂಲಾರ್ಥಃ-** ಆತ್ಮನಿಗೆ ದೃಶ್ಯತ್ವವನ್ನು ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ ಆತ್ಮಜ್ಞಾನತ್ವೇನ ಅಭಿಮತವಾದ ವೇದಾಂತವಾಕ್ಯಜನಿತಜ್ಞಾನಕ್ಕೆ ಆತ್ಮಜ್ಞಾನತ್ವ ಕೂಡದೇ ಹೋಗಬೇಕಾಗುತ್ತದೆ.

'ನ ಚಾತ್ಮನಃ.....' ಎಂಬ ಮೂಲದಲ್ಲಿ

**'ಯದಿ ಆತ್ಮನಃ ದೃಕ್ಕರ್ಮತ್ವಂ ನ ಸ್ಯಾತ್ ತದಾ ಆತ್ಮನಃ ತಜ್ಞಾನತ್ವಂ ನ ಸ್ಯಾತ್'**

(ಆತ್ಮನಿಗೆ ದೃಕ್ಕರ್ಮತ್ವವನ್ನು ಒಪ್ಪದಿದ್ದರೆ, ಆತ್ಮನಿಗೆ ಆತ್ಮಜ್ಞಾನತ್ವ ಸ್ವವಿಷಯಕಜ್ಞಾನತ್ವ ಇಲ್ಲದೇ ಹೋಗಬೇಕಾಗುತ್ತದೆ)

ಎಂಬುದಾಗಿ ಅನ್ಯಥಾಪ್ರತೀತಿ (ಅನ್ವಯಭ್ರಮ) ಬರಲು ಅವಕಾಶವಿದೆ. ಆದರೆ ಅಲ್ಲಿ ಇಷ್ಟಾಪತ್ತಿ ಇರುವ ಕಾರಣ ಆ ರೀತಿ 'ಆತ್ಮನಃ ತಜ್ಞಾನತ್ವಂ ನ ಸ್ಯಾತ್' ಎಂದು ಅನ್ವಯ ಮಾಡಿಕೊಳ್ಳಬಾರದು. ಕಿಂತು ಮೂಲದಲ್ಲಿ ''ತಜ್ಞಾನತ್ವೇನ ಅಭಿಮತಸ್ಯ'' ಎಂದು ಶೇಷ ಮಾಡಿಕೊಂಡು

**''ಯದಿ ಆತ್ಮನಃ ದೃಕ್ಕರ್ಮತ್ವಂ ನ ಸ್ಯಾತ್ ತದಾ ತಜ್ಞಾನತ್ವೇನಾಭಿಮತಸ್ಯ ತಜ್ಞಾನತ್ವಂ ನ ಸ್ಯಾತ್''**

(ಆತ್ಮನಿಗೆ ದೃಕ್ಕರ್ಮತ್ವವನ್ನು ಒಪ್ಪದಿದ್ದರೆ, ಆತ್ಮಜ್ಞಾನ ಎಂದು ಅಭಿಮತವಾದ ವೇದಾಂತಜನಿತಜ್ಞಾನಕ್ಕೆ ಆತ್ಮಜ್ಞಾನತ್ವ ಇಲ್ಲದೇ ಹೋಗಬೇಕಾಗುತ್ತದೆ)

ಎಂಬುದಾಗಿ ಅನ್ವಯ ಮಾಡಿಕೊಳ್ಳಬೇಕು. ಆತ್ಮಜ್ಞಾನ ಎಂದು ಅಭಿಮತವಾದ ವೇದಾಂತಜನಿತಜ್ಞಾನಕ್ಕೆ ಆತ್ಮಜ್ಞಾನತ್ವಾಭಾವವು ಅನಿಷ್ಟವೇ ಆಗಿದ್ದರಿಂದ ಇಷ್ಟಾಪತ್ತಿಗೆ ಅವಕಾಶವಿಲ್ಲ ಎಂದು ಭಾವ.

ಮೂಲದಲ್ಲಿ ಕ್ರಿಯಾಪದ ಇಲ್ಲವಾದ್ದರಿಂದ ''ತದಜ್ಞಾನನಿವೃತ್ತಿಶ್ಚ ತೇನ ಭವತಿ'' ಎಂಬ ಮುಂದಿನ ಮೂಲವಾಕ್ಯದಲ್ಲಿನ 'ಭವತಿ' ಎಂಬುದನ್ನು ತಂದುಕೊಂಡು ನಞ್ ಜೊತೆಗೆ ಸಂಬಂಧ ಮಾಡಿಕೊಳ್ಳಬೇಕು.

''**ತಜ್ಞಾನತ್ವಂ ನ ಭವತಿ**'' ಎಂಬುದಾಗಿ ಅನ್ವಯ ಮಾಡಿಕೊಳ್ಳಬೇಕು ಎಂದು ಅಭಿಪ್ರಾಯ.

**ಪ್ರ:** 'ಆತ್ಮನೋऽಪಿ ದೃಶ್ಯತ್ವಾತ್......' ಎಂಬುದಾಗಿ ಹಿಂದೆ ದೃಶ್ಯತ್ವವು ಪ್ರಕೃತವಾದ್ದರಿಂದ ಆಚಾರ್ಯರು ಮೂಲದಲ್ಲಿ 'ನ ಚಾತ್ಮನೋ ದೃಶ್ಯತ್ವಂ ವಿನಾ' ಎಂದು ಹೇಳಬೇಕಿತ್ತು. ಆದರೆ ಹಾಗೆ ಹೇಳದೇ (ದೃಶ್ಯತ್ವವನ್ನು ಹೇಳದೇ) 'ನ ಚಾತ್ಮನೋ ದೃಕ್ಕರ್ಮತ್ವಂ ವಿನಾ...' ಎಂದು ದೃಕ್ಕರ್ಮತ್ವವನ್ನು ಏಕೆ ಹೇಳಿದರು ?

**ಉ :** ದೃಶ್ಯತ್ವ ಎಂದರೆ ದೃಕ್ಕರ್ಮತ್ವ. ದೃಕ್ಕರ್ಮತ್ವ ಎನ್ನುವುದು ದೃಶ್ಯತ್ವದ ವ್ಯಾಖ್ಯಾನವಾಗಿದೆ. ವ್ಯಾಘಾತ ರೂಪವಾದ ಅತಿಪ್ರಸಂಗವನ್ನು ಸ್ಫುಟೀಕರಿಸುವುದಕ್ಕಾಗಿ ದೃಶ್ಯತ್ವದ ವ್ಯಾಖ್ಯಾನವಾಗಿ ದೃಕ್ಕರ್ಮತ್ವವನ್ನು ಹೇಳಿದ್ದಾರೆ ಆಚಾರ್ಯರು.

**ಅದರ ಅಭಿಪ್ರಾಯ ಇಷ್ಟು :-** ಒಂದುವೇಳೆ ಆತ್ಮನಿಗೆ ದೃಶ್ಯತ್ವ ಇಲ್ಲದೇ ಹೋದರೆ, ಆಗ ಆತ್ಮಜ್ಞಾನ ಎಂದು ಅಭಿಮತವಾದ ವೇದಾಂತವಾಕ್ಯಜನಿತ-ವಿಜ್ಞಾನಕ್ಕೆ ಆತ್ಮಜ್ಞಾನತ್ವ ಕೂಡದೇ ಹೋಗಬೇಕಾಗುತ್ತದೆ. (ವೇದಾಂತವಾಕ್ಯ-ಜನಿತವಿಜ್ಞಾನವು ಆತ್ಮಜ್ಞಾನ ಆಗದೇ ಹೋಗಬೇಕಾಗುತ್ತದೆ.) ಯಾಕೆಂದರೆ - ದೃಕ್ಕನ್ನು ಕುರಿತು (ಜ್ಞಾನದಲ್ಲಿ) ಕರ್ಮವಾಗುವುದೇ ದೃಶ್ಯತ್ವ. ಆತ್ಮಕರ್ಮಕವಾದ

ಜ್ಞಾನವೇ ಆತ್ಮಜ್ಞಾನ. ಹಾಗಾಗಿ ಆತ್ಮನಿಗೆ ದೃಶ್ಯತ್ವ ಒಪ್ಪದಿದ್ದರೆ ಆತ್ಮನಿಗೆ ದೃಕ್ಕರ್ಮತ್ವ ಇಲ್ಲದಂತಾಗಿ ಆತ್ಮಕರ್ಮಕಜ್ಞಾನ ಇಲ್ಲದಂತಾಗುವುದರಿಂದ ಆತ್ಮಜ್ಞಾನ ಹೇಗೆ ಸಂಭವಿಸೀತು ?

ಆತ್ಮನಿಗೆ ದೃಕ್ಕರ್ಮತ್ವ ಇಲ್ಲದಿದ್ದರೂ (ಆತ್ಮನು ಕರ್ಮನಾಗದಿದ್ದರೂ) ಆತ್ಮನು ಕರ್ಮನಾಗಿ ಇತರಜ್ಞಾನಕ್ಕೆ ವ್ಯಾವರ್ತಕನಾಗುತ್ತಾನೆ ಎಂದು ಹೇಳಿದರೆ, ಒಬ್ಬನೇ ಆತ್ಮನಿಗೆ ಕರ್ಮತ್ವ-ಅಕರ್ಮತ್ವಗಳನ್ನು ಅಂಗೀಕರಿಸಿದಂತಾಗುವುದರಿಂದ ವ್ಯಾಹತಿ ಬರುತ್ತದೆ. ಆದ್ದರಿಂದ ಆತ್ಮನಿಗೆ ಕರ್ಮತ್ವವನ್ನೇ ಅಂಗೀಕರಿಸಬೇಕು. ದೃಕ್ಕರ್ಮತ್ವ ಒಪ್ಪಿದರೆ ದೃಶ್ಯತ್ವವನ್ನು ಒಪ್ಪಿದಂತಾಗುವುದರಿಂದ ದೃಶ್ಯತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ ಬಂದೇ ಬರುತ್ತದೆ ಎಂದು ಭಾವ.

**ಅವತಾರಿಕೆ :-** ಆತ್ಮನಿಗೆ ದೃಶ್ಯತ್ವ ಒಪ್ಪದಿದ್ದರೆ ಆತ್ಮಜ್ಞಾನವೇ ಕೂಡದೇ-ಹೋಗಬೇಕಾಗುತ್ತದೆ ಎಂಬುದಾಗಿ ಅನಿಷ್ಟಪ್ರಸಂಗವನ್ನು ಹೇಳಿ, ಪ್ರಕೃತ ಆತ್ಮಜ್ಞಾನವನ್ನೇ ಒಪ್ಪದಿದ್ದರೆ ಏನು ಬಾಧಕ ? ಎನ್ನುವುದನ್ನು ತೋರಿಸಿಕೊಡುತ್ತಾರೆ-

**ಆತ್ಮಜ್ಞಾನ ಒಪ್ಪದಿದ್ದರೆ ಬಾಧಕಪ್ರದರ್ಶನ**

**ಟೀಕಾ : ಆತ್ಮಜ್ಞಾನಾಭಾವೇ ಕಿಂ ಬಾಧಕಮಿತ್ಯತ ಆಹ –**

**ಮೂಲ :- ತದಜ್ಞಾನನಿವೃತ್ತಿಶ್ಚ ತೇನ ಭವತಿ ।**

**ನೇತ್ಯನುವರ್ತತೇ । ಅತಿಪ್ರಸಂಗಸಮುಚ್ಚಯೇ ಚಶಬ್ದಃ । ಯದಾ ವೇದಾಂತಜನಿತವಿಜ್ಞಾನಮಾತ್ಮಜ್ಞಾನಂ ನ ಸ್ಯಾತ್, ತದಾ ಆತ್ಮಾಜ್ಞಾನ-ನಿವೃತ್ತಿಸ್ತೇನನಸ್ಯಾತ್।ತಜ್ಞಾನೇನೈವತದಜ್ಞಾನನಿವೃತ್ತಿದರ್ಶನಾತ್। ತಥಾ ಚ ವೇದಾಂತಾನಾಂ ವೈಯರ್ಥ್ಯಂ ಸ್ಯಾತ್ ।**

**ಅನುವಾದ :-** ''ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸದೇ ಹೋದರೆ ಆತ್ಮಜ್ಞಾನವೇ ಕೂಡದೇಹೋಗಬೇಕಾಗುತ್ತದೆ'' ಎಂಬುದಾಗಿ ಆಪಾದಿಸುತ್ತಿದ್ದೀರಿ. ಆಗಲಿ, ಆತ್ಮಜ್ಞಾನವನ್ನೇ ಒಪ್ಪುವುದು ಬೇಡ. ಆತ್ಮಜ್ಞಾನವನ್ನು ಒಪ್ಪದಿದ್ದರೆ ಏನು ಬಾಧಕ ? ಎಂದು ಶಂಕೆ ಬಂದರೆ, ಆತ್ಮಜ್ಞಾನ ಒಪ್ಪದಿದ್ದರೆ ಬಾಧಕವನ್ನು ಹೇಳುತ್ತಾರೆ -

ಮೂಲ :- ತದಜ್ಞಾನನಿವೃತ್ತಿಶ್ಚ ತೇನ ಭವತಿ ।

**ಮೂಲಾರ್ಥ :-** **ಆತ್ಮಜ್ಞಾನವನ್ನು ಒಪ್ಪದಿದ್ದರೆ ವೇದಾಂತವಾಕ್ಯಜನಿತ-ವಿಜ್ಞಾನದಿಂದ ಆತ್ಮಾಜ್ಞಾನನಿವೃತ್ತಿಯೂ ಆಗದೇ ಹೋಗಬೇಕಾಗುತ್ತದೆ.**

ಮೂಲದಲ್ಲಿ ಹಿಂದಿನ ವಾಕ್ಯದಿಂದ 'ನ' ಎನ್ನುವುದನ್ನು ಅನುವರ್ತನ ಮಾಡಿಕೊಳ್ಳಬೇಕು. ಚಶಬ್ದವು ಅತಿಪ್ರಸಂಗವನ್ನು ಸಮುಚ್ಚಯ ಮಾಡುತ್ತದೆ.

ಘಟಜ್ಞಾನದಿಂದ ಘಟಾಜ್ಞಾನನಿವೃತ್ತಿ, ಪಟಜ್ಞಾನದಿಂದ ಪಟಾಜ್ಞಾನನಿವೃತ್ತಿ ಹೀಗೆ ಲೋಕದಲ್ಲಿ ಅದರ ಜ್ಞಾನದಿಂದಲೇ ಅದರ ಅಜ್ಞಾನವು ನಿವೃತ್ತವಾಗುವುದು ಕಂಡಿದೆ. ಹಾಗಾಗಿ ಆತ್ಮಜ್ಞಾನದಿಂದಲೇ ಆತ್ಮಾಜ್ಞಾನನಿವೃತ್ತಿಯಾಗಬೇಕು. ಪ್ರಕೃತ ಯಾವಾಗ ವೇದಾಂತಜನಿತವಿಜ್ಞಾನವು ಆತ್ಮಜ್ಞಾನವಾಗುವುದಿಲ್ಲ ಆಗ ಆ ವೇದಾಂತಜನಿತವಿಜ್ಞಾನದಿಂದ ಆತ್ಮಾಜ್ಞಾನನಿವೃತ್ತಿ ಆಗದೇ ಹೋಗಬೇಕಾಗುತ್ತದೆ. ಆತ್ಮಾಜ್ಞಾನನಿವೃತ್ತಿ ಆಗದಿದ್ದರೆ ವೇದಾಂತಗಳು ವ್ಯರ್ಥವಾಗಬೇಕಾಗುತ್ತದೆ. ಆತ್ಮಜ್ಞಾನವನ್ನು ಉಂಟುಮಾಡಿ ಆ ಮೂಲಕ ಆತ್ಮಾಜ್ಞಾನವನ್ನು ನಾಶ ಮಾಡುವುದಕ್ಕಾಗಿಯೇ ವೇದಾಂತಗಳು ಹೊರಟದ್ದು. ಆತ್ಮಜ್ಞಾನವನ್ನೇ ಒಪ್ಪದಿದ್ದರೆ, ವೇದಾಂತಗಳಿಂದ ಆತ್ಮಜ್ಞಾನಮೂಲಕ ಆತ್ಮಾಜ್ಞಾನನಿವೃತ್ತಿ ಆಗದ ಕಾರಣ ವೇದಾಂತಗಳು ನಿಷ್ಪ್ರಯೋಜನವಾಗಬೇಕಾಗುತ್ತದೆ ಎಂದು ಭಾವ.

**ಅವತಾರಿಕೆ :-** 'ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ತಜ್ಜ್ಞಾನತ್ವಂ' 'ತದಜ್ಞಾನನಿವೃತ್ತಿಶ್ಚ ತೇನ ಭವತಿ' ಎಂಬ ವಾಕ್ಯಗಳಿಗೆ ಒಂದು ರೀತಿ ವ್ಯಾಖ್ಯಾನ ಮಾಡಿ, ಪ್ರಕೃತ ಮತ್ತೊಂದು ರೀತಿಯಿಂದ ವ್ಯಾಖ್ಯಾನ ಮಾಡುತ್ತಾರೆ -

**ಟೀಕಾ :** **ಅಥವಾ ಆತ್ಮನೋ ದೃಕ್ಕರ್ಮತ್ವಾನಂಗೀಕಾರೇಽತಿಪ್ರಸಂಗಾಂತರ-ಮೇತತ್ । ತಥಾಹಿ, ಯದ್ಯಾತ್ಮನೋ ದೃಕ್ಕರ್ಮತ್ವಂ ನ ಸ್ಯಾತ್ ತದಾ ತದಜ್ಞಾನಂ ನಾಮ ನ ಸ್ಯಾತ್ । ಸತಿ ಪುಷ್ಕಲಕಾರಣೇ ತತ್ಕರ್ಮಕಜ್ಞಾನಪ್ರತಿಬಂಧಕಂ ಹಿ ತದಜ್ಞಾನಮ್ । ಸಂಬಂಧಾಂತರಾನಿರೂಪಣಾತ್ । ಆತ್ಮಾಜ್ಞಾನಾಭಾವೇ ಚ ತನ್ನಿವೃತ್ತಿಲಕ್ಷಣಮೋಕ್ಷಶ್ಚ ನ ಸ್ಯಾದಿತಿ ಶಾಸ್ತ್ರವೈಯರ್ಥ್ಯಂ ಸ್ಯಾದಿತಿ ।**

**ಅನುವಾದ :-** ಅಥವಾ, ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ 'ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ತಜ್ಜ್ಞಾನತ್ವಂ' 'ತದಜ್ಞಾನನಿವೃತ್ತಿಶ್ಚ ತೇನ ಭವತಿ' ಎಂಬ ಈ ಎರಡು ವಾಕ್ಯಗಳಿಂದ ಮತ್ತೊಂದು ಅತಿಪ್ರಸಂಗವನ್ನು ಹೇಳುತ್ತಿದ್ದಾರೆ ಆಚಾರ್ಯರು.

ಅದು ಹೇಗೆಂದರೆ - ಒಂದುವೇಳೆ ಆತ್ಮನಿಗೆ ದೃಕ್ಕರ್ಮತ್ವ ಇಲ್ಲ ಎಂದಾದರೆ ಆಗ (ಆತ್ಮಕರ್ಮಕಜ್ಞಾನ ಇಲ್ಲದಂತಾಗಿ) ಆತ್ಮಾಜ್ಞಾನ ಎನ್ನುವುದೇ ಇಲ್ಲದೇ ಹೋಗಬೇಕಾಗುತ್ತದೆ. ಅದೇಕೆ ? ಆತ್ಮನಿಗೆ ದೃಕ್ಕರ್ಮತ್ವ ಇಲ್ಲದೇ ಹೋದರೆ ಆತ್ಮಾಜ್ಞಾನ ಏಕೆ ಅನುಪಪನ್ನವಾಗುತ್ತದೆ ? ಎಂದರೆ, ಅಜ್ಞಾನದ ಲಕ್ಷಣವೇ ಹಾಗಿದೆ ಎಂದು ತೋರಿಸುತ್ತಾರೆ-

**ಸತಿ ಪುಷ್ಕಲಕಾರಣೇ ತತ್ಕರ್ಮಕಜ್ಞಾನಪ್ರತಿಬಂಧಕಂ ಹಿ ತದಜ್ಞಾನಮ್ ।**

ಜ್ಞಾನ ಹುಟ್ಟಲು ಏನೇನು ಕಾರಣಗಳು ಇರಬೇಕು (ಕಾರಣಸಮೂಹ ಇರಬೇಕು) ಅದೆಲ್ಲ ಕಾರಣಗಳ ಸಮೂಹ ಇದ್ದಾಗಲೂ ತತ್ಕರ್ಮಕಜ್ಞಾನ ಹುಟ್ಟುವುದಕ್ಕೆ ಯಾವುದು ಪ್ರತಿಬಂಧಕವಾಗಿರುತ್ತದೆಯೋ ಅದೇ ಅಜ್ಞಾನ. ಉದಾಹರಣೆಗೆ- ಶುಕ್ತಿಯು ರಜತಾಕಾರೇಣ ತೋರಿದಾಗ, ಅಲ್ಲಿ ಶುಕ್ತಿಜ್ಞಾನಜನಕವಾಗಬೇಕಾದ ಎಲ್ಲ ಇಂದ್ರಿಯಾದಿ ಕಾರಣಗಳು ಇದ್ದಾಗಲೂ ಸಹ ಶುಕ್ತಿಅಜ್ಞಾನನಿಮಿತ್ತವಾಗಿಯೇ ಶುಕ್ತಿತ್ವಪ್ರಕಾರಕಜ್ಞಾನ ಹುಟ್ಟಿಲ್ಲ. ಹೀಗಾಗಿ ಶುಕ್ತಿಅಜ್ಞಾನವು ಶುಕ್ತಿಜ್ಞಾನಕ್ಕೆ ಪ್ರತಿಬಂಧಕ ಎಂದು ತಿಳಿಯಬೇಕು.

ಪ್ರಕೃತದಲ್ಲಿ ಬ್ರಹ್ಮಜ್ಞಾನ ಹುಟ್ಟಲು ಏನೇನು ಕಾರಣಗಳು ಇರಬೇಕು ಅಂತಹ ವೇದಾಂತಶ್ರವಣಾದಿರೂಪವಾದ ಕಾರಣವಾಗಲೀ, ಆಕಾಂಕ್ಷಾದಿಗಳುಳ್ಳ 'ಸದೇವ ಸೌಮ್ಯ' ಇತ್ಯಾದಿ ವಾಕ್ಯಜ್ಞಾನರೂಪವಾದ ಕಾರಣವಾಗಲೀ ಹೀಗೆ ಎಲ್ಲ ಕಾರಣಗಳೂ ಇದ್ದಾಗಲೂ ಸಹ ಬ್ರಹ್ಮಜ್ಞಾನ ಆಗದಿರುವುದಕ್ಕೆ ಏನಾದರೂ ಪ್ರತಿಬಂಧಕವನ್ನು ಅಂಗೀಕರಿಸಬೇಕು. ಎಲ್ಲ ಕಾರಣಗಳು ಇದ್ದರೂ ಸಹ ಯಾವುದೋ ಒಂದು ಪ್ರತಿಬಂಧಕದಿಂದಾಗಿ ಬ್ರಹ್ಮಜ್ಞಾನವಾಗಿಲ್ಲ ಎಂದು ಹೇಳಬೇಕು. ಆ ಪ್ರತಿಬಂಧಕ ಬೇರೆ ಯಾವುದೋ ಆಗಲು ಸಾಧ್ಯವಿಲ್ಲವಾದ್ದರಿಂದ ಬ್ರಹ್ಮಾಜ್ಞಾನವೇ ಪ್ರತಿಬಂಧಕ ಎಂದು ಹೇಳಬೇಕು. ಹೀಗೆ ಕಾರಣಸಾಮಗ್ರೀ ಇದ್ದಾಗಲೂ ಸಹ ತತ್ಕರ್ಮಕಜ್ಞಾನಪ್ರತಿಬಂಧಕವಾದದ್ದು ಯಾವುದೋ ಅದೇ ಅಜ್ಞಾನ ಎಂಬುದಾಗಿ ಅಜ್ಞಾನದ ಲಕ್ಷಣ ಇದೆ. ಅರ್ಥಾತ್ ವಿಷಯ ಮತ್ತು ಅಜ್ಞಾನಗಳಲ್ಲಿ ತತ್ಕರ್ಮಕಜ್ಞಾನಪ್ರತಿಬಂಧಕತ್ವ ಎಂಬ ಸಂಬಂಧವನ್ನೇ ಹೇಳಬೇಕು, ಹೊರತು ಬೇರೆ ಸಂಬಂಧವನ್ನು ಹೇಳಲು ಬರುವುದಿಲ್ಲ.

ಪ್ರಕೃತ ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸದೇ ಹೋದರೆ, ಆತ್ಮನಿಗೆ ದೃಕ್ಕರ್ಮತ್ವ ಇಲ್ಲ ಎಂದಾಗಿ, ಆತ್ಮಕರ್ಮಕಜ್ಞಾನ ಇಲ್ಲ ಎಂದು ಪರ್ಯವಸಾನ-

ವಾಗುತ್ತದೆ. ಆತ್ಮಕರ್ಮಕಜ್ಞಾನ ಇಲ್ಲ ಎಂದರೆ ಆತ್ಮಕರ್ಮಕಜ್ಞಾನಪ್ರತಿಬಂಧಕವಾದ ಆತ್ಮಾಜ್ಞಾನ ಇಲ್ಲ ಎಂದಾಗುತ್ತದೆ. ಆತ್ಮಾಜ್ಞಾನ ಇಲ್ಲದೇ ಹೋದರೆ ಆತ್ಮಾಜ್ಞಾನನಿವೃತ್ತಿರೂಪವಾದ ಮೋಕ್ಷವೂ ಕೂಡದೇ ಹೋಗಬೇಕಾಗುತ್ತದೆ. ಆತ್ಮಾಜ್ಞಾನನಿವೃತ್ತಿರೂಪವಾದ ಮೋಕ್ಷವನ್ನು ಕೊಡುವುದಕ್ಕಾಗಿಯೇ ಶಾಸ್ತ್ರ ಹೊರಟದ್ದು. ಪ್ರಕೃತ ಆತ್ಮಾಜ್ಞಾನನಿವೃತ್ತಿರೂಪವಾದ ಮೋಕ್ಷವೇ ಇಲ್ಲದೇ ಹೋದರೆ ಶಾಸ್ತ್ರವು ವ್ಯರ್ಥವಾಗಬೇಕಾಗುತ್ತದೆ ಎಂದು ಭಾವ.

## ವಿಶೇಷ ವಿಚಾರಗಳು

### (ಶ್ರೀವಿಜಯೀಂದ್ರತೀರ್ಥರ ವ್ಯಾಖ್ಯಾನ - ಶ್ರೀವೇದೇಶತೀರ್ಥರ ವ್ಯಾಖ್ಯಾನ - ಶ್ರೀಗೋವಿಂದಭಟ್ಟರ ವ್ಯಾಖ್ಯಾನ ವಿಚಾರಗಳು)

ವಿಷಯ ಮತ್ತು ಅಜ್ಞಾನಗಳಲ್ಲಿ ತತ್ಕರ್ಮಕಜ್ಞಾನಪ್ರತಿಬಂಧಕತ್ವ ಎಂಬ ಸಂಬಂಧವನ್ನು ಬಿಟ್ಟು ಬೇರೆ ಸಂಬಂಧವನ್ನು ಹೇಳಲು ಬರುವುದಿಲ್ಲ ಎನ್ನುವುದನ್ನು ಟಿಪ್ಪಣೀಕಾರರು ಬಹಳ ಸುಂದರವಾಗಿ ತೋರಿಸಿಕೊಟ್ಟಿದ್ದಾರೆ.

ಅದು ಹೇಗೆಂದರೆ -

೧) **ಸಂಯೋಗ :-** 'ದ್ರವ್ಯಯೋರೇವ ಸಂಯೋಗಃ' ಎಂಬ ನಿಯಮದಂತೆ ಎರಡು ದ್ರವ್ಯಗಳಲ್ಲಿ ಮಾತ್ರ ಸಂಯೋಗಸಂಬಂಧ ಸಾಧ್ಯ. ವಿಷಯ ಕಥಂಚಿತ್ ದ್ರವ್ಯವಾದರೂ ಸಹ ಅಜ್ಞಾನ ದ್ರವ್ಯವಾಗಿಲ್ಲ. ಹೀಗಾಗಿ ವಿಷಯ-ಅಜ್ಞಾನ ಎರಡೂ ದ್ರವ್ಯವಾಗದ ಕಾರಣ ಅವುಗಳಲ್ಲಿ ಸಂಯೋಗ ಸಂಬಂಧವನ್ನು ಹೇಳಲು ಬರುವುದಿಲ್ಲ.

೨) **ಸಮವಾಯ :-** ಗುಣ-ಗುಣಿಗಳಲ್ಲಿ, ಅವಯವ-ಅವಯವಿಗಳಲ್ಲಿ, ಜಾತಿ-ದ್ರವ್ಯಗಳಲ್ಲಿ ಸಮವಾಯಸಂಬಂಧವನ್ನು ಹೇಳುತ್ತಾರೆ. ಪ್ರಕೃತ ವಿಷಯ-ಅಜ್ಞಾನಗಳು ಗುಣ-ಗುಣಿ ಅವಯವ-ಅವಯವಿ ಜಾತಿ-ದ್ರವ್ಯ ಯಾವುದೂ ಆಗದ ಕಾರಣ ಅವುಗಳಲ್ಲಿ ಸಮವಾಯಸಂಬಂಧವನ್ನೂ ಹೇಳಲು ಬರುವುದಿಲ್ಲ.

೩) **ಆಧ್ಯಾಸಿಕ :-** ಬ್ರಹ್ಮ-ಅಜ್ಞಾನ ಎರಡರಲ್ಲಿ ಆಧ್ಯಾಸಿಕಸಂಬಂಧವನ್ನು ಹೇಳಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಪ್ರಕಾಶ-ತಮಸ್ಸು ಅವುಗಳಲ್ಲಿ ಅಧ್ಯಾಸಸಂಬಂಧ ಹೇಗೆ ಅನುಪಪನ್ನವೋ ಹಾಗೆ ಬ್ರಹ್ಮ-ಅಜ್ಞಾನ

ಅವುಗಳಲ್ಲಿಯೂ ಅಧ್ಯಾಸಸಂಬಂಧ ಅನುಪಪನ್ನವೇ ಆಗಿದೆ. ಆತ್ಮನಂತೆ ಅಜ್ಞಾನವು ಅನಾದಿಯಾದ್ದರಿಂದ ಅಧ್ಯಾಸಸಂಬಂಧ ಅನುಪಪನ್ನವೂ ಆಗಿದೆ.

**೪) ವಿಷಯ-ವಿಷಯಿಭಾವ :-** ಬ್ರಹ್ಮ-ಅಜ್ಞಾನ ಎರಡರಲ್ಲಿ ವಿಷಯ-ವಿಷಯಿಭಾವ ಸಂಬಂಧವನ್ನು ಹೇಳಬಹುದಲ್ಲ? ಎಂದರೆ, ಅದೂ ಸರಿಯಲ್ಲ. ಏಕೆಂದರೆ ವಿಷಯ-ವಿಷಯಿಭಾವಸಂಬಂಧವು ಸ್ವರೂಪಸಂಬಂಧವಿಶೇಷವಾಗಿದೆ. ಸ್ವರೂಪಸಂಬಂಧವು ವ್ಯಾಪಕವಾದದ್ದು. ಅದರಲ್ಲಿ ವಿಷಯ-ವಿಷಯಿಭಾವವೂ ಒಂದು. ಹೀಗೆ ವಿಷಯ-ವಿಷಯಿಭಾವವು ಸ್ವರೂಪಸಂಬಂಧವಿಶೇಷವಾಗಿದೆ. ನೀವು ನಿಮ್ಮ ಶಾಸ್ತ್ರದಲ್ಲಿ ಅಜ್ಞಾನ-ವಿಷಯಗಳಿಗೆ ಸ್ವರೂಪಸಂಬಂಧವನ್ನು ಒಪ್ಪಿಲ್ಲ. (ಅಜ್ಞಾನ-ವಿಷಯಗಳಿಗೆ ವ್ಯಾಪಕವಾದ ಸ್ವರೂಪಸಂಬಂಧವನ್ನೇ ಒಪ್ಪಿಲ್ಲ ಎಂದಮೇಲೆ ವ್ಯಾಪ್ಯವಾದ ವಿಷಯ-ವಿಷಯಿಭಾವವನ್ನೂ ಒಪ್ಪಿಲ್ಲ ಎಂದು ಸಿದ್ಧವೇ ಆಗುತ್ತದೆ.) ಮತ್ತು ಬ್ರಹ್ಮ-ಅಜ್ಞಾನ ಎರಡರಲ್ಲಿ ವಿಷಯ-ವಿಷಯಿಭಾವವನ್ನು ಹೇಳಿದರೆ ಅರ್ಥಾತ್ ಬ್ರಹ್ಮನಿಗೆ ಅಜ್ಞಾನವಿಷಯತ್ವವನ್ನು ಅಂಗೀಕರಿಸಿದರೆ ತುಲ್ಯನ್ಯಾಯದಿಂದ ದೃಗ್ವಿಷಯತ್ವವನ್ನೂ ಅಂಗೀಕರಿಸಬೇಕಾಗುತ್ತದೆ. (ದೃಗ್ವಿಷಯತ್ವ ಅಂಗೀಕರಿಸಿದರೆ ವ್ಯಭಿಚಾರ ದೃಢವಾಗುತ್ತದೆ.)

**೫) ಆಶ್ರಯ-ಆಶ್ರಯಿಭಾವಃ-** ಬ್ರಹ್ಮ-ಅಜ್ಞಾನ ಇವುಗಳಲ್ಲಿ ಆಶ್ರಯ-ಆಶ್ರಯಿಭಾವ ಸಂಬಂಧವನ್ನೂ ಹೇಳಲು ಬರುವುದಿಲ್ಲ. ತೇಜಸ್ಸು-ತಿಮಿರಗಳಲ್ಲಿ ವಿರೋಧ ಇರುವುದರಿಂದ ಹೇಗೆ ಆಶ್ರಯ-ಆಶ್ರಯಿಭಾವ ಅನುಪಪನ್ನವಾಗಿದೆಯೋ ಅದರಂತೆ ಸರ್ವಜ್ಞನಾದ ಬ್ರಹ್ಮ ಹಾಗೂ ಅಜ್ಞಾನ ಅವುಗಳಲ್ಲಿಯೂ ವಿರೋಧ ಇರುವುದರಿಂದ ಆಶ್ರಯ-ಆಶ್ರಯಿಭಾವವೂ ಅನುಪಪನ್ನವಾಗಿದೆ.

ಆದ್ದರಿಂದ ಬ್ರಹ್ಮ-ಅಜ್ಞಾನ ಅವುಗಳಲ್ಲಿ ಸಂಯೋಗ-ಸಮವಾಯ-ಅಧ್ಯಾಸ - ವಿಷಯವಿಷಯಿಭಾವ-ಆಶ್ರಯಆಶ್ರಯಿಭಾವ ಈ ಯಾವ ಸಂಬಂಧವನ್ನೂ ಹೇಳಲು ಬಾರದಿರುವುದರಿಂದ ತತ್ಕರ್ಮಕಜ್ಞಾನಪ್ರತಿಬಂಧಕತ್ವ ಎಂಬ ಸಂಬಂಧವನ್ನೇ ಹೇಳಬೇಕು. ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸದೇ ಹೋದರೆ ಆತ್ಮಕರ್ಮಕಜ್ಞಾನ ಇಲ್ಲದಾಗಿ, ಆತ್ಮಕರ್ಮಕಜ್ಞಾನಪ್ರತಿಬಂಧಕ ಆತ್ಮಾಜ್ಞಾನ ಇಲ್ಲದೇ ಹೋಗಬೇಕಾಗುತ್ತದೆ. ಆತ್ಮಾಜ್ಞಾನ ಇಲ್ಲದೇ ಹೋದರೆ ಆತ್ಮಾಜ್ಞಾನನಿವೃತ್ತಿರೂಪವಾದ ಮೋಕ್ಷವೂ ಅನುಪಪನ್ನವಾಗಬೇಕಾಗುತ್ತದೆ. ಕೊನೆಗೆ ಶಾಸ್ತ್ರವೈಯರ್ಥ್ಯ ಬರಬೇಕಾಗುತ್ತದೆ ಎಂದು ಅಭಿಪ್ರಾಯ.

## ಆತ್ಮಜ್ಞಾನವು ಆತ್ಮವಿಷಯಕವಾಗದಿದ್ದರೂ ಆತ್ಮಾಕಾರವಾಗಬಹುದು ಎಂಬ ಶಂಕೆ, ಅದರ ನಿರಾಕರಣೆ

**ಟೀಕಾ:** ನನ್ವಾತ್ಮನೋ ದೃಕ್ಕರ್ಮತ್ವಾಭಾವೇಽಪಿ ವೇದಾಂತವಾಕ್ಯಜನಿತ-ಜ್ಞಾನಸ್ಯಾಕಾರಸಮರ್ಪಕತಯಾ[೧] ವ್ಯಾವರ್ತಕತ್ವಮಂಗೀಕ್ರಿಯತ ಏವ। ಅತ ಆತ್ಮಕರ್ಮತ್ವಾಭಾವೇಽಪ್ಯಾತ್ಮಾಕಾರಂ ವೇದಾಂತವಾಕ್ಯ-ಜನಿತಾಪರೋಕ್ಷವಿಜ್ಞಾನಂ[೨] ಭವಿಷ್ಯತಿ । ತೇನ ನ ಕೋಽಪ್ಯತಿ-ಪ್ರಸಂಗಃ[೩] । 'ದ್ರಷ್ಟವ್ಯಃ' ಇತ್ಯಾದಿ ಶ್ರುತಯಶ್ಚ [೪]ತತ್ಪರತಯೈವೋಪಪತ್ಸ್ಯಂತೇ ।

**ಅನುವಾದ :-**

**ಆಕ್ಷೇಪ :-** ''ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸದೇ ಹೋದರೆ ದೃಕ್ಕರ್ಮತ್ವ ಇಲ್ಲದಂತಾಗಿ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಜ್ಞಾನ ಆಗದೇ ಹೋಗ-ಬೇಕಾಗುತ್ತದೆ '' ಎಂಬುದಾಗಿ ನೀವು ಆಕ್ಷೇಪ ಮಾಡುವುದು ಸರಿಯಲ್ಲ. ಏಕೆಂದರೆ- ಆತ್ಮನಿಗೆ ದೃಕ್ಕರ್ಮತ್ವ ಇಲ್ಲದೇ ಹೋದರೂ ಸಹ ವೇದಾಂತ-ವಾಕ್ಯಜನಿತವಿಜ್ಞಾನಕ್ಕೆ ಆಕಾರಸಮರ್ಪಕವಾಗುವ ಮೂಲಕ (ಆಕಾರವನ್ನು ತಂದುಕೊಡುವ ಮೂಲಕ) ವ್ಯಾವರ್ತಕತ್ವವಿದೆ ಎಂದು ಅಂಗೀಕರಿಸುತ್ತೇವೆ.

ವಿಷಯವು ಜ್ಞಾನಕ್ಕೆ ವ್ಯಾವರ್ತಕ ಎನ್ನುವುದು ಅಂಗೀಕರಿಸಲ್ಪಟ್ಟ ಸಂಗತಿ. ಉದಾಹರಣೆಗೆ- ''ಘಟಜ್ಞಾನವು ಇತರ ಪಟಜ್ಞಾನಾದಿಗಳಿಂದ ಭಿನ್ನ, ಯಾಕೆ ?

---

೧ ಆತ್ಮನೋ ದೃಕ್ಕರ್ಮತ್ವಾಭಾವೇಽಪಿ ವೇದಾಂತಜನಿತಜ್ಞಾನಸ್ಯ ಸ್ವಾಕಾರಸಮರ್ಪಕತಯಾ, ಸ್ವಾಕಾರಸ್ಯ ಸಮರ್ಪಣಂ ಯಸ್ಮಿನ್ ತತ್, ತಸ್ಯ ಭಾವಃ ತತ್ತಾ, ತಯಾ ಆತ್ಮಸದೃಶಾಕಾರತ್ವೇನ ಆತ್ಮಜ್ಞಾನತ್ವಾತ್ ವ್ಯಾವರ್ತಕತ್ವಂ ಅಜ್ಞಾನನಿವರ್ತಕತ್ವಮಂಗೀಕ್ರಿಯತ ಏವೇತ್ಯರ್ಥಃ।
(ಶ್ರೀಗೋವಿಂದಭಟ್ಟರ ಟಿಪ್ಪಣೀ)

೨ 'ದಶಮಸ್ತ್ವಮಸಿ' ಇತ್ಯಾದಾವಿವ ವಾಕ್ಯಾದಪ್ಯಪರೋಕ್ಷಜ್ಞಾನೋತ್ಪತ್ತೇಃ ಪರೈರಂಗೀಕಾರಾ-ದೇವಮುಕ್ತಮ್ ।

೩ ಆತ್ಮಾಕಾರಜ್ಞಾನಸ್ಯೈವಾತ್ಮಾಜ್ಞಾನನಿವರ್ತಕತ್ವೋಪಪತ್ತೇಃ ಪ್ರಾಚೀನಾತಿಪ್ರಸಂಗಸ್ಯ, ಆತ್ಮಾ-ಕಾರಜ್ಞಾನಪ್ರತಿಬಂಧಕಮೇವಾತ್ಮಾಜ್ಞಾನಮಿತ್ಯಂಗೀಕಾರಾತ್ ದ್ವಿತೀಯಾತಿಪ್ರಸಂಗಸ್ಯ ಚಾಭಾವಾದಿತ್ಯರ್ಥಃ। (ಶ್ರೀವೇದೇಶತೀರ್ಥರ ಟಿಪ್ಪಣೀ)

೪ ತದಾಕಾರತ್ವಪ್ರತಿಪಾದನಪರತಯೈವೇತ್ಯರ್ಥಃ। (ಶ್ರೀವೇದೇಶತೀರ್ಥರ ಟಿಪ್ಪಣೀ)
ವೇದಾಂತಜನಿತಜ್ಞಾನಸ್ಯಾತ್ಮಾಕಾರತ್ವಪರತಯೈವೇತ್ಯರ್ಥಃ।
(ಶ್ರೀಪಾಂಡುರಂಗೀ ಕೇಶವಾಚಾರ್ಯರ ಟಿಪ್ಪಣೀ)

ಘಟವಿಷಯಕವಾದ್ದರಿಂದ'' ಎಂಬುದಾಗಿ ವಿಷಯವಾದ ಘಟವು ಸ್ವವಿಷಯ-ಜ್ಞಾನಕ್ಕೆ ವ್ಯಾವರ್ತಕವಾಗಿದೆ. ಪ್ರಕೃತದಲ್ಲಿ ''ವೇದಾಂತವಾಕ್ಯಜನಿತವಿಜ್ಞಾನವು ಆತ್ಮಜ್ಞಾನವು ಇತರ ಜ್ಞಾನಗಳಿಂದ ಭಿನ್ನ, ಯಾಕೆ ? ಆತ್ಮಕರ್ಮಕವಾದ್ದರಿಂದ ಆತ್ಮವಿಷಯಕವಾದ್ದರಿಂದ'' ಎಂಬುದಾಗಿ ಆತ್ಮನು ಸ್ವವಿಷಯಕ ಸ್ವಕರ್ಮಕಜ್ಞಾನಕ್ಕೆ ವ್ಯಾವರ್ತಕ ಎಂದು ಹೇಳಬೇಕು. ಆದರೆ ಆತ್ಮನಿಗೆ ದೃಕ್ಕರ್ಮತ್ವವೇ ಇಲ್ಲದ ಕಾರಣ ಆತ್ಮನು ಹೇಗೆ ವ್ಯಾವರ್ತಕನಾಗುತ್ತಾನೆ ? ಎಂಬ ಶಂಕೆ ಬೇಡ. ಆತ್ಮನು ವೇದಾಂತವಾಕ್ಯಜನಿತವಿಜ್ಞಾನದಲ್ಲಿ ಕರ್ಮನಾಗಿ ವ್ಯಾವರ್ತಕನಾಗದಿದ್ದರೂ ಆಕಾರನಾಗಿ ವ್ಯಾವರ್ತಕನಾಗುತ್ತಾನೆ ಎಂದು ಅಂಗೀಕರಿಸುತ್ತೇವೆ. ಅರ್ಥಾತ್ ಆತ್ಮಕರ್ಮಕಜ್ಞಾನವನ್ನು ಒಪ್ಪದಿದ್ದರೂ ಆತ್ಮಾಕಾರಜ್ಞಾನವನ್ನು ಒಪ್ಪುತ್ತೇವೆ.

ಆದ್ದರಿಂದ ವೇದಾಂತವಾಕ್ಯಜನಿತ ಅಪರೋಕ್ಷಜ್ಞಾನವು ಆತ್ಮಕರ್ಮಕವಾಗದೇ ಹೋದರೂ ಸಹ ಆತ್ಮಾಕಾರಜ್ಞಾನವಾಗುತ್ತದೆ. ಆತ್ಮಾಕಾರಜ್ಞಾನವನ್ನು ಅಂಗೀಕರಿಸಿದ್ದರಿಂದ ಯಾವುದೇ ಅತಿಪ್ರಸಂಗ ಬರುವುದಿಲ್ಲ.

೧) ''ಅದರ ಜ್ಞಾನದಿಂದಲೇ ಅದರ ಅಜ್ಞಾನನಿವೃತ್ತಿಯಾಗಬೇಕೆಂದು ನಿಯಮವಿರುವುದರಿಂದ, ಆತ್ಮಜ್ಞಾನವೇ ಇಲ್ಲದೇ ಹೋದರೆ ಆತ್ಮಾಜ್ಞಾನನಿವೃತ್ತಿ ಆಗದೇ ಹೋಗಬೇಕಾಗುತ್ತದೆ'' ಎಂಬ ಮೊದಲನೇ ಅತಿಪ್ರಸಂಗ ಇಲ್ಲ. ಏಕೆಂದರೆ- ಆತ್ಮನಿಗೆ ದೃಕ್ಕರ್ಮತ್ವ ಇಲ್ಲದೇ ಹೋದರೂ ಆತ್ಮಾಕಾರಜ್ಞಾನ ಆತ್ಮಜ್ಞಾನ ಎಂದು ಅಂಗೀಕರಿಸಿದ್ದರಿಂದ ಆ ಆತ್ಮಾಕಾರಜ್ಞಾನದಿಂದಲೇ ಆತ್ಮಾಜ್ಞಾನನಿವೃತ್ತಿ ಆಗುತ್ತದೆ.

೨) ''ತತ್ಕರ್ಮಕಜ್ಞಾನಪ್ರತಿಬಂಧಕವಾದದ್ದೇ ತದಜ್ಞಾನ ಎಂದು ಲಕ್ಷಣ-ವಿರುವುದರಿಂದ ಪ್ರಕೃತ ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ ಆತ್ಮಕರ್ಮಕಜ್ಞಾನ ಇಲ್ಲದಂತಾಗಿ ಆತ್ಮಕರ್ಮಕಜ್ಞಾನಪ್ರತಿಬಂಧಕ ಆತ್ಮಾಜ್ಞಾನವೇ ಅನುಪಪನ್ನವಾಗಬೇಕಾಗುತ್ತದೆ'' ಎಂಬ ಎರಡನೇ ಅತಿಪ್ರಸಂಗವೂ ಇಲ್ಲ. ಏಕೆಂದರೆ- ಆತ್ಮಕರ್ಮಕಜ್ಞಾನ ಇಲ್ಲದಿದ್ದರೂ ಆತ್ಮಾಕಾರಜ್ಞಾನ ಅಂಗೀಕೃತ-ವಾದ್ದರಿಂದ (ಆತ್ಮಾಕಾರಜ್ಞಾನಪ್ರತಿಬಂಧಕವಾದದ್ದು ಆತ್ಮಾಜ್ಞಾನ ಎಂದು ಅಂಗೀಕರಿಸುವುದರಿಂದ) ಆತ್ಮಾಕಾರಜ್ಞಾನಪ್ರತಿಬಂಧಕ ಆತ್ಮಾಜ್ಞಾನವೂ ಉಪಪನ್ನವಾಗುತ್ತದೆ.

ಹೀಗೆ ಆತ್ಮಾಕಾರಜ್ಞಾನ ಆತ್ಮಜ್ಞಾನ ಎಂದು ಅಂಗೀಕರಿಸಿದ್ದರಿಂದ ಹಿಂದಿನ ಯಾವುದೇ ಅತಿಪ್ರಸಂಗ ಬರುವುದಿಲ್ಲ ಎಂದು ಭಾವ.

ಹೌದು, ಆತ್ಮನಿಗೆ ದೃಕ್ಕರ್ಮತ್ವ ಇಲ್ಲದೇ ಹೋದರೂ ಆತ್ಮಾಕಾರಜ್ಞಾನವನ್ನು ಅಂಗೀಕರಿಸಿ ಅತಿಪ್ರಸಂಗಗಳನ್ನು ಪರಿಹರಿಸಿಕೊಂಡರೂ ಸಹ '**ಆತ್ಮಾ ವಾ ಅರೇ ದ್ರಷ್ಟವ್ಯಃ**' ಇತ್ಯಾದಿ ಶ್ರುತಿಗಳನ್ನು ಹೇಗೆ ಹೊಂದಿಸುತ್ತೀರಿ ? ಯಾಕೆಂದರೆ - 'ದ್ರಷ್ಟವ್ಯಃ' ಎನ್ನುವಲ್ಲಿ ತವ್ಯಪ್ರತ್ಯಯವಿದೆ. ತವ್ಯಪ್ರತ್ಯಯವಾದರೂ ಕರ್ಮಾರ್ಥದಲ್ಲಿಯೇ ವಿಹಿತವಾಗಿದೆ. ಹಾಗಾಗಿ ಆತ್ಮನಿಗೆ ದೃಕ್ಕರ್ಮತ್ವ ಒಪ್ಪದಿದ್ದರೆ ಕರ್ಮಾರ್ಥಕ ತವ್ಯಪ್ರತ್ಯಯಾಂತವಾದ 'ದ್ರಷ್ಟವ್ಯಃ' ಇತ್ಯಾದಿ ಶ್ರುತಿಗಳನ್ನು ಆತ್ಮನಲ್ಲಿ ಹೇಗೆ ಹೊಂದಿಸುತ್ತೀರಿ ?

ಈ ವಿಧವಾದ ಶಂಕೆ ಬೇಡ. ಕಾರಣ - ಆತ್ಮನಿಗೆ ದೃಕ್ಕರ್ಮತ್ವ ಒಪ್ಪದಿದ್ದರೂ ಜ್ಞಾನದಲ್ಲಿ ಆತ್ಮನು ಆಕಾರನಾಗಿದ್ದಾನೆ ಎಂದು ಅಂಗೀಕರಿಸುತ್ತೇವೆ. ಹೀಗಾಗಿ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಕರ್ಮಕವಾಗದಿದ್ದರೂ ಆತ್ಮಾಕಾರಜ್ಞಾನ-ವಾಗಿದೆ ಎಂದು ಒಪ್ಪಿದ್ದರಿಂದ, ಆತ್ಮಜ್ಞಾನವನ್ನು ಪ್ರತಿಪಾದಿಸುವ 'ದ್ರಷ್ಟವ್ಯಃ' ಇತ್ಯಾದಿ ಶ್ರುತಿಗಳು ಆತ್ಮಾಕಾರಜ್ಞಾನಪ್ರತಿಪಾದಕವಾಗಿವೆ ಎಂದು ಹೇಳಿದರೂ ಉಪಪನ್ನವಾಗುತ್ತವೆ. ಆದ್ದರಿಂದ ಶ್ರುತಿಯ ಅನುಪಪತ್ತಿಯೂ ಇಲ್ಲ.

ಯದ್ಯಪಿ ತವ್ಯ ಮೊದಲಾದ ಪ್ರತ್ಯಯಗಳು ಕರ್ಮಾರ್ಥದಲ್ಲಿಯೇ ವಿಹಿತವಾಗಿವೆ. (ಆಕಾರಾರ್ಥದಲ್ಲಿ ವಿಹಿತವಾಗಿಲ್ಲ) ಆದರೂ ಸಹ ''ಕ್ರಿಯಯಾ ಆಪ್ತುಮಿಷ್ಟತಮತ್ವೇ ಸತಿ ಕ್ರಿಯಾನಿಷ್ಪಾದಕತ್ವ''ರೂಪವಾದ ಮುಖ್ಯ ಕರ್ಮತ್ವವು ಆತ್ಮನಿಗೆ ನಿಮ್ಮ ಮತದಲ್ಲಿಯೂ ಅಸಂಭಾವಿತವಾದ್ದರಿಂದ ಕರ್ಮತ್ವಕ್ಕೆ ಅರ್ಥಾಂತರವನ್ನು ಸ್ವೀಕರಿಸಲೇಬೇಕು. ಹಾಗೆ ಅರ್ಥಾಂತರವನ್ನು ಸ್ವೀಕರಿಸುವುದಾದರೆ ಆಕಾರತ್ವವೇ ಸ್ವೀಕಾರಾರ್ಹವಾಗಿದೆ ಎಂದು ಭಾವ.

ಅಂದಮೇಲೆ ಆತ್ಮನಿಗೆ ದೃಕ್ಕರ್ಮತ್ವ ಇಲ್ಲದಿದ್ದರೂ ಆಕಾರತ್ವವನ್ನು ಅಂಗೀಕರಿಸಿ ಆತ್ಮಾಕಾರಜ್ಞಾನವೇ ಆತ್ಮಜ್ಞಾನ ಎಂದು ಹೇಳುವುದರಿಂದ ಆತ್ಮಜ್ಞಾನಾನುಪಪತ್ತಿ ಆತ್ಮಾಜ್ಞಾನಾನುಪಪತ್ತಿ ಮೊದಲಾದ ಯಾವ ಅನುಪಪತ್ತಿಗಳೂ ಬರುವುದಿಲ್ಲ. ಜೊತೆಗೆ 'ದ್ರಷ್ಟವ್ಯಃ' ಇತ್ಯಾದಿ ಶ್ರುತಿಗಳೂ ಉಪಪನ್ನವಾಗುತ್ತವೆ ಎಂದು ಆಕ್ಷೇಪದ ಆಂತರ್ಯ.

**ಟೀಕಾ: ನ ಚಾತ್ಮಕರ್ಮಕತ್ವೇನ ವಿನಾ ಆತ್ಮಾಕಾರತ್ವಂ ವಿಜ್ಞಾನಸ್ಯ ಕಥಮಿತಿ ವಾಚ್ಯಮ್ । ಯಥಾ ಖಲು ಶಶವಿಷಾಣಶಬ್ದಾತ್ತದಾಕಾರಂ ವಿಜ್ಞಾನಮುತ್ಪದ್ಯತೇ । ನ ಚ ಶಶವಿಷಾಣಸ್ಯ ಕರ್ಮತಾ ಸಂಭವತಿ ।**

ಸಕಲಸಾಮರ್ಥ್ಯವಿಧುರಸ್ಯ ಕಾರಕತಾಯಾ ಏವ ದುರ್ಲಭತ್ವಾತ್ । ತದಿಹಾಪಿ ವೇದಾಂತವಾಕ್ಯಸಾಮರ್ಥ್ಯಾದನಾತ್ಮಕರ್ಮಕಮಪಿ ವಿಜ್ಞಾನಮಾತ್ಮಾಕಾರಮುತ್ಪತ್ಸ್ಯತೇ । ಕೋ ದೋಷಃ ? ಇತ್ಯತ ಆಹ-

ಮೂಲ :- ನ ಚ ತದಾಕಾರಮ್ ।

ಆತ್ಮನೋ ದೃಕ್ಕರ್ಮತ್ವಂ ವಿನೇತ್ಯನುವರ್ತತೇ । ಸ್ಯಾದೇವಂ ಯದಿ ತದಾಕಾರಂ ಜ್ಞಾನಮುತ್ಪದ್ಯೇತ । ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ಆತ್ಮಾಕಾರಂ ಜ್ಞಾನಮುತ್ಪದ್ಯತೇ । ಕುತ ಇತ್ಯತ ಆಹ -

ಮೂಲ :- ಅತದ್ವಿಷಯತ್ವಾದೇವ ।

ಯಥಾ ಅನಾತ್ಮವಿಷಯತ್ವಾದ್ವೇದಾಂತವಾಕ್ಯಜನಿತವಿಜ್ಞಾನಮಾತ್ಮ-ಜ್ಞಾನಂ ನ ಭವತೀತ್ಯುಕ್ತಮ್ । ತಥಾ ತತ ಏವ ತದಾತ್ಮಾಕಾರಮಪಿ ನ ಭವತೀತ್ಯೇವಕಾರಸಂಬಂಧಃ । ಅನಾತ್ಮವಿಷಯಮಪಿ ತದಾತ್ಮಾ-ಕಾರಂ ಕುತೋ ನ ಸ್ಯಾದಿತ್ಯತ ಆಹ -

ಮೂಲ :- ತದ್ವಿಷಯತ್ವಮೇವ ಹಿ ತದಾಕಾರತ್ವಮ್ ।

ಹಿಶಬ್ದೋ ಹೇತೌ । ಯಸ್ಮಾತ್ತದ್ವಿಷಯತ್ವಮೇವ ತದಾಕಾರತ್ವಂ ಜ್ಞಾನಸ್ಯ ನಾನ್ಯತ್ । ತಸ್ಮಾದಾತ್ಮವಿಷಯತ್ವಾಭಾವಾದಾತ್ಮಾ-ಕಾರಮಪಿ ತನ್ನ ಭವತಿ, ವ್ಯಾಘಾತಾದಿತಿ ।

**ಅನುವಾದ :-** ಹೌದು, ವೇದಾಂತವಾಕ್ಯಜನಿತವಿಜ್ಞಾನವು ಆತ್ಮಕರ್ಮಕ-ವಾಗದೇ ಹೋದರೂ ಆತ್ಮಾಕಾರವಾಗಬಹುದು ಎಂದು ಹೇಳುತ್ತಿದ್ದೀರಿ. ಆದರೆ ವೇದಾಂತವಾಕ್ಯಜನಿತವಿಜ್ಞಾನಕ್ಕೆ ಆತ್ಮಕರ್ಮಕತ್ವ ಇಲ್ಲದೇ ಆತ್ಮಾಕಾರತ್ವ ಹೇಗೆ ಸಾಧ್ಯ? (ವೇದಾಂತವಾಕ್ಯಜನಿತವಿಜ್ಞಾನದಲ್ಲಿ ಆತ್ಮನು ಕರ್ಮನಾಗದೇ ಆಕಾರ-ನಾಗಲು ಹೇಗೆ ಸಾಧ್ಯ?) ಎಂಬ ಶಂಕೆ ಬೇಡ. ಯಾಕೆಂದರೆ ಶಶವಿಷಾಣಶಬ್ದದಿಂದ (ಶಶವಿಷಾಣವಿಷಯಕಶಬ್ದಶ್ರವಣದಿಂದ) ಶಶವಿಷಾಣಾಕಾರಕವಾದ ವಿಜ್ಞಾನವು ಹುಟ್ಟುತ್ತದೆ. ಅದು ಶಶವಿಷಾಣಾಕಾರಕವಾದ ಜ್ಞಾನವೇ ಹೊರತು ಶಶವಿಷಾಣ-ಕರ್ಮಕವಾದ ಜ್ಞಾನವಲ್ಲ. ಕಾರಣ- ಅಲ್ಲಿ ಶಶವಿಷಾಣಕ್ಕೆ ಕರ್ಮತ್ವ ಇಲ್ಲ. ಅದೇಕೆ ? ಕರ್ಮತ್ವವು ಕಾರಕತ್ವವಿಶೇಷವಾಗಿದೆ.

**''ಕ್ರಿಯಾಂ ಕುರ್ವದ್ಧಿ ಕಾರಕಮ್''** ಎಂದು ಹೇಳಿದಂತೆ ಕಾರಕವಾಗಬೇಕಾದರೆ ಕ್ರಿಯಾಜನಕವಾಗಬೇಕು. ಅತ್ಯಂತಾಸತ್ ಆದ ಅಂತೆಯೇ ಸಕಲಸಾಮರ್ಥ್ಯ-ವಿಧುರವಾದ ಶಶವಿಷಾಣಕ್ಕೆ ಕ್ರಿಯಾಜನಕತ್ವ ಇಲ್ಲದ ಕಾರಣ ಕಾರಕತ್ವವೇ ಇಲ್ಲ. ಕಾರಕತ್ವವೇ ಇಲ್ಲದಮೇಲೆ ಕಾರಕವಿಶೇಷಕರ್ಮಕಾರಕತ್ವವು ದೂರತ ಏವ ನಿರಸ್ತವಾಗಿದೆ. ಅಂದಮೇಲೆ ಶಶವಿಷಾಣಕ್ಕೆ ಕರ್ಮತ್ವವಿಲ್ಲದಿದ್ದರೂ ಶಶವಿಷಾಣಶಬ್ದದಿಂದ ಶಶವಿಷಾಣಾಕಾರಕವಾದ ಜ್ಞಾನ ಹುಟ್ಟುತ್ತದೆ. ಅದರಂತೆಯೇ ಪ್ರಕೃತದಲ್ಲಿಯೂ ಸಹ ಆತ್ಮನಿಗೆ ಕರ್ಮತ್ವ ಇಲ್ಲದಿದ್ದರೂ (ಆತ್ಮಕರ್ಮಕಜ್ಞಾನ ಹುಟ್ಟದಿದ್ದರೂ) ವೇದಾಂತವಾಕ್ಯಸಾಮರ್ಥ್ಯದಿಂದ ಆತ್ಮಾಕಾರವಾದ ವಿಜ್ಞಾನವು ಹುಟ್ಟುತ್ತದೆ. ಏನು ದೋಷ ?

ಈ ರೀತಿಯಾಗಿ ಆಕ್ಷೇಪ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆಃ-

**ಮೂಲ :- ನ ಚ ತದಾಕಾರಮ್ ।**

''ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ತಜ್ಞಾನತ್ವಂ'' ಎಂಬ ಹಿಂದಿನ ಮೂಲವಾಕ್ಯದಿಂದ ''ಆತ್ಮನೋ ದೃಕ್ಕರ್ಮತ್ವಂ ವಿನಾ'' ಎನ್ನುವುದನ್ನು ಅನುವರ್ತನ ಮಾಡಿಕೊಳ್ಳಬೇಕು.

ಈ ರೀತಿಯಾಗಿ (''ವೇದಾಂತವಾಕ್ಯಗಳಿಂದ ಆತ್ಮಕರ್ಮಕವಾದ ಜ್ಞಾನ ಹುಟ್ಟದಿದ್ದರೂ ಆತ್ಮಾಕಾರವಾದ ಜ್ಞಾನವು ಹುಟ್ಟುತ್ತದೆ'' ಎಂಬುದಾಗಿ) ಹೇಳಬಹುದಿತ್ತು, ಯಾವಾಗ ? ಆತ್ಮಾಕಾರವಾದ ಜ್ಞಾನವು ಹುಟ್ಟುತ್ತಿದ್ದರೆ. ಆದರೆ ಆತ್ಮನಿಗೆ ದೃಕ್ಕರ್ಮತ್ವ ಇಲ್ಲದೇ ಆತ್ಮಾಕಾರವಾದ ಜ್ಞಾನ ಹುಟ್ಟುವುದಿಲ್ಲ. ಯಾಕೆ ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲ :- ಅತದ್ವಿಷಯತ್ವಾದೇವ ।**

ಯಾವ ರೀತಿಯಾಗಿ ಆತ್ಮವಿಷಯಕವಾಗದ ಕಾರಣ ವೇದಾಂತವಾಕ್ಯಜನಿತ-ವಿಜ್ಞಾನವು ಆತ್ಮಜ್ಞಾನವಾಗುವುದಿಲ್ಲ ಎಂದು ಹೇಳಲಾಯಿತೋ ಅದೇ ಕಾರಣಕ್ಕೇನೇ (ಆತ್ಮವಿಷಯಕವಾಗದ ಕಾರಣಕ್ಕೇನೇ) ವೇದಾಂತವಾಕ್ಯಜನಿತ-ವಿಜ್ಞಾನವು ಆತ್ಮಾಕಾರವೂ ಆಗುವುದಿಲ್ಲ ಎಂಬುದಾಗಿ ಏವಕಾರದ ಸಂಬಂಧ ತಿಳಿಯುವುದು.

ವೇದಾಂತವಾಕ್ಯಜನಿತವಿಜ್ಞಾನವು ಆತ್ಮವಿಷಯಕವಾಗದಿದ್ದರೂ ಆತ್ಮಾಕಾರ ಏಕೆ ಆಗಬಾರದು ? ಎಂಬ ಪ್ರಶ್ನೆಗೆ ಆಚಾರ್ಯರು ಉತ್ತರಿಸುತ್ತಾರೆ -

ಮೂಲ :- ತದ್ವಿಷಯತ್ವಮೇವ ಹಿ ತದಾಕಾರತ್ವಮ್ ।

ಮೂಲದಲ್ಲಿ 'ಹಿ'ಶಬ್ದವು ಹೇತ್ವರ್ಥಕವಾಗಿದೆ. (ಹಿ ಯಾವ ಕಾರಣ ಎಂಬುದಾಗಿ ಹೇತ್ವರ್ಥದಲ್ಲಿ 'ಹಿ'ಶಬ್ದವು ಪ್ರಯೋಗಿಸಲ್ಪಟ್ಟಿದೆ.)

ಯಾವ ಕಾರಣ ಜ್ಞಾನಕ್ಕೆ ತದ್ವಿಷಯತ್ವವೇ ತದಾಕಾರತ್ವವಾಗಿದೆಯೋ, ಜ್ಞಾನಕ್ಕೆ ತದ್ವಿಷಯತ್ವವನ್ನು ಬಿಟ್ಟು ಬೇರೆ ತದಾಕಾರತ್ವ ಎನ್ನುವುದು ಇಲ್ಲವೋ, ಆ ಕಾರಣ ವೇದಾಂತವಾಕ್ಯಜನಿತವಿಜ್ಞಾನವು ಆತ್ಮವಿಷಯಕವಾಗದಿರುವುದರಿಂದ ಆತ್ಮಾಕಾರವೂ ಆಗುವುದಿಲ್ಲ. ಆತ್ಮವಿಷಯಕವಲ್ಲದಿದ್ದರೂ ಆತ್ಮಾಕಾರವಾಗಿದೆ ಎಂದು ಹೇಳಿದರೆ, ತದ್ವಿಷಯತ್ವವೇ ತದಾಕಾರತ್ವವಾದ್ದರಿಂದ, ಆತ್ಮಾಕಾರವಾಗಿದೆ ಎನ್ನುವ ಮೂಲಕ ಆತ್ಮವಿಷಯಕತ್ವವನ್ನು ಅಂಗೀಕರಿಸಿ ಪುನಃ ಆತ್ಮವಿಷಯಕವಲ್ಲ ಎಂದರೆ ವ್ಯಾಹತಿ ಬರಬೇಕಾಗುತ್ತದೆ. ಆದ್ದರಿಂದ ತದ್ವಿಷಯತ್ವವೇ ತದಾಕಾರತ್ವವಾದ್ದರಿಂದ ವೇದಾಂತವಾಕ್ಯಜನಿತವಿಜ್ಞಾನವು ಆತ್ಮವಿಷಯಕವಲ್ಲ ಎಂದಮೇಲೆ ಆತ್ಮಾಕಾರವೂ ಆಗುವುದಿಲ್ಲ ಎಂದು ಭಾವ.

**ಅವತಾರಿಕೆ :-** ''ಜ್ಞಾನಕ್ಕೆ ತದ್ವಿಷಯತ್ವವೇ ತದಾಕಾರತ್ವವಾಗಿದೆ. ತದ್ವಿಷಯತ್ವವನ್ನು ಬಿಟ್ಟು ಬೇರೆ ತದಾಕಾರತ್ವ ಎನ್ನುವುದು ಇಲ್ಲ'' ಎಂಬುದಾಗಿ ಹೇಳುವುದು ಸರಿಯಲ್ಲ. ಜ್ಞಾನಕ್ಕೆ ತದಾಕಾರತ್ವವೇ ತದ್ವಿಷಯತ್ವ ಅಲ್ಲ. ಯಾಕೆಂದರೆ- ಶಶವಿಷಾಣಶಬ್ದದಿಂದ ಶಶವಿಷಾಣಜ್ಞಾನ ಉಂಟಾದಾಗ ಅಲ್ಲಿ (ಜ್ಞಾನದಲ್ಲಿ) ಶಶವಿಷಾಣವಿಷಯತ್ವ ಇಲ್ಲದೇ ಹೋದರೂ ಶಶವಿಷಾಣಾಕಾರತ್ವ ಇದೆ. ಅಸತ್ ಆದ ಶಶವಿಷಾಣಕ್ಕೆ ಯಾವುದೇ ಸಂಬಂಧ ಇಲ್ಲದ ಕಾರಣ ತತ್ಸಂಬಂಧರೂಪವಿಷಯತ್ವವು ಉಪಪನ್ನವಾಗುವುದಿಲ್ಲ. ಹಾಗಾಗಿ ಶಶವಿಷಾಣಶಬ್ದದಿಂದ ಉಂಟಾದ ಜ್ಞಾನವು ಶಶವಿಷಾಣವಿಷಯಕ ಅಲ್ಲ. ಶಶವಿಷಾಣವಿಷಯಕವಾಗದೇ ಹೋದರೂ ಜ್ಞಾನವು ಶಶವಿಷಾಣಾಕಾರವಾಗಿದೆ. ಆದ್ದರಿಂದ ತದ್ವಿಷಯತ್ವವೇ ತದಾಕಾರತ್ವ ಅಲ್ಲ ಎಂಬುದಾಗಿ ಆಕ್ಷೇಪ ಬಂದರೆ, ಪರಿಶೇಷದಿಂದ ತದ್ವಿಷಯತ್ವವೇ ತದಾಕಾರತ್ವ ಎನ್ನುವುದನ್ನು ಸಮರ್ಥಿಸುತ್ತಾರೆ-

**ಆತ್ಮಜ್ಞಾನಕ್ಕೆ ಆತ್ಮವಿಷಯಕತ್ವವೇ ಆತ್ಮಾಕಾರತ್ವವಾಗಿದೆ ಎಂದು ಸಮರ್ಥನೆ**

**ಟೀಕಾ: ಕುತಸ್ತದ್ವಿಷಯತ್ವಮೇವ ತದಾಕಾರತ್ವಮಿತಿ ಚೇತ್ । ಪರಿಶೇಷಾತ್ । ತಥಾಹಿ - ತದಾಕಾರ ಏವಾಕಾರೋ ಯಸ್ಯೇತಿ ವಾ, ತದಾಕಾರ ಇವಾಕಾರೋ ಯಸ್ಯೇತಿ ವಾ, ಸ ಆಕಾರೋ ಯಸ್ಯೇತಿ ವಾ**

**ತದಾಕಾರಂ ವಿಜ್ಞಾನಮಿತ್ಯಭಿಧಾತವ್ಯಮ್ । ಪ್ರಕಾರಾಂತರಾಸಂಭವಾತ್ ।**

**ತತ್ರ ತಾವತ್ ಪ್ರಥಮದ್ವಿತೀಯಪಕ್ಷಾವನುಪಪನ್ನಾವಿತ್ಯಾಹ -**

**ಮೂಲ :- ನ ಹಿ ಜ್ಞಾನಜ್ಞೇಯಯೋರೇಕಾಕಾರತಾ ।**

**ಸತಿ ಹಿ ಜ್ಞಾನಜ್ಞೇಯಯೋರೇಕಾಕಾರತ್ವೇ ತದಾಕಾರ ಏವಾಕಾರೋ ಯಸ್ಯೇತಿ ಸಂಭವೇತ್ । ನ ಚೈತದಸ್ತಿ । ಅನುಪಲಂಭಾತ್ । ಏಕೈವ ಸತ್ತಾ ಜ್ಞಾನಜ್ಞೇಯಯೋರಾಕಾರೋಽಸ್ತೀತಿ ಚೇನ್ನ । ಅನುಗತಸತ್ತಾಯಾ ಅನಂಗೀಕಾರಾತ್ । ಬ್ರಹ್ಮಸತ್ತಯೈಕಾಕಾರತ್ವೇ ಚ ವೇದಾಂತವಾಕ್ಯಜನಿತವಿಜ್ಞಾನಮಾತ್ಮಾಕಾರಮೇವ ಕುತಃ ? ಘಟಾಕಾರಮಪಿ ತತ್ ಸ್ಯಾತ್ । ನಾಪಿ ಪರೇಣಾತ್ಮನಿ ಸತ್ತಾ ನಾಮಾಕಾರೋಽಂಗೀಕ್ರಿಯತೇ । ನಿರಾಕಾರತಾಂಗೀಕಾರಾದಿತಿ ।**

**ಅನುವಾದ :-** ಜ್ಞಾನಕ್ಕೆ ತದ್ವಿಷಯತ್ವವೇ ತದಾಕಾರತ್ವ ಎಂದು ಏಕೆ ಅಂಗೀಕರಿಸಬೇಕು ? ಎಂದರೆ, ಪರಿಶೇಷದಿಂದ ಅದು ಸಿದ್ಧವಾಗುತ್ತದೆ. ಹೇಗೆಂದರೆ -

ವಿಜ್ಞಾನವು ತದಾಕಾರ(ಆತ್ಮಾಕಾರ)ವಾಗಿದೆ ಎಂದರೆ, ತದಾಕಾರವೇ (ಆತ್ಮನ ಆಕಾರವೇ) ಜ್ಞಾನದ ಆಕಾರವಾಗಿದೆ ಎಂದಾಗಲೀ, ತದಾಕಾರದಂತೆ (ಆತ್ಮನ ಆಕಾರದಂತೆ) ಆಕಾರ ಉಳ್ಳದ್ದು ವಿಜ್ಞಾನ ಎಂದಾಗಲೀ, ಆತ್ಮನೇ ಜ್ಞಾನದಲ್ಲಿ ಆಕಾರನಾಗಿದ್ದಾನೆ ಎಂದಾಗಲೀ ಹೇಳಬೇಕು. ಈ ಪ್ರಕಾರಗಳನ್ನು ಬಿಟ್ಟು ಬೇರೆ ಪ್ರಕಾರ ಯಾವುದೂ ಇಲ್ಲ. ಅಂದಮೇಲೆ ಸಂಭಾವಿತವಾದ ಈ ಮೂರು ಪ್ರಕಾರಗಳಲ್ಲಿ ಯಾವ ಪ್ರಕಾರವನ್ನು ಹೇಳುತ್ತೀರಿ ?

ಅವುಗಳಲ್ಲಿ ಆತ್ಮನ ಆಕಾರವೇ ಜ್ಞಾನದ ಆಕಾರ, ಆತ್ಮನ ಆಕಾರದಂತೆ ಜ್ಞಾನದ ಆಕಾರ ಎಂಬ ಪ್ರಥಮ-ದ್ವಿತೀಯಪಕ್ಷಗಳು ಸರಿಯಲ್ಲ ಎಂದು ಆಚಾರ್ಯರು ಹೇಳುತ್ತಾರೆ -

ಮೂಲ :- ನ ಹಿ ಜ್ಞಾನಜ್ಞೇಯಯೋರೇಕಾಕಾರತಾ ।

**ಮೂಲಾರ್ಥ :-** ನಮ್ಮ ಸಿದ್ಧಾಂತ ಪ್ರಕಾರ ಜ್ಞಾನ-ಜ್ಞೇಯಗಳಲ್ಲಿ ಏಕಾಕಾರತ್ವ (ಒಂದೇ ಆಕಾರ) ಇಲ್ಲ.

ಜ್ಞಾನ-ಜ್ಞೇಯಗಳಲ್ಲಿ ಏಕಾಕಾರತ್ವ (ಒಂದೇ ಆಕಾರ) ಇರುತ್ತಿದ್ದರೆ ಆಗ 'ಜ್ಞೇಯನಾದ ಆತ್ಮನ ಆಕಾರವೇ ಜ್ಞಾನದ ಆಕಾರವಾಗಿದೆ' ಎಂದು ಹೇಳಬಹುದಿತ್ತು. ಆದರೆ ಜ್ಞಾನ-ಜ್ಞೇಯಗಳಲ್ಲಿ ಏಕಾಕಾರತ್ವ ಇಲ್ಲ. ಯಾಕೆ ? ಜ್ಞಾನ-ಜ್ಞೇಯಗಳಲ್ಲಿ ಒಂದೇ ಆಕಾರವು ಉಪಲಬ್ಧವಾಗಿಲ್ಲ. ಸತ್ತಾ ಎಂಬ ಒಂದೇ ಆಕಾರವು ಜ್ಞಾನ-ಜ್ಞೇಯ ಎರಡರಲ್ಲಿಯೂ ಅನುಗತವಾಗಿದ್ದು ಕಂಡಿದೆಯಲ್ಲವೇ ? ಎಂಬ ಶಂಕೆ ಸರಿಯಲ್ಲ. ಕಾರಣ ನೈಯಾಯಿಕರು ಅನುಗತಸತ್ತಾವನ್ನು ಅಂಗೀಕರಿಸಿದಂತೆ ನಮ್ಮ ಸಿದ್ಧಾಂತದಲ್ಲಿ ಅನುಗತಸತ್ತಾವನ್ನು [೧]ಅಂಗೀಕರಿಸಿಲ್ಲ.

ಮತ್ತು ಒಂದೇ ಸತ್ತಾ ಜ್ಞಾನ-ಜ್ಞೇಯ ಎರಡರಲ್ಲಿಯೂ ಇದೆ ಎಂದು ಇಟ್ಟುಕೊಂಡು ಸತ್ತಾದಿಂದ ಏಕಾಕಾರತ್ವವನ್ನು ಹೇಳುವುದಾದರೆ ವೇದಾಂತವಾಕ್ಯ-ಜನಿತವಾದ ವಿಜ್ಞಾನವು ಆತ್ಮಾಕಾರವೇ ಏಕೆ ಆಗಬೇಕು ? ಘಟಾಕಾರವೂ ಆಗಲಿ ? (ಆತ್ಮನಲ್ಲಿರುವ ಸತ್ತಾನೇ ಜ್ಞಾನದಲ್ಲಿಯೂ ಇದೆ ಎಂಬ ಕಾರಣಕ್ಕೆ ಜ್ಞಾನವನ್ನು ಆತ್ಮಾಕಾರ ಎನ್ನುವುದಾದರೆ, ಸತ್ತಾ ಎನ್ನುವುದು ಎಲ್ಲ ವಸ್ತುಗಳಲ್ಲಿಯೂ ಅನುಗತವಾದ್ದರಿಂದ ಘಟದಲ್ಲಿಯೂ ಇದೆ, ಘಟದಲ್ಲಿರುವ ಅದೇ ಸತ್ತಾನೇ ಜ್ಞಾನದಲ್ಲಿಯೂ ಇರುವುದರಿಂದ ಜ್ಞಾನವು ಘಟಾಕಾರವೂ ಆಗಲಿ ?)

ಜೊತೆಗೆ ''ಆತ್ಮನಲ್ಲಿರುವ ಆಕಾರವೇ ಜ್ಞಾನದಲ್ಲಿಯೂ ಇದೆ'' ಎಂಬುದಾಗಿ ಪರವಾದಿಗಳಿಗೆ ಹೇಳಲು ಆಗುವುದೂ ಇಲ್ಲ. ಕಾರಣ - ಆತ್ಮನಲ್ಲಿ ಆಕಾರವನ್ನು ಅಂಗೀಕರಿಸುತ್ತಿದ್ದರೆ ಆಗ ಈ ರೀತಿ ಹೇಳಬಹುದಿತ್ತು. ಆದರೆ ಆತ್ಮನನ್ನು ನಿರಾಕಾರ ಎಂಬುದಾಗಿ ಪರವಾದಿಗಳು ಅಂಗೀಕರಿಸುವುದರಿಂದ (ಆತ್ಮನಲ್ಲಿ ಯಾವ ಆಕಾರವನ್ನೂ ಒಪ್ಪದ ಕಾರಣ) ''ಆತ್ಮನಲ್ಲಿ ಸತ್ತಾ ಎಂಬ ಆಕಾರವಿದೆ'' ಎಂಬುದಾಗಿ ಪರವಾದಿಗಳು ಅಂಗೀಕರಿಸುವುದೇ ಇಲ್ಲ. ಹೀಗಾಗಿ ಆತ್ಮನಲ್ಲಿ ಆಕಾರವೇ ಇಲ್ಲವಾದ್ದರಿಂದ ''ಆತ್ಮನಲ್ಲಿರುವ ಆಕಾರವೇ ಜ್ಞಾನದಲ್ಲಿಯೂ

---

೧ ''ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ।'' ಎಂಬುದಾಗಿ ಹೇಳಿದಂತೆ ಧರ್ಮಿಗಳು ಭಿನ್ನಭಿನ್ನವಾದಂತೆ ಧರ್ಮಿಗಳಲ್ಲಿರುವ ಧರ್ಮಗಳೂ ಭಿನ್ನಭಿನ್ನವಾಗಿವೆ ಎಂದು ನಮ್ಮ ಸಿದ್ಧಾಂತವಾದ್ದರಿಂದ ನೈಯಾಯಿಕರು ಅಂಗೀಕರಿಸಿದಂತೆ ಅನುಗತಸತ್ತಾವನ್ನು ನಾವು ಅಂಗೀಕರಿಸಿಲ್ಲ (ಜಾತಿರೂಪವಾದ ಒಂದೇ ಧರ್ಮವು ಅನೇಕ ಧರ್ಮಿಗಳಲ್ಲಿ ಇದೆ ಎಂಬುದಾಗಿ ನಾವು ಅಂಗೀಕರಿಸಿಲ್ಲ) ಎಂದು ಭಾವ.

ಆಕಾರವಾಗಿದೆ'' (ಎಂಬುದಾಗಿ ಹೇಳಲು ಬರುವುದಿಲ್ಲ) ಎಂಬ ಮೊದಲನೇ ಪಕ್ಷ ಸರಿಯಲ್ಲ ಎಂದು ಭಾವ.

**ಟೀಕಾ: ಏವಂ ನ ಹಿ ಜ್ಞಾನಜ್ಞೇಯಯೋರೇಕಾಕಾರತಾ ಸದೃಶಾಕಾರತಾಽಸ್ತಿ । ಯೇನ ತದಾಕಾರ ಇವಾಕಾರೋ ಯಸ್ಯೇತ್ಯುಪಪದ್ಯೇತ । ಅತ್ಯಂತಸಾದೃಶ್ಯಸ್ಯಾನುಭವಬಾಧಿತತ್ವಾತ್ । ಕಿಂಚಿತ್ಸಾದೃಶ್ಯಸ್ಯ ಪ್ರಾಗಿವಾತಿಪ್ರಸಂಜಕತ್ವಾದಿತಿ ಯೋಜ್ಯಮ್ ।**

**ಅನುವಾದ :-** ಇದೇ ರೀತಿಯಾಗಿ ''ಆತ್ಮನ ಆಕಾರದಂತೆ ಆಕಾರ ಉಳ್ಳದ್ದು ವಿಜ್ಞಾನ'' ಎಂಬ ಎರಡನೇ ಪಕ್ಷಕ್ಕೂ ಸಹ ''**ನ ಹಿ ಜ್ಞಾನಜ್ಞೇಯಯೋರೇಕಾಕಾರತಾ**'' ಎಂಬ ಮಾತೇ ಉತ್ತರವಾಗಿದೆ. ಅದು ಹೇಗೆಂದರೆ ಜ್ಞಾನಜ್ಞೇಯಯೋಃ ಜ್ಞಾನಜ್ಞೇಯಗಳಲ್ಲಿ ಏಕಾಕಾರತಾ ಸದೃಶಾಕಾರತ್ವವು ನ ಇಲ್ಲ.

''ಆತ್ಮನ ಆಕಾರದಂತೆ ಆಕಾರ ಉಳ್ಳದ್ದು'' ಎಂದು ಹೇಳಿದರೆ ಆತ್ಮನ ಆಕಾರಕ್ಕೂ ಜ್ಞಾನದ ಆಕಾರಕ್ಕೂ ಸಾದೃಶ್ಯವನ್ನು ಹೇಳಿದಂತಾಗುತ್ತದೆ. ಆದರೆ ಜ್ಞಾನಜ್ಞೇಯಗಳಲ್ಲಿ ಏಕಾಕಾರತ್ವವು ಸದೃಶಾಕಾರತ್ವವು ಅರ್ಥಾತ್ ಆಕಾರಗಳಲ್ಲಿ ಸಾದೃಶ್ಯವು ಇಲ್ಲ. (ಉಪಪನ್ನವಾಗುವುದಿಲ್ಲ.) ಒಂದುವೇಳೆ ಆಕಾರಗಳಲ್ಲಿ ಸಾದೃಶ್ಯವು ಉಪಪನ್ನವಾಗುತ್ತಿದ್ದರೆ ಆಗ 'ಆತ್ಮನ ಆಕಾರಕ್ಕೆ ಸದೃಶವಾದ ಆಕಾರ ಉಳ್ಳದ್ದು ಜ್ಞಾನ' ಎಂದು ಹೇಳಲು ಬರುತ್ತಿತ್ತು. ಆದರೆ ಆಕಾರಗಳಲ್ಲಿ ಸಾದೃಶ್ಯವು ಉಪಪನ್ನವಾಗುವುದಿಲ್ಲ.

ಯಾಕೆ ? ಆಕಾರಗಳಲ್ಲಿ ಸಾದೃಶ್ಯವು ಏಕೆ ಉಪಪನ್ನವಲ್ಲ ? ಎಂದರೆ, ಆಕಾರಗಳಲ್ಲಿ ಸಾದೃಶ್ಯವನ್ನು ಹೇಳುವುದಾದರೆ ಅತ್ಯಂತಸಾದೃಶ್ಯವನ್ನು ಹೇಳುತ್ತೀರೋ ? ಕಿಂಚಿತ್ ಸಾದೃಶ್ಯವನ್ನು ಹೇಳುತ್ತೀರೋ ?

[೧]ಅತ್ಯಂತಸಾದೃಶ್ಯವನ್ನು ಹೇಳಲು ಬರುವುದಿಲ್ಲ. ಕಾರಣ - ಜ್ಞಾನ-ಜ್ಞೇಯ-

---

೧ ಯದ್ಯಪಿ ಆತ್ಮನು ನಿರಾಕಾರನಾಗಿದ್ದಾನೆ (ಆತ್ಮನಲ್ಲಿ ಯಾವ ಆಕಾರ ಧರ್ಮವೂ ಇಲ್ಲ) ಎಂಬುದಾಗಿ ಅಂಗೀಕರಿಸುವುದರಿಂದಲೇ ಸದೃಶಾಕಾರತ್ವ ಎಂಬ ದ್ವಿತೀಯಪಕ್ಷವೂ (ಆತ್ಮನಲ್ಲಿ ಯಾವುದೇ ಆಕಾರ ಇಲ್ಲ ಎಂದಮೇಲೆ ಸದೃಶಾಕಾರತ್ವ ಇದೆ ಎಂದು ಹೇಳುವುದೂ) ಅನುಪಪನ್ನವೇ ಆಗಿದೆ. ಆದರೂ ಸಹ ಅಭ್ಯುಚ್ಚಯವಾದದಿಂದ (ಆತ್ಮನಿಗೆ ನಿರಾಕಾರತ್ವವನ್ನು ಬದಿಗೊತ್ತಿ ಸದೃಶಾಕಾರತ್ವವನ್ನು ಒಪ್ಪಿದರೂ ಸಹ) ಆ ಪಕ್ಷಕ್ಕೆ ಮತ್ತೊಂದು ದೋಷವನ್ನು ಹೇಳಿ ನಿರಾಕರಿಸುತ್ತಿದ್ದಾರೆ ಎಂದು ತಿಳಿಯಬೇಕು.

(ಶ್ರೀವಿಜಯೀಂದ್ರತೀರ್ಥರ, ಶ್ರೀವೇದೇಶ- ತೀರ್ಥರ ವ್ಯಾಖ್ಯಾನಗಳು)

ಗಳಲ್ಲಿ ಅತ್ಯಂತಸದೃಶಾಕಾರತ್ವವನ್ನು ಹೇಳುವುದಾದರೆ (ಜ್ಞಾನ-ಜ್ಞೇಯಗಳು ಅತ್ಯಂತಸದೃಶವಾದ ಆಕಾರ ಉಳ್ಳದ್ದಾಗಿವೆ ಎಂದು ಹೇಳುವುದಾದರೆ) ಘಟ-ಘಟಜ್ಞಾನ ಇವುಗಳಲ್ಲಿ ಒಂದೇ ಆಕಾರ ಇದೆ ಎಂದು ಹೇಳಿದಂತಾಗುತ್ತದೆ. ಆದರೆ ಘಟದಲ್ಲಿರುವ ಘಟತ್ವವು ಘಟಜ್ಞಾನದಲ್ಲಿ ಇಲ್ಲ. ಘಟಜ್ಞಾನದಲ್ಲಿರುವ ಘಟಜ್ಞಾನತ್ವವು ಘಟದಲ್ಲಿ ಇಲ್ಲ. (ಘಟದಲ್ಲಿ ಘಟಜ್ಞಾನತ್ವವು, ಘಟಜ್ಞಾನದಲ್ಲಿ ಘಟತ್ವವು ಅನುಭವಸಿದ್ಧವಾಗಿಲ್ಲ.) ಆದ್ದರಿಂದ ಜ್ಞಾನ-ಜ್ಞೇಯಗಳ ಆಕಾರಗಳಲ್ಲಿ ಅತ್ಯಂತಸಾದೃಶ್ಯವು ಅನುಭವಬಾಧಿತವಾಗಿದೆ.

ಇನ್ನು ಕಿಂಚಿತ್ ಸಾದೃಶ್ಯವನ್ನು ಹೇಳುವುದಾದರೆ ಹಿಂದಿನಂತೆ ಅತಿಪ್ರಸಂಗ ಬರುತ್ತದೆ. ಅಂದರೆ- ಕಿಂಚಿತ್ ಸಾದೃಶ್ಯವನ್ನು ಹೇಳುವುದಾದರೆ, ಸತ್ತಾ ಮೊದಲಾದ ಧರ್ಮಗಳಿಂದ ಸಾದೃಶ್ಯವನ್ನು ಹೇಳಬೇಕು. ಸತ್ತಾದಿಂದ ಸಾದೃಶ್ಯವನ್ನು ಹೇಳುವುದಾದರೆ ವೇದಾಂತವಾಕ್ಯಜನಿತವಾದ ವಿಜ್ಞಾನವು ಆತ್ಮಾಕಾರವೇ ಏಕೆ ಆಗಬೇಕು ? ಘಟಾಕಾರವೂ ಆಗಲಿ ? (ಆತ್ಮನಲ್ಲಿರುವ ಸತ್ತಾನೇ ಜ್ಞಾನದಲ್ಲಿಯೂ ಇದೆ ಎಂಬ ಕಾರಣಕ್ಕೆ ಜ್ಞಾನವನ್ನು ಆತ್ಮಾಕಾರ ಎನ್ನುವುದಾದರೆ, ಸತ್ತಾ ಎನ್ನುವುದು ಎಲ್ಲ ವಸ್ತುಗಳಲ್ಲಿಯೂ ಅನುಗತವಾದ್ದರಿಂದ ಘಟದಲ್ಲಿರುವ ಸತ್ತಾನೇ ಜ್ಞಾನದಲ್ಲಿಯೂ ಇರುವುದರಿಂದ ಜ್ಞಾನವು ಘಟಾಕಾರವೂ ಆಗಲಿ ?) ಎಂಬ ಹಿಂದಿನ ಅತಿಪ್ರಸಂಗ ಬಂದೇ ಬರುತ್ತದೆ ಎಂದು ಭಾವ.

ಹೀಗೆ ಅತ್ಯಂತಸಾದೃಶ್ಯ ಹಾಗೂ ಕಿಂಚಿತ್ ಸಾದೃಶ್ಯ ಎರಡು ಪಕ್ಷಗಳಲ್ಲಿಯೂ ದೋಷ ಬರುವುದರಿಂದ ಸದೃಶಾಕಾರತ್ವ ಎಂಬ ಎರಡನೇ ಪಕ್ಷವೂ ಸರಿಯಲ್ಲ ಎಂದು ಅಭಿಪ್ರಾಯ.

**ಟೀಕಾ: ತೃತೀಯೇಽಪಿ ಪಕ್ಷೇ ನ ತಾವತ್ ಸಾಕ್ಷಾಜ್ಜ್ಞೇಯಂ ಜ್ಞಾನಸ್ಯಾಕಾರಃ ಸಂಭವತಿ । ಆಧಾರಾಧೇಯಭಾವಾಭಾವಾತ್ । ಅತಃ ಪ್ರಕಾರಾಂತರಾಸಂಭವೇ ಪರಿಶೇಷಾದ್ವಿಷಯತಯಾ ವ್ಯಾವರ್ತಕತ್ವೇನ ಸ ಆಕಾರ ಇವ ಯಸ್ಯ ತತ್ತದಾಕಾರಮಿತಿ ವಕ್ತವ್ಯಮ್ । ತಥಾ ಚ ತದ್ವಿಷಯತ್ವಮೇವ ತದಾಕಾರತ್ವಂ ಸಂಪದ್ಯತೇ । ತತಶ್ಚ ವೇದಾಂತವಾಕ್ಯಜನಿತಂ ವಿಜ್ಞಾನಮಾತ್ಮವಿಷಯಂ ನ ಚೇತ್ತದಾ ತದಾಕಾರಮಪಿ ನ ಭವೇದಿತಿ ಯುಕ್ತಮೇವೇತಿ ।**

**ಅನುವಾದ :-** ಇನ್ನು ಆತ್ಮನೇ ಜ್ಞಾನದಲ್ಲಿ ಆಕಾರನಾಗಿದ್ದಾನೆ ಎಂಬ ಮೂರನೇ ಪಕ್ಷದಲ್ಲಿಯೂ ಸಹ ಜ್ಞೇಯನಾದ ಆತ್ಮನು ಜ್ಞಾನದಲ್ಲಿ ಸಾಕ್ಷಾತ್ತಾಗಿ ಆಕಾರನಾಗಲು ಸಾಧ್ಯವಿಲ್ಲ. ಕಾರಣ ಜ್ಞಾನ-ಆತ್ಮರಲ್ಲಿ ಆಧಾರಾಧೇಯಭಾವ ಇಲ್ಲ. ಅಂದರೆ - ಆಕಾರಕ್ಕೆ ಆಕಾರಿಯೇ ಆಧಾರವಾಗಿರುತ್ತದೆ. ಪ್ರಕೃತ ಆತ್ಮನೇ ಆಕಾರನಾಗುವುದಾದರೆ ಜ್ಞಾನವು ಆಧಾರ, ಆತ್ಮನು ಆಧೇಯ ಆಗಬೇಕಾಗುತ್ತದೆ. ಆದರೆ ಜ್ಞಾನ-ಆತ್ಮರಲ್ಲಿ ಆಧಾರಾಧೇಯಭಾವವು ಉಪಪನ್ನವಾಗುವುದಿಲ್ಲ. ಯಾಕೆಂದರೆ ಆತ್ಮನು ಅಪರಿಚ್ಛಿನ್ನನಾದ್ದರಿಂದ ಆಧೇಯನಾಗಲು ಸಾಧ್ಯವಿಲ್ಲ. ಜ್ಞಾನವು ಪರಿಚ್ಛಿನ್ನವಾದ್ದರಿಂದ ಅಪರಿಚ್ಛಿನ್ನನಾದ ಆತ್ಮನಿಗೆ ಆಧಾರವಾಗಲು ಸಾಧ್ಯವಿಲ್ಲ. ಹೀಗಾಗಿ ಜ್ಞಾನ-ಆತ್ಮರಲ್ಲಿ ಆಧಾರಾಧೇಯಭಾವ ಇಲ್ಲವಾದ್ದರಿಂದ ಆತ್ಮನು ಜ್ಞಾನದಲ್ಲಿ ಸಾಕ್ಷಾತ್ತಾಗಿ ಆಕಾರನಾಗಲು ಸಾಧ್ಯವಿಲ್ಲ.

ಆದ್ದರಿಂದ ಆತ್ಮನು ಆಕಾರನಾಗಿದ್ದಾನೆ ಎನ್ನುವುದಕ್ಕೆ ಬೇರೆ ಪ್ರಕಾರ ಇಲ್ಲವಾದ್ದರಿಂದ, ಪರಿಶೇಷದಿಂದ ಆತ್ಮನು ವಿಷಯನಾಗಿ ○ವ್ಯಾವರ್ತಕನಾದ್ದರಿಂದ, ಆತ್ಮನು ಯಾವ ಜ್ಞಾನಕ್ಕೆ ಆಕಾರದಂತೆ ಇದ್ದಾನೋ ಆ ಜ್ಞಾನ ತದಾಕಾರ (ಆತ್ಮಾಕಾರ) ಎಂಬುದಾಗಿಯೇ ಹೇಳಬೇಕು. ಹಾಗಾದರೆ ತದ್ವಿಷಯತ್ವವೇ ತದಾಕಾರತ್ವ ಎಂದು ಸಂಪನ್ನವಾಗುತ್ತದೆ.

ಅಂದಮೇಲೆ ವೇದಾಂತವಾಕ್ಯಜನಿತವಾದ ವಿಜ್ಞಾನವು ಆತ್ಮವಿಷಯಕವಲ್ಲ ಎಂದಾದರೆ ಆತ್ಮಾಕಾರವೂ ಆಗುವುದಿಲ್ಲವಾದ್ದರಿಂದ ''**ನ ಚ ತದಾಕಾರಮ್**'' ಎಂಬುದಾಗಿ ಹೇಳಿದ್ದು ಯುಕ್ತವೇ ಆಗಿದೆ ಎಂದು ಸಿದ್ಧವಾಗುತ್ತದೆ.

**ಟೀಕಾಃ 'ಯದಿ ತರ್ಹಿ ತದ್ವಿಷಯತ್ವಮೇವ ತದಾಕಾರತ್ವಮ್ । ಅತದ್ವಿಷಯತ್ವಾತ್ ತದಾಕಾರಂ ನೇತಿ ವ್ಯಾಪ್ಯವ್ಯಾಪಕಯೋರಭೇದಾಪತ್ತಿಃ' ಇತ್ಯೇತದಪ್ಯನೇನ ನಿರಸ್ತಮ್ । ನ ಹಿ ತದಾಕಾರತ್ವಂ ತದ್ವಿಷಯತ್ವಮಿತಿ ಪರ್ಯಾಯಾವೇತೌ । ಕಿಂ ನಾಮ ಸಾಮಾನ್ಯ-**

---

○ ವಿಷಯವು ಜ್ಞಾನಕ್ಕೆ ವ್ಯಾವರ್ತಕ ಎನ್ನುವುದು ಅಂಗೀಕರಿಸಲ್ಪಟ್ಟ ಸಂಗತಿ. ಉದಾಹರಣೆಗೆ - ಘಟಜ್ಞಾನವು ಇತರ ಪಟಜ್ಞಾನಾದಿಗಳಿಂದ ಭಿನ್ನ. ಯಾಕೆ? ಘಟವಿಷಯಕವಾದ್ದರಿಂದ ಎಂಬುದಾಗಿ ವಿಷಯವಾದ ಘಟವು ಸ್ವವಿಷಯಕಜ್ಞಾನಕ್ಕೆ ವ್ಯಾವರ್ತಕವಾಗಿದೆ. ಪ್ರಕೃತದಲ್ಲಿ ''ವೇದಾಂತವಾಕ್ಯಜನಿತವಿಜ್ಞಾನವು ಆತ್ಮಜ್ಞಾನವು ಇತರ ಜ್ಞಾನಗಳಿಂದ ಭಿನ್ನ. ಯಾಕೆ ? ಆತ್ಮವಿಷಯಕವಾದ್ದರಿಂದ'' ಎಂಬುದಾಗಿ ಆತ್ಮನು ವಿಷಯನಾಗಿ ಸ್ವವಿಷಯಕಜ್ಞಾನಕ್ಕೆ ವ್ಯಾವರ್ತಕನಾಗಿದ್ದಾನೆ ಎಂದು ಭಾವ.

**ವಿಶೇಷವಚನೌ । ಪರಿಶೇಷಸಿದ್ಧಂ ತು ಪರ್ಯವಸಾನಮಭಿಪ್ರೇತ್ಯ ತದ್ವಿಷಯತ್ವಮೇವ ತದಾಕಾರತ್ವಮಿತ್ಯುಕ್ತಮಿತಿ ।**

**ಅನುವಾದ :-** ಒಂದುವೇಳೆ ತದ್ವಿಷಯತ್ವವೇ ತದಾಕಾರತ್ವ ಎಂದಾದರೆ - ''**ಅತದ್ವಿಷಯತ್ವಾತ್ ತದಾಕಾರಂ ನ**'' ''ವೇದಾಂತವಾಕ್ಯಜನಿತವಿಜ್ಞಾನವು ಆತ್ಮವಿಷಯಕವಲ್ಲದ್ದರಿಂದ ಆತ್ಮಾಕಾರವೂ ಆಗುವುದಿಲ್ಲ'' ಎಂಬುದಾಗಿ ತದ್ವಿಷಯತ್ವಾಭಾವ-ತದಾಕಾರತ್ವಾಭಾವಗಳಲ್ಲಿ ವ್ಯಾಪ್ಯವ್ಯಾಪಕಭಾವ ಹೇಳಲು ಬರುವುದಿಲ್ಲ. ವ್ಯಾಪ್ಯವ್ಯಾಪಕಭಾವ ಹೇಳಬೇಕಾದರೆ ಭೇದ ಇರಬೇಕು. ಪ್ರಕೃತ ತದ್ವಿಷಯತ್ವವೇ ತದಾಕಾರತ್ವವಾದ್ದರಿಂದ, ತದ್ವಿಷಯತ್ವಾಭಾವ-ತದಾಕಾರತ್ವಾಭಾವಗಳಲ್ಲಿ ಭೇದ ಇಲ್ಲದ ಕಾರಣ (ಅಭೇದ ಇರುವುದರಿಂದ) ವ್ಯಾಪ್ಯವ್ಯಾಪಕಭಾವ ಉಪಪನ್ನವಾಗುವುದಿಲ್ಲ

ಎಂಬ ಶಂಕೆಯೂ ಇದರಿಂದ ನಿರಾಕೃತವಾದಂತಾಯಿತು. ಯಾಕೆಂದರೆ - ತದ್ವಿಷಯತ್ವಂ-ತದಾಕಾರತ್ವಂ ಎನ್ನುವ ಎರಡು ಶಬ್ದಗಳು ಪರ್ಯಾಯವಲ್ಲ. ಕಿಂತು ಸಾಮಾನ್ಯ-ವಿಶೇಷವಚನವಾಗಿವೆ. ವೃಕ್ಷತ್ವ-ಶಿಂಶುಪಾತ್ವಗಳು ಹೇಗೆ ಸಾಮಾನ್ಯ-ವಿಶೇಷರೂಪಗಳಾಗಿವೆಯೋ (ವೃಕ್ಷತ್ವವು ಸಾಮಾನ್ಯ, ಶಿಂಶುಪಾತ್ವವು ವಿಶೇಷ ಹೇಗೋ) ಅದರಂತೆ ತದಾಕಾರತ್ವ-ತದ್ವಿಷಯತ್ವಗಳೂ ಸಾಮಾನ್ಯ-ವಿಶೇಷರೂಪವಾಗಿವೆ.

[೧]ತದ್ವಿಷಯತ್ವವನ್ನು ಬಿಟ್ಟು ಹಿಂದೆ ಹೇಳಿದಂತೆ ತದಾಕಾರತ್ವವು ನಿರ್ವಿಷಯ-ವಾದ ಘಟಾದಿಗಳಲ್ಲಿಯೂ ಇರುವುದರಿಂದ ತದಾಕಾರತ್ವವು ಸಾಮಾನ್ಯ, ತದ್ವಿಷಯತ್ವವು ವಿಶೇಷ.

[೨]ಶಶವಿಷಾಣಶಬ್ದದಿಂದ ಉಂಟಾಗುವ ಶಶವಿಷಾಣಜ್ಞಾನದಲ್ಲಿ ತದ್ವಿಷಯತ್ವ ಇಲ್ಲದೇ ಹೋದರೂ ತದಾಕಾರತ್ವ ಇರುವುದರಿಂದ ತದಾಕಾರತ್ವವು ಸಾಮಾನ್ಯ, ತದ್ವಿಷಯತ್ವವು ವಿಶೇಷವಾಗಿದೆ.

ಅಥವಾ [೩]ತದ್ವಿಷಯತ್ವವು ಸಾಮಾನ್ಯ, ತದಾಕಾರತ್ವವು ವಿಶೇಷವಾಗಿದೆ.

---

೧ ಶ್ರೀವೇದೇಶತೀರ್ಥರ ವ್ಯಾಖ್ಯಾನ ಪ್ರಕಾರ

೨ ಶ್ರೀಶ್ರೀನಿವಾಸತೀರ್ಥರ ವ್ಯಾಖ್ಯಾನ ಪ್ರಕಾರ

೩ ಶ್ರೀವಿಜಯೀಂದ್ರತೀರ್ಥರ ಹಾಗೂ ಶ್ರೀರಾಘವೇಂದ್ರಸ್ವಾಮಿಗಳವರ ವ್ಯಾಖ್ಯಾನ ಪ್ರಕಾರ

ಹಾಗಾದರೆ ತದಾಕಾರತ್ವ-ತದ್ವಿಷಯತ್ವಗಳು ಸಾಮಾನ್ಯವಿಶೇಷರೂಪ-ವಾಗಿರುವುದಾದರೆ ''ತದ್ವಿಷಯತ್ವಮೇವ ಹಿ ತದಾಕಾರತ್ವಂ'' ಎಂಬುದಾಗಿ ಆಚಾರ್ಯರು ಯಾಕೆ ಹೇಳಿದರು ? ಎಂದು ಪ್ರಶ್ನೆ ಬಂದರೆ, ತದಾಕಾರತ್ವಶಬ್ದಕ್ಕೆ ಹಿಂದೆ ಹೇಳಿದಂತೆ ಮೂರು ಪ್ರಕಾರಗಳಿಂದಲೂ ಅರ್ಥ ಅಸಂಭಾವಿತವಾದ್ದರಿಂದ, ಪರಿಶೇಷದಿಂದ ತದಾಕಾರತ್ವವು ತದ್ವಿಷಯತ್ವದಲ್ಲಿಯೇ ಪರ್ಯವಸಾನ-ವಾಗುವುದರಿಂದ, ''ತದ್ವಿಷಯತ್ವಮೇವ ತದಾಕಾರತ್ವಂ'' ಎಂಬುದಾಗಿ ಅಭೇದವನ್ನು ಹೇಳಿದ್ದು ಔಪಚಾರಿಕವಾಗಿದೆ ಎಂದು ಭಾವ.

**ಅವತಾರಿಕೆ :-** ಕರ್ಮತ್ವ-ವಿಷಯತ್ವಗಳಲ್ಲಿ ಭೇದವನ್ನು ತಿಳಿದು (ಕರ್ಮತ್ವವೇ ಬೇರೆ, ವಿಷಯತ್ವವೇ ಬೇರೆ ಎಂಬುದಾಗಿ ಮನಸ್ಸಿನಲ್ಲಿ ಇಟ್ಟುಕೊಂಡು)

**''ನ ಚ ತದಾಕಾರಮ್'' ''ಅತದ್ವಿಷಯತ್ವಾದೇವ''**

**''ತದ್ವಿಷಯತ್ವಮೇವ ಹಿ ತದಾಕಾರತ್ವಮ್''**

ಎಂಬ ಆಚಾರ್ಯರ ವಾಕ್ಯಗಳ ಮೇಲೆ ಶಂಕಿಸುತ್ತಾರೆ -

## ಜ್ಞಾನಕರ್ಮತ್ವ-ವಿಷಯತ್ವ ಇವುಗಳಲ್ಲಿ ವೈಲಕ್ಷಣ್ಯ ಇಲ್ಲ ಎಂದು ಸಮರ್ಥನೆ

**ಟೀಕಾ:** **ನನ್ವಾತ್ಮನೋ ದೃಕ್ಕರ್ಮತ್ವಾಭಾವೇ ವೇದಾಂತವಾಕ್ಯಜನಿತ-ವಿಜ್ಞಾನಸ್ಯಾತ್ಮಾಕಾರತ್ವಂ ನೋಪಪದ್ಯತ ಇತಿ ಪ್ರತಿಜ್ಞಾಯ 'ಅತತ್ಕರ್ಮತ್ವಾದೇವ' ಇತಿ ಹೇತ್ವಭಿಧಾನಂ 'ತತ್ಕರ್ಮತ್ವಮೇವ ಹಿ ತದಾಕಾರತ್ವಮ್' ಇತ್ಯುಪಪಾದನಂ ಚೋಚಿತಮ್ । 'ಅತದ್ವಿಷಯತ್ವಾದೇವ' ಇತ್ಯಾದಿ ತು ಕೇನ ಸಂಗಚ್ಛತೇ ।**

**ಮೈವಮ್ । ಶಶವಿಷಾಣಶಬ್ದಾತ್ತದಾಕಾರಂ ಜ್ಞಾನಮುಪಜಾಯತ ಇತಿ ತಾವತ್ ಸಾಕ್ಷಿಸಿದ್ಧಮ್ । ನ ತು ತತ್ ಸಕರ್ಮಕಮ್ । ತಥಾ ವೇದಾಂತವಾಕ್ಯಜನಿತಂ ವಿಜ್ಞಾನಮನಾತ್ಮಕರ್ಮಕಮಪ್ಯಾ-ತ್ಮಾಕಾರಂ ಕಿಂ ನ ಸ್ಯಾದಿತ್ಯೇತದಾಶಂಕಾನಿವೃತ್ತಯೇ ಜ್ಞಾನಂ ಪ್ರತಿ ಕರ್ಮತ್ವವಿಷಯತ್ವಯೋರ್ವಿಶೇಷಾಭಾವಸೂಚನಾಯ ಕರ್ಮೋಪಕ್ರಮೇಣ ವಿಷಯವ್ಯವಹಾರಸ್ಯ ಸಾರ್ಥಕತ್ವಾತ್ ।**

**ತಥಾಹಿ, ಶಶವಿಷಾಣಶಬ್ದಾದುಪಜಾಯಮಾನಂ ಜ್ಞಾನಂ ಸವಿಷಯಂ ನಿರ್ವಿಷಯಂ ವಾ । ನಿರ್ವಿಷಯತ್ವೇ ಜ್ಞಾನಮೇವ ನ**

**ಸ್ಯಾತ್ ಘಟವತ್ । ಸವಿಷಯತ್ವೇ ಕಥಮಕರ್ಮಕಂ ಸ್ಯಾತ್ । ವಿಷಯಸ್ಯೈವ ಕರ್ಮತ್ವಾತ್ ।**

**ಅನುವಾದ :-** ಹೌದು, ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಾಕಾರವಾಗದೇ ಹೋಗಬೇಕಾಗುತ್ತದೆ ಎಂಬುದಾಗಿ ಪ್ರತಿಜ್ಞೆ ಮಾಡಿ, ವೇದಾಂತವಾಕ್ಯಜನಿತವಿಜ್ಞಾನವು ಯಾಕೆ ಆತ್ಮಾಕಾರವಾಗದೇ ಹೋಗಬೇಕಾಗುತ್ತದೆ ? ಎಂಬ ಪ್ರಶ್ನೆಗೆ - ''**ಅತತ್ಕರ್ಮತ್ವಾದೇವ**'' ''ಆತ್ಮಕರ್ಮಕವಾಗದಿದ್ದರಿಂದಲೇ ಆತ್ಮಾಕಾರವೂ ಆಗದೇ ಹೋಗಬೇಕಾಗುತ್ತದೆ''

ಎಂಬುದಾಗಿ ಹೇತು(ಕಾರಣ)ವನ್ನು ಹೇಳುವುದು ಮತ್ತು

''ಆತ್ಮಕರ್ಮಕವಾಗದಿದ್ದರೆ ಆತ್ಮಾಕಾರ ಯಾಕೆ ಆಗಬಾರದು ?'' ಎಂಬ ಪ್ರಶ್ನೆಗೆ ''**ತತ್ಕರ್ಮತ್ವಮೇವ ಹಿ ತದಾಕಾರತ್ವಮ್**'' ''ಆತ್ಮಕರ್ಮತ್ವವೇ ಆತ್ಮಾಕಾರತ್ವವಾಗಿದೆ'' ಎಂಬುದಾಗಿ ಅದನ್ನು ಉಪಪಾದಿಸುವುದು ಉಚಿತ.

ಆದರೆ ಅದನ್ನು ಬಿಟ್ಟು (ಆ ರೀತಿ ಹೇಳುವುದು ಬಿಟ್ಟು) ''**ಅತದ್ವಿಷಯತ್ವಾದೇವ**'' ''ಆತ್ಮವಿಷಯಕವಾಗದ ಕಾರಣ ಆತ್ಮಾಕಾರವೂ ಆಗದೇ ಹೋಗಬೇಕಾಗುತ್ತದೆ'' ಎಂಬುದಾಗಿ ಬೇರೆ ಹೇತು(ಕಾರಣ)ವನ್ನು ಹೇಳುವುದು ಮತ್ತು

''**ತದ್ವಿಷಯತ್ವಮೇವ ಹಿ ತದಾಕಾರತ್ವಮ್**''

''ಆತ್ಮವಿಷಯತ್ವವೇ ಆತ್ಮಾಕಾರತ್ವವಾಗಿದೆ'' ಎಂಬುದಾಗಿ ಉಪಪಾದನೆ ಮಾಡುವುದು ಹೇಗೆ (ಯಾವ ನಿಮಿತ್ತದಿಂದ) ಉಚಿತವಾಗುತ್ತದೆ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಶಶವಿಷಾಣಶಬ್ದದಿಂದ ಶಶವಿಷಾಣಾಕಾರವಾದ ಜ್ಞಾನವು ಹುಟ್ಟುತ್ತದೆ ಎನ್ನುವುದಂತೂ ಸಾಕ್ಷಿಸಿದ್ಧವಾಗಿದೆ. ಯಾವ ರೀತಿಯಾಗಿ ಅಲ್ಲಿ ಶಶವಿಷಾಣಶಬ್ದದಿಂದ ಹುಟ್ಟುವ ಆ ಜ್ಞಾನವು ಶಶವಿಷಾಣಕರ್ಮಕವಾಗದಿದ್ದರೂ ಶಶವಿಷಾಣಾಕಾರವಾಗಿದೆಯೋ ಅದೇ ರೀತಿಯಾಗಿ ವೇದಾಂತವಾಕ್ಯಜನಿತವಾದ ವಿಜ್ಞಾನವು ಆತ್ಮಕರ್ಮಕವಾಗದಿದ್ದರೂ ಆತ್ಮಾಕಾರ ಯಾಕೆ ಆಗಬಾರದು ? ಎಂಬ ಶಂಕೆಯ ಪರಿಹಾರಕ್ಕಾಗಿ, ಜ್ಞಾನವನ್ನು ಕುರಿತು ಕರ್ಮತ್ವ-ವಿಷಯತ್ವಗಳಲ್ಲಿ ಯಾವುದೇ ವಿಶೇಷ (ವೈಲಕ್ಷಣ್ಯ) ಇಲ್ಲ ಎಂದು ಸೂಚಿಸುವುದಕ್ಕಾಗಿ,

**''ನ ಚಾತ್ಮನೋ ದೃಕ್ಕರ್ಮತ್ವಂ ವಿನಾ ತಜ್ಞಾನತ್ವಮ್''**

ಎಂಬುದಾಗಿ ಕರ್ಮದ ಉಪಕ್ರಮ ಮಾಡಿ

**''ಅತದ್ವಿಷಯತ್ವಾದೇವ'' ''ತದ್ವಿಷಯತ್ವಮೇವ ಹಿ ತದಾಕಾರತ್ವಮ್''**

ಎಂದು ವಿಷಯದ ವ್ಯವಹಾರ ಮಾಡಿರುವುದು ಸಾರ್ಥಕವೇ ಆಗಿದೆ.

(ವೇದಾಂತವಾಕ್ಯಜನಿತವಿಜ್ಞಾನವು ಆತ್ಮಕರ್ಮಕವಾಗದಿದ್ದರೂ ಆತ್ಮಾಕಾರ ಏಕೆ ಆಗಬಾರದು ? ಎಂದು ಶಂಕೆ ಬಂದರೆ ಅದಕ್ಕೆ

''ಜ್ಞಾನವನ್ನು ಕುರಿತು ಕರ್ಮತ್ವ-ವಿಷಯತ್ವಗಳಲ್ಲಿ (ಜ್ಞಾನಕರ್ಮತ್ವ-ಜ್ಞಾನ-ವಿಷಯತ್ವಗಳಲ್ಲಿ) ವೈಲಕ್ಷಣ್ಯ ಇಲ್ಲವಾದ್ದರಿಂದ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಕರ್ಮಕವಾಗದಿದ್ದರೆ ಆತ್ಮವಿಷಯಕವೂ ಆಗುವುದಿಲ್ಲ. ತದ್ವಿಷಯತ್ವವೇ ತದಾಕಾರತ್ವವಾದ್ದರಿಂದ ವೇದಾಂತವಾಕ್ಯಜನಿತವಿಜ್ಞಾನವು ಆತ್ಮವಿಷಯಕ-ವಾಗದಿದ್ದರೆ ಆತ್ಮಾಕಾರವೂ ಆಗುವುದಿಲ್ಲ''

ಎಂಬುದಾಗಿ ಉತ್ತರ ಹೇಳಬೇಕಿದೆ. ಈ ಮಧ್ಯದಲ್ಲಿ ಜ್ಞಾನಕರ್ಮತ್ವ-ಜ್ಞಾನವಿಷಯತ್ವ ಈ ಎರಡರಲ್ಲಿ ಯಾವುದೇ ವಿಶೇಷ (ವೈಲಕ್ಷಣ್ಯ) ಇಲ್ಲ ಎಂದು ತಿಳಿಸಬೇಕಾಗುತ್ತದೆ. ಆ ವಿಶೇಷಾಭಾವವನ್ನು ಸೂಚಿಸುವುದಕ್ಕಾಗಿ, ಕರ್ಮದ ಉಪಕ್ರಮ ಮಾಡಿ ವಿಷಯದ ವ್ಯವಹಾರ ಮಾಡಿದ್ದಾರೆ. ಆದ್ದರಿಂದ ಯಾವುದೇ ಅಸಂಗತಿ ಇಲ್ಲ ಎಂದು ಅಭಿಪ್ರಾಯ.)

[೧]ಜ್ಞಾನಕರ್ಮತ್ವ-ಜ್ಞಾನವಿಷಯತ್ವ ಎರಡರಲ್ಲಿ ವೈಲಕ್ಷಣ್ಯ ಇಲ್ಲ ಎನ್ನುವುದನ್ನು ತಿಳಿಸುವುದಕ್ಕಾಗಿ ಶಶವಿಷಾಣಶಬ್ದದಿಂದ ಉಂಟಾಗುವ ಜ್ಞಾನಕ್ಕೆ ಸಕರ್ಮಕತ್ವವನ್ನು ಸಾಧಿಸುತ್ತಾರೆ 'ತಥಾಹಿ' ಎಂಬುದಾಗಿ.

[೨]ಜ್ಞಾನಕರ್ಮತ್ವ-ಜ್ಞಾನವಿಷಯತ್ವಗಳಲ್ಲಿ ವೈಲಕ್ಷಣ್ಯ ಇಲ್ಲ ಎನ್ನುವುದನ್ನು ಉಪಪಾದಿಸುತ್ತಾರೆ - 'ತಥಾಹಿ' ಇತ್ಯಾದಿ ವಾಕ್ಯಗಳಿಂದ.

ಶಶವಿಷಾಣಶಬ್ದದಿಂದ ಉಂಟಾಗುವ ಜ್ಞಾನ ಸವಿಷಯವೋ ? ನಿರ್ವಿಷಯವೋ ? ನಿರ್ವಿಷಯ ಎನ್ನುವುದಾದರೆ ಅದು ಜ್ಞಾನವೇ ಆಗದೇ

---

೧ ಶ್ರೀವಿಜಯೀಂದ್ರತೀರ್ಥರ ವ್ಯಾಖ್ಯಾನ ಪ್ರಕಾರ

೨ ಶ್ರೀರಾಘವೇಂದ್ರಸ್ವಾಮಿಗಳವರ ವ್ಯಾಖ್ಯಾನ ಪ್ರಕಾರ

[೧]ಹೋಗಬೇಕಾಗುತ್ತದೆ. ಘಟವು ನಿರ್ವಿಷಯವಾದ್ದರಿಂದ ಅದು ಹೇಗೆ ಜ್ಞಾನವಾಗಿಲ್ಲವೋ ಅದರಂತೆ ಶಶವಿಷಾಣಶಬ್ದಜನ್ಯಜ್ಞಾನವೂ ನಿರ್ವಿಷಯ ಎಂದರೆ ಅದೂ ಜ್ಞಾನವೇ ಆಗದೇ ಹೋಗಬೇಕಾಗುತ್ತದೆ. ಆದ್ದರಿಂದ ಸವಿಷಯ ಎಂದು ಹೇಳಬೇಕು. ಶಶವಿಷಾಣಶಬ್ದಜನ್ಯಜ್ಞಾನವು ಸವಿಷಯ ಎಂದರೆ ಅಕರ್ಮಕ ಹೇಗಾಗುತ್ತದೆ ? ಕಾರಣ ವಿಷಯವೇ ಕರ್ಮ. ಹಾಗಾಗಿ ಶಶವಿಷಾಣಶಬ್ದಜನ್ಯಜ್ಞಾನವು ಸವಿಷಯ ಎಂದರೆ ಸಕರ್ಮಕ ಎಂದೇ ಅರ್ಥ. ಆದ್ದರಿಂದ ಜ್ಞಾನಕರ್ಮತ್ವ-ಜ್ಞಾನವಿಷಯತ್ವಗಳಲ್ಲಿ ವೈಲಕ್ಷಣ್ಯ ಇಲ್ಲ ಎಂದು ಭಾವ.

**ಟೀಕಾ : ಅಥ ಕಥಂ ಶಶವಿಷಾಣಸ್ಯ ಸಕಲಸಾಮರ್ಥ್ಯವಿಕಲಸ್ಯ ಕರ್ಮತ್ವಮಿತಿ ಚೇತ್, ವಿಷಯತ್ವಮಪಿ ಕಥಮ್ । ನ ವಿಷಯತ್ವಂ ನಾಮ ವಸ್ತುಸಾಮರ್ಥ್ಯಮ್ । ಕಿಂ ನಾಮ ಕರಣಸಾಮರ್ಥ್ಯಾದ್ಯದುಲ್ಲೇಖಿ ಜ್ಞಾನಮುಪಜಾಯತೇ ಸ ವಿಷಯ ಇತ್ಯುಚ್ಯತ ಇತಿ ಚೇತ್, ಅಥ ಜ್ಞಾನಂ ಪ್ರತಿ ಕರ್ಮತ್ವಮಪಿ ಕಿಮಧಿಕಂ ಪಶ್ಯಸಿ । ಜನಕತ್ವಮಿತಿ ಚೇನ್ನ । ಜ್ಞಾನಂ ಪ್ರತ್ಯರ್ಥಸ್ಯ ಕ್ವಾಪಿ ಜನಕತಾಽಸಮ್ಮತೇಃ । ಅಪರೋಕ್ಷಜ್ಞಾನೇಽಪಿ ಕರ್ಮಣೋ ನ ಜ್ಞಾನೋತ್ಪತ್ತೌ ವ್ಯಾಪಾರಃ। ಕೇವಲಂ ಕರಣಸನ್ನಿಕರ್ಷನಿಷ್ಪತ್ತಾವೇವ ತತ್ಸತ್ತೋಪಯುಜ್ಯತೇ । ಯತ್ರ ತು ಶಾಬ್ದಾದೌ ಜ್ಞಾನೇ ವಿನಾಽಪಿ ವಿಷಯಸತ್ತ್ವೇನ ಕರಣ-ಸನ್ನಿಕರ್ಷೋತ್ಪತ್ತಿಸ್ತತ್ರಾಸತೋಽಪಿ ಕರ್ಮತ್ವೇ ಕಿಮನುಪಪನ್ನಮ್ ।**

**ಅನುವಾದ :-** ಹೌದು, ''ವಿಷಯವೇ ಕರ್ಮವಾದ್ದರಿಂದ ಶಶವಿಷಾಣಶಬ್ದ-ಜನ್ಯಜ್ಞಾನವು ಸವಿಷಯ ಎಂದರೆ ಸಕರ್ಮಕ ಎಂದೇ ಆಗುತ್ತದೆ'' ಎಂಬುದಾಗಿ ಹೇಳಿದಿರಿ. ಆದರೆ ಅದು ಸರಿಯಲ್ಲ. ಶಶವಿಷಾಣಶಬ್ದಜನ್ಯಜ್ಞಾನವು ಶಶವಿಷಾಣ ವಿಷಯಕವಾಗುತ್ತದೆಯಾದರೂ ಶಶವಿಷಾಣಕರ್ಮಕವಾಗಲು ಸಾಧ್ಯವಿಲ್ಲ. ಯಾಕೆಂದರೆ ಕರ್ಮವು ಕಾರಕವಿಶೇಷವಾಗಿದೆ. ಕಾರಕವಾಗಬೇಕಾದರೆ ಶಕ್ತಿಮತ್

---

೧ ಸವಿಷಯವಾದದ್ದೇ ಜ್ಞಾನ ಎನಿಸಿಕೊಳ್ಳುತ್ತದೆ. ನಿರ್ವಿಷಯವಾದರೆ ಅದು ಜ್ಞಾನವೇ ಆಗದೇ ಹೋಗಬೇಕಾಗುತ್ತದೆ. ಹೇಗೆ ? ಘಟದಂತೆ. ಘಟವು ಸ್ವಯಂ ತಾನೇ ಒಂದು ವಿಷಯವಾಗಿದೆಯೇ ಹೊರತು ಘಟಕ್ಕೆ ಮತ್ತೊಂದು ವಿಷಯವಿಲ್ಲ. ಘಟವು ನಿರ್ವಿಷಯವಾದ್ದರಿಂದ ಅದು ಹೇಗೆ ಜ್ಞಾನವಾಗಿಲ್ಲವೋ ಅದರಂತೆ ಶಶವಿಷಾಣಶಬ್ದಜನ್ಯಜ್ಞಾನವೂ ನಿರ್ವಿಷಯವಾದರೆ ಅದೂ ಜ್ಞಾನವಾಗದೇ ಹೋಗಬೇಕಾಗುತ್ತದೆ ಎಂದು ಅಭಿಪ್ರಾಯ.

ಆಗಿರಬೇಕು. ಪ್ರಕೃತ ಸಕಲಸಾಮರ್ಥ್ಯವಿಕಲವಾದಂತಹ ಶಶವಿಷಾಣಕ್ಕೆ ಕರ್ಮತ್ವವು ಹೇಗೆ ಕೂಡುತ್ತದೆ ? ಎಂಬುದಾಗಿ ಆಕ್ಷೇಪ ಬಂದರೆ, ಹಾಗಾದರೆ ಶಶವಿಷಾಣಕ್ಕೆ ವಿಷಯತ್ವವಾದರೂ ಹೇಗೆ ಕೂಡುತ್ತದೆ ? (ವಸ್ತುಸಾಮರ್ಥ್ಯ-ವಿಶೇಷರೂಪವಾದ ವಿಷಯತ್ವವೂ ಸಹ ನಿಃಸ್ವರೂಪವಾದ ಶಶವಿಷಾಣದಲ್ಲಿ ಅಸಂಭಾವಿತವೇ ?)

ವಿಷಯತ್ವ ಎಂದರೆ ವಸ್ತುಸಾಮರ್ಥ್ಯ ಎಂದು ಹೇಳುವುದಿಲ್ಲ. ಕಿಂತು ಕರಣ-ಸಾಮರ್ಥ್ಯದಿಂದಾಗಿ (ಪ್ರತ್ಯಕ್ಷಾದಿರೂಪಕರಣನಿಷ್ಠಜ್ಞಾನಜನನ ಶಕ್ತಿಯಿಂದಾಗಿ) ಯದುಲ್ಲೇಖಿಯಾದ ಜ್ಞಾನವು ಹುಟ್ಟುತ್ತದೆಯೋ ಅದೇ (ಉಲ್ಲೇಖ್ಯವಾದದ್ದೇ) ವಿಷಯ ಎಂಬುದಾಗಿ ಹೇಳುತ್ತೇವೆ ಎಂದರೆ, ಜ್ಞಾನವನ್ನು ಕುರಿತು ಕರ್ಮತ್ವವೂ ಸಹ ಇದಕ್ಕಿಂತ ಹೆಚ್ಚಿನದ್ದು ಏನಿದೆ ? ಜ್ಞಾನಸಾಮರ್ಥ್ಯದಿಂದಾಗಿ ಯದುಲ್ಲೇಖಿಯಾದ ಜ್ಞಾನವು ಹುಟ್ಟುತ್ತದೆಯೋ ಅದೇ (ಉಲ್ಲೇಖ್ಯವಾದದ್ದೇ) ಕರ್ಮ. ಇದನ್ನು ಬಿಟ್ಟು ಬೇರೆ ಜ್ಞಾನಕರ್ಮತ್ವವನ್ನು ನಿರೂಪಿಸಲು ಸಾಧ್ಯವಿಲ್ಲ.

ಕರ್ಮತ್ವದ ನಿರ್ವಚನವನ್ನು ಹೀಗೆ ಮಾಡುತ್ತೇವೆ :- ಕರ್ಮತ್ವ ಎಂದರೆ ಜನಕತ್ವ (ಕಾರಕಾತಿರಿಕ್ತತ್ವೇ ಸತಿ ಜ್ಞಾನಜನಕತ್ವ) ಕಾರಕಾತಿರಿಕ್ತವಾಗಿದ್ದು ಯಾವುದು ಜ್ಞಾನಜನಕವೋ ಅದೇ ಕರ್ಮ ಎಂದು ಹೇಳುತ್ತೇವೆ ಎಂದರೆ,

ಜ್ಞಾನಜನಕತ್ವ ಎನ್ನುವಲ್ಲಿ ಜ್ಞಾನತ್ವಾವಚ್ಛಿನ್ನಜ್ಞಾನಜನಕತ್ವ (ಎಲ್ಲ ಜ್ಞಾನಗಳಿಗೂ ಜನಕವಾದದ್ದು ಕರ್ಮ) ಎಂದು ವಿವಕ್ಷಿತವೋ ? ಅಪರೋಕ್ಷಜ್ಞಾನಜನಕತ್ವ (ಅಪರೋಕ್ಷಜ್ಞಾನಕ್ಕೆ ಜನಕವಾದದ್ದು ಕರ್ಮ) ಎಂದು ವಿವಕ್ಷಿತವೋ ?

ಎಲ್ಲ ಜ್ಞಾನಗಳಿಗೂ ಜನಕವಾದದ್ದು ಕರ್ಮ ಎಂಬ ಮೊದಲನೇ ಪಕ್ಷ ಸರಿಯಲ್ಲ. ಏಕೆಂದರೆ- ಯಾವ ಜ್ಞಾನವನ್ನು ಕುರಿತಾದರೂ ಸಹ ವಿಷಯ ಜನಕವಾಗಿದೆ ಎಂದು ಅಂಗೀಕರಿಸಿಲ್ಲ. (ವಿಷಯವು ಯಾವ ಜ್ಞಾನಕ್ಕೂ ಜನಕವಾಗಿಲ್ಲ.) ಇನ್ನು ಅಪರೋಕ್ಷಜ್ಞಾನಕ್ಕೆ ಜನಕವಾದದ್ದು ಕರ್ಮ ಎನ್ನುತ್ತೇವೆ ಎಂಬ ಎರಡನೇ ಪಕ್ಷವೂ ಸರಿಯಲ್ಲ. ಅಪರೋಕ್ಷಜ್ಞಾನ ವಿಚಾರದಲ್ಲಿಯೂ ಸಹ (ವಿದ್ಯಮಾನವಿಷಯಕಾಪರೋಕ್ಷಜ್ಞಾನದಲ್ಲಿಯೂ ಸಹ) ಜ್ಞಾನದ ಉತ್ಪತ್ತಿಗಾಗಿ ಕರ್ಮದ ವ್ಯಾಪಾರ ಇಲ್ಲ. (ಜ್ಞಾನಕಾರಣಸಾಮಗ್ರೀಶರೀರದಲ್ಲಿ ಕರ್ಮವು ಪ್ರವಿಷ್ಟವಾಗಿಲ್ಲ ಎಂದರ್ಥ.) ಕೇವಲ ಕರಣಸನ್ನಿಕರ್ಷನಿಷ್ಪತ್ತಿಗಾಗಿ ಕರ್ಮದ ಸತ್ತಾ ಉಪಯುಕ್ತವಾಗುತ್ತದೆ. ಹೀಗಾಗಿ ಅಪರೋಕ್ಷಜ್ಞಾನದಲ್ಲಿಯೂ ಸಹ ವಿಷಯವು ಜ್ಞಾನಜನಕ ಎಂದು ಸಮ್ಮತವಲ್ಲ.

ಇನ್ನು ಎಲ್ಲಿ ಶಾಬ್ದಬೋಧ-ಅನುಮಿತಿಜ್ಞಾನಗಳಲ್ಲಿ ವಿಷಯ ಸತ್ ಆಗದಿದ್ದರೂ ಕರಣಸನ್ನಿಕರ್ಷ ಉಂಟಾಗುತ್ತದೆ ಅಂತಹ ಜ್ಞಾನಗಳಲ್ಲಿ ಅಸತ್‌ಗೂ ಕರ್ಮತ್ವವನ್ನು ಅಂಗೀಕರಿಸಿದರೆ ಏನು ಅನುಪಪತ್ತಿ ಇದೆ ?

**ಟೀಕಾ: ನನು ಕರ್ತುರನ್ಯತ್ವೇ ಸತಿ ಕ್ರಿಯಾಜನ್ಯಫಲಾಶ್ರಯತ್ವಂ ಕರ್ಮತ್ವಮ್ । ಯಥಾ ಗತಿಜನ್ಯಸಂಯೋಗಾಶ್ರಯತ್ವಂ ಗ್ರಾಮಸ್ಯ । ನ ಚ ಶಶವಿಷಾಣಾದೀನಾಂ ಜ್ಞಾನಜನ್ಯಫಲಾಶ್ರಯತ್ವಮಿತಿ ಕಥಂ ಕರ್ಮತೇತಿ ಚೇನ್ನ । ತತ್ರಾಪಿ ಜ್ಞಾನೇನ ಶಾಬ್ದವ್ಯವಹಾರಜನನಾತ್ । ಸಾಕ್ಷಾತ್ತದಾಶ್ರಿತಂ ಫಲಂ ನಾಸ್ತೀತಿ ಚೇತ್ । ಏವಂ ತರ್ಹಿ ಜ್ಞಾನಕರ್ಮಮಾತ್ರೇ ತದಭಾವೇನಾವ್ಯಾಪಕಂ ಕರ್ಮಲಕ್ಷಣಂ ಸ್ಯಾತ್ । ಜ್ಞಾತತಾಯಾಶ್ಚಾನ್ಯತ್ರ ನಿರಾಕೃತತ್ವಾತ್ ।**

**ಅನುವಾದ :-** ಕರ್ಮತ್ವದ ನಿರ್ವಚನವನ್ನು ಹೀಗೆ ಮಾಡುತ್ತೇವೆ -

**''ಕರ್ತುರನ್ಯತ್ವೇ ಸತಿ ಕ್ರಿಯಾಜನ್ಯಫಲಾಶ್ರಯತ್ವಂ ಕರ್ಮತ್ವಮ್''**

ಕರ್ತೃವಿನಿಂದ ಭಿನ್ನವಾಗಿದ್ದು ಯಾವುದು ಕ್ರಿಯಾಜನ್ಯವಾದ ಫಲಕ್ಕೆ ಆಶ್ರಯವಾಗಿರುವುದೋ ಅದು ಕರ್ಮ. ಉದಾಹರಣೆಗೆ- 'ದೇವದತ್ತಃ ಗ್ರಾಮಂ ಗಚ್ಛತಿ' ಎನ್ನುವಲ್ಲಿ [೧]ಗಮನರೂಪಕ್ರಿಯಾಜನ್ಯವಾದ ಸಂಯೋಗ ಎಂಬ ಫಲಕ್ಕೆ ಆಶ್ರಯವಾದದ್ದು ಗ್ರಾಮ. ಹಾಗಾಗಿ ಅಲ್ಲಿ ಗ್ರಾಮವು ಕರ್ಮ.

ಪ್ರಕೃತದಲ್ಲಿ ಶಶವಿಷಾಣಾದಿಗಳು ಕರ್ಮವಾಗಬೇಕಾದರೆ ಜ್ಞಾನರೂಪ ಕ್ರಿಯಾಜನ್ಯಫಲಕ್ಕೆ ಆಶ್ರಯವಾಗಬೇಕು. ಆದರೆ ಅಸತ್ ಆದ ಶಶವಿಷಾಣಾದಿಗಳಿಗೆ ಜ್ಞಾನಜನ್ಯಫಲಾಶ್ರಯತ್ವ ಇಲ್ಲ. ಅಂದಮೇಲೆ ಶಶವಿಷಾಣಾದಿಗಳಿಗೆ ಕರ್ಮತ್ವ ಹೇಗೆ ?

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಏಕೆಂದರೆ - ''ಕ್ರಿಯಾ(ಜ್ಞಾನ) ಜನ್ಯಫಲಾಶ್ರಯತ್ವಂ ಕರ್ಮತ್ವಂ'' ಎಂದು ಹೇಳುವುದಾದರೆ, ಶಶವಿಷಾಣವಿಷಯಕಪರೋಕ್ಷಜ್ಞಾನದಿಂದ ಶಾಬ್ದವ್ಯವಹಾರ ಉಂಟಾಗುವುದರಿಂದ, ಶಶವಿಷಾಣಾದಿಗಳು ಜ್ಞಾನಜನ್ಯವ್ಯವಹಾರರೂಪಫಲಕ್ಕೆ ಆಶ್ರಯವೇ ಆಗುವ

೧ ಗಮನರೂಪವಾದ ಕ್ರಿಯೆ, ಆ ಕ್ರಿಯೆಯಿಂದ ದೇವದತ್ತನಿಗೂ ಗ್ರಾಮಕ್ಕೂ ಸಂಯೋಗ ಆಗುತ್ತದೆ, ಅಂತಹ ಸಂಯೋಗಕ್ಕೆ ಆಶ್ರಯವಾದದ್ದು (ಸಂಯೋಗ ಉಳ್ಳದ್ದು) ಗ್ರಾಮ ಎಂದರ್ಥ.

ಕಾರಣ ಶಶವಿಷಾಣಾದಿಗಳಿಗೂ ಕರ್ಮತ್ವ ಬಂದೇ ಬರುತ್ತದೆ. ಆದ್ದರಿಂದ ''ಕ್ರಿಯಾ(ಜ್ಞಾನ) ಜನ್ಯಫಲಾಶ್ರಯತ್ವಂ ಕರ್ಮತ್ವಂ'' ಎಂದು ಹೇಳುವುದು ಸರಿಯಲ್ಲ.

ಅದು ಹಾಗಲ್ಲ, ಸಂಯೋಗ ಮೊದಲಾದ ಸಾಕ್ಷಾತ್ ಸಂಬಂಧದಿಂದ ಕ್ರಿಯಾಜನ್ಯಫಲಶಾಲಿತ್ವವನ್ನು ವಿವಕ್ಷಿಸುತ್ತೇವೆ. ಅರ್ಥಾತ್ ಕ್ರಿಯಾಜನ್ಯಫಲಕ್ಕೆ ಸಂಯೋಗಾದಿಸಂಬಂಧದಿಂದ ಆಶ್ರಯವಾಗಬೇಕು ಎಂದು ಹೇಳುತ್ತೇವೆ. ಅಸತ್ ಆದ ಶಶವಿಷಾಣಾದಿಗಳು ಜ್ಞಾನಜನ್ಯಶಾಬ್ದವ್ಯವಹಾರರೂಪಫಲಕ್ಕೆ ಸಂಯೋಗಾದಿಸಂಬಂಧದಿಂದ ಆಶ್ರಯವಾಗಲು ಸಾಧ್ಯವಿಲ್ಲ. ಹಾಗಾಗಿ ಅಸತ್ ಆದ ಶಶವಿಷಾಣಾದಿಗಳಿಗೆ ಕರ್ಮತ್ವ ಬರುವುದಿಲ್ಲವಲ್ಲ ? ಎಂದು ಶಂಕೆ ಬಂದರೆ, ಹಾಗಾದರೆ ಜ್ಞಾನಜನ್ಯಶಾಬ್ದವ್ಯವಹಾರರೂಪಫಲಕ್ಕೆ ಸತ್ ಆದ ಘಟಪಟಾದಿವಿಷಯದ ಜೊತೆಗೂ ಸಂಯೋಗಾದಿ ಸಾಕ್ಷಾತ್ ಸಂಬಂಧಗಳು ಸಾಧ್ಯವಿಲ್ಲವಾದ್ದರಿಂದ, ಸಂಯೋಗ ಮೊದಲಾದ ಸಾಕ್ಷಾತ್ ಸಂಬಂಧದಿಂದ ಕ್ರಿಯಾಜನ್ಯಫಲಶಾಲಿತ್ವರೂಪವಾದ ಕರ್ಮಲಕ್ಷಣವು (ಲಕ್ಷ್ಯೈಕದೇಶವಾದ ಗ್ರಾಮಾದಿಗಳಲ್ಲಿ ಸಮನ್ವಯವಾದರೂ ಲಕ್ಷ್ಯೈಕದೇಶವಾದ ವಿಷಯಪದಾರ್ಥ-ಗಳಲ್ಲಿ ಸಮನ್ವಯವಾಗದ ಕಾರಣ) ಎಲ್ಲ ಕರ್ಮಗಳಲ್ಲಿಯೂ ಬರುವುದಿಲ್ಲ-ವಾದ್ದರಿಂದ ಅವ್ಯಾಪ್ತಿ ಬರಬೇಕಾಗುತ್ತದೆ.

ಅಂದರೆ - ಇದು ಕರ್ಮದ ಲಕ್ಷಣ. ಹೀಗಾಗಿ ಎಲ್ಲ ಕರ್ಮಗಳಲ್ಲಿಯೂ ಈ ಲಕ್ಷಣ ಸಮನ್ವಯವಾಗಬೇಕು. ಗಮನರೂಪವಾದ ಕ್ರಿಯಾವನ್ನು ತೆಗೆದುಕೊಂಡಾಗ ''ದೇವದತ್ತಃ ಗ್ರಾಮಂ ಗಚ್ಛತಿ'' ಎನ್ನುವಲ್ಲಿ ಗಮನರೂಪಕ್ರಿಯಾಜನ್ಯವಾದ ಸಂಯೋಗ ಎಂಬ ಫಲಕ್ಕೆ ಸಮವಾಯರೂಪಸಾಕ್ಷಾತ್‌ಸಂಬಂಧದಿಂದ ಗ್ರಾಮ ಆಶ್ರಯವಾಗುವ ಕಾರಣ ಅಂತಹ ಸ್ಥಳಗಳಲ್ಲಿ (ಗ್ರಾಮಾದಿಗಳಲ್ಲಿ) ಕರ್ಮಲಕ್ಷಣ ಸಮನ್ವಯವಾಗುತ್ತದೆ. ಆದರೆ ಜ್ಞಾನರೂಪವಾದ ಕ್ರಿಯಾವನ್ನು ತೆಗೆದು-ಕೊಂಡಾಗ, ಸತ್ ಆದ ಘಟಪಟಾದಿಗಳಾಗಲೀ ಅಸತ್ ಆದ ಶಶವಿಷಾಣಾದಿ-ಗಳಾಗಲೀ ಜ್ಞಾನರೂಪಕ್ರಿಯಾಜನ್ಯಶಾಬ್ದವ್ಯವಹಾರರೂಪಫಲಕ್ಕೆ ಸಂಯೋಗಾದಿ ಸಾಕ್ಷಾತ್ ಸಂಬಂಧದಿಂದ ಆಶ್ರಯವಾಗಲು ಸಾಧ್ಯವಿಲ್ಲದ ಕಾರಣ ಇಂತಹ ಸ್ಥಳಗಳಲ್ಲಿ (ವಿಷಯಪದಾರ್ಥಗಳಲ್ಲಿ) ಕರ್ಮಲಕ್ಷಣ ಸಮನ್ವಯ-ವಾಗುವುದಿಲ್ಲವಾದ್ದರಿಂದ ಒಟ್ಟಾರೆ ಕರ್ಮಲಕ್ಷಣಕ್ಕೆ ಅವ್ಯಾಪ್ತಿ ಬರಬೇಕಾಗುತ್ತದೆ ಎಂದು ಭಾವ.

ಜೊತೆಗೆ ''ಮಾಮಹಂ ಜಾನಾಮಿ'' ಎಂಬುದಾಗಿ ಕರ್ತೃವಿಗೂ ಕರ್ಮತ್ವಾನುಭವ ಬರುತ್ತಿರುವುದರಿಂದ ಕರ್ತೃವಿನಲ್ಲಿಯೂ ಕರ್ಮಲಕ್ಷಣ ಸಮನ್ವಯವಾಗಬೇಕು. ಆದರೆ ''ಕರ್ತುರನ್ಯತ್ವೇ ಸತಿ'' ಎಂಬುದಾಗಿ ಕರ್ಮಲಕ್ಷಣದಲ್ಲಿ ಹೇಳಿದ್ದರಿಂದ ಈ ವಿಧವಾದ ಕರ್ಮದ ಲಕ್ಷಣವು ಲಕ್ಷ್ಯೈಕದೇಶನಾದ ಕರ್ತೃವಿನಲ್ಲಿ ಬಾರದ ಕಾರಣ ಈ ರೀತಿಯಾಗಿಯೂ ಅವ್ಯಾಪ್ತಿದೋಷ ಬರುತ್ತದೆ.

ಹಾಗಲ್ಲ, ಜ್ಞಾನಜನ್ಯವಾದ ಫಲ ಅದು ವ್ಯವಹಾರ ಎಂದು ವಿವಕ್ಷಿಸಿದರೆ ಶಶವಿಷಾಣಾದಿಗಳಿಗೂ ಜ್ಞಾನಜನ್ಯವ್ಯವಹಾರಫಲಾಶ್ರಯತ್ವ ಬರುವ ಕಾರಣ ಅಸತ್ ಕೂಡ ಕರ್ಮವಾಗಲಿ ಎಂಬ ಅತಿಪ್ರಸಂಗ ಬರುತ್ತದೆ. ಆದರೆ ಪ್ರಕೃತ ಜ್ಞಾನಜನ್ಯವಾದ ಫಲ ಅದು ವ್ಯವಹಾರ ಎಂದು ಹೇಳುವುದಿಲ್ಲ. ಕಿಂತು ಪ್ರಾಕಟ್ಯ ಅಪರಪರ್ಯಾಯ ಜ್ಞಾತತಾರೂಪಫಲವನ್ನು ವಿವಕ್ಷಿಸುತ್ತೇವೆ. ''ಜ್ಞಾನಜನ್ಯಜ್ಞಾತತಾರೂಪಫಲಾಶ್ರಯತ್ವಂ ಕರ್ಮತ್ವಂ'' ಎಂದು ಹೇಳುತ್ತೇವೆ. ಜ್ಞಾತತಾವಿಷಯದಲ್ಲಿ ''ಜ್ಞಾತೋ ಘಟಃ'' ಇತ್ಯಾದಿ ಅನುಭವವು ಪ್ರಮಾಣವಾಗಿರುವುದರಿಂದ ಜ್ಞಾತತಾವು ಪ್ರಾಮಾಣಿಕವೂ ಆಗಿದೆ. ಮತ್ತು ಜ್ಞಾತತಾ ಎನ್ನುವುದು ಸತ್ ಆದ (ವಿದ್ಯಮಾನವಾದ) ಪದಾರ್ಥಗಳಲ್ಲಿ ಹುಟ್ಟುವ ಧರ್ಮವಾದ್ದರಿಂದ ಅಸತ್ ಆದ ಶಶವಿಷಾಣಾದಿಗಳಲ್ಲಿ ಜ್ಞಾತತಾ ಹುಟ್ಟಲು ಸಾಧ್ಯವಿಲ್ಲದ ಕಾರಣ ಜ್ಞಾನಜನ್ಯಜ್ಞಾತತಾರೂಪಫಲಾಶ್ರಯತ್ವ ಎಂಬ ಕರ್ಮಲಕ್ಷಣ ಶಶವಿಷಾಣಾದಿಗಳಿಗೆ ಬರುವುದಿಲ್ಲ. ಹಾಗಾಗಿ ಅತಿಪ್ರಸಂಗವೂ ಇಲ್ಲ ಎಂದರೆ,

ಅದೂ ಸರಿಯಲ್ಲ. ಏಕೆಂದರೆ - ಈ ರೀತಿ ಯಾವಾಗ ಹೇಳಬಹುದಿತ್ತು ? ಜ್ಞಾತತಾ ಎನ್ನುವುದು ಇರುತ್ತಿದ್ದರೆ. ಆದರೆ ಜ್ಞಾತತಾ ಎನ್ನುವುದೇ ಇಲ್ಲ. ''ಜ್ಞಾತೋ ಘಟಃ'' ಇತ್ಯಾದಿ ಅನುಭವದ ಹಿನ್ನೆಲೆಯಲ್ಲಿ ಜ್ಞಾತತಾವನ್ನು ಅಂಗೀಕರಿಸುವುದಾದರೆ ''ಇಷ್ಟೋ ಘಟಃ'' ಇತ್ಯಾದಿ ಅನುಭವವೂ ಬರುವುದರಿಂದ ಇಷ್ಟತಾ ಮೊದಲಾದ ಧರ್ಮಗಳೂ ಸಿದ್ಧವಾಗಲಿ ಎಂಬುದಾಗಿ ಅತಿಪ್ರಸಂಗ ಹೇಳುವ ಮೂಲಕ ಪ್ರಮಾಣಪದ್ಧತಿ ಮೊದಲಾದ ಗ್ರಂಥಗಳಲ್ಲಿ ಜ್ಞಾತತಾವನ್ನು ನಿರಾಕರಿಸಿಯೂ ಇದ್ದಾರೆ.

**ನ ಚ ಪ್ರಮಾಣತೋಽನ್ಯಾ ಸ್ಯಾತ್ ಪ್ರಮಿತಿರ್ನಾಮ ಕುತ್ರಚಿತ್ ।**

**ಮಾನಾಭಾವಾತ್ ಗೌರವಾಚ್ಚ ಕಲ್ಪನಾಯಾಃ ಕಿಮೇತಯಾ ॥**

ಇತ್ಯಾದಿಯಾಗಿ ಪ್ರಮಾಣಲಕ್ಷಣ-ಅನುವ್ಯಾಖ್ಯಾನಗಳಲ್ಲಿಯೂ ಸಹ ಜ್ಞಾನವಿಷಯತ್ವಾತಿರಿಕ್ತವಾದ ಜ್ಞಾತತಾವನ್ನು ನಿರಾಕರಿಸಲಾಗಿದೆ. ಆದ್ದರಿಂದ ''ಜ್ಞಾನಜನ್ಯಜ್ಞಾತತಾರೂಪಫಲಾಶ್ರಯತ್ವಂ ಕರ್ಮತ್ವಂ'' ಎಂದು ಹೇಳುವುದೂ ಸರಿಯಲ್ಲ.

**ಟೀಕಾ: ಏತೇನ ''ಆತ್ಮನಿ ಪ್ರಕಾಶರೂಪೇ ಜ್ಞಾನಜನ್ಯಪ್ರಕಾಶೋದಯಾ-ಸಂಭವಾತ್ ಆತ್ಮನೋ ದೃಕ್ಕರ್ಮತ್ವಂ ವಿನಾ ತಜ್ಜ್ಞಾನತ್ವಂ ನ ಸ್ಯಾದಿತ್ಯಾದ್ಯತಿಪ್ರಸಂಗೋ ವಿಪರ್ಯಯಾಪರ್ಯವಸಾಯೀ'' ಇತ್ಯೇತದಪಿ ನಿರಸ್ತಮ್ ।**

**ಅನುವಾದ :-** ಏತೇನ 'ಜ್ಞಾನಜನ್ಯಫಲಾಶ್ರಯತ್ವಂ ಕರ್ಮತ್ವಂ' ಎಂದು ಹೇಳಲು ಬರುವುದಿಲ್ಲ ಎಂಬುದಾಗಿ ನಿರಾಕರಿಸುವುದರಿಂದ, ಜ್ಞಾನವಿಷಯತ್ವವೇ ಜ್ಞಾನಕರ್ಮತ್ವ ಎಂದು ಅಂಗೀಕರಿಸಬೇಕು ಎಂಬುದಾಗಿ ಸಮರ್ಥಿಸುವುದರಿಂದ ಮತ್ತೊಂದು ಶಂಕೆಗೂ ಉತ್ತರ ನೀಡಿದಂತಾಯಿತು.

ಏನದು ಮತ್ತೊಂದು ಶಂಕೆ ?

ಆತ್ಮನು ಪ್ರಕಾಶರೂಪನಾದ್ದರಿಂದ ಅವನಲ್ಲಿ ಜ್ಞಾನಜನ್ಯತ್ವೇನ ಅಭಿಮತವಾದ ಜ್ಞಾತತಾ ಅಪರನಾಮಕವಾದ ಪ್ರಕಾಶದ ಉದಯ ಅಸಂಭಾವಿತವಾಗಿದೆ. ಆತ್ಮನಿಗೆ ಜ್ಞಾನಜನ್ಯಪ್ರಕಾಶರೂಪಫಲಾಶ್ರಯತ್ವ ಎಂಬ ಕರ್ಮತ್ವ ಇಲ್ಲ. ಅಂದಮೇಲೆ -

**''ಯದಿ ಆತ್ಮನೋ ದೃಕ್ಕರ್ಮತ್ವಂ ನ ಸ್ಯಾತ್ತದಾ ವೇದಾಂತವಾಕ್ಯಜನಿತವಿಜ್ಞಾನಸ್ಯ ಆತ್ಮಜ್ಞಾನತ್ವಂ ನ ಸ್ಯಾತ್ । ಅಸ್ತಿ ಚ ತಸ್ಯ ಆತ್ಮಜ್ಞಾನತ್ವಮ್ । ತಸ್ಮಾತ್ ಅಸ್ತ್ಯೇವ ಆತ್ಮನೋ ದೃಕ್ಕರ್ಮತ್ವಮ್ ।''**

''ಒಂದುವೇಳೆ ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ ಆಗ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಜ್ಞಾನ ಆಗದೇ ಹೋಗಬೇಕಾಗುತ್ತದೆ.''

ಎಂಬುದಾಗಿ ನೀವು (ದ್ವೈತಿಗಳು) ಹಿಂದೆ ಹೇಳಿದ ಅನುಕೂಲತರ್ಕಕ್ಕೆ

''ಈಗಲಾದರೋ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಜ್ಞಾನವೇ ಆಗಿದೆ. ಆದ್ದರಿಂದ ಆತ್ಮನಿಗೆ ದೃಕ್ಕರ್ಮತ್ವ ಇದ್ದೇ ಇದೆ.''

ಎಂಬುದಾಗಿ ವಿಪರ್ಯಯಪರ್ಯವಸಾನ ಹೇಳಬೇಕು. ಆದರೆ ಆತ್ಮನಿಗೆ ಜ್ಞಾನಜನ್ಯಪ್ರಕಾಶರೂಪಫಲಾಶ್ರಯತ್ವ ಎಂಬ ದೃಕ್ಕರ್ಮತ್ವವೇ ಇಲ್ಲವಾದ್ದರಿಂದ ನಿಮ್ಮ ತರ್ಕದಲ್ಲಿ ''ತಸ್ಮಾತ್ ಅಸ್ತ್ಯೇವಾತ್ಮನೋ ದೃಕ್ಕರ್ಮತ್ವಂ'' ''ಆದ್ದರಿಂದ ಆತ್ಮನಿಗೆ ದೃಕ್ಕರ್ಮತ್ವ ಇದ್ದೇ ಇದೆ'' ಎಂಬುದಾಗಿ ವಿಪರ್ಯಯಪರ್ಯವಸಾನವೇ ಇಲ್ಲ. ಹೀಗಾಗಿ ನಿಮ್ಮ ತರ್ಕ ಆಭಾಸವಾಗಿದೆ.

ಇದು ಶಂಕಾಕಾರರ ಆಶಯ.

ಈ ವಿಧವಾದ ಶಂಕೆ ಸರಿಯಲ್ಲ. ಏಕೆಂದರೆ ''ಜ್ಞಾನಜನ್ಯಫಲಾಶ್ರಯತ್ವಂ ಕರ್ಮತ್ವಂ'' ಎಂಬ ಕರ್ಮಲಕ್ಷಣವನ್ನು ನಿರಾಕರಿಸಿದ್ದರಿಂದ, ಜ್ಞಾನವಿಷಯತ್ವವೇ ಜ್ಞಾನಕರ್ಮತ್ವ ಎಂದು ಸಮರ್ಥಿಸಿದ್ದರಿಂದ, ದೃಗ್ವಿಷಯತ್ವರೂಪದೃಕ್ಕರ್ಮತ್ವ ಆತ್ಮನಿಗೆ ಇದ್ದೇ ಇದೆಯಾದ್ದರಿಂದ, ನಮ್ಮ ತರ್ಕದಲ್ಲಿ ವಿಪರ್ಯಯಪರ್ಯವಸಾನ ಇದ್ದೇ ಇದೆ. ಹಾಗಾಗಿ ನಮ್ಮ ತರ್ಕ ಆಭಾಸವಲ್ಲ ಎಂದು ಅಭಿಪ್ರಾಯ.

**ಟೀಕಾ: ಕಿಂಚ ಜ್ಞಾನಜನ್ಯಫಲಾಶ್ರಯತ್ವಂ ಚೇಜ್ಞಾನಕರ್ಮತ್ವಂ ತದಾ ದೃಶ್ಯತ್ವಹೇತುಃ ಪ್ರತಿವಾದಿನೋಽಸಿದ್ಧಃ ಸ್ಯಾತ್ । ಜ್ಞಾತತಾ-ಽಂಗೀಕಾರಿಭಿರಪಿ ನಿತ್ಯಾನುಮೇಯೇಷು ತದನಂಗೀಕಾರಾತ್ ಭಾಗಾಸಿದ್ಧಃ ಸ್ಯಾದಿತಿ ।**

**ಅನುವಾದ :-** ಮತ್ತು, ಜ್ಞಾನಜನ್ಯಜ್ಞಾತತಾರೂಪಫಲಾಶ್ರಯತ್ವವೇ ಜ್ಞಾನಕರ್ಮತ್ವ ಎಂದು ಹೇಳುವುದಾದರೆ ಆಗ ಪ್ರತಿವಾದಿಗಳಾದ ನಮಗೆ ಜ್ಞಾತತಾ ಸಮ್ಮತವಾಗದ ಕಾರಣ (ಜ್ಞಾನವಿಷಯತ್ವಾತಿರಿಕ್ತವಾದ ಜ್ಞಾತತಾವನ್ನು ನಾವು ಎಲ್ಲಿಯೂ ಒಪ್ಪಿಲ್ಲವಾದ್ದರಿಂದ) ನಮ್ಮ ಪ್ರಕಾರ ದೃಶ್ಯತ್ವಹೇತು ಅಸಿದ್ಧವಾಗುತ್ತದೆ. (ಪಕ್ಷವಾದ ವಿಯದಾದಿ ಪ್ರಪಂಚದಲ್ಲಿ ದೃಶ್ಯತ್ವ ದೃಕ್ಕರ್ಮತ್ವ ದೃಗ್ಜನ್ಯಜ್ಞಾತತಾರೂಪಫಲಾಶ್ರಯತ್ವ ಇಲ್ಲದ ಕಾರಣ ಅಸಿದ್ಧಿದೋಷ ಬರುತ್ತದೆ.)

ಇನ್ನು ಜ್ಞಾನವಿಷಯತ್ವಾತಿರಿಕ್ತವಾದ ಜ್ಞಾತತಾವನ್ನು ಒಪ್ಪುವ ಭಾಟ್ಟರೂ ಸಹ ವಿದ್ಯಮಾನ ಪದಾರ್ಥಗಳಲ್ಲಿ ಮಾತ್ರ ಜ್ಞಾತತಾ ಎಂಬ ಧರ್ಮದ ಉತ್ಪತ್ತಿಯನ್ನು ಅಂಗೀಕರಿಸುತ್ತಾರೆ. ಹೊರತು ಅತೀತ-ಅನಾಗತಪದಾರ್ಥಗಳಲ್ಲಿ, ನಿತ್ಯಾ-ನುಮೇಯಪದಾರ್ಥಗಳಲ್ಲಿ ಜ್ಞಾತತಾವನ್ನು ಒಪ್ಪುವುದಿಲ್ಲ. ಹೀಗಾಗಿ ಪಕ್ಷೈಕ-ದೇಶವಾದ ವಿದ್ಯಮಾನಪದಾರ್ಥಗಳಲ್ಲಿ ದೃಗ್ಜನ್ಯಜ್ಞಾತತಾರೂಪಫಲಾಶ್ರಯತ್ವ

ದೃಶ್ಯತ್ವಹೇತು ಬಂದರೂ ಪಕ್ಷೈಕದೇಶವಾದ ನಿತ್ಯಾನುಮೇಯ-ಅತೀತ-ಅನಾಗತ ಪದಾರ್ಥಗಳಲ್ಲಿ ದೃಗ್‌ಜನ್ಯಜ್ಞಾತತಾರೂಪಫಲಾಶ್ರಯತ್ವ ದೃಶ್ಯತ್ವ-ಹೇತು ಬಾರದ ಕಾರಣ ಅವರ ಪ್ರಕಾರವೂ (ಭಾಗಾಸಿದ್ಧಿದೋಷ ಬರುತ್ತದೆ) ಭಾಗಸಿದ್ಧವಾಗುತ್ತದೆ.

ಆದ್ದರಿಂದ ''ಜ್ಞಾನಜನ್ಯಫಲಾಶ್ರಯತ್ವಂ ಕರ್ಮತ್ವಂ'' ಇತ್ಯಾದಿಯಾಗಿ ಕರ್ಮತ್ವದ ಪರಿಷ್ಕಾರವನ್ನು ಮಾಡಲು ಬರುವುದಿಲ್ಲವಾದ್ದರಿಂದ ಜ್ಞಾನ-ವಿಷಯತ್ವವೇ ಜ್ಞಾನಕರ್ಮತ್ವ ಎಂದು ಅಂಗೀಕರಿಸಬೇಕು. ಆತ್ಮನಿಗೆ ಜ್ಞಾನ-ವಿಷಯತ್ವನ್ನು ಅಂಗೀಕರಿಸಿದ್ದರಿಂದ (ವೇದಾಂತವಾಕ್ಯಜನಿತವಿಜ್ಞಾನದಲ್ಲಿ ಆತ್ಮನು ವಿಷಯ ಎಂದು ಅಂಗೀಕರಿಸಿದ್ದರಿಂದ)

''**ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕತಾ ಚ**'' ಎಂಬುದಾಗಿ ದೃಶ್ಯತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ ಹೇಳಿದ್ದು ಸಮಂಜಸವೇ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ''ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಜ್ಞಾನ ಆಗದೇ ಹೋಗಬೇಕಾಗುತ್ತದೆ. ಅದರಿಂದ ಆತ್ಮಾಜ್ಞಾನನಿವೃತ್ತಿಯೂ ಆಗದೇ ಹೋಗಬೇಕಾಗುತ್ತದೆ'' ಎಂಬುದಾಗಿ ಹಿಂದೆ ನಾವು (ಸಿದ್ಧಾಂತಿಗಳು) ಹೇಳಿದ್ದರ ಮೇಲೆ ಪರರು ಶಂಕಿಸುತ್ತಾರೆ -

### ವೇದಾಂತವಾಕ್ಯಜನಿತವಿಜ್ಞಾನವು ಆತ್ಮಾಜ್ಞಾನನಿವರ್ತಕವಾಗಿ ಆತ್ಮಜ್ಞಾನವಾಗಬಹುದು ಎಂಬ ಶಂಕೆ

**ಟೀಕಾ: ಅಥ ಮತಂ ಮಾ ಭೂದ್ವೇದಾಂತವಾಕ್ಯಜನಿತಂ ವಿಜ್ಞಾನಮಾತ್ಮಾ-ಕಾರತಯಾ ಆತ್ಮಜ್ಞಾನಮ್ । ತಥಾಪ್ಯಾತ್ಮಾಜ್ಞಾನನಿವರ್ತಕತಯಾ ಆತ್ಮಸಂಬಂಧಿತಯಾ ತಜ್ಞಾನಂ ಭವಿಷ್ಯತಿ । ಕಿಮಾತ್ಮನೋ ದೃಕ್ಕರ್ಮತ್ವೇನ ।**

**ನ ಚಾತ್ಮನೋ ದೃಕ್ಕರ್ಮತ್ವಾಭಾವೇ ಅಜ್ಞಾನಸ್ಯಾತ್ಮಾಜ್ಞಾನತ್ವಮಪಿ ದುರ್ಘಟಮಿತ್ಯುಕ್ತಮಿತಿ ವಾಚ್ಯಮ್ । ಆತ್ಮಾಶ್ರಿತಾಜ್ಞಾನ-ಮಾತ್ಮಾಜ್ಞಾನಮಿತ್ಯಂಗೀಕಾರಾತ್ ।**

**ನ ಚ ವಕ್ತವ್ಯಂ ಜ್ಞಾತವ್ಯೇನಾತ್ಮನಾ ಅಜ್ಞಾನಂ ವ್ಯಾವರ್ತನೀಯಮ್ । ನ ಚಾಜ್ಞಾನಂ ತಮಾಶ್ರಯತೇ । ಕಿಂತು ಜ್ಞಾತಾರಮೇವ । ವಸ್ತುತೋ ಭೇದಾಭಾವೇಽಪಿ ಜ್ಞಾತೃಜ್ಞೇಯಭಾವಸಿದ್ಧಯೇ ಯಾದೃಶ-ತಾದೃಶಸ್ಯಾಪಿ ಭೇದಸ್ಯಾಂಗೀಕೃತತ್ವಾತ್ । ಅತಃ ಕಥಮಾತ್ಮಾಜ್ಞಾನಂ ನಿವರ್ತಯದಪಿ ಜ್ಞಾನಮಾತ್ಮಜ್ಞಾನಂ ಸ್ಯಾದಿತಿ । ಅಜ್ಞಾನಸ್ಯ ಜ್ಞಾತವ್ಯಪರಬ್ರಹ್ಮಾಶ್ರಯತ್ವೋರರೀಕರಣಾದಿತಿ ।**

**ಅನುವಾದ :-**

**ಪರರು-** ವೇದಾಂತವಾಕ್ಯಜನಿತವಿಜ್ಞಾನವು ಆತ್ಮಾಕಾರತಯಾ ಆತ್ಮಕರ್ಮ-ಕತ್ವೇನ (ಆತ್ಮವಿಷಯಕತ್ವೇನ) ಆತ್ಮಜ್ಞಾನವಾಗುವುದು ಬೇಡ. ಆದರೂ ಸಹ ಆತ್ಮಾಜ್ಞಾನನಿವರ್ತಕತ್ವ ರೂಪವಾದ ಆತ್ಮಸಂಬಂಧ ಉಳ್ಳದ್ದಾದ್ದರಿಂದ (ಆತ್ಮಾಜ್ಞಾನನಿವರ್ತಕತ್ವ ಎಂಬ ಸಂಬಂಧದಿಂದ ಆತ್ಮಸಂಬಂಧಿಯಾದ್ದರಿಂದ) ಆತ್ಮಜ್ಞಾನವಾಗುತ್ತದೆ. ಅಂದಮೇಲೆ ಆತ್ಮನಿಗೆ ದೃಕ್ಕರ್ಮತ್ವವನ್ನು ಏಕೆ ಅಂಗೀಕರಿಸಬೇಕು ?

**ಸಿದ್ಧಾಂತೀ -** ಹೌದು, ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ ಅಜ್ಞಾನವು ಆತ್ಮಾಜ್ಞಾನವಾಗುವುದೂ ಕಷ್ಟವೇ ?

**''ಸತಿ ಪುಷ್ಕಲಕಾರಣೇ ತತ್ಕರ್ಮಕಜ್ಞಾನಪ್ರತಿಬಂಧಕಂ ಹಿ ತದಜ್ಞಾನಮ್ ''**

ಆತ್ಮಕರ್ಮಕಜ್ಞಾನಪ್ರತಿಬಂಧಕವಾದ ಅಜ್ಞಾನವೇ ಆತ್ಮಾಜ್ಞಾನ ಎಂದು ಹೇಳಬೇಕು ಎಂಬುದಾಗಿ ಹಿಂದೆ ಸಮರ್ಥಿಸಿದ್ದರಿಂದ, ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದೇ ಹೋದರೆ ಆತ್ಮಕರ್ಮಕಜ್ಞಾನ ಇಲ್ಲದಂತಾಗಿ ಆತ್ಮಕರ್ಮಕ-ಜ್ಞಾನಪ್ರತಿಬಂಧಕ ಅಜ್ಞಾನವು ದುರ್ಘಟವೇ ಆಗುತ್ತದೆ ಎಂಬುದಾಗಿ ಹೇಳಿದ್ದೇವೆಯಲ್ಲವೇ ?

**ಪರರು -** ಈ ರೀತಿಯಾಗಿ ಶಂಕೆ ಮಾಡಬೇಡಿ. ಏಕೆಂದರೆ - ''ತತ್ಕರ್ಮಕ-ಜ್ಞಾನಪ್ರತಿಬಂಧಕಂ ತದಜ್ಞಾನಮ್'' ಎಂಬ ಅಜ್ಞಾನಲಕ್ಷಣವನ್ನು ನಾವು ಅಂಗೀಕರಿಸುವುದಿಲ್ಲ. ಕಿಂತು - **''ಆತ್ಮಾಶ್ರಿತಂ ಅಜ್ಞಾನಂ ಆತ್ಮಾಜ್ಞಾನಮ್''**ಆತ್ಮನಲ್ಲಿ ಆಶ್ರಿತವಾದ ಅಜ್ಞಾನ ಆತ್ಮಾಜ್ಞಾನ ಎಂದು ಅಂಗೀಕರಿಸುತ್ತೇವೆ. ಆತ್ಮಾಶ್ರಿತಾ-ಜ್ಞಾನವನ್ನು ಹೇಳಬೇಕಾದರೆ ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸಬೇಕಾದ

ಆವಶ್ಯಕತೆ ಇಲ್ಲ. ಆದ್ದರಿಂದ ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸದಿದ್ದರೂ ಆತ್ಮಾಜ್ಞಾನ ಉಪಪನ್ನವಾಗುತ್ತದೆ.

**ಸಿದ್ಧಾಂತೀ :-** ಹೌದು, ಆಶ್ರಯ-ಆಶ್ರಯಿಭಾವಸಂಬಂಧದಿಂದ [೧]ಆತ್ಮ-ವ್ಯಾವರ್ತಿತವಾದ ಅಜ್ಞಾನ ಆತ್ಮಾಜ್ಞಾನ ಎಂಬುದಾಗಿ ಹೇಳಬೇಕು. ಅದರ ಅಭಿಪ್ರಾಯ- **ಆತ್ಮಾಜ್ಞಾನಂ ಘಟಾದ್ಯಜ್ಞಾನಾತ್ ವ್ಯಾವೃತ್ತಂ ಆತ್ಮಾಶ್ರಿತತ್ವಾತ್ ।** ಆತ್ಮಾಜ್ಞಾನವು ಘಟಾದ್ಯಜ್ಞಾನಗಳಿಂದ ವ್ಯಾವೃತ್ತ(ಭಿನ್ನ)ವಾಗಿದೆ, ಆತ್ಮನಲ್ಲಿ ಆಶ್ರಿತವಾದ ಅಜ್ಞಾನವಾದ್ದರಿಂದ.

ಈ ರೀತಿಯಾಗಿ ಜ್ಞಾತವ್ಯನಾದ ಆತ್ಮನಿಂದ ಆತ್ಮಾಜ್ಞಾನವನ್ನು ಇತರ ಘಟಾದ್ಯಜ್ಞಾನಗಳಿಂದ ವ್ಯಾವರ್ತನೆ ಮಾಡಬೇಕು. ಅಂದರೆ :- ಜ್ಞಾನ-ವಿಷಯನಾದ ಯಾವ ಆತ್ಮನಿದ್ದಾನೆ ಅವನೊಂದಿಗೆ ಆಶ್ರಯ-ಆಶ್ರಯಿಭಾವ ಸಂಬಂಧ ಉಳ್ಳದ್ದಾದ್ದರಿಂದ ಆತ್ಮಾಜ್ಞಾನವು ಘಟಾದ್ಯಜ್ಞಾನಗಳಿಂದ ವ್ಯಾವೃತ್ತ-ವಾಗಿದೆ ಎಂದು ಹೇಳಬೇಕು.

ಆದರೆ ಅಜ್ಞಾನವು ಆತ್ಮನಲ್ಲಿ (ಪರಮಾತ್ಮನಲ್ಲಿ) ಆಶ್ರಿತವೇ ಆಗಿಲ್ಲ. ಕಿಂತು 'ಅಹಮಜ್ಞಃ' ಎಂಬುದಾಗಿ ಜ್ಞಾತೃವಾದ ಜೀವನಲ್ಲಿ ಆಶ್ರಿತವಾಗಿದೆ ಎಂದೇ ಅನುಭವ ಇದೆ. ಜ್ಞಾತೃ-ಜ್ಞೇಯಗಳಲ್ಲಿ (ಜೀವ-ಬ್ರಹ್ಮರಲ್ಲಿ) ಅಭೇದವೇ ಇರುವ ಕಾರಣ, ಅಜ್ಞಾನವು ಜ್ಞಾತೃಜೀವನಲ್ಲಿ ಆಶ್ರಿತವಾಗಿದೆ ಎಂದು ಹೇಳಿದರೆ ಜ್ಞೇಯ ಆತ್ಮನಲ್ಲಿ ಆಶ್ರಿತವಾಗಿದೆ ಎಂದು ಸಿದ್ಧವಾಗುತ್ತದೆಯಲ್ಲವೇ ? ಎಂಬ ಆಕ್ಷೇಪ ಸರಿಯಲ್ಲ. ಯಾಕೆಂದರೆ :- ಜೀವ-ಬ್ರಹ್ಮರಲ್ಲಿ ವಸ್ತುತಃ ಭೇದ ಇಲ್ಲದಿದ್ದರೂ ಸಹ ಜ್ಞಾತೃ-ಜ್ಞೇಯಭಾವ ಕೂಡಿಸುವುದಕ್ಕಾಗಿ ಯಾದೃಶ-ತಾದೃಶವಾದ ಭೇದವನ್ನಾದರೂ ಅಂಗೀಕರಿಸಲೇಬೇಕು. ಅಂದಮೇಲೆ ಅಜ್ಞಾನವು ಆತ್ಮನಲ್ಲಿ (ಪರಮಾತ್ಮನಲ್ಲಿ) ಆಶ್ರಿತವೇ ಅಲ್ಲ ಎಂದಮೇಲೆ, ಆತ್ಮಾಶ್ರಿತಅಜ್ಞಾನ ಆತ್ಮಾಜ್ಞಾನವೇ ಇಲ್ಲವಾದ್ದರಿಂದ, ಆತ್ಮಾಜ್ಞಾನನಿವರ್ತಕತ್ವೇನ ವೇದಾಂತವಾಕ್ಯ-ಜನ್ಯವಿಜ್ಞಾನ ಆತ್ಮಜ್ಞಾನ ಎಂದು ಹೇಗೆ ಆಗುತ್ತದೆ ?

**ಪರರು :-** ಈ ರೀತಿಯಾಗಿ ಆಕ್ಷೇಪ ಮಾಡಬೇಡಿ. ಕಾರಣ - ಅಜ್ಞಾನವು ಜ್ಞಾತೃವಾದ ಜೀವನಲ್ಲಿ ಆಶ್ರಿತವಾಗಿದೆ ಎಂದು ನಾವು ಅಂಗೀಕರಿಸುವುದೇ ಇಲ್ಲ. ಕಿಂತು ''ತಮ ಆಸೀತ್'' ''ತಮಸಾ ಗೂಹ್ಯಮಗ್ರೇ'' ''ಮಾಯಿನಂ ತು

---

೧ ಇಲ್ಲಿ ಎಲ್ಲಕಡೆ ಆತ್ಮ ಎಂದರೆ ಪರಮಾತ್ಮ ಎಂದಿಟ್ಟುಕೊಳ್ಳಬೇಕು.

ಮಹೇಶ್ವರಂ'' ಇತ್ಯಾದಿ ಶ್ರುತಿಗಳು ಹೇಳುವಂತೆ ಜ್ಞೇಯನಾದ ಆತ್ಮನಲ್ಲಿ ಆಶ್ರಿತವಾಗಿದೆ ಎಂದೇ ಹೇಳುತ್ತೇವೆ. ಮತ್ತು -

**ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।**
**ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥**

''ಅಜ್ಞಾನಕಲ್ಪಿತನಾದ ಜೀವನು ಮೊದಲೇ ಇದ್ದ ಅಜ್ಞಾನಕ್ಕೆ ಆಶ್ರಯನಾಗಲು ಸಾಧ್ಯವಿಲ್ಲ'' ಎಂಬುದಾಗಿ ಯುಕ್ತಿಯಿಂದಲೂ ಅಜ್ಞಾನಕ್ಕೆ ಜೀವಾಶ್ರಿತತ್ವವನ್ನು ನಿರಾಕರಿಸಿದ್ದೇವೆ. ಪರಬ್ರಹ್ಮನೇ ಅಜ್ಞಾನಕ್ಕೆ ಆಶ್ರಯ ಎಂದು ಸಮರ್ಥಿಸಿದ್ದೇವೆ.

ಆದ್ದರಿಂದ ಆತ್ಮಾಶ್ರಿತ ಅಜ್ಞಾನ ಆತ್ಮಾಜ್ಞಾನ ಎನ್ನುವುದು ಉಪಪನ್ನ. ವೇದಾಂತವಾಕ್ಯಜನಿತವಿಜ್ಞಾನವು ಅಂತಹ ಆತ್ಮಾಜ್ಞಾನಕ್ಕೆ ನಿರ್ವರ್ತಕವಾದದ್ದರಿಂದ (ನಿವರ್ತಕತ್ವೇನ ಆತ್ಮಸಂಬಂಧಿಯಾದದ್ದರಿಂದ) ಆತ್ಮಜ್ಞಾನ ಆಗಬಹುದು. ಅಂದಮೇಲೆ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಾಜ್ಞಾನನಿವರ್ತಕತ್ವರೂಪವಾದ ಆತ್ಮಸಂಬಂಧ ಉಳ್ಳದ್ದಾದ್ದರಿಂದ ಆತ್ಮಜ್ಞಾನವಾಗಲು ಸಾಧ್ಯವಾಗುವಾಗ ಆತ್ಮನಿಗೆ ದೃಕ್ಕರ್ಮತ್ವವನ್ನು ಏಕೆ ಅಂಗೀಕರಿಸಬೇಕು ?

ಇದು ಪರರ ಶಂಕೆಯ ಪೂರ್ಣಭಾವ.

**ಅಜ್ಞಾನವು ಆತ್ಮಾಶ್ರಿತವಲ್ಲ (ವಿಷಯಬ್ರಹ್ಮಾಶ್ರಿತವಲ್ಲ)**
**ಎಂದು ಉಪಪಾದಿಸುವ ಮೂಲಕ ಪೂರ್ವೋಕ್ತಶಂಕಾನಿರಾಕರಣೆ**

**ಟೀಕಾ : ತತ್ರಾಹ -**

**ಮೂಲ :- ನ ಹ್ಯಜ್ಞಾನಸ್ಯ ಘಟಾಶ್ರಯತ್ವಂ ಬ್ರಹ್ಮಾಶ್ರಯತ್ವಂ ವಾಽಸ್ತಿ ।**

**ಹಿಶಬ್ದೋ ಹೇತ್ವರ್ಥೇ । ವಾಶಬ್ದ ಉಪಮಾಯಾಮ್ । ಯಥಾ ಖಲು ನ ಘಟಾಜ್ಞಾನಸ್ಯ ಘಟಾಶ್ರಯತ್ವಂ ಏವಮಜ್ಞಾನತ್ವಾನ್ನ ಬ್ರಹ್ಮಾಜ್ಞಾನಸ್ಯಾಪಿ ತದಾಶ್ರಯತ್ವಮಸ್ತಿ। ಅನ್ಯಥಾ ಘಟಾಜ್ಞಾನಸ್ಯಾಪಿ ತದಾಶ್ರಯತ್ವಪ್ರಸಂಗಾತ್ । ಯತ ಏವಂ ನ ಬ್ರಹ್ಮಾಜ್ಞಾನಂ ತದಾಶ್ರಯಂ ತಸ್ಮಾನ್ನ ತನ್ನಿವರ್ತಯದಪಿ ಜ್ಞಾನಂ ಬ್ರಹ್ಮಜ್ಞಾನಮಿತಿ।**

**ಅನುವಾದ :-** ಈ ರೀತಿಯಾಗಿ ಪರರು ಶಂಕಿಸಿದರೆ ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

ಮೂಲ :- ನ ಹ್ಯಜ್ಞಾನಸ್ಯ ಘಟಾಶ್ರಯತ್ವಂ ಬ್ರಹ್ಮಾಶ್ರಯತ್ವಂ ವಾಽಸ್ತಿ ।

**ಮೂಲಾರ್ಥ :-** **ಯಾವ ಕಾರಣ ಯಾವ ರೀತಿಯಾಗಿ ಅಜ್ಞಾನಕ್ಕೆ ಘಟಾಶ್ರಯತ್ವ ಇಲ್ಲವೋ ಅದೇ ರೀತಿಯಾಗಿ ಬ್ರಹ್ಮಾಶ್ರಯತ್ವವೂ ಇಲ್ಲ.**

ಮೂಲದಲ್ಲಿ 'ಹಿ'ಶಬ್ದವು ಹೇತು ಎಂಬ ಅರ್ಥದಲ್ಲಿದೆ. ('ಹಿ'ಶಬ್ದಕ್ಕೆ ಯಸ್ಮಾತ್ ಯಾವ ಕಾರಣ ಎಂದರ್ಥ.)

ಮತ್ತು 'ವಾ'ಶಬ್ದವು [೧]ಉಪಮಾ ಎಂಬ ಅರ್ಥದಲ್ಲಿದೆ.

ಹಾಗಾದರೆ ಒಟ್ಟಿನಲ್ಲಿ ಇಷ್ಟು ಹೇಳಿದಂತಾಗುತ್ತದೆ -

**ಬ್ರಹ್ಮಾಜ್ಞಾನಂ ನ ಸ್ವವಿಷಯಾಶ್ರಿತಂ ಅಜ್ಞಾನತ್ವಾತ್ ಘಟಾಜ್ಞಾನವತ್ ।**

ಯಾವ ರೀತಿಯಾಗಿ ಘಟಾಜ್ಞಾನವು ಅಜ್ಞಾನವಾದ್ದರಿಂದ ಸ್ವವಿಷಯಾಶ್ರಿತ-ವಾಗಿಲ್ಲವೋ (ಘಟಾಶ್ರಿತವಾಗಿಲ್ಲವೋ) ಅದೇ ರೀತಿಯಾಗಿ ಬ್ರಹ್ಮಾಜ್ಞಾನವೂ ಅಜ್ಞಾನವೇ ಆದ್ದರಿಂದ ಅದೂ ಸ್ವವಿಷಯಾಶ್ರಿತವಾಗಿಲ್ಲ (ಬ್ರಹ್ಮಾಶ್ರಿತವಾಗಿಲ್ಲ).

**''ಅಜ್ಞಾನತ್ವಮಸ್ತು ಸ್ವವಿಷಯಾಶ್ರಿತತ್ವಾಭಾವಃ ಮಾಸ್ತು''**

ಬ್ರಹ್ಮಾಜ್ಞಾನವು ಅಜ್ಞಾನವಾಗಲಿ, ಆದರೆ ಸ್ವವಿಷಯಾಶ್ರಿತವಲ್ಲ ಎಂದು ಬೇಡ (ಸ್ವವಿಷಯಾಶ್ರಿತವೇ ಆಗಲಿ) ಎಂಬುದಾಗಿ ಅನುಮಾನಕ್ಕೆ ಅಪ್ರಯೋಜಕತಾಶಂಕೆ ಮಾಡುವ ಹಾಗಿಲ್ಲ. ಯಾಕೆಂದರೆ - ಅಜ್ಞಾನವಾದರೂ ಸ್ವವಿಷಯಾಶ್ರಿತವೇ ಆಗಲಿ ಎನ್ನುವುದಾದರೆ ಘಟಾಜ್ಞಾನವೂ ಸಹ ಸ್ವವಿಷಯಾಶ್ರಿತವೇ ಆಗಲಿ ಎಂಬ ಅತಿಪ್ರಸಂಗ ಬರಬೇಕಾಗುತ್ತದೆ. ಆದ್ದರಿಂದ ಘಟಾಜ್ಞಾನವು ಘಟಾಶ್ರಿತ ಹೇಗೆ

---

೧ ಆದರ ಅಭಿಪ್ರಾಯ :- ಸಾಮಾನ್ಯವಾಗಿ 'ವಾ'ಶಬ್ದವು ಪಕ್ಷಾಂತರಸೂಚಕವಾಗಿರುತ್ತದೆ. ಪ್ರಕೃತದಲ್ಲಿ ''ಅಜ್ಞಾನಕ್ಕೆ ಬ್ರಹ್ಮಾಶ್ರಿತತ್ವ ಇಲ್ಲ'' ಎಂಬ ಒಂದು ಪಕ್ಷದ ಜೊತೆಗೆ ''ಅಜ್ಞಾನಕ್ಕೆ ಘಟಾಶ್ರಿತತ್ವ ಇಲ್ಲ'' ಎಂಬ ಮತ್ತೊಂದು ಪಕ್ಷಕ್ಕೆ ಸೂಚಕವಾಗಬೇಕು ವಾಶಬ್ದ. ಆದರೆ ಅಜ್ಞಾನಕ್ಕೆ ಘಟಾಶ್ರಿತತ್ವವನ್ನು ಪರರೂ ಅಂಗೀಕರಿಸಿಲ್ಲವಾದ್ದರಿಂದ (ಪಕ್ಷಾಂತರವೇ ಇಲ್ಲವಾದ್ದರಿಂದ) ಪಕ್ಷಾಂತರಸೂಚಕವಾಗಬೇಕಾದ 'ವಾ'ಶಬ್ದವು ಪ್ರಕೃತ ವ್ಯರ್ಥ ? ಎಂಬ ಪ್ರಶ್ನೆಗೆ

'ವಾ'ಶಬ್ದ ಉಪಮಾಯಮ್ । ಎಂಬ ಮಾತಿನಿಂದ ಉತ್ತರ ನೀಡಿದ್ದಾರೆ ಶ್ರೀಮಟ್ಟೀಕಾಕೃತ್ಪಾದರು. ಸಾಮಾನ್ಯವಾಗಿ 'ವಾ'ಶಬ್ದವು ಪಕ್ಷಾಂತರಕ್ಕೆ ಸೂಚಕವಾಗುವುದಾದರೂ ಪ್ರಕೃತದಲ್ಲಿ ಉಪಮಾರ್ಥದಲ್ಲಿ ಇದೆ. ಯಾವ ರೀತಿಯಾಗಿ ಅಜ್ಞಾನಕ್ಕೆ ಘಟಾಶ್ರಿತತ್ವ ಇಲ್ಲವೋ ಅದೇ ರೀತಿಯಾಗಿ ಅಜ್ಞಾನಕ್ಕೆ ಬ್ರಹ್ಮಾಶ್ರಿತತ್ವವೂ ಇಲ್ಲ ಎಂಬುದಾಗಿ ಉಪಮಾರ್ಥದಲ್ಲಿ ವಾಶಬ್ದ ಪ್ರಯೋಗಿಸಿದ್ದಾರೆ ಆಚಾರ್ಯರು ಎಂದು ಭಾವ.

ಆಗಿಲ್ಲವೋ ಹಾಗೆ ಬ್ರಹ್ಮಾಜ್ಞಾನವೂ ಬ್ರಹ್ಮಾಶ್ರಿತವಾಗಿಲ್ಲ ಎಂದು (ಸಾಧಿಸಬಹುದು) ಸಿದ್ಧವಾಗುತ್ತದೆ.

ಅಂದಮೇಲೆ ಬ್ರಹ್ಮಾಶ್ರಿತವಾದ ಬ್ರಹ್ಮಾಜ್ಞಾನವೇ ಇಲ್ಲ ಎಂದಮೇಲೆ ಬ್ರಹ್ಮಾಜ್ಞಾನನಿವರ್ತಕವಾಗುವ ಮೂಲಕವೂ ವೇದಾಂತವಾಕ್ಯಜನಿತವಿಜ್ಞಾನವು ಬ್ರಹ್ಮಜ್ಞಾನವಾಗುವುದಿಲ್ಲ.

**ಟೀಕಾ: ನನು ಘಟಾಜ್ಞಾನಮೇವ ನಾಸ್ತಿ । ಜ್ಞಾನೋತ್ಪತ್ತೇಃ ಪ್ರಾಕ್ ಪ್ರಮಾಣವೈಕಲ್ಯಾದೇವ ಜ್ಞಾನಾಭಾವೋಽಪಪತ್ತೇಃ । ಉತ್ಪನ್ನೇ ತು ಜ್ಞಾನೇ ತತ ಏವ ಸುತರಾಂ ಅಜ್ಞಾನಕಲ್ಪಕಾಭಾವಾತ್ । ಅತೋ ಯದಜ್ಞಾನಂ ನ ತದ್ವಿಷಯಾಶ್ರಿತಮಿತಿ ವ್ಯಾಪ್ತೌ ಕಥಂ ಘಟಾಜ್ಞಾನಂ ದೃಷ್ಟಾಂತೀಕ್ರಿಯತೇ ? ಕಸ್ಯ ವಾ ಘಟಾಶ್ರಯತ್ವಮಾಪಾದ್ಯತೇ । ಬ್ರಹ್ಮಣಿ ತು ಸ್ವಯಂಪ್ರಕಾಶಮಾನೇಽಪಿ ತತ್ತ್ವರೂಪಾನವಭಾಸಸ್ಯಾನನ್ಯನಿಮಿತ್ತತ್ವಾದ್ಭಾವರೂಪಮಜ್ಞಾನಂ ಕಲ್ಪ್ಯತ ಇತಿ ।**

**ಮೈವಮ್ । ಘಟೋಽಪಿ ಯದಾಽನ್ಯಾತ್ಮನಾಽವಭಾಸತೇ ತದಾ ಇಂದ್ರಿಯಪ್ರವೃತ್ತಾವಪಿ ಘಟತ್ವಾಗ್ರಹಣಸ್ಯಾನನ್ಯನಿಮಿತ್ತತ್ವಾತ್ ತತ್ರಾಪ್ಯಜ್ಞಾನಸ್ಯ ಪರೇಣಾಂಗೀಕಾರ್ಯತ್ವಾತ್ । ಅನ್ಯಥಾ ಶುಕ್ತಿಕಾಜ್ಞಾನಮಪಿ ನ ಸ್ಯಾತ್ ।**

**ಅನುವಾದ :-** ಇಲ್ಲಿ -

**ಬ್ರಹ್ಮಾಜ್ಞಾನಂ ನ ಸ್ವವಿಷಯಾಶ್ರಿತಂ ಅಜ್ಞಾನತ್ವಾತ್ ಘಟಾಜ್ಞಾನವತ್ ।**

''ಯಾವ ರೀತಿಯಾಗಿ ಘಟಾಜ್ಞಾನವು ಅಜ್ಞಾನವಾದ್ದರಿಂದ ಸ್ವವಿಷಯಾಶ್ರಿತವಾಗಿಲ್ಲವೋ (ಘಟಾಶ್ರಿತವಾಗಿಲ್ಲವೋ) ಅದೇ ರೀತಿಯಾಗಿ ಬ್ರಹ್ಮಾಜ್ಞಾನವೂ ಅಜ್ಞಾನವೇ ಆದ್ದರಿಂದ ಅದೂ ಸ್ವವಿಷಯಾಶ್ರಿತವಾಗಿಲ್ಲ (ಬ್ರಹ್ಮಾಶ್ರಿತವಾಗಿಲ್ಲ)''

ಎಂಬುದಾಗಿ ಸಾಧಿಸುವಾಗ ಘಟಾಜ್ಞಾನವನ್ನು ದೃಷ್ಟಾಂತವನ್ನಾಗಿ ಮಾಡಿದ್ದೀರಿ. ಅರ್ಥಾತ್ ''ಯತ್ ಅಜ್ಞಾನಂ ನ ತತ್ ವಿಷಯಾಶ್ರಿತಂ'' ಎಂಬ ವ್ಯಾಪ್ತಿಯಲ್ಲಿ ಘಟಾಜ್ಞಾನವನ್ನು ದೃಷ್ಟಾಂತವನ್ನಾಗಿ ಮಾಡಿದ್ದೀರಿ. ಆದರೆ ಇದು ಸರಿಯಲ್ಲ. ಏಕೆಂದರೆ ಈ ರೀತಿ ಘಟಾಜ್ಞಾನವನ್ನು ಯಾವಾಗ ದೃಷ್ಟಾಂತವನ್ನಾಗಿ ಕೊಡಬಹುದಿತ್ತು ? ಘಟಾಜ್ಞಾನ ಎಂಬ ವಸ್ತು ಇದ್ದರೆ. ಆದರೆ ಘಟಾಜ್ಞಾನ ಎನ್ನುವುದೇ ಇಲ್ಲ.

ಆದು ಹೇಗೆಂದರೆ :- ಅಜ್ಞಾನವನ್ನು ಏಕೆ ಅಂಗೀಕರಿಸುವುದು ? ಪ್ರಾಪ್ತಪ್ರಕಾಶಪ್ರತಿಬಂಧಕತಯಾ ಅಜ್ಞಾನವನ್ನು ಅಂಗೀಕರಿಸಬೇಕಷ್ಟೇ. ಜಡವಾದ ಘಟಕ್ಕೆ ಪ್ರಕಾಶದ ಪ್ರಾಪ್ತಿಯೇ ಇಲ್ಲ ಎಂದಮೇಲೆ ಪ್ರಾಪ್ತಪ್ರಕಾಶ-ಪ್ರತಿಬಂಧಕತಯಾ ಘಟಾಜ್ಞಾನ ಅಂಗೀಕರಿಸುವ ಆವಶ್ಯಕತೆಯೇ ಇಲ್ಲ.

ಪ್ರಕಾಶಪ್ರತಿಬಂಧಕತಯಾ ಘಟಾಜ್ಞಾನವನ್ನು ಯಾವಾಗ ಅಂಗೀಕರಿಸುವುದು? ಘಟಜ್ಞಾನ ಹುಟ್ಟುವುದಕ್ಕಿಂತ ಮುಂಚೆಯೋ ? ಘಟಜ್ಞಾನ ಹುಟ್ಟಿದ ನಂತರವೋ?

ಘಟಜ್ಞಾನ ಹುಟ್ಟುವ ಮುಂಚೆ ಘಟಾಜ್ಞಾನ ಹೇಳುವುದಾದರೆ, ಘಟಜ್ಞಾನ ಹುಟ್ಟುವ ಮುಂಚೆ ಯಾಕೆ ಘಟಜ್ಞಾನ ಆಗಿಲ್ಲ ಎಂದರೆ ಘಟವನ್ನು ತಿಳಿಸುವ ಯಾವ ಪ್ರಮಾಣವೂ ಇಲ್ಲವಾದ್ದರಿಂದ (ನಾವು ಕಣ್ಣುತೆರೆದು ಘಟವನ್ನು ನೋಡಿಲ್ಲ-ವಾದ್ದರಿಂದ) ಘಟಜ್ಞಾನ ಆಗಿಲ್ಲ. ಹೀಗೆ ಘಟಜ್ಞಾನ ಹುಟ್ಟುವ ಮುಂಚೆ ಪ್ರಮಾಣವೈಕಲ್ಯದಿಂದಲೇ ಘಟಾಜ್ಞಾನ [೧]ಘಟಜ್ಞಾನಾಭಾವ ಉಪಪನ್ನವಾಗುತ್ತದೆ.

ಇನ್ನು ಘಟಜ್ಞಾನ ಹುಟ್ಟಿದ ನಂತರ ಘಟಾಜ್ಞಾನವನ್ನು ಅಂಗೀಕರಿಸಲು ಬರುವುದೇ ಇಲ್ಲ. ಅಂದರೆ- ಜ್ಞಾನರೂಪಕಾರ್ಯಕ್ಕೆ ಪ್ರತಿಬಂಧಕವಾಗಿ ಅಜ್ಞಾನವನ್ನು (ಅಜ್ಞಾನ ಎಂಬ ಆವರಣವನ್ನು) ಹೇಳಬೇಕು. ಆದರೆ ಜ್ಞಾನವೇ ಹುಟ್ಟಿದಾಗ, ಜ್ಞಾನರೂಪಕಾರ್ಯವೇ ಹುಟ್ಟಿರುವಾಗ ಕಾರ್ಯಪ್ರತಿಬಂಧಕವಾಗಿ ಅಜ್ಞಾನವನ್ನು ಹೇಳಲು ಬರುವುದೇ ಇಲ್ಲ. ಹಾಗಾಗಿ ಘಟಜ್ಞಾನ ಹುಟ್ಟಿದ ನಂತರವೂ ಘಟಾಜ್ಞಾನವನ್ನು ಅಂಗೀಕರಿಸಲು ಬರುವುದಿಲ್ಲ.

ಅಂದಮೇಲೆ ಘಟಜ್ಞಾನ ಹುಟ್ಟುವ ಮುಂಚೆ, ಘಟಜ್ಞಾನ ಹುಟ್ಟಿದ ಅನಂತರ ಎರಡು ಹಂತಗಳಲ್ಲಿಯೂ ಘಟಾಜ್ಞಾನವನ್ನು ಹೇಳಲು ಬರುವುದಿಲ್ಲವಾದ್ದರಿಂದ ಘಟಾಜ್ಞಾನ ಎನ್ನುವುದೇ ಇಲ್ಲ. ಆದ್ದರಿಂದ

**''ಯತ್ ಅಜ್ಞಾನಂ ನ ತತ್ ವಿಷಯಾಶ್ರಿತಮ್''**

'ಯಾವುದು ಅಜ್ಞಾನವೋ ಅದು ವಿಷಯಾಶ್ರಿತವಲ್ಲ' ಎಂಬ ವ್ಯಾಪ್ತಿಯಲ್ಲಿ ಘಟಾಜ್ಞಾನವನ್ನು ಹೇಗೆ ದೃಷ್ಟಾಂತ ಮಾಡಲು ಬರುತ್ತದೆ ? ಮತ್ತು

೧ ಜಡವಾದ ಘಟಕ್ಕೆ ಪ್ರಕಾಶದ ಪ್ರಸಕ್ತಿಯೇ ಇಲ್ಲವಾದ್ದರಿಂದ ಪ್ರಾಪ್ತಪ್ರಕಾಶಪ್ರತಿಬಂಧಕತಯಾ ಘಟಕ್ಕೆ ಆವರಕವಾಗಿ ಭಾವರೂಪಅಜ್ಞಾನವನ್ನು ಒಪ್ಪುವ ಆವಶ್ಯಕತೆ ಇಲ್ಲ. ಹಾಗಾಗಿ ಘಟಜ್ಞಾನ ಆಗುವ ಮುಂಚೆ ಏನು ಘಟಾಜ್ಞಾನ ಇದೆ ಆ ಅಜ್ಞಾನ ಜ್ಞಾನಾಭಾವರೂಪವಾದದ್ದು. ಹೊರತು ಭಾವರೂಪ ಅಜ್ಞಾನವಲ್ಲ ಎಂದು ಅಭಿಪ್ರಾಯ.

''ಬ್ರಹ್ಮಾಜ್ಞಾನವು ಬ್ರಹ್ಮಾಶ್ರಯವಾಗುವುದಾದರೆ ಘಟಾಜ್ಞಾನವೂ ಘಟಾ-ಶ್ರಯವಾಗಲಿ'' ಎಂಬುದಾಗಿ ಯಾವುದಕ್ಕೆ ಘಟಾಶ್ರಯತ್ವವನ್ನು ಆಪಾದಿಸುತ್ತೀರಿ?

ಘಟಾಜ್ಞಾನ ಇಲ್ಲ ಎಂಬಂತೆ ಬ್ರಹ್ಮಾಜ್ಞಾನ ಇಲ್ಲ ಎಂದು ಹೇಳಬೇಕಾದ ಅತಿಪ್ರಸಂಗ ಇಲ್ಲ. ಯಾಕೆಂದರೆ ಘಟವು ಜಡವಾದ್ದರಿಂದ ಅದಕ್ಕೆ ಪ್ರಕಾಶದ ಪ್ರಾಪ್ತಿಯೇ ಇಲ್ಲದ ಕಾರಣ ಪ್ರಾಪ್ತಪ್ರಕಾಶಪ್ರತಿಬಂಧಕತಯಾ ಘಟಾಜ್ಞಾನವನ್ನು ಒಪ್ಪಲು ಬರುವುದಿಲ್ಲ. ಆದರೆ ಬ್ರಹ್ಮನು ಚೇತನನಾದ್ದರಿಂದ ಅವನಿಗೆ ಪ್ರಕಾಶದ ಪ್ರಾಪ್ತಿಯಿದೆ. ಅವನು ಸ್ವಪ್ರಕಾಶನಾದವನು. ಬ್ರಹ್ಮನು ಸ್ವಪ್ರಕಾಶನಾದರೂ ಸಹ ಅವನ ಸ್ವರೂಪ ತೋರದೇ ಇರುವುದಕ್ಕೆ (ಬ್ರಹ್ಮನ ಜ್ಞಾನ ಆಗದೇ ಇರುವುದಕ್ಕೆ) ಒಂದು ನಿಮಿತ್ತ ಬೇಕು. ಭಾವರೂಪಅಜ್ಞಾನವನ್ನು ಬಿಟ್ಟು ಬೇರೆ ಯಾವ ನಿಮಿತ್ತವೂ ಇಲ್ಲವಾದ್ದರಿಂದ, ಬ್ರಹ್ಮನು ಸ್ವಪ್ರಕಾಶಮಾನನಾದರೂ ಅವನ ಜ್ಞಾನ ಆಗದೇ ಇರುವಂತೆ ಮಾಡುವ ಒಂದು ಆವರಕವಸ್ತು ಭಾವರೂಪ ಅಜ್ಞಾನವನ್ನು ಬ್ರಹ್ಮನ ವಿಷಯದಲ್ಲಿ ಅಂಗೀಕರಿಸುತ್ತೇವೆ. ಹಾಗಾಗಿ ಬ್ರಹ್ಮಾಜ್ಞಾನ ಉಪಪನ್ನ-ವಾಗಿದೆ. ಆದರೆ ಘಟಾಜ್ಞಾನ ಉಪಪನ್ನವಲ್ಲವಾದ್ದರಿಂದ ಘಟಾಜ್ಞಾನವನ್ನು ಹೇಗೆ ದೃಷ್ಟಾಂತವನ್ನಾಗಿ ತೆಗೆದುಕೊಂಡಿರಿ ?

ಇದು ಆಕ್ಷೇಪದ ಆಂತರ್ಯ.

ಈ ವಿಧವಾದ ಆಕ್ಷೇಪ ಸರಿಯಲ್ಲ. ಅರ್ಥಾತ್ 'ಘಟಾಜ್ಞಾನ ಎನ್ನುವುದೇ ಇಲ್ಲ' ಎಂಬುದಾಗಿ ಹೇಳುವುದು ಸರಿಯಲ್ಲ.

ಕಾರಣ - ಘಟಾಜ್ಞಾನವನ್ನು ನೀವೂ ಸಹ ಅಂಗೀಕರಿಸಲೇಬೇಕು. ಹೇಗೆಂದರೆ - ಘಟವೂ ಸಹ ಘಟಾತ್ಮನಾ ತೋರದೇ ಯಾವಾಗ ಅನ್ಯಾತ್ಮನಾ ತೋರುತ್ತದೆ ಅಂತಹ ಸಂದರ್ಭದಲ್ಲಿ (ದೂರದಲ್ಲಿದ್ದ ಘಟವನ್ನು ಕಂಡು ''ಅಯಂ ಪಾಷಾಣಃ ಇದು ಪಾಷಾಣ'' ಎಂಬುದಾಗಿ ಭ್ರಮ ಬಂದಾಗ ಘಟವು ಪಾಷಾಣರೂಪದಿಂದ ತೋರಿದ ಸಂದರ್ಭದಲ್ಲಿ) ಇಂದ್ರಿಯಪ್ರವೃತ್ತಿ ಆಗಿದೆ ಎಂದು ಹೇಳುತ್ತೀರೋ ? ಇಂದ್ರಿಯಪ್ರವೃತ್ತಿ ಆಗಿಲ್ಲ ಎಂದು ಹೇಳುತ್ತೀರೋ ?

ಇಂದ್ರಿಯಪ್ರವೃತ್ತಿ ಆಗಿಲ್ಲ ಎಂದು ಹೇಳಲು ಬರುವುದಿಲ್ಲ. ಯಾಕೆಂದರೆ - ಇಂದ್ರಿಯಪ್ರವೃತ್ತಿಯೇ ಆಗದಿದ್ದರೆ (ಕಣ್ಣು ತೆರೆದು ಎದುರಿಗಿರುವ ವಸ್ತುವನ್ನೇ ನೋಡಿಲ್ಲ ಎಂದರೆ) ಧರ್ಮಿಜ್ಞಾನವೇ ಆಗಿಲ್ಲ ಎಂದಾಯಿತು. ಧರ್ಮಿಜ್ಞಾನವೇ ಆಗದಿದ್ದರೆ ಪ್ರಮಾ ಆಗಲೀ, ಭ್ರಮವಾಗಲೀ ಯಾವುದೂ ಬರದೇ

ಹೋಗಬೇಕಾಗುತ್ತದೆ. 'ಅಯಂ ಪಾಷಾಣಃ' ಎಂಬುದಾಗಿ ಈಗ ಬಂದಿರುವ ಭ್ರಮವೂ ಅನುಪಪನ್ನವಾಗಬೇಕಾಗುತ್ತದೆ.

ಆದ್ದರಿಂದ ಇಂದ್ರಿಯಪ್ರವೃತ್ತಿ ಆಗಿದೆ ಎಂದೇ ಹೇಳಬೇಕು. ಹಾಗಾದರೆ ಇಂದ್ರಿಯಪ್ರವೃತ್ತಿ ಆಗಿದ್ದರೂ (ಕಣ್ಣು ತೆರೆದು ಎದುರಿಗಿರುವ ವಸ್ತುವನ್ನು ನೋಡಿದ್ದರೂ) ಅದರಲ್ಲಿರುವ ಘಟತ್ವ ತೋರಿಲ್ಲ ಎಂದರೆ, ಘಟತ್ವಾಗ್ರಹಣಕ್ಕೆ ಏನು ನಿಮಿತ್ತ ? ಪ್ರಮಾಣವೈಕಲ್ಯವನ್ನು ಹೇಳಲು ಬರುವುದಿಲ್ಲ. ಕಣ್ಣು ತೆರೆದು ಘಟವನ್ನು ನೋಡಿದ್ದಾನೆ, ಇಂದ್ರಿಯಸನ್ನಿಕರ್ಷ ಆಗಿದೆ, ಆದ್ದರಿಂದ ಪ್ರಮಾಣವೈಕಲ್ಯ ಹೇಳಲು ಬರುವುದಿಲ್ಲ. ಹಾಗಾಗಿ ಭಾವರೂಪಅಜ್ಞಾನವನ್ನು ಬಿಟ್ಟು ಬೇರೆ ನಿಮಿತ್ತವನ್ನು ಹೇಳಲು ಬರುವುದಿಲ್ಲವಾದ್ದರಿಂದ ಘಟತ್ವಾಗ್ರಹಣಕ್ಕೆ ಅಜ್ಞಾನವೇ ನಿಮಿತ್ತ ಎಂದು ಹೇಳಬೇಕು. ಅರ್ಥಾತ್ ಅಲ್ಲಿ ಘಟಾಜ್ಞಾನವನ್ನು ನೀವೂ ಒಪ್ಪಲೇಬೇಕು.

ಒಂದುವೇಳೆ ಇಂದ್ರಿಯಪ್ರವೃತ್ತಿ ಆಗಿದ್ದರೂ ಅದರಲ್ಲಿರುವ ಘಟತ್ವ ತೋರದಿರುವುದಕ್ಕೆ ಅಜ್ಞಾನವನ್ನು ನಿಮಿತ್ತವನ್ನಾಗಿ ಒಪ್ಪದೇ ಹೋದರೆ (ಘಟಾಜ್ಞಾನವನ್ನು ಒಪ್ಪದಿದ್ದರೆ) ಶುಕ್ತ್ಯಜ್ಞಾನವೂ ಅನುಪಪನ್ನವಾಗಬೇಕಾಗುತ್ತದೆ.

ಅಲ್ಲಿಯೂ ಸಹ ಇಂದ್ರಿಯಪ್ರವೃತ್ತಿ ಆಗಿದೆ, ಕಣ್ಣು ತೆರೆದು ಎದುರಿಗಿರುವ ಶುಕ್ತಿಯನ್ನು ನೋಡಿದ್ದಾನೆ. ಆದರೂ ಅದರಲ್ಲಿರುವ ಶುಕ್ತಿತ್ವ ತೋರಿಲ್ಲ. ಶುಕ್ತಿತ್ವಾಗ್ರಹಣಕ್ಕೆ ಅಜ್ಞಾನ ಬಿಟ್ಟು ಬೇರೆ ನಿಮಿತ್ತ ಇಲ್ಲವಾದ್ದರಿಂದ ಶುಕ್ತ್ಯಜ್ಞಾನವೇ ನಿಮಿತ್ತ ಎಂದೇ ಹೇಳಬೇಕು. ಹೀಗಾಗಿ ಘಟತ್ವಾಗ್ರಹಣಕ್ಕೆ ನಿಮಿತ್ತವಾಗಿ ಘಟಾಜ್ಞಾನವನ್ನು ಒಪ್ಪದಿದ್ದರೆ, ಶುಕ್ತಿತ್ವಾಗ್ರಹಣಕ್ಕೆ ನಿಮಿತ್ತವಾಗಿ ಶುಕ್ತ್ಯಜ್ಞಾನವನ್ನೂ ಒಪ್ಪದೇ ಹೋಗಬೇಕಾಗುತ್ತದೆ.

ಶುಕ್ತ್ಯಜ್ಞಾನ ಒಪ್ಪದಿದ್ದರೆ ''ಇದಮಂಶಾವಚ್ಛಿನ್ನಚೈತನ್ಯಾವರಕಮಜ್ಞಾನಂ ಅರ್ಥಾತ್ಮನಾ ಜ್ಞಾನಾತ್ಮನಾ ಚ ಪರಿಣಮತೇ'' ಎಂದು ಅವರು ಹೇಳುವಂತೆ ಶುಕ್ತ್ಯಜ್ಞಾನದ ಪರಿಣಾಮರೂಪವಾದ ಭ್ರಮಜ್ಞಾನ ಅಥವಾ ಪ್ರಾತಿಭಾಸಿಕವಾದ ರಜತವೇ ಅನುಪಪನ್ನವಾಗಬೇಕಾಗುತ್ತದೆ ಎಂದು ಭಾವ.

ಆದ್ದರಿಂದ ಶುಕ್ತ್ಯಜ್ಞಾನವನ್ನು ಒಪ್ಪುವಂತೆ ಘಟಾಜ್ಞಾನವನ್ನೂ ಒಪ್ಪಲೇಬೇಕು. ಹಾಗಾಗಿ - ''**ಯತ್ ಅಜ್ಞಾನಂ ನ ತತ್ ವಿಷಯಾಶ್ರಿತಮ್**'' ಎಂಬ ವ್ಯಾಪ್ತಿಯಲ್ಲಿ ಘಟಾಜ್ಞಾನವನ್ನು ದೃಷ್ಟಾಂತವನ್ನಾಗಿ ಮಾಡಿದ್ದು ಉಪಪನ್ನವೇ ಆಗಿದೆ ಎಂದು ಅಭಿಪ್ರಾಯ.

**ಶ್ರೀವೇದೇಶತೀರ್ಥರ ಟಿಪ್ಪಣೀ ವಿಶೇಷವಿಚಾರ**

**ಅನ್ಯಥಾ ಶುಕ್ತಿಕಾಜ್ಞಾನಮಪಿ ನ ಸ್ಯಾತ್ । (ಟೀಕಾ)**

೧) ಯದ್ಯಪಿ ಪರರು ಶುಕ್ತಿವಿಷಯಕ ಅಜ್ಞಾನವನ್ನೂ ಸಹ ಒಪ್ಪುವುದಿಲ್ಲ. ಯಾಕೆ ? ಶುಕ್ತಿಯು ಜಡವಾಗಿದೆ, ಘಟತುಲ್ಯವಾಗಿದೆ. ಅಂದರೆ ಕೇವಲ ಜಡಾವರಕ ಅಜ್ಞಾನವನ್ನು ಪರರು ಒಪ್ಪುವುದಿಲ್ಲ. ಹೀಗಾಗಿ ಘಟವು ಜಡವಾದ್ದರಿಂದ ಘಟಾವರಕಾಜ್ಞಾನವನ್ನು ಒಪ್ಪುವುದಿಲ್ಲ. ಅದರಂತೆಯೇ ಶುಕ್ತಿಯೂ ಜಡವೇ ಆಗಿದ್ದರಿಂದ ಘಟತುಲ್ಯವಾದ ಕಾರಣ ಶುಕ್ತ್ಯಾವರಕಾಜ್ಞಾನ-ವನ್ನೂ ಒಪ್ಪುವುದಿಲ್ಲ ಪರರು. ಕಿಂತು ಶುಕ್ತ್ಯವಚ್ಛಿನ್ನಚೈತನ್ಯವಿಷಯಕವಾದ ಅಜ್ಞಾನವನ್ನೇ ಪರರು ಒಪ್ಪುವುದು. ಆದರೂ ಸಹ

''**ಶಾಸ್ತ್ರಾರ್ಥಂ ನ ಜಾನಾಮಿ**'' ಎಂಬ ಅನುಭವಬಲದಿಂದಾಗಿ ಬ್ರಹ್ಮ-ವಿಷಯಕಾಜ್ಞಾನವನ್ನು ಒಪ್ಪುವಂತೆ ''**ಶುಕ್ತಿಂ ನ ಜಾನಾಮಿ**'' ''**ಘಟಂ ನ ಜಾನಾಮಿ**'' ಎಂಬ ಅನುಭವಬಲದಿಂದ ಶುಕ್ತಿವಿಷಯಕವಾದ ಅಜ್ಞಾನವನ್ನು, ಘಟವಿಷಯಕವಾದ ಅಜ್ಞಾನವನ್ನು ಒಪ್ಪುವುದು ದುರ್ವಾರವಾಗಿದೆ. (ಶುಕ್ತ್ಯಜ್ಞಾನ -ಘಟಾಜ್ಞಾನಗಳನ್ನು ಒಪ್ಪಲೇಬೇಕು.)

''ಶುಕ್ತಿಯಾಗಲೀ ಘಟವಾಗಲೀ ಜಡವಾದ್ದರಿಂದ ಅದಕ್ಕೆ ಪ್ರಕಾಶದ ಪ್ರಾಪ್ತಿಯೇ ಇಲ್ಲ. ಹೀಗಾಗಿ ಪ್ರಾಪ್ತಪ್ರಕಾಶಪ್ರತಿಬಂಧಕತಯಾ ಶುಕ್ತ್ಯಜ್ಞಾನ - ಘಟಾಜ್ಞಾನಗಳನ್ನು ಒಪ್ಪುವುದರಿಂದ ಯಾವುದೇ ಪ್ರಯೋಜನವಿಲ್ಲ. ಆದ್ದರಿಂದ ಶುಕ್ತ್ಯಜ್ಞಾನ - ಘಟಾಜ್ಞಾನಗಳನ್ನು ಏಕೆ ಒಪ್ಪಬೇಕು ?'' ಎಂಬ ಆಕ್ಷೇಪ ಸರಿಯಲ್ಲ. ಯಾಕೆಂದರೆ ಶುಕ್ತ್ಯಜ್ಞಾನ - ಘಟಾಜ್ಞಾನಗಳು

''**ಶುಕ್ತಿಂ ನ ಜಾನಾಮಿ**'' ''**ಘಟಂ ನ ಜಾನಾಮಿ**''

ಎಂಬ ಅನುಭವರೂಪಪ್ರಮಾಣಸಿದ್ಧವಾಗಿದೆ. ಹಾಗಾಗಿ ಪ್ರಯೋಜನ ಇಲ್ಲ ಎಂಬ ಕಾರಣಕ್ಕೆ ಪ್ರಮಾಣಸಿದ್ಧವಾದದ್ದನ್ನು ತ್ಯಾಗ ಮಾಡಲು ಬರುವುದಿಲ್ಲ.

೨) ಕಣ್ಣು ತೆರೆದು ಶುಕ್ತಿಯನ್ನು ನೋಡಿದರೂ ಅದರಲ್ಲಿರುವ ಶುಕ್ತಿತ್ವದ ಗ್ರಹಣ ಆಗಿಲ್ಲ ಎನ್ನುವುದು ಸರಿ. ಆದರೆ ಆ ಶುಕ್ತಿತ್ವಾಗ್ರಹಣಕ್ಕೆ ಅಜ್ಞಾನವನ್ನೇ ನಿಮಿತ್ತವಾಗಿ ಒಪ್ಪಬೇಕು ಎಂದೇನಿಲ್ಲ. ಅಜ್ಞಾನವನ್ನು ಬಿಟ್ಟು ಬೇರೆ ದೋಷವನ್ನು ನಿಮಿತ್ತವಾಗಿ ಒಪ್ಪಬಹುದಲ್ಲ ? ಎಂಬ ಆಕ್ಷೇಪ ಸರಿಯಲ್ಲ. ಜ್ಞಾನಪ್ರತಿಬಂಧಕ-ಅಜ್ಞಾನ ಬಿಟ್ಟು ಬೇರೆ ದೋಷವನ್ನು ನೀವು ಅಂಗೀಕರಿಸಿಲ್ಲ.

ಒಂದುವೇಳೆ ಜ್ಞಾನಪ್ರತಿಬಂಧಕಅಜ್ಞಾನ ಬಿಟ್ಟು ಬೇರೆ ದೋಷವನ್ನು ಅಂಗೀಕರಿಸುವುದೇ ಆದರೆ, ಬ್ರಹ್ಮನ ವಿಷಯದಲ್ಲಿಯೂ ಸಹ ಬ್ರಹ್ಮಪ್ರಕಾಶ-ಪ್ರತಿಬಂಧಕವಾಗಿ ದೋಷವನ್ನು ಅಂಗೀಕರಿಸಿರಿ. ಬ್ರಹ್ಮಾವರಕವಾದ ಭಾವ-ರೂಪಅಜ್ಞಾನವನ್ನು ಏಕೆ ಅಂಗೀಕರಿಸುತ್ತೀರಿ ? ಅರ್ಥಾತ್ ದೋಷದಿಂದಲೇ ಬ್ರಹ್ಮಪ್ರಕಾಶಪ್ರತಿಬಂಧ ಸಾಧ್ಯವಾಗುವುದರಿಂದ ಬ್ರಹ್ಮಾಜ್ಞಾನವೂ ಅಸಿದ್ಧವಾಗ-ಬೇಕಾದ ಅತಿಪ್ರಸಂಗ ಬರುತ್ತದೆ.

ಆದ್ದರಿಂದ ಬ್ರಹ್ಮಾಜ್ಞಾನ ಒಪ್ಪುವಂತೆ ಘಟಾಜ್ಞಾನವನ್ನೂ ಒಪ್ಪಲೇಬೇಕು. ಹಾಗಾಗಿ-

**''ಯತ್ ಅಜ್ಞಾನಂ ನ ತತ್ ವಿಷಯಾಶ್ರಿತಮ್''**

ಎಂಬ ವ್ಯಾಪ್ತಿಯಲ್ಲಿ ಘಟಾಜ್ಞಾನವನ್ನು ದೃಷ್ಟಾಂತವನ್ನಾಗಿ ಮಾಡಿದ್ದು ಉಪಪನ್ನವೇ ಆಗಿದೆ ಎಂದು ಅಭಿಪ್ರಾಯ.

### ಅಜ್ಞಾನವು ಜ್ಞಾತೃಪುರುಷನಲ್ಲಿ ಆಶ್ರಿತವಾಗಿದೆ ಎಂದು ಸಮರ್ಥನೆ

**ಟೀಕಾ : ಯದಿ ತರ್ಹಿ ನ ವಿಷಯಾಶ್ರಿತಮಜ್ಞಾನಮ್, ಕ್ವ ತದಾಶ್ರಿತಮಿತ್ಯತ ಆಹ -**

**ಮೂಲ - ಪುಂಗತಮೇವ ಹಿ ತಮಃ ।**

**ಪುಂಗತಂ ಜ್ಞಾತೃಪುರುಷಗತಮ್ । ತಮ ಇವ ತಮೋಽಜ್ಞಾನಮ್ । ಜ್ಞಾನಪ್ರತಿಬಂಧಕತ್ವಾತ್ । ತಮೋಗ್ರಹಣಮುತ್ತರತ್ರೋಪ-ಯೋಕ್ಷ್ಯತೇ । ಪ್ರಮಾಣೇನ ಹಿ ವಿಷಯಾಶ್ರಿತತ್ವೇ ನಿರಾಕೃತೇ ಪರಿಶೇಷತೋ ಜ್ಞಾತೃಗತತ್ವಂ ಸಿದ್ಧ್ಯತಿ । ಹಿಶಬ್ದಸ್ತು 'ಅಹಮಜ್ಞಃ' 'ಘಟಮಹಂ ನ ಜಾನಾಮಿ' ಇತ್ಯಾದ್ಯನುಭವಮಪ್ಯತ್ರ ಪ್ರಮಾಣಂ ದರ್ಶಯತಿ ।**

**ಅನುವಾದ :-** ''ಬ್ರಹ್ಮಾಜ್ಞಾನಂ ನ ವಿಷಯಾಶ್ರಿತಮ್ ಅಜ್ಞಾನತ್ವಾತ್ ಘಟಾಜ್ಞಾನವತ್'' ಎಂಬುದಾಗಿ ಅನುಮಾನದಿಂದ ಅಜ್ಞಾನಕ್ಕೆ ವಿಷಯಾ-ಶ್ರಿತತ್ವವನ್ನು ನಿರಾಕರಿಸಿದಿರಿ. ಹಾಗಾದರೆ ಅಜ್ಞಾನವು ನಿರಾಶ್ರಯವಾಗಿ ಇರುವುದಕ್ಕಂತೂ ಸಾಧ್ಯವಿಲ್ಲ. ಯಾವುದಾದರೂ ಒಂದು ಆಶ್ರಯ ಬೇಕೇಬೇಕು. ಅಜ್ಞಾನಕ್ಕೆ ವಿಷಯವು ಆಶ್ರಯವಾಗುವುದಿಲ್ಲ ಎನ್ನುವುದಾದರೆ ಅಜ್ಞಾನವು ಎಲ್ಲಿ

ಆಶ್ರಿತವಾಗಿದೆ ? (ಅಜ್ಞಾನಕ್ಕೆ ಆಶ್ರಯ ಯಾವುದು ?) ಎಂಬುದಾಗಿ ಪ್ರಶ್ನೆ ಬಂದರೆ, ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

**ಮೂಲ :- ಪುಂಗತಮೇವ ಹಿ ತಮಃ।**

**ಮೂಲಾರ್ಥ :- ಅಜ್ಞಾನವು ಜ್ಞಾತೃಪುರುಷನಲ್ಲಿಯೇ ಆಶ್ರಿತವಾಗಿದೆ. ಅದು ಅನುಭವ(ಪ್ರಮಾಣ)ಸಿದ್ಧವಾಗಿದೆ.**

೧) ಮೂಲದಲ್ಲಿ 'ಪುಂಗತಮೇವ' ಎನ್ನುವುದಕ್ಕೆ ಅರ್ಥವೇನು ? ಯಾಕೆಂದರೆ, ಪುಂಶಬ್ದವು ಸಂಸಾರಿಜೀವ-ಮುಮುಕ್ಷುಜ್ಞೇಯಪರಬ್ರಹ್ಮ ಇಬ್ಬರಲ್ಲಿಯೂ ಸಾಧಾರಣವಾಗಿದ್ದರಿಂದ, ಪುಂಗತವಾಗಿದೆ ಎಂದರೆ ಸಂಸಾರಿಜೀವನಲ್ಲಿ ಆಶ್ರಿತವಾಗಿದೆ ಎಂದು ಅರ್ಥವೋ ? ಮುಮುಕ್ಷುಜ್ಞೇಯಪರಬ್ರಹ್ಮನಲ್ಲಿ ಆಶ್ರಿತವಾಗಿದೆ ಎಂದು ಅರ್ಥವೋ ? ಎಂದು ಸಂದೇಹ ಬೇಡ. ಕಾರಣ - ''ಪುಂಗತಂ ಜ್ಞಾತೃಪುರುಷಗತಮ್''

'ಅಜ್ಞತಾಽಖಿಲಸಂವೇತ್ತುಃ ಘಟತೇ ನ ಕುತಶ್ಚನ' ಎಂಬುದಾಗಿ ಅಜ್ಞಾನವು ಬ್ರಹ್ಮನಲ್ಲಿ ಆಶ್ರಿತವಾಗಿಲ್ಲ ಎನ್ನುವುದನ್ನು ಅನ್ಯತ್ರ ಸಮರ್ಥನೆ ಮಾಡಿರುವುದರಿಂದ, ಅಜ್ಞಾನವು ಪುಂಗತವಾಗಿದೆ ಎಂದರೆ ಜ್ಞಾತೃಪುರುಷನಲ್ಲಿ (ಸಂಸಾರಿ ಜೀವನಲ್ಲಿ) ಆಶ್ರಿತವಾಗಿದೆ ಎನ್ನುವುದೇ ಅಭಿಪ್ರೇತವಾಗಿದೆ ಎಂದು ಭಾವ.

೨) 'ಅಜ್ಞಾನವು ಪುಂಗತವಾಗಿದೆ' ಎಂದು ಹೇಳಬೇಕಿರುವುದರಿಂದ

''**ಪುಂಗತಮೇವ ಹಿ ಅಜ್ಞಾನಮ್**'' ಎಂಬುದಾಗಿ ಆಚಾರ್ಯರು ಹೇಳಬೇಕಿತ್ತು. ಅದನ್ನು ಬಿಟ್ಟು ''**ಪುಂಗತಮೇವ ಹಿ ತಮಃ**'' ಎಂಬುದಾಗಿ 'ತಮಸ್ಸು ಪುಂಗತವಾಗಿದೆ' ಎಂದು ಆಚಾರ್ಯರು ಹೇಳಿದ್ದು ಅಸಂಗತ ಅಲ್ಲವೇ ?

ಈ ಪ್ರಶ್ನೆಗೆ ಉತ್ತರ - 'ತಮ ಇವ ತಮೋಽಜ್ಞಾನಂ' ಎಂದು. ಅಂದರೆ :- ಇಲ್ಲಿ 'ತಮಃ' ಎಂಬುದಾಗಿ ತಮಃಶಬ್ದವನ್ನೇ ಬಳಸಿದ್ದರೂ ಆ ತಮಃಶಬ್ದದಿಂದ ಅಜ್ಞಾನವನ್ನೇ ತೆಗೆದುಕೊಳ್ಳುವುದು. ಅದು ಹೇಗೆ ? ತಮಸ್ಸು ಎಂದರೆ ಜ್ಞಾನಪ್ರತಿಬಂಧಕವಾದದ್ದು ಎಂದರ್ಥ. ಕತ್ತಲೆಯು ಹೇಗೆ ಜ್ಞಾನಪ್ರತಿಬಂಧಕ-ವಾಗಿದೆಯೋ ಹಾಗೆ ಅಜ್ಞಾನವೂ ಜ್ಞಾನಪ್ರತಿಬಂಧಕವೇ ಆಗಿದೆ. ಹಾಗಾಗಿ ಜ್ಞಾನಪ್ರತಿಬಂಧಕವಾದ ಕತ್ತಲೆಯನ್ನು ತಮಃಶಬ್ದದಿಂದ ತೆಗೆದುಕೊಳ್ಳುವಂತೆ, ಜ್ಞಾನಪ್ರತಿಬಂಧಕವಾದ ಅಜ್ಞಾನವನ್ನೂ ತಮಃಶಬ್ದದಿಂದ ತೆಗೆದುಕೊಳ್ಳಲು ಬರುತ್ತದೆಯಾದ್ದರಿಂದ ಪ್ರಕೃತದಲ್ಲಿ 'ತಮಃ' ಎಂದರೆ ಅಜ್ಞಾನ ಎಂದು ಅರ್ಥ.

೩) ಅಜ್ಞಾನವನ್ನೇ ತೆಗೆದುಕೊಳ್ಳುವ ಉದ್ದೇಶ ಇದ್ದದ್ದಾದರೆ 'ಅಜ್ಞಾನಂ' ಎಂದೇ ಹೇಳಬಹುದಾಗಿತ್ತು ? 'ತಮಃ' ಎಂಬುದಾಗಿ ತಮಃಶಬ್ದವನ್ನು ಏಕೆ ಪ್ರಯೋಗಿಸಿದರು ಆಚಾರ್ಯರು ? ಎಂದರೆ, ಮುಂದಿನ ವಾಕ್ಯಗಳಲ್ಲಿ ತಮಸ್ಸನ್ನು ದೃಷ್ಟಾಂತವನ್ನಾಗಿ ತೆಗೆದುಕೊಳ್ಳುವವರಿದ್ದಾರೆ. ಹಾಗಾಗಿ ಕತ್ತಲೆ-ಅಜ್ಞಾನ ಉಭಯಾನುಗತವಾದ ತಮಃಶಬ್ದವನ್ನು ಪ್ರಯೋಗಿಸಿದ್ದಾರೆ ಆಚಾರ್ಯರು ಎಂದು ಭಾವ.

೪) ''ಬ್ರಹ್ಮಾಜ್ಞಾನಂ ನ ಸ್ವವಿಷಯಾಶ್ರಿತಮ್ ಅಜ್ಞಾನತ್ವಾತ್ ಘಟಾಜ್ಞಾನವತ್'' ಎಂಬುದಾಗಿ ಹಿಂದೆ ಹೇಳಿದ ಅನುಮಾನಪ್ರಮಾಣದಿಂದ ಅಜ್ಞಾನಕ್ಕೆ ವಿಷಯಾಶ್ರಿತತ್ವವು ನಿರಾಕರಿಸಲ್ಪಡುತ್ತಿರಲು, ಪರಿಶೇಷದಿಂದ ಅಜ್ಞಾನಕ್ಕೆ ಜ್ಞಾತೃಗತತ್ವವೇ ಸಿದ್ಧಿಸುತ್ತದೆ. ಅಂದರೆ :- ಅಜ್ಞಾನವು ಜ್ಞಾನದಂತೆ ಸಾಶ್ರಯಪದಾರ್ಥವಾಗಿದೆ. ವಿಷಯನಾದ ಬ್ರಹ್ಮ ಅಥವಾ ಜ್ಞಾತೃವಾದ ಪುರುಷ ಹೀಗೆ ಅಜ್ಞಾನಕ್ಕೆ ಒಂದು ಆಶ್ರಯ ಬೇಕೇಬೇಕು ಎಂದರ್ಥ. ''ಬ್ರಹ್ಮಾಜ್ಞಾನಂ ನ ಸ್ವವಿಷಯಾಶ್ರಿತಂ'' ಎಂಬುದಾಗಿ ಅನುಮಾನದಿಂದ ಅಜ್ಞಾನಕ್ಕೆ ವಿಷಯ ಆಶ್ರಯವಾಗುವುದಿಲ್ಲ ಎಂದು ಸಾಧಿಸಿದರೆ, ಪರಿಶೇಷದಿಂದ ಜ್ಞಾತೃಪುರುಷನೇ ಆಶ್ರಯ ಎಂದು ಸಿದ್ಧವಾಗುತ್ತದೆ ಎಂದು ಭಾವ.

೫) ''ಪುಂಗತಮೇವ ಹಿ ತಮಃ'' ಎಂಬುದಾಗಿ ಆಚಾರ್ಯರು ಹಿಶಬ್ದವನ್ನು ಪ್ರಯೋಗಿಸಿದ್ದಾರೆ. ಆ ಹಿಶಬ್ದವು ಪ್ರಮಾಣಸೂಚಕವಾಗಿದೆ. ಅಂದರೆ - ಅಜ್ಞಾನವು ಜ್ಞಾತೃಪುರುಷಾಶ್ರಿತವಾಗಿದೆ ಎಂಬ ವಿಷಯದಲ್ಲಿ ಪರಿಶೇಷ ಪ್ರಮಾಣದಂತೆ 'ಅಹಮಜ್ಞಃ' 'ಘಟಮಹಂ ನ ಜಾನಾಮಿ' ಇತ್ಯಾದಿ ಅನುಭವಗಳನ್ನೂ ಪ್ರಮಾಣವನ್ನಾಗಿ ಸೂಚಿಸುತ್ತಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** 'ಜ್ಞಾನೇನ ನಿವರ್ತತೇ' ಎಂಬುದಾಗಿ ಮುಂದೆ ಜ್ಞಾನನಿವರ್ತ್ಯತ್ವವನ್ನು ಹೇಳುತ್ತಿದ್ದಾರೆ. ಆದರೆ ಅಜ್ಞಾನಕ್ಕೆ ಆಶ್ರಯ ಯಾವುದು? ಎಂದು ಚಿಂತೆ ಮಾಡುವಾಗ, ಜ್ಞಾನನಿವರ್ತ್ಯತ್ವವನ್ನು ಪ್ರತಿಪಾದಿಸುವುದು ಯುಕ್ತವಾಗುವುದಿಲ್ಲವಲ್ಲ ? ಎಂಬುದಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರ ಮುಂದಿನ ವಾಕ್ಯ ಯಾಕೆ ಹೊರಟಿದೆ ಎನ್ನುವುದನ್ನು ಟೀಕಾಕೃತ್ಪಾದರು ತಿಳಿಸುತ್ತಾರೆ (ಅವತಾರಿಕೆ ನೀಡುತ್ತಾರೆ) -

**ಟೀಕಾ : ಪ್ರಮಾಣಾಂತರಂ ಚಾಹ -**

**ಮೂಲ :- ಜ್ಞಾನೇನ ನಿವರ್ತತೇ ।**

**ತಮ ಇತಿ ವರ್ತತೇ । ಯಥಾ ಖಲು ತಮಃ ಪ್ರಕಾಶ-ಸಮಾನಾಶ್ರಯಮೇವ ತೇನ ನಿವರ್ತತೇ । ನ ವ್ಯಾಶ್ರಯಮ್ । ತಥಾಽಜ್ಞಾನಮಪಿ ಜ್ಞಾನೇನ ನಿವರ್ತತ ಇತಿ ಜ್ಞಾನಸಮಾನಾ-ಶ್ರಯಮೇವ ಭವಿತುಂ ಯುಕ್ತಮ್ । ಜ್ಞಾನಾಶ್ರಯಶ್ಚ ಜ್ಞಾತೈವೇತ್ಯಜ್ಞಾನಸ್ಯಾಪಿ ಸ ಏವಾಶ್ರಯೋ ಯುಕ್ತಃ ।**

**ಅನುವಾದ :-** ಅಜ್ಞಾನವು ಜ್ಞಾತೃಪುರುಷನಲ್ಲಿ ಆಶ್ರಿತವಾಗಿದೆ ಎಂಬ ವಿಷಯದಲ್ಲಿ ಪರಿಶೇಷ ಹಾಗೂ ಅನುಭವಪ್ರಮಾಣಗಳನ್ನು ಈವರೆಗೆ ಉಲ್ಲೇಖಿಸಿ, ಪ್ರಕೃತ ಮತ್ತೊಂದು ಪ್ರಮಾಣವನ್ನೂ ಹೇಳುತ್ತಾರೆ -

('ಅಜ್ಞಾನವು ಜ್ಞಾತೃಪುರುಷಾಶ್ರಿತವಾಗಿದೆ' ಎನ್ನುವುದನ್ನು ಮತ್ತೊಂದು ಪ್ರಮಾಣದಿಂದಲೂ ಸಮರ್ಥಿಸುತ್ತಾರೆ -)

ಮೂಲ :- ಜ್ಞಾನೇನ ನಿವರ್ತತೇ ।

**ಮೂಲಾರ್ಥ :-** ಅಜ್ಞಾನವು ಜ್ಞಾನದಿಂದ ನಿವರ್ತ್ಯವಾಗುತ್ತದೆಯಾದ್ದರಿಂದಲೂ (ಅಜ್ಞಾನವು ಜ್ಞಾನಕ್ಕೆ ಸಮಾನಾಶ್ರಯವಾಗಬೇಕಾದ್ದರಿಂದ) ಅಜ್ಞಾನವು ಜ್ಞಾತೃಪುರುಷ-ನಲ್ಲಿ ಆಶ್ರಿತವಾಗಿದೆ ಎಂದು ಸಿದ್ಧವಾಗುತ್ತದೆ.

ಮೂಲದಲ್ಲಿ 'ಜ್ಞಾನದಿಂದ ನಿವೃತ್ತವಾಗುತ್ತದೆ' ಎಂದಿದೆ. ಆದರೆ ಯಾವುದು ನಿವೃತ್ತವಾಗುತ್ತದೆ ಎನ್ನುವುದು (ಕರ್ತೃವಾಚಕಶಬ್ದವು) ಇಲ್ಲ. ಅದಕ್ಕಾಗಿ 'ಪುಂಗತಮೇವ ಹಿ ತಮಃ' ಎಂಬ ಹಿಂದಿನ ವಾಕ್ಯದಲ್ಲಿನ 'ತಮಃ' ಎಂಬ ಶಬ್ದವನ್ನು ಅನುವರ್ತನ ಮಾಡಿಕೊಳ್ಳಬೇಕು. 'ತಮಃ ಜ್ಞಾನೇನ ನಿವರ್ತತೇ' ಎಂದು ಅನ್ವಯ ಮಾಡಿಕೊಳ್ಳಬೇಕು.

ಯಾವ ರೀತಿಯಾಗಿ [೧]ಪ್ರಕಾಶಸಮಾನಾಶ್ರಯವಾದ ಕತ್ತಲೆಯು ಮಾತ್ರವೇ

೧ ಯಾವ ಪ್ರದೇಶದಲ್ಲಿ ಕತ್ತಲೆಯಿದೆ ಅದೇ ಪ್ರದೇಶದಲ್ಲಿ ಬೆಳಕು ಬಂದಾಗ ಅಂತಹ ಸಮಾನಾಧಿಕರಣವಾದ ಬೆಳಕಿನಿಂದ ಕತ್ತಲೆ ನಿವಾರಣೆಯಾಗುತ್ತದೆ. ಹೊರತು ಯಾವುದೋ ಒಂದು ಪ್ರದೇಶದಲ್ಲಿ ಕತ್ತಲೆಯಿದ್ದು ಮತ್ತಾವುದೋ ಪ್ರದೇಶದಲ್ಲಿ ಬೆಳಕು ಇದ್ದರೆ ಅಂತಹ ಭಿನ್ನಾಧಿಕರಣವಾದ ಬೆಳಕಿನಿಂದ ಕತ್ತಲೆಯು ನಿವಾರಣೆಯಾಗುವುದಿಲ್ಲ. ಹೀಗಾಗಿ ಕತ್ತಲೆಗೆ ಸಮಾನಾಧಿಕರಣವಾದ ಬೆಳಕು ಮಾತ್ರವೇ ಕತ್ತಲೆನಿವಾರಕವಾಗುತ್ತದೆ ಎಂದು ಭಾವ.

ಪ್ರಕಾಶದಿಂದ ನಿವೃತ್ತವಾಗುತ್ತದೆ, ಹೊರತು ವ್ಯಾಶ್ರಯವಾದ ಭಿನ್ನಾಧಿಕರಣವಾದ ಕತ್ತಲೆಯು ಪ್ರಕಾಶದಿಂದ ನಿವೃತ್ತವಾಗುವುದಿಲ್ಲ. ಅದೇ ರೀತಿಯಾಗಿ ಅಜ್ಞಾನವೂ ಸಹ ಜ್ಞಾನದಿಂದ ನಿವೃತ್ತವಾಗುತ್ತದೆ ಎಂದರೆ ಜ್ಞಾನಸಮಾನಾ-[೧]ಶ್ರಯವೇ ಆಗುವುದು ಯುಕ್ತ.

ಹಾಗಾದರೆ ಈ ವಿಷಯದಲ್ಲಿ ಇಷ್ಟು ಅನುಮಾನ ಮಾಡಿದಂತಾಗುತ್ತದೆ -

**ಅಜ್ಞಾನಂ ಜ್ಞಾನಸಮಾನಾಶ್ರಯಂ ಜ್ಞಾನನಿವರ್ತ್ಯತ್ವಾತ್ । ಯತ್ ಯೇನ ನಿವರ್ತತೇ ತತ್ ತತ್ಸಮಾನಾಶ್ರಯಂ, ಯಥಾ ತಮಃ ಪ್ರಕಾಶೇನ ।**

ಅಜ್ಞಾನವು ಜ್ಞಾನಸಮಾನಾಶ್ರಯವಾಗಿದೆ ಜ್ಞಾನನಿವರ್ತ್ಯವಾದ್ದರಿಂದ. ಯಾವುದು ಯಾವುದರಿಂದ ನಿವರ್ತ್ಯವಾಗುತ್ತದೆ ಅದು ಅದಕ್ಕೆ ಸಮಾನಾಶ್ರಯವಾಗಿರುತ್ತದೆ ಎಂದು ಸಾಮಾನ್ಯವ್ಯಾಪ್ತಿ. ಉದಾ- ಕತ್ತಲೆಯು ಬೆಳಕಿನಿಂದ ನಿವರ್ತ್ಯವಾಗುವ ಕಾರಣ ಬೆಳಕಿಗೆ ಸಮಾನಾಶ್ರಯವಾಗಿದೆ. ಪ್ರಕೃತ ಅಜ್ಞಾನವೂ ಜ್ಞಾನದಿಂದ ನಿವರ್ತ್ಯವಾಗುವ ಕಾರಣ ಜ್ಞಾನಕ್ಕೆ ಸಮಾನಾಶ್ರಯವಾಗಿದೆ.

ಅಜ್ಞಾನವು ಜ್ಞಾನಸಮಾನಾಶ್ರಯವಾಗಬೇಕು ಎಂದರೆ, ಜ್ಞಾನಕ್ಕೆ ಆಶ್ರಯ ಜ್ಞಾತೃವೇ ಆಗಿದ್ದಾನೆಯಾದ್ದರಿಂದ ಅಜ್ಞಾನಕ್ಕೂ ಜ್ಞಾತೃವೇ ಆಶ್ರಯನಾಗಬೇಕು ಎಂದರ್ಥ. ಹೀಗೆ ಜ್ಞಾನನಿವರ್ತ್ಯತ್ವ ಯುಕ್ತಿಯಿಂದಲೂ ಸಹ ಅಜ್ಞಾನಕ್ಕೆ ಜ್ಞಾತೃಪುರುಷನೇ ಆಶ್ರಯನಾಗಿದ್ದಾನೆ (ಅಜ್ಞಾನವು ಜ್ಞಾತೃಪುರುಷನಲ್ಲಿ ಆಶ್ರಿತವಾಗಿದೆ) ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** ಪರಿಶೇಷಪ್ರಮಾಣದಿಂದ, 'ಅಹಮಜ್ಞಃ' ಇತ್ಯಾದಿ ಅನುಭವಗಳಿಂದ, ಜ್ಞಾನನಿವರ್ತ್ಯತ್ವಾನುಮಾನದಿಂದ ಅಜ್ಞಾನವು ಜ್ಞಾತೃಪುರುಷನಲ್ಲಿ ಆಶ್ರಿತವಾಗಿದೆ ಎಂದು ಸಮರ್ಥಿಸಿದ ನಂತರ ''ಅಜ್ಞಾನವು ವಿಷಯಾಶ್ರಿತವಾಗಿದೆ ಎಂಬ ವಿಷಯದಲ್ಲಿಯೂ ಪ್ರಮಾಣ ಇರುವುದರಿಂದ ಅಜ್ಞಾನವು ವಿಷಯಾಶ್ರಿತ ಆಗುವುದೇ ಉಚಿತ'' ಎಂಬುದಾಗಿ ಶಂಕಿಸಿಕೊಂಡು ಅಜ್ಞಾನಕ್ಕೆ ವಿಷಯಾಶ್ರಿತತ್ವವನ್ನು ನಿರಾಕರಿಸುತ್ತಾರೆ -

---

೧ ಯಾವ ಪುರುಷನಲ್ಲಿ ಅಜ್ಞಾನವಿದೆ ಅವನಿಗೆ ಜ್ಞಾನ ಉಂಟಾದಾಗ ಅಂತಹ ಸಮಾನಾಧಿಕರಣವಾದ ಜ್ಞಾನದಿಂದ ಅಜ್ಞಾನದ ನಿವಾರಣೆಯಾಗುತ್ತದೆ.ಹೊರತು ಯಾವುದೋ ಪುರುಷನಲ್ಲಿರುವ ಅಜ್ಞಾನವು ಯಾವುದೋ ಪುರುಷನ ಜ್ಞಾನದಿಂದ ನಿವಾರಣೆಯಾಗುವುದಿಲ್ಲ. (ಭಿನ್ನಾಧಿಕರಣವಾದ ಜ್ಞಾನದಿಂದ ಅಜ್ಞಾನದ ನಿವೃತ್ತಿಯಾಗುವುದಿಲ್ಲ.) ಹಾಗಾಗಿ ಅಜ್ಞಾನಕ್ಕೆ ಸಮಾನಾಧಿಕರಣವಾದ ಜ್ಞಾನವು ಮಾತ್ರವೇ ಅಜ್ಞಾನನಿವರ್ತಕವಾಗುತ್ತದೆ ಎಂದು ಭಾವ.

### 'ಅಜ್ಞಾನವು ವಿಷಯಾಶ್ರಿತವಾಗಿದೆ' ಎಂಬ ವಿಷಯದಲ್ಲಿಯೂ ಪ್ರಮಾಣ ಇದೆಯೆಂದು ಶಂಕೆ, ಅದರ ನಿರಾಕರಣೆ

**ಟೀಕಾ :** ನನು ಯಥಾ ತಮೋ ವಿಷಯಸಂಬದ್ಧಮೇವ ಸತ್ ಜ್ಞಾನಪ್ರತಿಬಂಧಕಮುಪಲಭ್ಯತೇ । ಪ್ರಕಾಶಸ್ಥೇನಾಂಧಕಾರಸ್ಥಿತಘಟಸ್ಯಾನುಪಲಭ್ಯಮಾನತ್ವಾತ್ । ಅಂಧಕಾರಸ್ಥೇನಾಪಿ ಪ್ರಕಾಶಸ್ಥಿತಸ್ಯೋಪಲಬ್ಧೇಃ । ತಥಾ ಜ್ಞಾನಪ್ರತಿಬಂಧಕೇನ ಅಜ್ಞಾನೇನಾಪಿ ವಿಷಯಾಶ್ರಿತೇನ ಭವಿತುಂ ಯುಕ್ತಮಿತಿ ವಿಷಯಾಶ್ರಿತತ್ವೇಽಪ್ಯಜ್ಞಾನಸ್ಯ ಪ್ರಮಾಣಮಸ್ತಿ ।

ನ ಚೈವಮಚೇತನಾಶ್ರಯಾಜ್ಞಾನಮಂಗೀಕುರ್ವತೋ ಮಾಯಾವಾದಿನೋಽಪಸಿದ್ಧಾಂತಾಪತ್ತಿಃ । ಶುಕ್ತ್ಯಾದ್ಯವಚ್ಛಿನ್ನಚೈತನ್ಯಾಶ್ರಯತೋರರೀಕರಣಾತ್ ।

ಅವಶ್ಯಂ ಚೈತದೇವಮ್ । ಶುಕ್ತ್ಯಾದ್ಯವಚ್ಛಿನ್ನಚೈತನ್ಯಾಶ್ರಯಂ ಖಲ್ವಜ್ಞಾನಂ ತದ್ರೂಪಮಾಚ್ಛಾದ್ಯ ರಜತಾದಿರೂಪಾಂತರೋಪಾದಾನಂ ಭವಿತುಂ ಯುಕ್ತಮ್।

**ಅನುವಾದ :-** 'ಅಜ್ಞಾನವು ಜ್ಞಾತೃಪುರುಷಾಶ್ರಿತವಾಗಿದೆ' ಎಂಬ ವಿಷಯದಲ್ಲಿ ಪ್ರಮಾಣ ಹೇಗಿದೆಯೋ ಅದರಂತೆ 'ಅಜ್ಞಾನವು ವಿಷಯಾಶ್ರಿತವಾಗಿದೆ' ಎಂಬ ವಿಷಯದಲ್ಲಿಯೂ ಪ್ರಮಾಣ ಇದೆ. ಹೇಗೆಂದರೆ -

ತಮಸ್ಸು ಕತ್ತಲೆಯು ಜ್ಞಾನಪ್ರತಿಬಂಧಕವಾಗಿದೆ. ಹೇಗೆ ಜ್ಞಾನಪ್ರತಿಬಂಧಕ ? ಪುರುಷಸಂಬದ್ಧವಾಗಿ ಜ್ಞಾನಪ್ರತಿಬಂಧಕವಾಗಿದೆಯೋ ? ವಿಷಯಸಂಬದ್ಧವಾಗಿ ಜ್ಞಾನಪ್ರತಿಬಂಧಕವಾಗಿದೆಯೋ ?

ಕತ್ತಲೆಯು ಪುರುಷಸಂಬದ್ಧವಾಗಿ ಜ್ಞಾನಪ್ರತಿಬಂಧಕ ಎನ್ನುವುದಾದರೆ, ದೇವದತ್ತನು ಕತ್ತಲೆಯಲ್ಲಿದ್ದಾಗ (ಘಟವು ಬೆಳಕಿನಲ್ಲಿದ್ದಾಗ) ಕತ್ತಲೆಯು ಪುರುಷಸಂಬದ್ಧವಾದ್ದರಿಂದ ಘಟದ ಜ್ಞಾನ ಆಗಬಾರದು. ಆದರೆ ದೇವದತ್ತನು ಕತ್ತಲೆಯಲ್ಲಿದ್ದರೂ (ಘಟವು ಬೆಳಕಿನಲ್ಲಿರುವ ಕಾರಣ) ಘಟದ ಜ್ಞಾನವಾಗುತ್ತದೆಯಾದ್ದರಿಂದ ಕತ್ತಲೆಯು ಪುರುಷಸಂಬದ್ಧವಾಗಿ ಜ್ಞಾನಪ್ರತಿಬಂಧಕವಲ್ಲ ಎಂದು ತಿಳಿಯುತ್ತದೆ.

ನಾವು ಕತ್ತಲೆಯಲ್ಲಿದ್ದು ಘಟವು ಬೆಳಕಿನಲ್ಲಿದ್ದರೆ ಘಟದ ಜ್ಞಾನ ಆಗುತ್ತದೆಯೋ? ಇಲ್ಲವೋ ? ಘಟದ ಜ್ಞಾನ ಆಗುತ್ತದೆ. ಇನ್ನು ನಾವು ಬೆಳಕಿನಲ್ಲಿದ್ದು ಘಟವು ಕತ್ತಲೆಯಲ್ಲಿದ್ದರೆ ಘಟದ ಜ್ಞಾನ ಆಗುತ್ತದೆಯೋ ? ಇಲ್ಲವೋ ? ಘಟದ ಜ್ಞಾನ ಆಗುವುದಿಲ್ಲ. ಹಾಗಾದರೆ ಇದರಿಂದ ತಿಳಿಯುವುದೇನು ? ಕತ್ತಲೆಯು ಪುರುಷಸಂಬದ್ಧವಾದಾಗ ಜ್ಞಾನಪ್ರತಿಬಂಧಕವಾಗುವುದಿಲ್ಲ. ಕಿಂತು ಕತ್ತಲೆಯು ವಿಷಯಸಂಬದ್ಧವಾದಾಗ ಮಾತ್ರ ಜ್ಞಾನಪ್ರತಿಬಂಧಕವಾಗುತ್ತದೆ.

ಅಂದಮೇಲೆ ಯಾವ ರೀತಿಯಾಗಿ ಕತ್ತಲೆಯು ವಿಷಯಸಂಬದ್ಧವಾಗಿಯೇ ಜ್ಞಾನಪ್ರತಿಬಂಧಕವಾಗುತ್ತದೆ ಅದೇ ರೀತಿಯಾಗಿ ಅಜ್ಞಾನವೂ ಸಹ ವಿಷಯಾಶ್ರಿತವಾಗಿಯೇ ಜ್ಞಾನಪ್ರತಿಬಂಧಕ ಆಗುವುದು ಯುಕ್ತ. ಇಲ್ಲಿ ಇಷ್ಟು ಅನುಮಾನ ಮಾಡಿದಂತಾಗುತ್ತದೆ -

**ಅಜ್ಞಾನಂ ವಿಷಯಾಶ್ರಿತಂ ಜ್ಞಾನಪ್ರತಿಬಂಧಕತ್ವಾತ್ ತಮೋವತ್ ।**

(ಜ್ಞಾನಪ್ರತಿಬಂಧಕವಾದ್ದರಿಂದ ಕತ್ತಲೆಯು ವಿಷಯಾಶ್ರಿತವಾಗಿರುವಂತೆ ಅಜ್ಞಾನವೂ ಜ್ಞಾನಪ್ರತಿಬಂಧಕವಾದ್ದರಿಂದ ವಿಷಯಾಶ್ರಿತವಾಗಿದೆ.)

ಹೀಗೆ ಅಜ್ಞಾನವು ವಿಷಯಾಶ್ರಿತವಾಗಿದೆ ಎಂಬ ವಿಷಯದಲ್ಲಿಯೂ ಅನುಮಾನಪ್ರಮಾಣ ಇದೆ ಎಂದು ಭಾವ.

ಹೌದು, ಅಜ್ಞಾನವು ವಿಷಯಾಶ್ರಿತವಾಗಿದೆ ಎಂದು ಹೇಳಿದರೆ ನಿಮಗೆ ಅಪಸಿದ್ಧಾಂತ (ಸಿದ್ಧಾಂತವಿರೋಧ) ಬರುವುದಿಲ್ಲವೇ ? ಯಾಕೆಂದರೆ - ನಿಮ್ಮ ಸಿದ್ಧಾಂತದಲ್ಲಿ ಅಜ್ಞಾನವು ವಿಷಯಾಶ್ರಿತವಲ್ಲ. ಕಿಂತು ಚೈತನ್ಯಾಶ್ರಿತವಾಗಿದೆ ಎಂದು ಅಂಗೀಕರಿಸಿದ್ದಾರೆ :-

**ಆಶ್ರಯತ್ವವಿಷಯತ್ವಭಾಗಿನೀ ನಿರ್ವಿಶೇಷಚಿತಿರೇವ ಕೇವಲಾ ।**
**ಪೂರ್ವಸಿದ್ಧತಮಸೋ ಹಿ ಪಶ್ಚಿಮೋ ನಾಶ್ರಯೋ ಭವತಿ ನಾಪಿ ಗೋಚರಃ ॥**

ಜಡವಾದ ಜಗತ್ತು ಆ ಅವಿದ್ಯೆಯ ಕಾರ್ಯವಾದ್ದರಿಂದ (ಅವಿದ್ಯಾ-ಕಲ್ಪಿತವಾದ್ದರಿಂದ) ಅವಿದ್ಯಾನಂತರಭಾವಿಯಾಗಿದೆ. (ಅನಾದಿಕಾಲದಿಂದ ಇದ್ದದ್ದು ಅವಿದ್ಯೆ, ಪ್ರಪಂಚವು ಅವಿದ್ಯಾಕಲ್ಪಿತವಾಗಿ ಹುಟ್ಟುವಂತಹದ್ದಾಗಿದೆ.) ಹೀಗಾಗಿ ಮೊದಲಿನಿಂದ ಇರುವ ಅವಿದ್ಯೆಗೆ ಅನಂತರ ಬರುವ ಜಡಪ್ರಪಂಚವು ಆಶ್ರಯವಾಗಲು/ವಿಷಯವಾಗಲು ಸಾಧ್ಯವಿಲ್ಲ. ಆದ್ದರಿಂದ ಕೇವಲ

ನಿರ್ವಿಶೇಷಚಿತ್ ಮಾತ್ರ ಅವಿದ್ಯೆಗೆ ಆಶ್ರಯವಾಗುವುದಾಗಲೀ ವಿಷಯವಾಗುವುದಾಗಲೀ ಆಗುತ್ತದೆ.

ಹೀಗೆ ಅವಿದ್ಯೆ ಚೈತನ್ಯಾಶ್ರಿತ ಎಂದು ನಿಮ್ಮ ಸಿದ್ಧಾಂತದಲ್ಲಿ ಅಂಗೀಕರಿಸಿದ್ದರಿಂದ ಪ್ರಕೃತ ಅವಿದ್ಯೆ ವಿಷಯಾಶ್ರಿತ ಎಂದು ಹೇಳಿದರೆ ಸಿದ್ಧಾಂತವಿರೋಧ ಅಪಸಿದ್ಧಾಂತ ಬರುತ್ತದೆ ಅಲ್ಲವೇ ?

ಈ ವಿಧವಾದ ಶಂಕೆ ಸರಿಯಲ್ಲ. ಕಾರಣ- ಅವಿದ್ಯೆಯು ಶುಕ್ತಿಯಲ್ಲಿ ಆಶ್ರಿತವಾಗಿದೆ ಎಂದರೆ ಶುಕ್ತ್ಯವಚ್ಛಿನ್ನಚೈತನ್ಯಾಶ್ರಿತವಾಗಿದೆ ಎಂದು ನಮ್ಮ ಅಭಿಪ್ರಾಯ.

**''ಚೈತನ್ಯಂ ಹ್ಯಪರಿಚ್ಛಿನ್ನಂ ಸತ್ ಸರ್ವಪದಾರ್ಥಾಧಿಷ್ಠಾನತಯಾ ವರ್ತತೇ''**

''ಚೈತನ್ಯವು ಅಪರಿಚ್ಛಿನ್ನವಾಗಿ (ವ್ಯಾಪ್ತವಾಗಿ) ಇದ್ದುಗೊಂಡು ಎಲ್ಲ ಪದಾರ್ಥಗಳಿಗೆ ಅಧಿಷ್ಠಾನವಾಗಿ ಇರುತ್ತದೆ''

ಎಂದು ಅಂಗೀಕರಿಸಿದ್ದರಿಂದ, ಶುಕ್ತ್ಯವಚ್ಛಿನ್ನವಾಗಿ ಶುಕ್ತಿಯಲ್ಲಿ ಆಕ್ರಾಂತವಾಗಿಯೂ ಚೈತನ್ಯ ಇರುವುದರಿಂದ, ಅವಿದ್ಯೆಯು ಶುಕ್ತಿಯಲ್ಲಿ ಆಶ್ರಿತವಾಗಿದೆ ಎಂದರೆ ಕೇವಲ ಜಡವಾದ ಶುಕ್ತಿಯಲ್ಲಿ ಆಶ್ರಿತ ಎಂದಲ್ಲ. ಕಿಂತು ಶುಕ್ತ್ಯವಚ್ಛಿನ್ನಚೈತನ್ಯದಲ್ಲಿ ಆಶ್ರಿತವಾಗಿದೆ ಎಂದೇ ಅರ್ಥ. ಹೀಗೆ ಅವಿದ್ಯೆಗೆ ಚೈತನ್ಯಾಶ್ರಿತತ್ವವನ್ನೇ ಕೊನೆಗೆ ಅಂಗೀಕರಿಸುವುದರಿಂದ ಅಪಸಿದ್ಧಾಂತ ಸಿದ್ಧಾಂತವಿರೋಧ ಬರುವುದಿಲ್ಲ ಎಂದು ಭಾವ.

'ಅಜ್ಞಾನವು ಶುಕ್ತ್ಯಾದ್ಯವಚ್ಛಿನ್ನಚೈತನ್ಯಾಶ್ರಿತವಾಗಿದೆ' ಎಂಬ ಅಂಶವನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. ಯಾಕೆಂದರೆ :- ಶುಕ್ತ್ಯವಚ್ಛಿನ್ನವಾದ ಚೈತನ್ಯದಲ್ಲಿ ಅಜ್ಞಾನವು ಇರುತ್ತದೆ. ಆ ಅಜ್ಞಾನವು ಏನು ಮಾಡುತ್ತದೆ ಎಂದರೆ, ಶುಕ್ತಿಯಲ್ಲಿರುವ ಶುಕ್ತಿತ್ವ ಎಂಬ ರೂಪವನ್ನು ಆಚ್ಛಾದನ ಮಾಡಿ, ರಜತ ಎಂಬ ಇನ್ನೊಂದು ರೂಪಕ್ಕೆ ಅದು ಉಪಾದಾನಕಾರಣವಾಗುತ್ತದೆ (ರಜತರೂಪದಲ್ಲಿ ಪರಿಣಾಮ ಹೊಂದುತ್ತದೆ). ಇದು ಯಾವಾಗ ಕೂಡುತ್ತದೆ ? ಅಜ್ಞಾನ ಮತ್ತು ಶುಕ್ತಿತ್ವ ಎರಡೂ ಒಂದೇಕಡೆ ಇರುವುದಾದರೆ, ಶುಕ್ತಿಯಲ್ಲಿರುವ ಚೈತನ್ಯವು ಶುಕ್ತಿಯಲ್ಲಿರುವ ಶುಕ್ತಿತ್ವ ಎಂಬ ಅದರ ಸಹಜರೂಪವನ್ನು ಆಚ್ಛಾದನ ಮಾಡಿ ರಜತರೂಪಕ್ಕೆ ಉಪಾದಾನಕಾರಣವಾಗಲು ಸಾಧ್ಯ. ಎರಡೂ ಬೇರೆ ಬೇರೆ ಕಡೆ ಇರುವುದಾದರೆ ಇದು ಸಾಧ್ಯವಾಗುವುದಿಲ್ಲ. ಆಚ್ಛಾದನೆ ಮಾಡಬೇಕಾದರೆ

ಆಚ್ಛಾದ್ಯವಾದದ್ದು ಹಾಗೂ ಆಚ್ಛೇದಕವಾದದ್ದು ಎರಡೂ ಒಂದೇಕಡೆ ಇರಬೇಕೆಂದು ನಿಯಮವಿರುವುದರಿಂದ (ಆಚ್ಛೇದ್ಯ-ಆಚ್ಛಾದಕಗಳಲ್ಲಿ ಸಾಮಾನಾಧಿಕರಣ್ಯನಿಯಮ ಇರುವುದರಿಂದ) ಶುಕ್ತಿತ್ವ ಒಂದುಕಡೆ, ಚೈತನ್ಯ ಮತ್ತೊಂದುಕಡೆ ಎಂದಾದರೆ ಶುಕ್ತಿತ್ವಕ್ಕೆ ಚೈತನ್ಯವು ಆಚ್ಛಾದಕವಾಗಲು ಸಾಧ್ಯವಿಲ್ಲ. ಪ್ರಕೃತ ಚೈತನ್ಯವು ಶುಕ್ತಿತ್ವಕ್ಕೆ ಆಚ್ಛಾದಕವಾಗಿ ರಜತರೂಪಕ್ಕೆ ಉಪಾದಾನಕಾರಣ ಆಗುತ್ತದೆ ಎಂದಮೇಲೆ ಅಜ್ಞಾನವು ಶುಕ್ತ್ಯವಚ್ಛಿನ್ನಚೈತನ್ಯ-ದಲ್ಲಿಯೇ ಆಶ್ರಿತವಾಗಿದೆ ಎಂಬುದಾಗಿ ಅವಶ್ಯವಾಗಿ ಒಪ್ಪಲೇಬೇಕು ಎಂದು ಭಾವ.

**ಟೀಕಾ: ಏವಂ ತರ್ಹಿ ಜ್ಞಾನಸ್ಯಾಪಿ ಪ್ರಕಾಶವತ್ ವಿಷಯಸನ್ನಿಕರ್ಷೇಣೈವಾ-ಜ್ಞಾನನಿವರ್ತಕತ್ವಪ್ರಸಂಗ ಇತಿ ಚೇತ್ । ನೇದಮನಿಷ್ಟಮ್ । ಪ್ರಕಾಶಸ್ವಭಾವಂ ಸಾವಯವಮಂತಃಕರಣಮದೃಷ್ಟೇಂದ್ರಿಯಾದಿ-ಸಹಕೃತಂ ಧ್ರುವಾದಿವಿಷಯಪರ್ಯಂತಂ ದೀರ್ಘ ಪ್ರಭಾಕಾರೇಣ ಪರಿಣಮತ ಇತ್ಯಂಗೀಕಾರಾತ್ । ಅತ ಏವ ನ ಹ್ಯಜ್ಞಾನಸ್ಯ ಘಟಾಶ್ರಯತ್ವಮಿತಿ ದೃಷ್ಟಾಂತೋಽಪಿ ಪ್ರತ್ಯೂಢಃ । ಘಟಾಜ್ಞಾನ-ಸ್ಯಾಪಿ ತದಾಶ್ರಯತ್ವಪ್ರಸಂಗಶ್ಚೇತಿ ।**

**ಅನುವಾದ :-** ''ಯಾವ ರೀತಿಯಾಗಿ ಕತ್ತಲೆಯು ವಿಷಯಸಂಬದ್ಧವಾಗಿಯೇ ಜ್ಞಾನಪ್ರತಿಬಂಧಕವಾಗುತ್ತದೆಯೋ ಅದೇ ರೀತಿಯಾಗಿ ಅಜ್ಞಾನವೂ ಸಹ ವಿಷಯಾಶ್ರಿತವಾಗಿಯೇ ಜ್ಞಾನಪ್ರತಿಬಂಧಕ'' ಎಂದು ಹೇಳುವುದಾದರೆ, ವಸ್ತುವಿನ ಮೇಲೆ ಕತ್ತಲೆ ಇದ್ದು ಅಲ್ಲಿಯೇ ಬೆಳಕು ಬಂದಾಗ ಮಾತ್ರ ಬೆಳಕು ಕತ್ತಲೆಗೆ ನಿವರ್ತಕವಾಗುತ್ತದೆಯಾದ್ದರಿಂದ, ''ಯಾವ ರೀತಿಯಾಗಿ ಪ್ರಕಾಶವು ವಿಷಯಸಂಬದ್ಧವಾಗಿಯೇ ತಮೋನಿವರ್ತಕವಾಗುತ್ತದೆಯೋ ಅದೇ ರೀತಿಯಾಗಿ ಜ್ಞಾನವೂ ಸಹ ವಿಷಯಸಂಬದ್ಧವಾಗಿಯೇ ಅಜ್ಞಾನನಿವರ್ತಕ-ವಾಗಲಿ'' ಎಂಬ ಅತಿಪ್ರಸಂಗ ಬರುತ್ತದೆಯಲ್ಲವೇ ? ಎಂದರೆ,

ಇದು ನಮಗೆ ಅನಿಷ್ಟ(ಪ್ರಸಂಗ)ವಾಗುವುದಿಲ್ಲ. ಯಾಕೆಂದರೆ - ''ಪ್ರಕಾಶ-ಸ್ವಭಾವವಾದ ಸಾವಯವವಾದ ಅಂತಃಕರಣವು ಅದೃಷ್ಟಇಂದ್ರಿಯಾದಿಗಳಿಂದ ಸಹಕೃತವಾಗಿ ಅನಂತರ ಇಂದ್ರಿಯಾದಿದ್ವಾರಾ ಹೊರಗೆ ಬಂದದ್ದಾಗಿ ವಿಷಯವಸ್ತುವಿನವರೆಗೆ ದೀರ್ಘಪ್ರಭಾಕಾರವಾಗಿ ಪರಿಣಾಮ ಹೊಂದುತ್ತದೆ''

(ಯಾವ ರೀತಿಯಾಗಿ ಭಾವಿ-ಸರೋವರಗಳ ನೀರು ಪೈಪುಗಳ ಮೂಲಕ ಹೊರಗೆ ಬಂದು, ತೋಟದ ಭೂಮಿಯನ್ನು ಪ್ರವೇಶಿಸಿ, ತೋಟಭೂಮಿ ಯಾವ ಆಕಾರದಲ್ಲಿ ಇರುವುದೋ ಅದೇ ಆಕಾರ ಉಳ್ಳದ್ದಾಗಿ ನಿಲ್ಲುವುದೋ ಅದೇ ರೀತಿಯಾಗಿ ಸಾವಯವ ತೈಜಸ ಮನಸ್ಸು ಸಹ ಇಂದ್ರಿಯದ್ವಾರಾ ಒಂದಂಶದಿಂದ ಹೊರಗೆ ಬಂದು ವಿಷಯಸಂಬದ್ಧವಾಗಿ ಪರಿಣಾಮ ಹೊಂದುತ್ತದೆ)

ಎಂಬುದಾಗಿ ಅಂಗೀಕಾರ ಮಾಡಿದ್ದರಿಂದ ಜ್ಞಾನಕ್ಕೆ (ಮಾನಸವೃತ್ತಿಜ್ಞಾನಕ್ಕೆ) ವಿಷಯಸಂಬಂಧ ನಮಗೆ ಸಮ್ಮತವೇ ಆದ್ದರಿಂದ ಈ ಅತಿಪ್ರಸಂಗ ನಮಗೆ ಅನಿಷ್ಟವಾಗುವುದಿಲ್ಲ ಎಂದು ಭಾವ.

ಆದ್ದರಿಂದಲೇ

''**ಬ್ರಹ್ಮಾಜ್ಞಾನಂ ನ ಸ್ವವಿಷಯಾಶ್ರಿತಮ್ ಅಜ್ಞಾನತ್ವಾತ್ ಘಟಾಜ್ಞಾನವತ್**''

ಎಂಬುದಾಗಿ ಹಿಂದೆ 'ಘಟಾಜ್ಞಾನವು ಘಟಾಶ್ರಿತವಲ್ಲ ಹೇಗೋ ಹಾಗೆ' ಎಂದು ಘಟಾಜ್ಞಾನವನ್ನು ದೃಷ್ಟಾಂತವನ್ನಾಗಿ ಕೊಟ್ಟಿದ್ದು ನಿರಾಕೃತವಾದಂತಾ-ಯಿತು. ಯಾಕೆ ? ಅಜ್ಞಾನವು ವಿಷಯಾಶ್ರಿತವಾಗಿಯೇ ಜ್ಞಾನಪ್ರತಿಬಂಧಕ-ವಾಗುತ್ತದೆ ಎಂದು ಸಮರ್ಥಿಸಿದ್ದರಿಂದ, ಘಟಾಜ್ಞಾನವು ಘಟಾಶ್ರಿತವೇ ಆಗಿದ್ದರಿಂದ, ದೃಷ್ಟಾಂತವಾದ ಘಟಾಜ್ಞಾನದಲ್ಲಿ ಸ್ವವಿಷಯಾಶ್ರಿತತ್ವಾಭಾವ ಎಂಬ ಸಾಧ್ಯ ಬರುವುದಿಲ್ಲ. ಸಾಧ್ಯವೈಕಲ್ಯ ಬರುತ್ತದೆ ಎಂದು ಭಾವ.

ಅಂದಮೇಲೆ ಅಜ್ಞಾನವು ವಿಷಯಾಶ್ರಿತವೇ ಆಗಿರುವುದರಿಂದ''**ಪುಂಗತಮೇವ ಹಿ ತಮಃ**'' ''ಅಜ್ಞಾನವು ವಿಷಯಾಶ್ರಿತವಲ್ಲ. ಕಿಂತು ಜ್ಞಾತೃಪುರುಷಾಶ್ರಿತವೇ ಆಗಿದೆ'' ಎಂಬುದಾಗಿ ನೀವು ಹೇಳುವುದು ಸರಿಯಲ್ಲ ಎನ್ನುವುದು ಆಕ್ಷೇಪದ ಆಂತರ್ಯ.

**ಅವತಾರಿಕೆ :-** ಈ ರೀತಿಯಾಗಿ ಅಜ್ಞಾನವು ವಿಷಯಾಶ್ರಿತವೇ ಆಗಿದೆ (ಜ್ಞಾತೃಪುರುಷಾಶ್ರಿತವೆಂದು ಹೇಳುವುದು ಸರಿಯಲ್ಲ) ಎಂಬುದಾಗಿ ವಿಸ್ತಾರ ಆಕ್ಷೇಪ ಬಂದರೆ, ಈ ವಿಧವಾದ ಆಕ್ಷೇಪವನ್ನು (ಅಜ್ಞಾನಕ್ಕೆ ವಿಷಯಾಶ್ರಿತತ್ವವನ್ನು) ಅತಿಪ್ರಸಂಗ ಹೇಳುವ ಮೂಲಕ ನಿರಾಕರಿಸುತ್ತಾರೆ ಆಚಾರ್ಯರು -

**ಟೀಕಾ: ತದಿದಮಸತ್ । ಅನುಮಾನಸ್ಯ ತರ್ಕಪರಾಹತತ್ವಾತ್ । ತಥಾ ಹಿ, ಯದೇತದ್ಘಟೇ ಪಾಷಾಣತ್ವಾದ್ಯಾರೋಪನಿಮಿತ್ತಮಜ್ಞಾನಂ**

**ತದ್ಘಟಯಾಥಾತ್ಮ್ಯಜ್ಞಾನೇನ ನಿವರ್ತತೇ ನ ವಾ । ನೇತಿ ಪಕ್ಷೇ ಭ್ರಾಂತೇರನುಚ್ಛೇದಪ್ರಸಂಗಃ । ಪ್ರಥಮಪಕ್ಷೇಽತಿಪ್ರಸಂಗಮಾಹ -**

**ಮೂಲ :- ವಿಷಯಾಶ್ರಯಂ ಚೇದಜ್ಞಾನಂ ನಿವರ್ತತೇ ತರ್ಹ್ಯೇಕೇನ ಜ್ಞಾತಸ್ಯ ಘಟಸ್ಯಾನ್ಯೈರಜ್ಞಾತತ್ವಂ ನ ಸ್ಯಾತ್ ।**

**ಯದ್ಯಜ್ಞಾನಂ ಘಟಾದಿವಿಷಯಾಶ್ರಯಂ ತದ್ಯಾಥಾತ್ಮ್ಯಜ್ಞಾನೇನ ನಿವರ್ತತ ಇತ್ಯಂಗೀಕ್ರಿಯತೇ ತರ್ಹ್ಯೇಕಸ್ಮಿನ್ ಘಟೇ ಬಹೂನಾಂ ಪಾಷಾಣತ್ವಾದಿನಾ ವಿಪ್ರತಿಪನ್ನಾನಾಮೇಕೇನ ಜ್ಞಾತಸ್ಯ ಘಟಸ್ಯಾನ್ಯೈರಜ್ಞಾತತ್ವಂ ನ ಸ್ಯಾತ್ । ತಜ್ಞಾನೇನಾವಿದ್ಯಾಯಾ ನಿವೃತ್ತತ್ವಾತ್ । ಇಂದ್ರಿಯಸನ್ನಿಕರ್ಷಾದಿಸಾಮಗ್ರೀಸದ್ಭಾವಾಚ್ಚ । ನ ಹ್ಯಾಲೋಕೇನ ತಮಸಿ ನಿವೃತ್ತೇ ಸಮನಸ್ಕೇಂದ್ರಿಯಸನ್ನಿಕೃಷ್ಟೋಽಪಿ ಘಟಃ ಕೇನಚಿದ್ದೃಶ್ಯತೇ ಕೇನಚಿನ್ನೇತಿ ಯುಜ್ಯತೇ ।**

**ಅನುವಾದ :-** ಈ ರೀತಿಯಾಗಿ 'ಅಜ್ಞಾನವು ವಿಷಯಾಶ್ರಿತವೇ ಆಗಿದೆ' ಎಂಬುದಾಗಿ ಆಕ್ಷೇಪ ಮಾಡುವುದು ಸರಿಯಲ್ಲ.

''**ಅಜ್ಞಾನಂ ವಿಷಯಾಶ್ರಿತಂ ಜ್ಞಾನಪ್ರತಿಬಂಧಕತ್ವಾತ್ ತಮೋವತ್**''

ಎಂಬುದಾಗಿ ಅನುಮಾನ ಮಾಡುವುದು (ಅನುಮಾನದಿಂದ ಅಜ್ಞಾನಕ್ಕೆ ವಿಷಯಾಶ್ರಿತತ್ವವನ್ನು ಸಾಧಿಸುವುದು) ಸರಿಯಲ್ಲ. ಕಾರಣ- ನಿಮ್ಮ ಈ ಅನುಮಾನವು ತರ್ಕಪರಾಹತವಾಗಿದೆ.

ಅದು ಹೇಗೆಂದರೆ :- ದೂರದಲ್ಲಿ ಘಟ ಇರುವಾಗ 'ಅದು ಕಲ್ಲು' ಎಂಬುದಾಗಿ ಅದನ್ನು ಪಾಷಾಣತ್ವೇನ ಬಹಳ ಜನರು ತಿಳಿಯುತ್ತಾರೆ. ಅರ್ಥಾತ್ ಬಹಳ ಜನರಿಗೆ ಪಾಷಾಣತ್ವಭ್ರಮ ಬರುತ್ತದೆ. ರಜತಭ್ರಮಕ್ಕೆ ಶುಕ್ತ್ಯಜ್ಞಾನ ನಿಮಿತ್ತ(ಕಾರಣ)ವಾಗುವಂತೆ ಆ ಪಾಷಾಣತ್ವಭ್ರಮಕ್ಕೆ ನಿಮಿತ್ತವಾದದ್ದು ಘಟಾಜ್ಞಾನ. ಆ ಘಟಾಜ್ಞಾನವು ಘಟದಲ್ಲಿ ಇದೆ. (ಅಜ್ಞಾನವು ವಿಷಯಾಶ್ರಿತ-ವಾಗಿದೆ.) ಹೀಗಿರುವಾಗ (ಅಜ್ಞಾನವು ವಿಷಯಾಶ್ರಿತ ಎನ್ನುವುದಾದರೆ) ಆ ಘಟಾಜ್ಞಾನವು ಘಟಜ್ಞಾನದಿಂದ (ಘಟಯಾಥಾತ್ಮ್ಯಜ್ಞಾನದಿಂದ) ನಿವೃತ್ತ-ವಾಗುತ್ತದೆ ಎನ್ನುತ್ತೀರೋ ? ನಿವೃತ್ತವಾಗುವುದಿಲ್ಲ ಎನ್ನುತ್ತೀರೋ ?

ಘಟಜ್ಞಾನದಿಂದ ಘಟಾಜ್ಞಾನ ನಿವೃತ್ತವಾಗುವುದಿಲ್ಲ ಎಂದರೆ (ಎರಡನೇ ಪಕ್ಷದಲ್ಲಿ) ಭ್ರಾಂತಿಯು ನಾಶವಾಗದೇ ಉಳಿಯಬೇಕಾಗುತ್ತದೆ. ಏಕೆಂದರೆ - ಭ್ರಮಕ್ಕೆ ಅಧಿಷ್ಠಾನಜ್ಞಾನ ನಿವರ್ತಕ. ಅರ್ಥಾತ್ ಅಧಿಷ್ಠಾನಜ್ಞಾನದಿಂದಲೇ ಭ್ರಾಂತಿಯು ನಾಶವಾಗಬೇಕು. (ಬೇರೆ ಜ್ಞಾನದಿಂದ ಭ್ರಮ ನಾಶವಾಗುವುದಿಲ್ಲ.) ಪ್ರಕೃತ ಘಟವೇ ಅಧಿಷ್ಠಾನವಾದ್ದರಿಂದ ಘಟದ ಜ್ಞಾನವಾದರೂ ಭ್ರಮ ನಾಶವಾಗುವುದಿಲ್ಲ ಎಂದರೆ, ಭ್ರಮಕ್ಕೆ ನಿವರ್ತಕವಾದದ್ದೇ ಯಾವುದೂ ಇಲ್ಲದ ಕಾರಣ ಭ್ರಮವು ಕೊನೆವರೆಗೂ ನಾಶವಾಗದೇ ಹಾಗೇ ಉಳಿಯಬೇಕಾದ ಪ್ರಸಂಗ ಬರುತ್ತದೆ. ಆದ್ದರಿಂದ ಘಟಜ್ಞಾನದಿಂದ ಘಟಾಜ್ಞಾನವು ನಿವೃತ್ತವಾಗುವುದಿಲ್ಲ ಎಂಬ ಎರಡನೇ ಪಕ್ಷ ಸರಿಯಲ್ಲ.

ಇನ್ನು ಘಟಜ್ಞಾನದಿಂದ ಘಟಾಜ್ಞಾನ ನಿವೃತ್ತವಾಗುತ್ತದೆ ಎಂದು ಹೇಳಬೇಕು. (ಪ್ರಥಮಪಕ್ಷವನ್ನೇ ಅಂಗೀಕರಿಸಬೇಕು.) ಈ ಪ್ರಥಮಪಕ್ಷದಲ್ಲಿ ಆಚಾರ್ಯರು ಅತಿಪ್ರಸಂಗವನ್ನು ಹೇಳುತ್ತಾರೆ -

**ಮೂಲಃ-ವಿಷಯಾಶ್ರಯಂ ಚೇದಜ್ಞಾನಂ ನಿವರ್ತತೇ ತರ್ಹ್ಯೇಕೇನ ಜ್ಞಾತಸ್ಯ ಘಟಸ್ಯಾನ್ಯೈರಜ್ಞಾತತ್ವಂ ನ ಸ್ಯಾತ್ ।**

**ಮೂಲಾರ್ಥ :-** ಅಜ್ಞಾನವು ವಿಷಯಾಶ್ರಿತವಾಗಿದೆ, ಅದು ವಿಷಯಜ್ಞಾನದಿಂದ ನಿವೃತ್ತವಾಗುತ್ತದೆ ಎನ್ನುವುದಾದರೆ ಆಗ ಒಬ್ಬನಿಗೆ ಘಟದ ಜ್ಞಾನ ಉಂಟಾದಾಗ ಬೇರೆ ಯಾರಿಗೂ ಘಟದ ಬಗ್ಗೆ ಅಜ್ಞಾನ ಉಳಿಯಬಾರದಿತ್ತು!

ಒಂದುವೇಳೆ ಅಜ್ಞಾನವು ಘಟಾದಿವಿಷಯಾಶ್ರಯವಾಗಿದೆ ಮತ್ತು ಘಟಾದಿ-ಯಾಥಾತ್ಮ್ಯಜ್ಞಾನದಿಂದ ನಿವೃತ್ತವಾಗುತ್ತದೆ ಎಂದು ಅಂಗೀಕರಿಸುವುದಾದರೆ ಆಗ ಒಂದೇ ಘಟವನ್ನು 'ಇದು ಕಲ್ಲು' ಎಂಬುದಾಗಿ ಪಾಷಾಣತ್ವೇನ ಬಹಳ ಜನರು ತಿಳಿದಿರುವಾಗ, ಬಹಳ ಜನರಲ್ಲಿ ಒಬ್ಬನು ಹತ್ತಿರ ಹೋಗಿ ನೋಡಿದಾಗ, ಅವನಿಗೆ ''ಇದು ಕಲ್ಲು ಅಲ್ಲ. ಕಿಂತು ಘಟ'' ಎಂಬುದಾಗಿ ಘಟಯಾಥಾತ್ಮ್ಯ-ಜ್ಞಾನವಾದಾಗ, ಅವನಿಗಾದಂತಹ ಘಟಜ್ಞಾನದಿಂದ ಘಟದಲ್ಲಿದ್ದ ಘಟಾಜ್ಞಾನವು ನಿವೃತ್ತವಾದದ್ದರಿಂದ ಮತ್ತು ಇಂದ್ರಿಯಸನ್ನಿಕರ್ಷ ಮೊದಲಾದ ಸಾಮಗ್ರಿ ಇರುವುದರಿಂದ ಯಾರಿಗೂ ಆ ಘಟ ಅಜ್ಞಾತವಾಗಿ ಉಳಿಯಬಾರದು.

ಕತ್ತಲೆಯಲ್ಲಿ ಘಟ ಇದೆ. ಘಟಕ್ಕೆ ಆವರಕವಾಗಿರುವ ಕತ್ತಲೆಯು ಒಂದೇ ಆಗಿದೆ. ಬೆಳಕು ಬಂದಾಗ ಅಂತಹ ಘಟಾವರಕ ಕತ್ತಲೆಯು ನಾಶವಾಗುತ್ತಿರಲು,

ಮನಸ್ಸು ಸಹಿತ ಇಂದ್ರಿಯಸನ್ನಿಕರ್ಷವಾದರೂ ಸಹ ಘಟವು ಕೆಲವರಿಗೆ ಕಾಣಿಸುತ್ತದೆ ಕೆಲವರಿಗೆ ಕಾಣಿಸುವುದಿಲ್ಲ ಎಂದು ಹೇಳಲಾಗುವುದಿಲ್ಲ. ಅದರಂತೆಯೇ ಘಟದಲ್ಲಿ ಆಶ್ರಿತವಾದ ಅಜ್ಞಾನವು ಒಂದೇ ಆಗಿದೆ. ಅಂತಹ ಅಜ್ಞಾನವು ಒಬ್ಬನಿಗೆ ಉಂಟಾದ ಘಟಜ್ಞಾನದಿಂದ ನಾಶವಾಗಿದೆ ಎಂದಮೇಲೆ, ಘಟದ ಬಗ್ಗೆ ಅಜ್ಞಾನ ಯಾರಿಗೂ ಇರಬಾರದು ಅರ್ಥಾತ್ ಒಬ್ಬನಿಗೆ ಘಟಯಾಥಾತ್ಮ್ಯಜ್ಞಾನ ಆದಮೇಲೆ (ಘಟಾಜ್ಞಾನ ನಾಶವಾಗಿ) ಎಲ್ಲರಿಗೂ 'ಅಯಂ ಘಟಃ' 'ಅಯಂ ಘಟಃ' ಎಂಬುದಾಗಿ ಘಟಜ್ಞಾನವೇ ಆಗಬೇಕು. ಬೇರೆಯವರಿಗೆ ಘಟದ ಬಗ್ಗೆ ಅಜ್ಞಾನ, ಬೇರೆಯವರಿಗೆ ಪಾಷಾಣತ್ವೇನ ಭ್ರಮ ಉಳಿಯಬಾರದು ಎಂದು ಅತಿಪ್ರಸಂಗದ ಅಭಿಪ್ರಾಯ.

**ಟೀಕಾ: ಅಜ್ಞಾನಬಹುತ್ವಾನ್ನೈವಮಿತಿ ಚೇತ್, ತರ್ಹ್ಯೇಕಸ್ಮಿನ್ನಜ್ಞಾನೇ ನಿವೃತ್ತೇಽಪ್ಯಜ್ಞಾನಾಂ ತರಸದ್ಭಾವಾತ್ ನ ಕೇನಾಪಿ ಘಟೋ ವಿಜ್ಞಾಯೇತ । ಪ್ರತಿಪುರುಷನಿಯತಾನಿ ತಾನೀತಿ ಚೇನ್ನ । ಅದೃಷ್ಟಕಲ್ಪನಾಪ್ರಸಂಗಾತ್। ಅಜ್ಞಾನಸ್ಯ ವಿಷಯಾಶ್ರಯತ್ವಾದೇವಂ ಕಲ್ಪನೇಽನ್ಯೋನ್ಯಾಶ್ರಯತಾ ಸ್ಯಾತ್ । ವಿಷಯಾಚ್ಛಾದನಂ ತು ನಯನಪಟಲಾದಿವತ್ ಪ್ರತಿಪುರುಷಮಾಶ್ರಿತೈರೇವಾಜ್ಞಾನೈ-ರ್ಯುಕ್ತಮ್ । ಆರೋಪ್ಯಾಸತ್ತ್ವಸ್ಯ ಪ್ರತಿಪಾದಿತತ್ವಾನ್ನ ತದುಪಾದಾನಾಪೇಕ್ಷಾಽಸ್ತಿ।**

**ತದೇವಂ ನ ಜ್ಞಾತವ್ಯಪರಬ್ರಹ್ಮಾಶ್ರಯಮಜ್ಞಾನಂ ಯುಕ್ತಮಿತಿ ನಾತ್ಮಾಶ್ರಯಾಜ್ಞಾನನಿವರ್ತಕತ್ವೇನವೇದಾಂತವಾಕ್ಯಜನಿತವಿಜ್ಞಾನ-ಸ್ಯಾತ್ಮಜ್ಞಾನತ್ವಸಿದ್ಧಿಃ।**

**ಅನುವಾದ :-** ''ಅಜ್ಞಾನ ಒಂದೇ ಆದ್ದರಿಂದ ಒಬ್ಬನಿಗೆ ಘಟಜ್ಞಾನ ಆದಮೇಲೆ (ಅವನಿಗೆ ಉಂಟಾದ ಘಟಜ್ಞಾನದಿಂದ ಘಟಾಜ್ಞಾನ ನಾಶವಾದ್ದರಿಂದ) ಬೇರೆಯವರಿಗೆ ಘಟದ ಬಗ್ಗೆ ಅಜ್ಞಾನ ಉಳಿಯಬಾರದು'' ಎಂಬ ಆಪತ್ತಿ ಬರುವುದಿಲ್ಲ. ಏಕೆಂದರೆ ಒಂದೇ ಅಜ್ಞಾನ ಇರುತ್ತಿದ್ದರೆ ಆಗ ಈ ರೀತಿ ಆಪತ್ತಿ ಬರುತ್ತಿತ್ತು. ಆದರೆ ಅಜ್ಞಾನ ಒಂದೇ ಇಲ್ಲ. ಕಿಂತು ಅಜ್ಞಾನ ಬಹಳ ಇವೆ. ಹಾಗಾಗಿ ಒಬ್ಬನಿಗೆ ಉಂಟಾದ ಘಟಜ್ಞಾನದಿಂದ ಒಂದು ಘಟಾಜ್ಞಾನ ನಿವೃತ್ತವಾದರೂ ಇನ್ನೂ ಅನೇಕ ಅಜ್ಞಾನಗಳು ಇರುವುದರಿಂದ ಬೇರೆಯವರಿಗೆ ಘಟದ ಬಗ್ಗೆ ಅಜ್ಞಾನ ಉಪಪನ್ನವಾಗುತ್ತದೆ ಎಂದರೆ.

ಹಾಗಾದರೆ ಒಬ್ಬನಲ್ಲಿ ಅಜ್ಞಾನ ನಿವೃತ್ತವಾದರೂ ಸಹ ಇನ್ನೂ ಬಹಳ ಅಜ್ಞಾನಗಳು ಇರುವುದರಿಂದ ಯಾರಿಗೂ ಘಟಜ್ಞಾನ ಆಗದೇ ಹೋಗಬೇಕಾಗುತ್ತದೆ. ಉದಾಹರಣೆಗೆ - ಒಂದು ಘಟದ ಮೇಲೆ ನೂರು ಹೊದಿಕೆಗಳು ಹಾಕಿರುವಾಗ ಒಂದು ಹೊದಿಕೆ ತೆಗೆದರೂ ಇನ್ನೂ ತೊಂಭತ್ತೊಂಭತ್ತು (೯೯) ಹೊದಿಕೆಗಳು ಅದರಮೇಲೆ ಇರುವ ಕಾರಣ ಯಾರಿಗೂ ಘಟಜ್ಞಾನ ಆಗುವುದಿಲ್ಲ. ಅದರಂತೆಯೇ ಒಬ್ಬನ ಅಜ್ಞಾನ ನಿವೃತ್ತವಾದರೂ ಇನ್ನೂ ಬಹಳ ಅಜ್ಞಾನಗಳು ಇರುವುದರಿಂದ ಯಾರಿಗೂ ಘಟದ ಜ್ಞಾನ ಆಗದೇ ಹೋಗಬೇಕಾಗುತ್ತದೆ.

ಅದು ಹಾಗಲ್ಲ, ಅಜ್ಞಾನ ಬಹಳ ಇವೆ ಎಂದರೆ ಅವು ಪ್ರತಿಪುರುಷನಿಯತ-ವಾಗಿವೆ. ಅರ್ಥಾತ್ ಒಬ್ಬೊಬ್ಬರಿಗೆ ಒಂದೊಂದು ಅಜ್ಞಾನ ಇದೆ. ಹೀಗಾಗಿ ಯಾವ ವ್ಯಕ್ತಿ ಹತ್ತಿರ ಹೋಗಿ ನೋಡಿ ಘಟಜ್ಞಾನ ಮಾಡಿಕೊಂಡಿದ್ದಾನೆ ಅವನಲ್ಲಿರುವ ಘಟಾಜ್ಞಾನ ಅದರಿಂದ ನಿವೃತ್ತವಾಗುತ್ತದೆ. ಯಾರಿಗೆ ಘಟಜ್ಞಾನ ಆಗಿಲ್ಲ ಅವರಿಗೆ ಘಟಾಜ್ಞಾನ ಹಾಗೆಯೇ ಉಳಿದಿರುತ್ತದೆ. ಆದ್ದರಿಂದ ಅತಿಪ್ರಸಂಗ ಬರುವುದಿಲ್ಲ ಎಂದು ಹೇಳುತ್ತೇವೆ ಎಂದರೆ, ಅದು ಸರಿಯಲ್ಲ. ವಿಷಯಾಶ್ರಿತವಾದ ಆವರಕವಸ್ತು ಪ್ರತಿಪುರುಷನಿಯತವಾದದ್ದು ಎಲ್ಲಿಯೂ ಕಂಡಿಲ್ಲ. ಪ್ರತಿಪುರುಷನಿಯತವಾದ ತಮಸ್ಸು (ಕತ್ತಲೆ) ಕಂಡಿಲ್ಲವಷ್ಟೇ! ಹಾಗೆ ಪ್ರತಿಪುರುಷನಿಯತವಾದ ತಮಸ್ಸು ಕಂಡಿದ್ದರೆ ಆಗ ಅದರಂತೆಯೇ ಪ್ರತಿಪುರುಷನಿಯತವಾದ ಅಜ್ಞಾನವನ್ನು ಹೇಳಬಹುದಿತ್ತು ಎಂದು ಭಾವ.

ಬೇರೆಡೆ ಎಲ್ಲಿಯೂ ಕಂಡಿಲ್ಲದಿದ್ದರೂ ಸಹ ''**ಅತ್ರ ಮಮ್ಯೈವಾಜ್ಞಾನಂ ನಾನ್ಯಸ್ಯ**'' ಎಂಬುದಾಗಿ ಅನುಭವ ಬರುವುದರಿಂದ ಅಜ್ಞಾನವಿಷಯದಲ್ಲಿ ಪ್ರತಿಪುರುಷನಿಯತತ್ವವನ್ನು ಒಪ್ಪಬೇಕು ಎಂದು ಹೇಳುವುದು ಸರಿಯಲ್ಲ. ಕಾರಣ- ಅಜ್ಞಾನ ವಿಷಯಾಶ್ರಿತ ಎಂದು ಹೇಳುವುದಾದರೆ ''ಅತ್ರ ಮಮ್ಯೈವಾಜ್ಞಾನಂ'' ಎಂಬ ಅನುಭವವೇ ಅನುಪಪನ್ನವಾಗುತ್ತದೆ.

ಹಿಂದೆ ಹೇಳಿದ ಪ್ರಮಾಣದಂತೆ ಅಜ್ಞಾನಕ್ಕೆ ವಿಷಯಾಶ್ರಿತತ್ವ ಸಿದ್ಧವಾಗುತ್ತಿರಲು, ಅಜ್ಞಾನವು ವಿಷಯಾಶ್ರಿತವೆಂದಮೇಲೆ ಒಬ್ಬನ ಜ್ಞಾನದಿಂದ ಅಜ್ಞಾನ ಹೋದಮೇಲೆ ಎಲ್ಲರಿಗೂ ಯಾಕೆ ಜ್ಞಾನವಾಗಿಲ್ಲ ? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಅಜ್ಞಾನಕ್ಕೆ ಪ್ರತಿಪುರುಷನಿಯತತ್ವವನ್ನು ಹೇಳಬೇಕು. ಹೀಗೆ ವಿಷಯಾಶ್ರಿತತ್ವಾನ್ಯಥಾನುಪಪತ್ತಿಯಿಂದ ಅಜ್ಞಾನಕ್ಕೆ ಪ್ರತಿಪುರುಷನಿಯತತ್ವವನ್ನು ಹೇಳುತ್ತೇವೆ ಎಂದರೆ, ಹಾಗಾದರೆ ಅಜ್ಞಾನಕ್ಕೆ ವಿಷಯಾಶ್ರಿತತ್ವ ಸಿದ್ಧವಾದರೆ

ತದನ್ಯಥಾನುಪಪತ್ತಿಯಿಂದ ಅಜ್ಞಾನಕ್ಕೆ ಪ್ರತಿಪುರುಷನಿಯತತ್ವ ಸಿದ್ಧವಾಗುತ್ತದೆ. ಅಜ್ಞಾನಕ್ಕೆ ಪ್ರತಿಪುರುಷನಿಯತತ್ವ ಸಿದ್ಧವಾದರೆ ತರ್ಕಪರಹತಿ ಇಲ್ಲದ ಕಾರಣ ಅನುಮಾನದಿಂದ ವಿಷಯಾಶ್ರಿತತ್ವ ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ಬರುತ್ತದೆ. ಆದ್ದರಿಂದ ವಿಷಯಾಶ್ರಿತತ್ವಾನ್ಯಥಾನುಪಪತ್ತಿಯಿಂದ ಅಜ್ಞಾನಕ್ಕೆ ಪ್ರತಿಪುರುಷನಿಯತತ್ವವನ್ನು ಹೇಳಲು ಬರುವುದಿಲ್ಲ ಎಂದು ಭಾವ.

ಅಜ್ಞಾನವು ವಿಷಯವನ್ನು ಆಚ್ಛಾದನೆ ಮಾಡುತ್ತದೆ. ವಿಷಯ ಆಚ್ಛೇದ್ಯವಾದರೆ, ಅಜ್ಞಾನ ಆಚ್ಛಾದಕ. ವಿಷಯ ಆಚ್ಛೇದ್ಯ ಎಂದಮೇಲೆ ಆಚ್ಛಾದಕವಾದ ಅಜ್ಞಾನವೂ ಸಹ ವಿಷಯದಲ್ಲಿಯೇ ಇರಬೇಕು ಅಲ್ಲವೇ ? ಎಂದರೆ, ಅದೂ ಸರಿಯಲ್ಲ.

ಏಕೆಂದರೆ - ಆಚ್ಛಾದನೆ ಮಾಡುವುದು ಎರಡುವಿಧ. ೧) ವಿಷಯದ ಮೇಲೆ ಹೊದಿಕೆ ಹಾಕಿದರೂ ವಿಷಯಜ್ಞಾನ ಆಗುವುದಿಲ್ಲ. ೨) ನಮ್ಮ ಕಣ್ಣಿನಮೇಲೆ ಬಟ್ಟೆ ಹಾಕಿದರೂ (ಕಣ್ಣಿಗೆ ಪೊರೆ ಬಂದರೂ) ವಿಷಯಜ್ಞಾನ ಆಗುವುದಿಲ್ಲ. ಪ್ರಕೃತ ನಯನಪಟಲವು (ಕಣ್ಣಿನ ಪೊರೆ) ಪುರುಷಸಂಬದ್ಧವಾಗಿ ಆಚ್ಛಾದಕ-ವಾಗುವಂತೆ ಅಜ್ಞಾನಗಳೂ ಸಹ ಪ್ರತಿಪುರುಷಾಶ್ರಿತವಾಗಿಯೇ ಆಚ್ಛಾದಕ-ವಾಗುವಂತಹದ್ದಾಗಿವೆ. ಆದ್ದರಿಂದ ಆಚ್ಛಾದನವನ್ನು ಕೂಡಿಸುವುದಕ್ಕಾಗಿಯೂ ಅಜ್ಞಾನಕ್ಕೆ ವಿಷಯಾಶ್ರಿತತ್ವವನ್ನು ಒಪ್ಪುವ ಆವಶ್ಯಕತೆ ಇಲ್ಲ.

ಶುಕ್ತ್ಯವಚ್ಛಿನ್ನಚೈತನ್ಯಾಶ್ರಯವಾದ ಅಜ್ಞಾನವು ಅಲ್ಲಿರುವ ಶುಕ್ತಿತ್ವವನ್ನು ಆಚ್ಛಾದನೆ ಮಾಡಿ ರಜತ ಎಂಬ ರೂಪಾಂತರಕ್ಕೆ ಉಪಾದಾನಕಾರಣವಾಗುತ್ತದೆ ಎಂಬುದಾಗಿ ಹೇಳಿದ್ದೇವೆಯಲ್ಲ ? ಎಂದರೆ, ಅದೂ ಸರಿಯಲ್ಲ. ಸತ್ ಆದ ವಸ್ತುವಿಗೆ ಉಪಾದಾನಕಾರಣದ ಅಪೇಕ್ಷೆ ಇರುತ್ತದೆ. ಅಸತ್ ಆದದ್ದಕ್ಕೆ ಉಪಾದಾನಕಾರಣ ಇರುವುದಿಲ್ಲ. ಪ್ರಕೃತ ಆರೋಪ್ಯವಾದ ರಜತವು ಅಸತ್ ಆದದ್ದು ಎಂಬುದಾಗಿ ಪ್ರತಿಪಾದನೆ ಮಾಡಿದ್ದರಿಂದ, ಅಸತ್ ಆದ ರಜತಕ್ಕೆ ಉಪಾದಾನಕಾರಣಾಪೇಕ್ಷೆ ಇಲ್ಲದ ಕಾರಣ ''ವಿಷಯಾಶ್ರಿತವಾದ ಅಜ್ಞಾನವು ರಜತಕ್ಕೆ ಉಪಾದಾನಕಾರಣ'' ಎಂಬ ಕಲ್ಪನೆಯೂ ಸರಿಯಲ್ಲ.

ಅಂದಮೇಲೆ ಅಜ್ಞಾನವು ವಿಷಯದಲ್ಲಿಯೂ ಆಶ್ರಿತವಾಗಿಲ್ಲ, ಜ್ಞಾತವ್ಯನಾದ ಪರಬ್ರಹ್ಮನಲ್ಲಿಯೂ ಆಶ್ರಿತವಾಗಿಲ್ಲ. ಕಿಂತು ''ಪುಂಗತಮೇವ ಹಿ ತಮಃ'' ಜ್ಞಾತೃವಾದ ಪುರುಷನಲ್ಲಿಯೇ ಆಶ್ರಿತವಾಗಿದೆ ಎಂಬುದಾಗಿ ಸಿದ್ಧವಾಗುವುದರಿಂದ

ನಿಮ್ಮ ಈ ಹಿಂದಿನ ವಾದ ಅರ್ಥಾತ್ ''ವೇದಾಂತವಾಕ್ಯಜನಿತವಾದ ವಿಜ್ಞಾನವು ಆತ್ಮಜ್ಞಾನವಾಗಿದೆ. ಅದು ಆತ್ಮಜ್ಞಾನ ಏಕೆ ? ಎಂದರೆ, ಆತ್ಮಸಂಬಂಧಜ್ಞಾನ-ವಾದ್ದರಿಂದ ಆತ್ಮಜ್ಞಾನ. ಆತ್ಮನಿಗೂ ಜ್ಞಾನಕ್ಕೂ ಏನು ಸಂಬಂಧ ? ಎಂದರೆ, ತದಾಶ್ರಿತಾಜ್ಞಾನನಿವರ್ತಕತ್ವವೇ ಸಂಬಂಧ. ಅಂದರೆ ಆತ್ಮಾಶ್ರಿತವಾದ ಅಜ್ಞಾನ ಆತ್ಮಾಜ್ಞಾನ, ಅಂತಹ ಆತ್ಮಾಜ್ಞಾನಕ್ಕೆ ನಿವರ್ತಕವಾಗಿದೆ ಈ (ವೇದಾಂತವಾಕ್ಯಜನ್ಯ) ಜ್ಞಾನ. ಹೀಗೆ ಆತ್ಮಾಶ್ರಿತಾಜ್ಞಾನನಿವರ್ತಕವಾದ್ದರಿಂದ ವೇದಾಂತವಾಕ್ಯ-ಜನ್ಯಜ್ಞಾನವು ಆತ್ಮಜ್ಞಾನವಾಗಿದೆ'' ಎಂಬುದಾಗಿ ಹಿಂದೆ ಹೇಳಿದ ವಾದವು ಸರಿಯಾದದ್ದಲ್ಲ ಎಂದು ಸ್ಫುಟವಾಗಿ ಸಿದ್ಧವಾಗುತ್ತದೆ.

**ಅವತಾರಿಕೆ :-** ಅಜ್ಞಾನವು ಜ್ಞಾತವ್ಯಪರಬ್ರಹ್ಮಾಶ್ರಿತವೂ ಆಗಿಲ್ಲ, ವಿಷಯಾಶ್ರಿತವೂ ಆಗಿಲ್ಲ ಎಂಬುದಾಗಿ ವಿಸ್ತಾರವಾಗಿ ಉಪಪಾದನೆ ಮಾಡಿ ಆತ್ಮಾಜ್ಞಾನವನ್ನು ನಿರಾಕರಿಸಿದರು. ಪ್ರಕೃತದಲ್ಲಿ ಅಂಗೀಕಾರವಾದದಿಂದ ಆತ್ಮಾಜ್ಞಾನವನ್ನು ಒಪ್ಪಿದರೂ ಸಹ, ವೇದಾಂತವಾಕ್ಯಜನಿತವಿಜ್ಞಾನವು ಆ ಆತ್ಮಾಜ್ಞಾನಕ್ಕೆ ನಿವರ್ತಕವಾಗಲು ಸಾಧ್ಯವಿಲ್ಲ ಎನ್ನುವುದನ್ನು ಉಪಪಾದಿಸುತ್ತಾರೆ-

**ಟೀಕಾ: ಕಿಂಚ ಅಸ್ತು ವಾ ಆತ್ಮಾಜ್ಞಾನಮ್ । ತಥಾಪಿ ನ ವೇದಾಂತವಾಕ್ಯ-ಜನಿತವಿಜ್ಞಾನಸ್ಯಾತ್ಮಜ್ಞಾನತ್ವಂ ಸಂಭವತಿ । ತಸ್ಯಾನಾತ್ಮವಿಷಯತ್ವೇನ ತನ್ನಿವರ್ತಕತ್ವಾಯೋಗಾತ್ । ಯದ್ವಿಷಯಂ ಹಿ ಯದ್ವಿಜ್ಞಾನಂ ತದೇವ ತದಜ್ಞಾನಂ ನಿವರ್ತಯದುಪಲಬ್ಧಮ್ ।**

**ಅನುವಾದ:-** ಆತ್ಮಾಶ್ರಿತವಾದ ಅಜ್ಞಾನ ಇಲ್ಲ ಎಂಬುದಾಗಿ ಸಮರ್ಥಿಸಿದ್ದರಿಂದ ಆತ್ಮಾಜ್ಞಾನವೇ ಅನುಪಪನ್ನ ಎಂದು ಸಿದ್ಧವಾಗಿದೆ. ಈಗ ಅಂಗೀಕಾರವಾದದಿಂದ ಆತ್ಮಾಜ್ಞಾನವನ್ನು ಒಪ್ಪಿದರೂ ಸಹ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಾಜ್ಞಾನಕ್ಕೆ ನಿವರ್ತಕವಾಗಲು ಸಾಧ್ಯವಿಲ್ಲ.

ಯಾಕೆಂದರೆ - ಯಾವ ಜ್ಞಾನವು ಯದ್ವಿಷಯಕವಾಗಿರುತ್ತದೆಯೋ ಅದೇ ಜ್ಞಾನವೇ ತದ್ವಿಷಯಕ ಅಜ್ಞಾನವನ್ನು ನಿವರ್ತಿಸುತ್ತದೆ ಎಂದು ಉಪಲಬ್ಧವಾಗಿದೆ (ಕಂಡಿದೆ). ಪ್ರಕೃತ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಾಜ್ಞಾನಕ್ಕೆ ನಿವರ್ತಕ-ವಾಗಬೇಕಾದರೆ ಅದು ಆತ್ಮವಿಷಯಕಜ್ಞಾನ ಆಗಬೇಕು. ಆದರೆ ವೇದಾಂತ-ವಾಕ್ಯಜನಿತವಿಜ್ಞಾನವು ಸತ್ಯಜ್ಞಾನಾದಿಪದಪ್ರವೃತ್ತಿನಿಮಿತ್ತ ತತ್ತದ್ಗುಣಾದಿವಿಶಿಷ್ಟ-

ವಿಷಯಕವಾಗಿದ್ದರಿಂದ ಆತ್ಮವಿಷಯಕವಾಗಿಲ್ಲ. [೧]ಭಿನ್ನವಿಷಯಕವಾಗಿದೆ. ಹಾಗಾಗಿ ಆತ್ಮಾಜ್ಞಾನವನ್ನು ಒಪ್ಪಿದರೂ ಸಹ ವೇದಾಂತವಾಕ್ಯಜನಿತವಿಜ್ಞಾನವು ಶುದ್ಧಆತ್ಮವಿಷಯಕಜ್ಞಾನವಾಗಿಲ್ಲವಾದ್ದರಿಂದ ಶುದ್ಧಆತ್ಮಾಜ್ಞಾನಕ್ಕೆ ನಿವರ್ತಕ-ವಾಗಲು ಸಾಧ್ಯವಿಲ್ಲ ಎಂದು ಭಾವ.

**ಆತ್ಮಜ್ಞಾನವು ಆತ್ಮವಿಷಯಕವಾಗದಿದ್ದರೂ ಆತ್ಮಾಜ್ಞಾನಕ್ಕೆ ನಿವರ್ತಕವಾಗುವುದಾದರೆ, ಘಟಜ್ಞಾನವೂ ಆತ್ಮಾಜ್ಞಾನಕ್ಕೆ ನಿವರ್ತಕವಾಗಲಿ ಎಂದು ಆಪಾದನ**

**ಟೀಕಾ: ಅಥಾನಾತ್ಮವಿಷಯಮಪಿ ತದ್ ಆತ್ಮಾಜ್ಞಾನಂ ನಿವರ್ತಯೇತ್ ಹಂತ ತರ್ಹಿ ಘಟಜ್ಞಾನಮಪಿ ಕಸ್ಮಾನ್ನ ನಿವರ್ತಯೇತ್ । ಅನಾತ್ಮವಿಷಯತ್ವಾವಿಶೇಷಾತ್ ಇತ್ಯಾಹ-**

**ಮೂಲಃ- ಅತದ್ವಿಷಯಜ್ಞಾನೇನ ತದಜ್ಞಾನನಿವೃತ್ತೌ ಘಟಜ್ಞಾನೇನಾಪಿ ನಿವರ್ತೇತ ।**

**ಆತ್ಮಾಜ್ಞಾನಮಿತಿ ಶೇಷಃ ।**

**ಅನುವಾದ :-** ವೇದಾಂತವಾಕ್ಯಜನಿತವಿಜ್ಞಾನವು ಸತ್ಯಜ್ಞಾನಾದಿಪದಪ್ರವೃತ್ತಿ ನಿಮಿತ್ತತತ್ತದ್ಗುಣಾದಿವಿಶಿಷ್ಟವಿಷಯಕವಾದ್ದರಿಂದ ಆತ್ಮವಿಷಯಕವಾಗಿಲ್ಲ. ಆಗಲಿ, ಅದು ಆತ್ಮವಿಷಯಕವಾಗದಿದ್ದರೂ ಆತ್ಮಾಜ್ಞಾನವನ್ನು ನಿವರ್ತನ ಮಾಡಲಿ ಎನ್ನುವುದಾದರೆ, ಘಟಜ್ಞಾನವೂ ಸಹ ಆತ್ಮಾಜ್ಞಾನವನ್ನು ಯಾಕೆ ನಿವರ್ತನ ಮಾಡಬಾರದು ? ವೇದಾಂತವಾಕ್ಯಜನಿತವಿಜ್ಞಾನ ಹಾಗೂ ಘಟಜ್ಞಾನ ಎರಡರಲ್ಲಿಯೂ ಆತ್ಮವಿಷಯಕತ್ವಾಭಾವ ಸಮಾನವಾದ್ದರಿಂದ, ಆತ್ಮವಿಷಯಕ-ವಾಗದಿದ್ದರೂ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಾಜ್ಞಾನಕ್ಕೆ ನಿವರ್ತಕವಾಗಲಿ ಎನ್ನುವುದಾದರೆ, ಆತ್ಮವಿಷಯಕವಾಗದಿದ್ದರೂ ಸಹ ಘಟಜ್ಞಾನವೂ ಆತ್ಮಾಜ್ಞಾನಕ್ಕೆ ನಿವರ್ತಕವಾಗಲಿ ಎಂಬುದಾಗಿ ಅತಿಪ್ರಸಂಗ ಬರುತ್ತದೆ ಎಂದು ಆಚಾರ್ಯರು ಹೇಳುತ್ತಾರೆ -

---

೧ ಆತ್ಮಾಜ್ಞಾನವು ಆತ್ಮವಿಷಯಕವಾಗಿದೆ.

ವೇದಾಂತವಾಕ್ಯಜನಿತವಿಜ್ಞಾನವು ಸತ್ಯಜ್ಞಾನಾದಿಪದಪ್ರವೃತ್ತಿನಿಮಿತ್ತ ತತ್ತದ್ಗುಣಾದಿವಿಶಿಷ್ಟ-ವಿಷಯಕವಾಗಿದೆ. (ಶುದ್ಧಆತ್ಮವಿಷಯಕವಾಗಿಲ್ಲ.) ಹೀಗೆ ಎರಡೂ ಭಿನ್ನವಿಷಯಕವಾಗಿವೆ ಎಂದರ್ಥ.

ಮೂಲ:- ಅತದ್ವಿಷಯಕಜ್ಞಾನೇನ ತದಜ್ಞಾನನಿವೃತ್ತೌ ಘಟಜ್ಞಾನೇನಾಪಿ ನಿವರ್ತೇತ ।

**ಮೂಲಾರ್ಥ :-** ಆತ್ಮವಿಷಯಕವಲ್ಲದ ವೇದಾಂತವಾಕ್ಯಜನಿತವಿಜ್ಞಾನದಿಂದ ಆತ್ಮಾಜ್ಞಾನನಿವೃತ್ತಿಯಾಗುವುದಾದರೆ, ಆತ್ಮವಿಷಯಕವಲ್ಲದ ಘಟಜ್ಞಾನದಿಂದಲೂ ಆತ್ಮಾಜ್ಞಾನನಿವೃತ್ತಿಯಾಗಬೇಕಾದೀತು !

ಮೂಲದಲ್ಲಿ 'ಘಟಜ್ಞಾನದಿಂದಲೂ ನಿವೃತ್ತವಾಗಲಿ' ಎಂದಿದೆ. ಯಾವುದು ನಿವೃತ್ತವಾಗಲಿ ಎನ್ನುವುದು ಇಲ್ಲ. ಅದಕ್ಕಾಗಿ ಮೂಲದಲ್ಲಿ 'ಆತ್ಮಾಜ್ಞಾನಂ' ಎನ್ನುವುದನ್ನು ಶೇಷ ಮಾಡಿಕೊಳ್ಳಬೇಕು. ಹಾಗಾದರೆ ''ಆತ್ಮಾಜ್ಞಾನವು ಘಟಜ್ಞಾನದಿಂದಲೂ ನಿವೃತ್ತವಾಗಲಿ'' ಎಂದು ಮೂಲದ ಅರ್ಥವಾಗುತ್ತದೆ.

**ಅವತಾರಿಕೆ :-** ಆತ್ಮಾಜ್ಞಾನನಿವರ್ತಕವಾಗಬೇಕಾದರೆ ಆತ್ಮಾನ್ಯಾವಿಷಯಕತ್ವವು ತಂತ್ರವಾಗಿದೆ. ಘಟಜ್ಞಾನವು ಆತ್ಮಾನ್ಯಾವಿಷಯಕವಾಗಿಲ್ಲ (ಆತ್ಮಾನ್ಯವಿಷಯಕವೇ ಆಗಿದೆ ಆತ್ಮಭಿನ್ನಘಟವಿಷಯಕವೇ ಆಗಿದೆ). ಹಾಗಾಗಿ ಘಟಜ್ಞಾನದಿಂದ ಆತ್ಮಾಜ್ಞಾನನಿವೃತ್ತಿ ಆಗಬೇಕಾದ ಅತಿಪ್ರಸಂಗ ಇಲ್ಲ ಎಂದು ಶಂಕಿಸುತ್ತಾರೆ -

**ಟೀಕಾ: ನನು ಘಟಾದಿಜ್ಞಾನಂ ಘಟಾದಿವಿಷಯೇಣ ಗ್ರಸ್ತಂ ಕಥಮಾತ್ಮಾಜ್ಞಾನಂ ನಿವರ್ತಯೇದಿತಿ ಚೇತ್, ತತ್ಕಿಂ ಇದಾನೀಂ ವೇದಾಂತವಾಕ್ಯಜನಿತವಿಜ್ಞಾನಂ ನಿರ್ವಿಷಯಮೇವ ? ಬಾಢಮಿತಿ ಚೇತ್ತತ್ರಾಹ -**

**ಮೂಲ :- ಅವಿಷಯತ್ವಾದೇವ ತಸ್ಯ ಜ್ಞಾನತ್ವಂ ಚ ನ ಸ್ಯಾದ್ಘಟವತ್ ।**

**ನ ವಿದ್ಯತೇ ವಿಷಯೋ ಯಸ್ಯ ತದವಿಷಯಮ್ ।**

**ಅನುವಾದ :-** ಘಟಾದಿಜ್ಞಾನವು ಘಟಾದಿವಿಷಯದಿಂದ ಗ್ರಸ್ತವಾಗಿದೆ (ಸಹಿತವಾಗಿದೆ) ಅರ್ಥಾತ್ ಘಟಾದಿವಿಷಯಕವಾಗಿದೆ. ಹಾಗಾಗಿ ಆತ್ಮಾಜ್ಞಾನವನ್ನು ಹೇಗೆ ನಿವರ್ತನಗೊಳಿಸಲು ಸಾಧ್ಯ ? ಎಂದರೆ, ಹಾಗಾದರೆ ಈಗ ವೇದಾಂತವಾಕ್ಯಜನಿತವಿಜ್ಞಾನವು ನಿರ್ವಿಷಯ ಎಂದು ಅಭಿಪ್ರಾಯವೇ ?

ಹೌದು, ವೇದಾಂತವಾಕ್ಯಜನಿತವಿಜ್ಞಾನವು ನಿರ್ವಿಷಯ ಎನ್ನುತ್ತೇವೆ ಎಂದರೆ ಅದಕ್ಕೆ ಆಚಾರ್ಯರು ಹೇಳುತ್ತಾರೆ -

ಮೂಲ:-ಅವಿಷಯತ್ವಾದೇವ ತಸ್ಯ ಜ್ಞಾನತ್ವಂ ಚ ನ ಸ್ಯಾದ್ಘಟವತ್ ।

ಮೂಲದಲ್ಲಿ (ಅವಿಷಯತ್ವಾತ್ ಎನ್ನುವಲ್ಲಿ) 'ಅವಿಷಯಮ್' ಎನ್ನುವುದಕ್ಕೆ ''ನ ವಿದ್ಯತೇ ವಿಷಯೋ ಯಸ್ಯ ತತ್ ಅವಿಷಯಮ್'' ಎಂಬುದಾಗಿ ವಿಗ್ರಹ ಮಾಡಿಕೊಳ್ಳಬೇಕು. ಹಾಗಾಗಿ ಅವಿಷಯತ್ವಾತ್ ಎನ್ನುವುದಕ್ಕೆ ವಿಷಯರಹಿತತ್ವಾತ್ ನಿರ್ವಿಷಯತ್ವಾತ್ ಎಂದು ಅರ್ಥ ಹೇಳಿದಂತಾಗುತ್ತದೆ.

**ವೇದಾಂತವಾಕ್ಯಜನಿತವಿಜ್ಞಾನವು ನಿರ್ವಿಷಯ ಎನ್ನುವುದಾದರೆ, ಘಟವು ನಿರ್ವಿಷಯಕವಾದ್ದರಿಂದ ಅದು ಜ್ಞಾನ ಹೇಗೆ ಆಗಿಲ್ಲವೋ ಅದರಂತೆ ವೇದಾಂತವಾಕ್ಯಜನಿತವಿಜ್ಞಾನವೂ ಸಹ ನಿರ್ವಿಷಯಕವಾದ್ದರಿಂದ ಜ್ಞಾನವೇ ಆಗದೇ ಹೋಗಬೇಕಾಗುತ್ತದೆ ಎಂದು ಅತಿಪ್ರಸಂಗದ ಅಭಿಪ್ರಾಯ.**

### ...ಶ್ರೀವೇದೇಶತೀರ್ಥರ ಟಿಪ್ಪಣೀವಿಶೇಷವಿಚಾರ...

ವೇದಾಂತವಾಕ್ಯಜನಿತವಿಜ್ಞಾನವು ನಿರ್ವಿಷಯಕವೋ ? ಸವಿಷಯಕವೋ ? ನಿರ್ವಿಷಯಕ ಎನ್ನುವುದಾದರೆ ಘಟದಂತೆ ಜ್ಞಾನವೇ ಆಗದೇ ಹೋಗಬೇಕಾಗುತ್ತದೆ.

ಸವಿಷಯಕ ಎನ್ನುವುದಾದರೆ, ಆತ್ಮವಿಷಯಕವೋ ? ಆತ್ಮಾನ್ಯವಿಷಯಕವೋ? ಆತ್ಮವಿಷಯಕ ಎನ್ನುವುದಾದರೆ ಆತ್ಮನಿಗೆ ದೃಗ್ವಿಷಯತ್ವ ಒಪ್ಪಿದಂತಾಗುವುದರಿಂದ, ಆತ್ಮನಲ್ಲಿ ಮಿಥ್ಯಾತ್ವಸಾಧ್ಯ ಇಲ್ಲ, ದೃಶ್ಯತ್ವ ಹೇತು ಬಂತು, ಹಾಗಾಗಿ ದೃಶ್ಯತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ ಬರುತ್ತದೆ. ಇನ್ನು ಆತ್ಮಾನ್ಯವಿಷಯಕ ಎಂದರೆ ಅನ್ಯವಿಷಯಕವಾದ ಜ್ಞಾನ ಆತ್ಮಾಜ್ಞಾನವನ್ನು ಹೇಗೆ ನಿವರ್ತನೆ ಮಾಡಲು ಸಾಧ್ಯ ? ಆತ್ಮಾಜ್ಞಾನನಿವರ್ತಕತ್ವಾನುಪಪತ್ತಿಪ್ರಸಂಗ ಬರುತ್ತದೆ ಎಂದು ಭಾವ.

**ಅವತಾರಿಕೆ :-** 'ಅವಿಷಯತ್ವಾದೇವ ತಸ್ಯ ಜ್ಞಾನತ್ವಂ ಚ ನ ಸ್ಯಾತ್' ಎನ್ನುವಲ್ಲಿ ಅವಿಷಯತ್ವ ಎನ್ನುವುದಕ್ಕೆ ಅಸದ್ವಿಷಯತ್ವ ಎಂದು ಅರ್ಥ ತಿಳಿದುಕೊಂಡು ಶಂಕಿಸುತ್ತಾರೆ -

### ಶಶವಿಷಾಣಾದಿಜ್ಞಾನವು ಸವಿಷಯಕವಾಗಿದೆ ಎಂದು ಹೇಳುವ ಮೂಲಕ ದೃಶ್ಯತ್ವಹೇತುನಿರಾಕರಣೆಯ ಉಪಸಂಹಾರ

**ಟೀಕಾಃ ನನು ಕಥಮೇತತ್ । ಯಾವತಾ ಶಶವಿಷಾಣಾದಿಪದಶ್ರವಣಾ-ದವಿಷಯಮೇವ ಜ್ಞಾನಮುತ್ಪದ್ಯತೇ। ನ ಹಿ ಶಶವಿಷಾಣಾದಿಕಮಸ್ತಿ। ನ ಚಾಸ್ಯಾನ್ಯೋ ವಿಷಯಃ ಸಂಭವತಿ । ಮೈವಮ್ । ನ ಹ್ಯತ್ರಾ-ಸದ್ವಿಷಯತ್ವಮವಿಷಯತ್ವಮಿತ್ಯಭಿಮತಮ್ । ಕಿನ್ನಾಮ**

**ನಿರಾಲಂಬನತ್ವಮ್ । ನ ಹಿ ತಥಾ ಶಶವಿಷಾಣಾದಿಜ್ಞಾನಮ್ । ತಥಾತ್ವೇ ಶಶವಿಷಾಣಾದಿಜ್ಞಾನಮಿತ್ಯೇವ ನ ಸ್ಯಾತ್ ।**

**ತದೇವಂ ಕಯಾಽಪಿ ವಿಧಯಾ ಆತ್ಮನೋ ದೃಕ್ಕರ್ಮತ್ವಾಭಾವೇ ನ ವೇದಾಂತವಾಕ್ಯಜನಿತವಿಜ್ಞಾನಮಾತ್ಮಜ್ಞಾನಂ ಭವತೀತಿ ತತ್ಸಿದ್ಧಯೇ ಅವಶ್ಯಮಾತ್ಮನೋ ದೃಕ್ಕರ್ಮತ್ವೇಽಂಗೀಕಾರ್ಯೇ ತಸ್ಯಾನೈಕಾಂತಿಕತ್ವಂ ಸಿದ್ಧಮ್ ।**

**ಅನುವಾದ :-**

**'ನಿರ್ವಿಷಯತ್ವೇ ಜ್ಞಾನತ್ವಮೇವ ನ ಸ್ಯಾತ್'** .

''ವೇದಾಂತವಾಕ್ಯಜನಿತವಿಜ್ಞಾನವು ನಿರ್ವಿಷಯಕ ಎನ್ನುವುದಾದರೆ ಜ್ಞಾನವೇ ಆಗದೇ ಹೋಗಬೇಕಾಗುತ್ತದೆ'' ಎಂಬುದಾಗಿ ಹೇಗೆ ಆಪಾದನೆ ಮಾಡುತ್ತೀರಿ? ಯಾಕೆಂದರೆ - ನಿರ್ವಿಷಯಕ ಎಂದರೆ ಜ್ಞಾನವೇ ಅಲ್ಲ ಎಂದೇನಿಲ್ಲ. 'ಇದಂ ಶಶವಿಷಾಣಂ' ಎಂಬುದಾಗಿ ಶಶವಿಷಾಣಾದಿಪದಶ್ರವಣದಿಂದ ನಿರ್ವಿಷಯಕವಾದ ಜ್ಞಾನವೇ ಅಲ್ಲಿ ಹುಟ್ಟುವುದು. ಅದು ನಿರ್ವಿಷಯಕ ಏಕೆ? ಎಂದರೆ, ಅಲ್ಲಿ ವಾಸ್ತವಿಕವಾಗಿ ಶಶವಿಷಾಣಾದಿಗಳು ಇಲ್ಲ. ಹಾಗಾಗಿ ಆ ಜ್ಞಾನವು ಶಶವಿಷಾಣವಿಷಯಕ ಅಲ್ಲ. ಮತ್ತು ಆ ಜ್ಞಾನಕ್ಕೆ ಬೇರೆ ವಸ್ತು ವಿಷಯವಾಗಲು ಸಾಧ್ಯವಿಲ್ಲ. ಅಂದಮೇಲೆ ಶಶವಿಷಾಣಾದಿಪದಶ್ರವಣದಿಂದ ಹುಟ್ಟುವ ಜ್ಞಾನ ನಿರ್ವಿಷಯಕ. ಅದು ನಿರ್ವಿಷಯಕವಾದರೂ ಜ್ಞಾನ ಆಗಿರುವಂತೆ ವೇದಾಂತವಾಕ್ಯಜನಿತವಿಜ್ಞಾನವೂ ನಿರ್ವಿಷಯಕವಾದರೂ ಜ್ಞಾನವಾಗಲು ತೊಂದರೆಯಿಲ್ಲ. ಆದ್ದರಿಂದ ''**ನಿರ್ವಿಷಯತ್ವೇ ಜ್ಞಾನತ್ವಮೇವ ನ ಸ್ಯಾತ್**''ಎಂಬ ನಿಮ್ಮ ಆಪಾದನೆ ಹೇಗೆ ಸಮಂಜಸ ?

ಈ ರೀತಿಯಾಗಿ ಶಂಕೆ ಬಂದರೆ, ಅದು ಸರಿಯಲ್ಲ. ಯಾಕೆಂದರೆ - ''ಅವಿಷಯತ್ವಾದೇವ ತಸ್ಯ ಜ್ಞಾನತ್ವಂ ಚ ನ ಸ್ಯಾತ್'' ಎನ್ನುವಲ್ಲಿ ಅವಿಷಯತ್ವ ಎನ್ನುವುದಕ್ಕೆ ಅಸದ್ವಿಷಯತ್ವ (ನಿರ್ವಿಷಯತ್ವ) ಎನ್ನುವುದು ಅಭಿಪ್ರೇತವಾಗಿಲ್ಲ. ಕಿಂತು ಅವಿಷಯತ್ವ ಎಂದರೆ ನಿರಾಲಂಬನತ್ವ ಅರ್ಥಾತ್ ವಿಷಯಾನುಲ್ಲೇಖಿತ್ವ ಎಂದು ಅರ್ಥ. ಪ್ರಕೃತದಲ್ಲಿ ಶಶವಿಷಾಣಾದಿಜ್ಞಾನವು ಹಾಗೆ ನಿರಾಲಂಬನ ವಿಷಯಾನುಲ್ಲೇಖಿ ಆಗಿಲ್ಲ. ಹಾಗೆ ನಿರಾಲಂಬನವೇ ವಿಷಯಾನುಲ್ಲೇಖಿಯೇ ಆಗಿದ್ದರೆ 'ಶಶವಿಷಾಣಾದಿಜ್ಞಾನ' ಎಂದೇ ಆಗದೇ ಹೋಗಬೇಕಾಗುತ್ತದೆ.

ಆದ್ದರಿಂದ ಶಶವಿಷಾಣಾದಿಜ್ಞಾನವು ನಿರಾಲಂಬನ ವಿಷಯಾನುಲ್ಲೇಖಿ ಆಗಿಲ್ಲ. ಕಿಂತು ಸಾಲಂಬನವೇ ವಿಷಯೋಲ್ಲೇಖಿಯೇ ಆಗಿದೆ. ಹಾಗಾಗಿ ''ನಿರಾಲಂಬನ ವಿಷಯಾನುಲ್ಲೇಖಿ ಆಗುವುದಾದರೆ ಜ್ಞಾನವೇ ಆಗದೇ ಹೋಗಬೇಕಾಗುತ್ತದೆ'' ಎನ್ನುವುದು

**''ಅವಿಷಯತ್ವಾದೇವ ತಸ್ಯ ಜ್ಞಾನತ್ವಂ ಚ ನ ಸ್ಯಾತ್''**

ಎಂಬ ಆಪಾದನೆಯ ಅಭಿಪ್ರೇತ ಅರ್ಥವಾಗಿದೆ. ಹಾಗಾಗಿ ಯಾವ ಅನುಪಪತ್ತಿಯೂ ಇಲ್ಲ.

ಅಂದಮೇಲೆ [೧]ತದಾಕಾರತ್ವ - ತದಜ್ಞಾನನಿವರ್ತಕತ್ವ ಮೊದಲಾದ ಯಾವ ರೀತಿಯಿಂದಲೂ ಸಹ ಆತ್ಮನಿಗೆ ದೃಕ್ಕರ್ಮತ್ವ ಇಲ್ಲದೇ ಹೋದರೆ ವೇದಾಂತ-ವಾಕ್ಯಜನಿತವಿಜ್ಞಾನವು ಆತ್ಮಜ್ಞಾನ ಆಗದೇಹೋಗಬೇಕಾಗುತ್ತದೆ. ವೇದಾಂತ-ವಾಕ್ಯಜನಿತವಿಜ್ಞಾನವು ಆತ್ಮಜ್ಞಾನ ಆಗುವುದಕ್ಕಾಗಿ ಆತ್ಮನಿಗೆ ಅವಶ್ಯವಾಗಿ ದೃಕ್ಕರ್ಮತ್ವವನ್ನು ಅಂಗೀಕರಿಸಲೇಬೇಕು. ಆತ್ಮನಿಗೆ ದೃಕ್ಕರ್ಮತ್ವವನ್ನು ಅಂಗೀಕರಿಸಿದರೆ **''ವಿಮತಂ ಮಿಥ್ಯಾ ದೃಶ್ಯತ್ವಾತ್''** ಎಂಬ ಅನುಮಾನದಲ್ಲಿ ವಿಪಕ್ಷನಾದ ಆತ್ಮನಲ್ಲಿಯೂ ದೃಶ್ಯತ್ವ ಬರುವುದರಿಂದ ವ್ಯಭಿಚಾರ ಸಿದ್ಧವಾಗುತ್ತದೆ.

ಆದ್ದರಿಂದ ಜಡಪ್ರಪಂಚವು ಮಿಥ್ಯೆಯಾಗಿದೆ (ಸ್ವರೂಪತಃ ಅವಿದ್ಯೋ-ಪಾದಾನಕವಾಗಿದೆ ಬ್ರಹ್ಮನಲ್ಲಿ ಆರೋಪಿತವಾಗಿದೆ) ಎಂಬ ವಿಷಯದಲ್ಲಿ

**''ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್''** ಎಂಬ ಅನುಮಾನವು (ದೃಶ್ಯತ್ವಹೇತುವು) ಪ್ರಮಾಣವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** 'ಜಡಪ್ರಪಂಚವು ಮಿಥ್ಯೆಯಾಗಿದೆ' ಎಂಬ ವಿಷಯದಲ್ಲಿ ಪರರು ಉದಾಹರಿಸಿದ ''ವಿವಾದಪದಂ ಮಿಥ್ಯಾ ದೃಶ್ಯತ್ವಾತ್, ಜಡತ್ವಾತ್, ಪರಿಚ್ಛಿನ್ನತ್ವಾತ್, ಶುಕ್ತಿರಜತವತ್'' ಎಂಬ ಮೂರು ಅನುಮಾನಗಳಲ್ಲಿ ಈವರೆಗೆ ದೃಶ್ಯತ್ವಹೇತುವನ್ನು ವಿಸ್ತಾರವಾಗಿ ನಿರಾಕರಿಸಿ, ಪ್ರಕೃತ ಜಡತ್ವಹೇತುವನ್ನೂ

---

೧ ''ಆತ್ಮಾಕಾರಕವಾದ ಜ್ಞಾನ ಆತ್ಮಜ್ಞಾನ'' ಅಥವಾ ''ಆತ್ಮಾಜ್ಞಾನನಿವರ್ತಕವಾದ ಜ್ಞಾನ ಆತ್ಮಜ್ಞಾನ'' ಎಂಬುದಾಗಿ ಯಾವ ರೀತಿಯಿಂದಲೂ ಆತ್ಮಜ್ಞಾನವನ್ನು (ಕೂಡಿಸಲು) ಹೇಳಲು ಬಾರದ ಕಾರಣ ''ಆತ್ಮಕರ್ಮಕವಾದ ಜ್ಞಾನ ಆತ್ಮಜ್ಞಾನ'' ಎಂಬುದಾಗಿಯೇ ಅನಿವಾರ್ಯವಾಗಿ ಹೇಳಬೇಕು. ಹಾಗೆ ಹೇಳಿದರೆ ಆತ್ಮನಿಗೆ ದೃಕ್ಕರ್ಮತ್ವ ಅಂಗೀಕೃತವಾದಂತಾಗುತ್ತದೆ ಎಂದು ಭಾವ.

(ವಿವಾದಪದಂ ಮಿಥ್ಯಾ ಜಡತ್ವಾತ್' ಎಂಬ ಅನುಮಾನವನ್ನೂ) ನಿರಾಕರಿಸುತ್ತಾರೆ-

**ಜಡತ್ವಹೇತುನಿರಾಕರಣೆ**

**ಟೀಕಾ : ಅಥ ಜಡತ್ವಸ್ಯಾಪಿ ಹೇತೋರನೈಕಾಂತಿಕತಾಂ ವಿವಕ್ಷುರಾಹ -**

**ಮೂಲ - ಜಡತ್ವಂ ಚಾಪ್ರಮಾತೃತ್ವಮೇವ ।**

**ಚಶಬ್ದೋ ಯಸ್ಮಾದಿತ್ಯರ್ಥೇ । ಚೇತ್ಯತಾ ಜಡತ್ವಮಿತ್ಯಂಗೀಕಾರೇ ದೃಶ್ಯತ್ವಜಡತ್ವಯೋರ್ಭೇದೋ ನ ಸ್ಯಾತ್ । ಕಿಮತ ಇತ್ಯತ ಆಹ -**

**ಮೂಲ - ನ ಚ ಪ್ರಮಾತೃತ್ವಮಾತ್ಮನಸ್ತೈರಂಗೀಕ್ರಿಯತೇ ।**

**ಅತ್ರಾಪಿಚಶಬ್ದೋಹೇತ್ವರ್ಥಃ।ತೈರಿತಿಪ್ರಪಂಚಮಿಥ್ಯಾತ್ವವಾದಿಭಿಃ। ಪ್ರಮಾತೃತ್ವಸ್ಯ ಪ್ರಮಾಣಪ್ರಮೇಯಸಿದ್ಧಿಸಾಹಿತ್ಯನಿಯತತ್ವಾತ್ ತದಂಗೀಕಾರೇ ತಯೋರಪ್ಯಂಗೀಕಾರಪ್ರಸಂಗಾನ್ನಾತ್ಮನಃ ಪ್ರಮಾತೃತ್ವಂ ಪರೈರಂಗೀಕ್ರಿಯತೇ । ತತೋಽಪಿ ಕಿಮಿತ್ಯತ ಆಹ -**

**ಮೂಲ - ಅತಸ್ತದಪ್ಯನೈಕಾಂತಿಕಮ್ ।**

**ಯಸ್ಮಾತ್ ಪ್ರಮಾತೃತ್ವಾಭಾವ ಏವ ಜಡತ್ವಂ ಯತಶ್ಚಾತ್ಮನಃ ಪ್ರಮಾತೃತ್ವಂ ಪರೇಣ ನಾಂಗೀಕ್ರಿಯತೇ ಅತೋ ದೃಶ್ಯತ್ವವಜ್ಜಡತ್ವಮಪ್ಯಾತ್ಮನಿ ವಿಪಕ್ಷೇ ವರ್ತಮಾನಮನೈಕಾಂತಿಕಂ ಭವತಿ ।**

**ಅನುವಾದ :-** ದೃಶ್ಯತ್ವಹೇತುವಿಗೆ ವ್ಯಭಿಚಾರದೋಷ ಹೇಳಿದಂತೆ ಜಡತ್ವಹೇತುವಿಗೂ ಸಹ ವ್ಯಭಿಚಾರದೋಷವನ್ನು (ಹೇಳಿ ನಿರಾಕರಿಸುತ್ತಾರೆ) ಹೇಳುತ್ತಾರೆ -

ಮೂಲ :- ಜಡತ್ವಂ ಚಾಪ್ರಮಾತೃತ್ವಮೇವ ।

**ಮೂಲಾರ್ಥ :-** ಜಡತ್ವ ಎಂದರೆ ಅಪ್ರಮಾತೃತ್ವ ಎಂದೇ ಹೇಳಬೇಕು.

ಮೂಲದಲ್ಲಿ ಚಶಬ್ದವು ಯಸ್ಮಾತ್ ಎಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಪ್ರಪಂಚಮಿಥ್ಯಾತ್ವವಿಷಯದಲ್ಲಿ ''ವಿವಾದಪದಂ ಮಿಥ್ಯಾ ಜಡತ್ವಾತ್'' ಎಂಬುದಾಗಿ ಜಡತ್ವವನ್ನು ಹೇತುವನ್ನಾಗಿ ಮಾಡುವುದಾದರೆ ಮೊದಲು ಜಡತ್ವವನ್ನು ನಿರ್ವಚನ ಮಾಡಬೇಕು. ಜಡತ್ವ ಎಂದರೆ ಚೇತ್ಯತಾ ಎಂದು

ಅಂಗೀಕರಿಸುವುದಾದರೆ, ಚಿತಿ ಸಂಜ್ಞಾನೇ ಎಂಬ ಧಾತುವಿನಿಂದ ಚೇತ್ಯಶಬ್ದವು ನಿಷ್ಪನ್ನವಾದ್ದರಿಂದ ಚೇತ್ಯತಾ ಎಂದರೆ ಜ್ಞಾನವಿಷಯತ್ವ ದೃಶ್ಯತ್ವ ಎಂದೇ ಹೇಳಿದಂತಾಗುವುದರಿಂದ ದೃಶ್ಯತ್ವ-ಜಡತ್ವಗಳಲ್ಲಿ ಯಾವುದೇ ಭೇದ ಇಲ್ಲದೇ ಹೋಗಬೇಕಾಗುತ್ತದೆ. ಅಂದರೆ ದೃಶ್ಯತ್ವಹೇತುವಿಗೆ ಬಂದ ಎಲ್ಲ ದೋಷಗಳೂ ಜಡತ್ವ ಚೇತ್ಯತಾ ಹೇತುವಿಗೂ ಬರಬೇಕಾಗುತ್ತದೆ ಎಂದು ಭಾವ. ಆದ್ದರಿಂದ ಜಡತ್ವ ಎಂದರೆ ಚೇತ್ಯತಾ ಎಂದು ಹೇಳಲು ಬರುವುದಿಲ್ಲ. ಕಿಂತು ಜಡತ್ವ ಎಂದರೆ ಅಪ್ರಮಾತೃತ್ವ ಎಂದೇ ಹೇಳಬೇಕು.

ಆಗಲಿ, ಜಡತ್ವ ಎಂದರೆ ಅಪ್ರಮಾತೃತ್ವ ಎಂದೇ ಹೇಳೋಣ. ಮುಂದೇನು? ಎಂದು ಪ್ರಶ್ನೆ ಬಂದರೆ, ಅದಕ್ಕೆ ಹೇಳುತ್ತಾರೆ -

**ಮೂಲ :-** ನ ಚ ಪ್ರಮಾತೃತ್ವಮಾತ್ಮನಸ್ತೈರಂಗೀಕ್ರಿಯತೇ ।

**ಮೂಲಾರ್ಥ :- ಪ್ರಪಂಚಮಿಥ್ಯಾತ್ವವಾದಿಗಳಾದರೂ ಆತ್ಮನಿಗೆ ಪ್ರಮಾತೃತ್ವವನ್ನು ಅಂಗೀಕರಿಸುವುದಿಲ್ಲ.**

ಇಲ್ಲಿಯೂ ಸಹ ಮೂಲದಲ್ಲಿ ಚಶಬ್ದವು ಹೇತ್ವರ್ಥಕವಾಗಿದೆ. (ಚಶಬ್ದಕ್ಕೆ ಯಸ್ಮಾತ್ ಎಂದು ಅರ್ಥ.) ಮೂಲದಲ್ಲಿ 'ತೈಃ' ಎಂದರೆ 'ಪ್ರಪಂಚಮಿಥ್ಯಾತ್ವ-ವಾದಿಗಳಿಂದ' ಎಂದರ್ಥ.

ಪ್ರಮಾತೃತ್ವವನ್ನು ಅಂಗೀಕರಿಸಬೇಕಾದರೆ ಪ್ರಮಾಣ-ಪ್ರಮೇಯಗಳ ಸಿದ್ಧಿಯನ್ನು ಅಂಗೀಕರಿಸಬೇಕಾಗುತ್ತದೆ. ಅಂದರೆ :- ಪ್ರಮಾತಾ ಎಂದರೆ ಯಥಾರ್ಥಜ್ಞಾನ ಉಳ್ಳವನು. ಯಥಾರ್ಥಜ್ಞಾನ ಬರಬೇಕಾದರೆ ಅದಕ್ಕೆ ಜನಕವಾದ ಪ್ರಮಾಣವನ್ನು ಒಪ್ಪಲೇಬೇಕು. ಜ್ಞಾನವು ವಿಷಯಸಾಪೇಕ್ಷವಾದ್ದರಿಂದ ಯಥಾರ್ಥಜ್ಞಾನ ಬರಬೇಕಾದರೆ ಯಥಾರ್ಥಜ್ಞಾನಕ್ಕೆ ವಿಷಯ ಪ್ರಮೇಯ ಒಪ್ಪಲೇಬೇಕು. ಹೀಗೆ ಪ್ರಮಾತೃತ್ವವನ್ನು ಅಂಗೀಕರಿಸಬೇಕಾದರೆ ಪ್ರಮಾಣ-ಪ್ರಮೇಯಗಳನ್ನು ಒಪ್ಪಲೇಬೇಕಾದದ್ದು ಅನಿವಾರ್ಯವಾದ್ದರಿಂದ, ಪ್ರಕೃತ ಆತ್ಮನಿಗೆ ಪ್ರಮಾತೃತ್ವವನ್ನು ಅಂಗೀಕರಿಸಿದರೆ ಪ್ರಮಾಣ-ಪ್ರಮೇಯಗಳನ್ನೂ ಅಂಗೀಕರಿಸಬೇಕಾದ ಅತಿಪ್ರಸಂಗ ಬರುವುದರಿಂದ ಪ್ರಪಂಚಮಿಥ್ಯಾತ್ವವಾದಿಗಳು ಆತ್ಮನಿಗೆ ಪ್ರಮಾತೃತ್ವವನ್ನು ಅಂಗೀಕರಿಸುವುದಿಲ್ಲ.

ಆಯಿತು, ಪ್ರಪಂಚಮಿಥ್ಯಾತ್ವವಾದಿಗಳು ಆತ್ಮನಿಗೆ ಪ್ರಮಾತೃತ್ವವನ್ನು ಒಪ್ಪುವುದಿಲ್ಲ. ಮುಂದೇನು ? ಎಂದು ಪ್ರಶ್ನೆ ಬಂದರೆ, ಅದಕ್ಕೆ ಹೇಳುತ್ತಾರೆ -

**ಮೂಲ - ಅತಸ್ತದಪ್ಯನೈಕಾಂತಿಕಮ್ ।**

ಯಾವ ಕಾರಣ ಅಪ್ರಮಾತೃತ್ವ ಪ್ರಮಾತೃತ್ವಾಭಾವವೇ ಜಡತ್ವ ಎಂದು ಹೇಳಬೇಕೋ ಮತ್ತು ಯಾವ ಕಾರಣ ಆತ್ಮನಿಗೆ ಪ್ರಮಾತೃತ್ವವನ್ನು ಪರರು ಅಂಗೀಕರಿಸುವುದಿಲ್ಲವೋ ಆ ಕಾರಣ ವಿಪಕ್ಷನಾದ ಆತ್ಮನಲ್ಲಿ ಅಪ್ರಮಾತೃತ್ವ (ಪ್ರಮಾತೃತ್ವಾಭಾವ)ರೂಪ ಜಡತ್ವ ಬರುವುದರಿಂದ, ದೃಶ್ಯತ್ವಹೇತುವು ವಿಪಕ್ಷದಲ್ಲಿ ಇರುವುದರಿಂದ ವ್ಯಭಿಚಾರಿ ಆದಂತೆ ಜಡತ್ವಹೇತುವೂ ಸಹ ವಿಪಕ್ಷನಾದ ಆತ್ಮನಲ್ಲಿ ಬರುವುದರಿಂದ ವ್ಯಭಿಚಾರಿ ಆಗಿದೆ ಎಂದು ಅಭಿಪ್ರಾಯ.

**ಅವತಾರಿಕೆ :-** ದೃಶ್ಯತ್ವಹೇತು - ಜಡತ್ವಹೇತು ಎರಡಕ್ಕೂ ವ್ಯಭಿಚಾರದೋಷ ಹೇಳಿದರೂ ಸಹ ಅವುಗಳಲ್ಲಿ ವ್ಯತ್ಯಾಸವನ್ನು ತೋರಿಸಿಕೊಡುತ್ತಾರೆ -

**ಟೀಕಾಃ ಇಯಾಂಸ್ತು ವಿಶೇಷಃ । ಯದ್ದೃಶ್ಯತ್ವಂ ವಾದಿಪ್ರತಿವಾದಿನೋ-ರನೈಕಾಂತಿಕಮ್ । ಆತ್ಮನೋ ದೃಶ್ಯತ್ವಸ್ಯ ಪರಂ ಪ್ರತ್ಯುಪಪಾದಿತ-ತ್ವಾತ್ । ಜಡತ್ವಂ ಪುನರ್ಮಾಯಾವಾದಿನ ಏವ । ತತ್ವವಾದಿನಾ ಆತ್ಮನಃ ಪ್ರಮಾತೃತ್ವಸ್ಯಾಂಗೀಕಾರಾತ್ । ಅತ ಏವ ತೈರಿತ್ಯುಕ್ತಮ್ ।**

**ಅನುವಾದ :-** ದೃಶ್ಯತ್ವಹೇತುವಿಗೆ ಆತ್ಮನಲ್ಲಿ ಏನು ವ್ಯಭಿಚಾರದೋಷವನ್ನು ಹೇಳಿದರು ಅದು ವಾದಿ-ಪ್ರತಿವಾದಿ ಇಬ್ಬರಿಗೂ ಸಮ್ಮತವಾದದ್ದಾಗಿದೆ. ಆತ್ಮನಲ್ಲಿ ಮಿಥ್ಯಾತ್ವ ಇಲ್ಲ. ಆದರೆ ದೃಶ್ಯತ್ವ ಇದೆ ಎಂಬುದಾಗಿ ಇಬ್ಬರೂ ಅಂಗೀಕರಿಸಿದ್ದರಿಂದ, [೧]ಇಬ್ಬರ ಪ್ರಕಾರವೂ ವ್ಯಭಿಚಾರದೋಷ ಹೇಳಲಾಗಿದೆ.

---

೧ ಹೌದು, ಆತ್ಮನಲ್ಲಿ ಮಿಥ್ಯಾತ್ವವಿಲ್ಲ ಎನ್ನುವುದು ಇಬ್ಬರಿಗೂ ಸಮ್ಮತವಾಗಿದೆ ನಿಜವೇ. ಆದರೆ ಆತ್ಮನಲ್ಲಿ ದೃಶ್ಯತ್ವವಿದೆ ಎಂದು ವಾದಿಗಳಾದ ನಮಗೆ ಸಮ್ಮತಿಯಿದ್ದರೂ ಸಹ, ಪ್ರತಿವಾದಿಗಳು (ಮಾಯಾವಾದಿಗಳು) ಆತ್ಮನಿಗೆ ದೃಶ್ಯತ್ವವನ್ನು ಹೇಗೆ ಒಪ್ಪುತ್ತಾರೆ ? ಕಾರಣ - ಪರರು ಆತ್ಮನಿಗೆ ಸ್ವಪ್ರಕಾಶತ್ವವನ್ನು ಒಪ್ಪುವವರು. ಸ್ವಪ್ರಕಾಶತ್ವ-ದೃಶ್ಯತ್ವ ಎರಡೂ ವಿರುದ್ಧವಾದದ್ದರಿಂದ ಪರರು ಆತ್ಮನಿಗೆ ದೃಶ್ಯತ್ವವನ್ನು ಒಪ್ಪುವುದಿಲ್ಲವಲ್ಲ ? ಎಂಬ ಶಂಕೆ ಬೇಡ. ಯಾಕೆಂದರೆ - ಆತ್ಮನಿಗೆ ದೃಶ್ಯತ್ವವನ್ನು ಪರರು ಒಪ್ಪದಿದ್ದರೂ

''ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸದೇ ಹೋದರೆ ವೇದಾಂತವಾಕ್ಯಜನಿತವಿಜ್ಞಾನವು ಆತ್ಮಜ್ಞಾನ ಆಗದೇ ಹೋಗಬೇಕಾಗುತ್ತದೆ. ಅದರಿಂದ ಆತ್ಮಾಜ್ಞಾನನಿವೃತ್ತಿ ಆಗದೇ ಹೋಗಬೇಕಾಗುತ್ತದೆ''

ಇತ್ಯಾದಿಯಾಗಿ ಅನೇಕ ಅತಿಪ್ರಸಂಗಗಳನ್ನು ಹೇಳುವ ಮೂಲಕ ಪರರನ್ನು ಕುರಿತು ಆತ್ಮನಿಗೆ ದೃಶ್ಯತ್ವವನ್ನು ಉಪಪಾದಿಸಲಾಗಿದೆ. (ಆತ್ಮನಿಗೆ ದೃಶ್ಯತ್ವ ಒಪ್ಪಲೇಬೇಕೆಂದು ಸಮರ್ಥಿಸಲಾಗಿದೆ.) ಆದ್ದರಿಂದ ದೃಶ್ಯತ್ವಹೇತು ಆತ್ಮನಲ್ಲಿ ಇಬ್ಬರಿಗೂ ಸಮ್ಮತವಾದ್ದರಿಂದ, ''ಇಬ್ಬರ ಪ್ರಕಾರವೂ

ಯದ್ಯಪಿ ಆತ್ಮನಿಗೆ ದೃಶ್ಯತ್ವವನ್ನು ಪರರು ಒಪ್ಪುವುದಿಲ್ಲ. ಆದರೂ ಅನೇಕ ಅತಿಪ್ರಸಂಗಗಳನ್ನು ಹೇಳುವ ಮೂಲಕ ಪರರನ್ನು ಕುರಿತು ಆತ್ಮನಿಗೆ ದೃಶ್ಯತ್ವವನ್ನು ಈ ಹಿಂದೆ ಉಪಪಾದಿಸಿದ್ದರಿಂದ (ಸಮರ್ಥಿಸಿದ್ದರಿಂದ) ದೃಶ್ಯತ್ವ ಹೇತುವಿಗೆ ಇಬ್ಬರ ಪ್ರಕಾರವೂ ವ್ಯಭಿಚಾರದೋಷ ಹೇಳಲಾಗಿದೆ ಎಂದು ಭಾವ.

ಆದರೆ ಜಡತ್ವಹೇತುವಿಗೆ ವ್ಯಭಿಚಾರದೋಷ ಹೇಳಿದ್ದು ಮಾತ್ರ ಮಾಯಾವಾದಿಗಳ ಮತದ ಅನುಸಾರವಾಗಿ ಮಾತ್ರ. ಕಾರಣ :- ಸಿದ್ಧಾಂತಿಗಳಾದ ನಾವು ಆತ್ಮನಿಗೆ ಪ್ರಮಾತೃತ್ವವನ್ನೇ ಅಂಗೀಕರಿಸಿದ್ದರಿಂದ, ಅಪ್ರಮಾತೃತ್ವ ಪ್ರಮಾತೃತ್ವಾಭಾವ ರೂಪವಾದ ಜಡತ್ವವು ಸಿದ್ಧಾಂತರೀತ್ಯಾ ಆತ್ಮನಲ್ಲಿ ಬರುವುದಿಲ್ಲವಾದ್ದರಿಂದ ಸಿದ್ಧಾಂತರೀತ್ಯಾ ವ್ಯಭಿಚಾರದೋಷ ಹೇಳಲು ಬರುವುದಿಲ್ಲ.

ಮಾಯಾವಾದಿಗಳು ಆತ್ಮನಿಗೆ ಪ್ರಮಾತೃತ್ವವನ್ನು ಒಪ್ಪಿಲ್ಲವಾದ್ದರಿಂದ, ಅಪ್ರಮಾತೃತ್ವ ಪ್ರಮಾತೃತ್ವಾಭಾವ ರೂಪವಾದ ಜಡತ್ವವು ಪರರೀತ್ಯಾ ಆತ್ಮನಲ್ಲಿ ಬರುತ್ತದೆಯಾದ್ದರಿಂದ ಪರರೀತ್ಯಾ ವ್ಯಭಿಚಾರದೋಷ ಬರುತ್ತದೆ.

ಹಾಗಾಗಿ ಜಡತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರದೋಷ ಹೇಳಿದ್ದು ಕೇವಲ ಪರರ ಮಾತಾನುಸಾರವಾಗಿ ಮಾತ್ರ. ಅನ್ನುವುದಕ್ಕಾಗಿಯೇ

''ನ ಚ ಪ್ರಮಾತೃತ್ವಂ ಆತ್ಮನಃ ತೈಃ ಅಂಗೀಕ್ರಿಯತೇ''

ಎಂಬುದಾಗಿ ಆಚಾರ್ಯರು **ತೈಃ ನ ಅಂಗೀಕ್ರಿಯತೇ** ಆತ್ಮನಿಗೆ ಪ್ರಮಾತೃತ್ವವನ್ನು ಅವರು ಒಪ್ಪುವುದಿಲ್ಲ ಎಂದು ಹೇಳಿದರು.

**ಅವತಾರಿಕೆ :-** ''ಆತ್ಮನಲ್ಲಿ ಮಿಥ್ಯಾತ್ವವಿಲ್ಲ. ಅಲ್ಲಿ ಪ್ರಮಾತೃತ್ವವನ್ನು ಪರರು ಅಂಗೀಕರಿಸಿಲ್ಲವಾದ್ದರಿಂದ ಅಪ್ರಮಾತೃತ್ವ ರೂಪ ಜಡತ್ವ ಬಂತು, ವ್ಯಭಿಚಾರ ಬರುತ್ತದೆ'' ಎಂಬುದಾಗಿ ನಾವು ಹೇಳಿದ್ದರ ಮೇಲೆ ಪರರು ಶಂಕಿಸುತ್ತಾರೆ -

**ಟೀಕಾಃ ನನು ಪಾರಮಾರ್ಥಿಕಮೇವ ಪ್ರಮಾತೃತ್ವಮಾತ್ಮನೋ ಮಯಾ ನಾಂಗೀಕ್ರಿಯತೇ । ತಸ್ಯೈವಾದ್ವೈತಪ್ರತಿಪಕ್ಷತ್ವಾತ್ । ಮಿಥ್ಯಾ-ಭೂತಂ ತೂಪಾದೀಯತ ಏವ । ಅನ್ಯಥಾ ಸಂಸಾರಾನಿರೂಪಣಾತ್ । ತತ್ಕಥಮಾತ್ಮನಿ ಜಡತ್ವಮನೈಕಾಂತಿಕಮಿತ್ಯತ ಆಹ -**

---

ದೃಶ್ಯತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರದೋಷ ಹೇಳಲಾಗಿದೆ'' ಎಂಬದಾಗಿ ಹೇಳಿದ್ದು ಸಮಂಜಸವೇ ಎಂದು ಅಭಿಪ್ರಾಯ.

**ಮೂಲ :-** ಮಿಥ್ಯಾಪ್ರಮಾತೃತ್ವಂ ಚಾನಿರ್ವಚನೀಯನಿರಾಸಾದೇವ ನಿರಸ್ತಮ್ ।

ಮಿಥ್ಯೇತಿ ತಾವದನಿರ್ವಚನೀಯಂ ವಕ್ತುಂ ನ ಶಕ್ಯತೇ । ತಸ್ಯಾಪ್ರಾಮಾಣಿಕತ್ವಾದಿನಾ ನಿರಸ್ತತ್ವಾತ್ । ತತೋ ಮಿಥ್ಯೇತ್ಯಸತ್ತ್ವೇ ವಕ್ತವ್ಯೇ ಮಿಥ್ಯಾಪ್ರಮಾತೃತ್ವಮಿತಿ ಆತ್ಮನೋ ನಾಸ್ತಿ ಪ್ರಮಾತೃತ್ವ-ಮಿತ್ಯುಕ್ತಂ ಸ್ಯಾತ್ । ತತಶ್ಚಾನೈಕಾಂತ್ಯತಾದವಸ್ಥ್ಯಮ್ ।

ಆತ್ಮನಿ ಪ್ರಮಾತೃತ್ವಾರೋಪಸ್ತಾವನ್ಮಯಾಽಂಗೀಕ್ರಿಯತ ಏವೇತಿ ಚೇತ್ । ಏವಂ ತರ್ಹಿ ಸಾಂಖ್ಯಚಾರ್ವಾಕಾದೀನಾ-ಮಂತಃಕರಣಾದಾವಸಾವಸ್ತೀತಿ ಭಾಗಾಸಿದ್ಧಿಃ । ಆರೋಪಿತೇನ ಹೇತ್ವಭಾವೇನಾನೈಕಾಂತ್ಯಪರಿಹಾರೇಽತಿಪ್ರಸಂಗಶ್ಚ ।

**ಅನುವಾದ :-** ಆತ್ಮನಲ್ಲಿ ಪ್ರಮಾತೃತ್ವವನ್ನು ನಾವು ಅಂಗೀಕರಿಸುವುದಿಲ್ಲ ಎಂದರೆ ಪಾರಮಾರ್ಥಿಕವಾದ ಪ್ರಮಾತೃತ್ವವನ್ನು ನಾವು ಅಂಗೀಕರಿಸುವುದಿಲ್ಲ. ಕಾರಣ - ಅಂತಹ ಪಾರಮಾರ್ಥಿಕವಾದ ಪ್ರಮಾತೃತ್ವವೇ ಅದ್ವೈತಕ್ಕೆ [೧]ವಿರೋಧಿಯಾಗಿದೆ. ಆದರೆ ಮಿಥ್ಯಾಭೂತವಾದ ಪ್ರಮಾತೃತ್ವವು ಅದ್ವೈತಕ್ಕೆ ವಿರೋಧಿಯಲ್ಲವಾದ್ದರಿಂದ ಆತ್ಮನಿಗೆ ಮಿಥ್ಯಾಭೂತವಾದ ಪ್ರಮಾತೃತ್ವವನ್ನು ಅಂಗೀಕರಿಸುತ್ತೇವೆ. ಯಾಕೆಂದರೆ - ಮಿಥ್ಯಾಭೂತವಾದ ಪ್ರಮಾತೃತ್ವವನ್ನೂ ಒಪ್ಪದಿದ್ದರೆ ಸಂಸಾರವನ್ನೇ ನಿರೂಪಿಸಲು [೨]ಆಗದೇ ಹೋಗಬೇಕಾಗುತ್ತದೆ. ಆದ್ದರಿಂದ ಪಾರಮಾರ್ಥಿಕವಾದ ಪ್ರಮಾತೃತ್ವವನ್ನು ಅಂಗೀಕರಿಸಿಲ್ಲವಾದ್ದರಿಂದ ಸದದ್ವೈತವಿರೋಧ ಬರುವುದಿಲ್ಲ, ಮಿಥ್ಯಾಭೂತವಾದ ಪ್ರಮಾತೃತ್ವವನ್ನು ಅಂಗೀಕರಿಸಿದ್ದರಿಂದ ಆತ್ಮನಿಗೆ ಸಂಸಾರವೂ ಉಪಪನ್ನವಾಗುತ್ತದೆ. ಅಂದಮೇಲೆ ಆತ್ಮನಲ್ಲಿ ಮಿಥ್ಯಾಭೂತವಾದ ಪ್ರಮಾತೃತ್ವವನ್ನೇ ಒಪ್ಪಿದ್ದರಿಂದ, ಅಪ್ರಮಾತೃತ್ವ

೧ ಹಿಂದೆ ಹೇಳಿದಂತೆ ಪ್ರಮಾತೃತ್ವವು ಪ್ರಮಾಣ-ಪ್ರಮೇಯ ಸಿದ್ಧಿಸಾಹಿತ್ಯದಿಂದ ವ್ಯಾಪ್ತವಾದದ್ದರಿಂದ ಆತ್ಮನಿಗೆ ಪಾರಮಾರ್ಥಿಕವಾದ ಪ್ರಮಾತೃತ್ವವನ್ನು ಅಂಗೀಕರಿಸಿದರೆ ಪಾರಮಾರ್ಥಿಕವಾದ ಪ್ರಮಾಣ-ಪ್ರಮೇಯಗಳನ್ನು ಅಂಗೀಕರಿಸಬೇಕಾಗುವುದರಿಂದ ಸದದ್ವೈತಮತಕ್ಕೆ ಹಾನಿಯಾಗುತ್ತದೆ ಎಂದು ಭಾವ.

೨ ಸಂಸಾರ ಎಂದರೆ ಸುಖದುಃಖಾದಿಗಳ (ಅನುಭವ) ಭೋಗ. ಅದೂ ಒಂದು ಪ್ರಮಾತೃತ್ವದ ವಿಶೇಷವೇ ಆಗಿದ್ದರಿಂದ ಆತ್ಮನಿಗೆ ಪ್ರಮಾತೃತ್ವವನ್ನೇ ಒಪ್ಪದಿದ್ದರೆ ಸಂಸಾರವೇ ಅನುಪಪನ್ನವಾಗಬೇಕಾಗುತ್ತದೆ ಎಂದು ಭಾವ.

ಪ್ರಮಾತೃತ್ವಾಭಾವ ರೂಪವಾದ ಜಡತ್ವ ಆತ್ಮನಲ್ಲಿ ಬಾರದ ಕಾರಣ ಜಡತ್ವಹೇತು ಹೇಗೆ ವ್ಯಭಿಚಾರಿ ಆಗುತ್ತದೆ ?

ಈ ರೀತಿಯಾಗಿ ಶಂಕೆ ಬಂದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲಃ- ಮಿಥ್ಯಾಪ್ರಮಾತೃತ್ವಂ ಚಾನಿರ್ವಚನೀಯನಿರಾಸಾದೇವ ನಿರಸ್ತಮ್ ।**

'ಮಿಥ್ಯಾಭೂತವಾದ ಪ್ರಮಾತೃತ್ವ ಒಪ್ಪುತ್ತೇವೆ' ಎನ್ನುವಲ್ಲಿ ಮಿಥ್ಯಾ ಎನ್ನುವುದಕ್ಕೆ ಅನಿರ್ವಚನೀಯ ಎಂಬ ಅರ್ಥವೇ ನಿಮ್ಮ ಮನಸ್ಸಿನಲ್ಲಿ ಇರುವುದು. ಅನಿರ್ವಚನೀಯವಾದ ಪ್ರಮಾತೃತ್ವ ಒಪ್ಪುತ್ತೇವೆ ಎನ್ನುವುದು ನಿಮ್ಮ ಆಂತರ್ಯ. ಆದರೆ- **ನ ಚಾನಿರ್ವಚನೀಯೇ ಕಿಂಚಿನ್ಮಾನಮ್ ।** ಅನಿರ್ವಚನೀಯವಸ್ತು-ವಿಷಯದಲ್ಲಿ ಯಾವುದೇ ಪ್ರಮಾಣ ಇಲ್ಲ ಎಂಬುದಾಗಿ ಹಿಂದೆ ಅನಿರ್ವಚನೀಯ-ವಸ್ತುವನ್ನು ನಿರಾಕರಣೆ ಮಾಡಿದ್ದರಿಂದ ಅನಿರ್ವಚನೀಯವಸ್ತುವೇ ಅನುಪಪನ್ನವಾಗಿದೆ. ಹೀಗಾಗಿ ಅನಿರ್ವಚನೀಯವಾದ ಪ್ರಮಾತೃತ್ವ ಎನ್ನುವುದು ಸರಿಯಲ್ಲ. ಅಂದಮೇಲೆ ಮಿಥ್ಯಾಭೂತವಾದ ಪ್ರಮಾತೃತ್ವ ಎಂದರೆ ಅಸತ್ ಆದ ಪ್ರಮಾತೃತ್ವ ಎಂದೇ ಆಗುವುದರಿಂದ, 'ಆತ್ಮನಲ್ಲಿ ಅಸತ್ ಆದ ಪ್ರಮಾತೃತ್ವ ಇದೆ' ಎಂದು ಹೇಳಿದರೆ 'ಆತ್ಮನಲ್ಲಿ ಪ್ರಮಾತೃತ್ವ ಇಲ್ಲ' ಎಂದೇ ಹೇಳಿದಂತಾಗುತ್ತದೆ. ಆದ್ದರಿಂದ ಪ್ರಮಾತೃತ್ವಾಭಾವರೂಪವಾದ ಜಡತ್ವಹೇತು ಆತ್ಮನಲ್ಲಿ ಬರುವುದರಿಂದ ವ್ಯಭಿಚಾರ ಸುಸ್ಥವಾಗುತ್ತದೆ.

ಆತ್ಮನಲ್ಲಿ ಆರೋಪಿತವಾದ ಪ್ರಮಾತೃತ್ವವನ್ನು ನಾವು ಅಂಗೀಕರಿಸುತ್ತೇವೆ. ಹಾಗಾಗಿ ಅಪ್ರಮಾತೃತ್ವ ಪ್ರಮಾತೃತ್ವಾಭಾವರೂಪ ಜಡತ್ವ ಬರುವುದಿಲ್ಲ, ವ್ಯಭಿಚಾರ ಇಲ್ಲ ಎಂದು ಹೇಳುವುದಾದರೆ, ಹಾಗಾದರೆ [೧]ಸಾಂಖ್ಯ-ಚಾರ್ವಾಕಾದಿಗಳು ಅಂತಃಕರಣದಲ್ಲಿ ಆತ್ಮತ್ವಾರೋಪ ಹೇಳುವುದರಿಂದ,

೧ ಸಾಂಖ್ಯ-ಚಾರ್ವಾಕಾದಿಗಳು ಅಂತಃಕರಣದಲ್ಲಿ ಆತ್ಮತ್ವಾರೋಪವನ್ನು ಹೇಳುತ್ತಾರೆ. ಹೊರತು ನಮ್ಮ ಸಿದ್ಧಾಂತದಲ್ಲಿ ಹೇಳುವುದಿಲ್ಲ.

ಜಾತಮಾತ್ರಾ ಮೃಗಾ ಗಾವಃ ಪಕ್ಷಿಣೋ ಹಸ್ತಿನೋ ಝುಷಾಃ ।
ಭಯಾಭಯಸ್ವಭೋಗಾದೌ ಕಾರಣಾನಿ ವಿಜಾನತೇ ॥

ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಅದನ್ನು ನಿರಾಕರಿಸಿದ್ದರಿಂದ, ನಮ್ಮ ಮತದಲ್ಲಿ ಅಂತಃಕರಣಾದಿಗಳಲ್ಲಿ ಆತ್ಮತ್ವಾರೋಪ ಇಲ್ಲವೇ ಇಲ್ಲ. ಇದನ್ನು ''ಸಾಂಖ್ಯಚಾರ್ವಾಕಾದೀನಾಂ'' ಎಂಬ ಶಬ್ದದ ಮೂಲಕ ಟೀಕಾಕೃತ್ಪಾದರು ಸೂಚಿಸುತ್ತಿದ್ದಾರೆ.

(ಶ್ರೀವೇದೇಶತೀರ್ಥರ ಟಿಪ್ಪಣೀ)

ಪಕ್ಷೈಕದೇಶವಾದ ಅಂತಃಕರಣಾದಿಗಳಲ್ಲಿ ಆರೋಪಿತವಾದ ಪ್ರಮಾತೃತ್ವವೇ ಬರುವುದರಿಂದ, ಪಕ್ಷೈಕದೇಶದಲ್ಲಿ ಅಪ್ರಮಾತೃತ್ವರೂಪ ಜಡತ್ವಹೇತು ಬಾರದ ಕಾರಣ ಭಾಗಾಸಿದ್ಧಿದೋಷ ಬರುತ್ತದೆ.

ಆರೋಪಿತವಾದ ಹೇತ್ವಭಾವದಿಂದ ವ್ಯಭಿಚಾರವನ್ನು ಪರಿಹರಿಸಿಕೊಳ್ಳುವುದಾದರೆ [೧]ಅತಿಪ್ರಸಂಗ ಬರಬೇಕಾಗುತ್ತದೆ.

ಆದ್ದರಿಂದ ಜಡತ್ವ ಎಂದರೆ ಲಪ್ರಮಾತೃತ್ವ ಎಂದೇ ಹೇಳಬೇಕು. ಪ್ರಮಾಣ-ಪ್ರಮೇಯಗಳ ಸಿದ್ಧಿಯಾಗಬೇಕಾದೀತು ! ಎಂಬ ಭಯದಿಂದ ವಿಪಕ್ಷನಾದ ಆತ್ಮನಲ್ಲಿ ಪ್ರಮಾತೃತ್ವವನ್ನು ನೀವೇ ಒಪ್ಪದ ಕಾರಣ, ಅಪ್ರಮಾತೃತ್ವ ಪ್ರಮಾತೃತ್ವಾಭಾವರೂಪ ಜಡತ್ವ ಹೇತು ಆತ್ಮನಲ್ಲಿ ಬರುವುದರಿಂದ ಜಡತ್ವ ಹೇತುವಿಗೆ ವ್ಯಭಿಚಾರದೋಷ ಬಂದೇ ಬರುತ್ತದೆ.

**ಜಡತ್ವ ಎಂದರೆ ಅಪ್ರಕಾಶತ್ವ, ಹಾಗಾಗಿ ಆತ್ಮನಲ್ಲಿ ವ್ಯಭಿಚಾರ ಬರುವುದಿಲ್ಲ ? ಎಂದು ಶಂಕೆ, ಅದರ ನಿರಾಕರಣೆ**

**ಟೀಕಾ : ನಾಪ್ರಮಾತೃತ್ವಂ ಜಡತ್ವಮ್ । ಕಿಂ ನಾಮ ಅಪ್ರಕಾಶತ್ವಮ್ । ನ ಚ ತದಾತ್ಮನ್ಯಸ್ತಿ । ತಸ್ಯ ಜ್ಞಾನಸ್ವರೂಪತ್ವಾತ್ । ಅತಃ ಕಥಮನೈಕಾಂತಿಕಮಿತ್ಯತ ಆಹ –**

**ಮೂಲಃ- ಯದಿ ಜಡತ್ವಂ ನಾಮಾಪ್ರಕಾಶತ್ವಂ ತದಾಽಪ್ಯಾತ್ಮನಃ ಸ್ವವಿಷಯಪ್ರಕಾಶತ್ವಾಭಾವಾತ್ ಪರವಿಷಯಪ್ರಕಾಶತ್ವಾಭಾವಾಚ್ಚಾನೈಕಾಂತಿಕಮೇವ ॥**

---

೧ ಪ್ರಕೃತ ಅಪ್ರಮಾತೃತ್ವ ಹೇತು. ತದಭಾವ ಎಂದರೆ ಪ್ರಮಾತೃತ್ವ. ಆರೋಪಿತವಾದ ಪ್ರಮಾತೃತ್ವ ಆತ್ಮನಲ್ಲಿ ಇದೆ. ಹಾಗಾಗಿ ವಿಪಕ್ಷನಾದ ಆತ್ಮನಲ್ಲಿ ಆರೋಪಿತವಾದ ಹೇತ್ವಭಾವ ಇರುವ ಕಾರಣ ವ್ಯಭಿಚಾರ ಬರುವುದಿಲ್ಲ ಎಂದು ಹೇಳುವುದಾದರೆ,

''ಪರ್ವತಃ ಅಗ್ನಿಮಾನ್ ಪ್ರಮೇಯತ್ವಾತ್''

ಎನ್ನುವಲ್ಲಿ ವಿಪಕ್ಷವಾದ ಹ್ರದದಲ್ಲಿ ನಿಜವಾಗಿ ಪ್ರಮೇಯತ್ವವೇ ಇದ್ದರೂ ಆರೋಪಿತವಾದ (ಹೇತ್ವಭಾವ) ಪ್ರಮೇಯತ್ವಾಭಾವ ಬರುವುದರಿಂದ ಅಲ್ಲಿಯೂ ವ್ಯಭಿಚಾರ ಬರದೇ ಹೋಗಬೇಕಾಗುತ್ತದೆ. ''ಪರ್ವತಃ ಅಗ್ನಿಮಾನ್ ಪ್ರಮೇಯತ್ವಾತ್'' ಎಂಬ ಅನುಮಾನವೂ ಸದನುಮಾನ ಆಗಬೇಕಾದ ಅತಿಪ್ರಸಂಗ ಬರುತ್ತದೆ ಎಂದು ಅಭಿಪ್ರಾಯ.

(ಶ್ರೀರಾಘವೇಂದ್ರಸ್ವಾಮಿಗಳವರ ಟಿಪ್ಪಣೀ)

**ಯದಿ ಜಡತ್ವಂ ನಾಮಾಪ್ರಕಾಶತ್ವಂ ಪರೋಽಂಗೀಕುರ್ಯಾತ್ ತದಾ ತದಪ್ಯನೈಕಾಂತಿಕಮೇವ ಪ್ರತಿಪ್ರತ್ತವ್ಯಮ್ । ಆತ್ಮನಃ ಪ್ರಕಾಶತ್ವಾಯೋಗಾತ್ । ತಥಾಹಿ, ಯೋಽಯಮಾತ್ಮಸ್ವರೂಪ-ಪ್ರಕಾಶೋಽಂಗೀಕ್ರಿಯತೇ ಸ ಕಿಂ ಸವಿಷಯೋ ನಿರ್ವಿಷಯೋ ವಾ । ಆದ್ಯೇಽಪಿ ಕಿಂ ಸ್ವವಿಷಯಃ ಪರವಿಷಯೋ ವಾ । ನಾದ್ಯಃ । ತದಭಾವಾತ್ । ನ ದ್ವಿತೀಯಃ । ಪರಸ್ಯೈವಾಪರೇಣಾನಂಗೀ-ಕೃತತ್ವಾತ್ । ಪರಾಭಾವೇ ಚ ಪರವಿಷಯತ್ವಸ್ಯ ದುರ್ನಿರೂಪತ್ವಾತ್ ।**

**ಅನುವಾದ :-** ಜಡತ್ವ ಎಂದರೆ ಅಪ್ರಮಾತೃತ್ವ ಎಂದು ಹೇಳಿದರೆ ಆಗ ''ಆತ್ಮನಲ್ಲಿ ಪ್ರಮಾತೃತ್ವವನ್ನು ನೀವು ಒಪ್ಪದ ಕಾರಣ, ಆತ್ಮನಲ್ಲಿ ಮಿಥ್ಯಾತ್ವಸಾಧ್ಯ ಇಲ್ಲ ಆದರೆ ಅಪ್ರಮಾತೃತ್ವ ಪ್ರಮಾತೃತ್ವಾಭಾವರೂಪ ಜಡತ್ವಹೇತು ಬರುವುದರಿಂದ ವ್ಯಭಿಚಾರ ಬರುತ್ತದೆ'' ಎಂದು ನೀವು ವ್ಯಭಿಚಾರದೋಷ ಹೇಳಬೇಕು. ಆದರೆ ಜಡತ್ವ ಎಂದರೆ ಅಪ್ರಮಾತೃತ್ವ ಎಂದು ನಾವು ಹೇಳುವುದಿಲ್ಲ. ಕಿಂತು ಜಡತ್ವ ಎಂದರೆ ಅಪ್ರಕಾಶತ್ವ ಎಂದು ಹೇಳುತ್ತೇವೆ. ಆತ್ಮನು ಜ್ಞಾನಸ್ವರೂಪನಾದ್ದರಿಂದ, ಆತ್ಮನಲ್ಲಿ ಪ್ರಕಾಶತ್ವವೇ ಇರುವ ಕಾರಣ ಆತ್ಮನಲ್ಲಿ ಅಪ್ರಕಾಶತ್ವ ಹೇತು ಬರುವುದಿಲ್ಲ. ಹಾಗಾಗಿ ಜಡತ್ವಹೇತು ವ್ಯಭಿಚಾರಿ ಆಗುವುದಿಲ್ಲ ಎಂಬುದಾಗಿ ಪರರು ಅಭಿಪ್ರಾಯಪಟ್ಟರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲಃ- ಯದಿ ಜಡತ್ವಂ ನಾಮಾಪ್ರಕಾಶತ್ವಂ ತದಾಽಪ್ಯಾತ್ಮನಃ ಸ್ವವಿಷಯಪ್ರಕಾಶತ್ವಾಭಾವಾತ್ ಪರವಿಷಯಪ್ರಕಾಶತ್ವಾಭಾವಾಚ್ಚಾನೈಕಾಂತಿಕಮೇವ ॥**

ಒಂದುವೇಳೆ ಜಡತ್ವ ಎಂದರೆ ಅಪ್ರಕಾಶತ್ವ ಎಂದು ಪರರು ಅಂಗೀಕರಿಸುವು-ದಾದರೆ ಆಗ ಆತ್ಮನಿಗೆ ಪ್ರಕಾಶತ್ವ (ಜ್ಞಾನಸ್ವರೂಪತ್ವ) ಕೂಡದ ಕಾರಣ (ಆತ್ಮನಲ್ಲಿ ಅಪ್ರಕಾಶತ್ವವೇ ಬರುವ ಕಾರಣ) ಆ ಅಪ್ರಕಾಶತ್ವರೂಪ ಜಡತ್ವಹೇತುವೂ ವ್ಯಭಿಚಾರಿಯೇ ಆಗುತ್ತದೆ ಎಂದು ತಿಳಿಯಬೇಕು.

ಹೌದು, ಆತ್ಮನಿಗೆ ಪ್ರಕಾಶತ್ವ (ಜ್ಞಾನಸ್ವರೂಪತ್ವ) ಏಕೆ ಕೂಡುವುದಿಲ್ಲ ? ಎಂದರೆ, ಆತ್ಮನಿಗೆ ಜ್ಞಾನಸ್ವರೂಪತ್ವ ಉಪಪನ್ನವಾಗುವುದಿಲ್ಲ. ಅದು ಹೇಗೆಂದರೆ-

'ಆತ್ಮನು ಜ್ಞಾನಸ್ವರೂಪನಾಗಿದ್ದಾನೆ' ಎಂಬುದಾಗಿ ಆತ್ಮಸ್ವರೂಪವಾದ ಯಾವ

ಜ್ಞಾನವನ್ನು ಅಂಗೀಕರಿಸುತ್ತಿದ್ದೀರೋ ಆ ಜ್ಞಾನವು ಸವಿಷಯವೋ ? ನಿರ್ವಿಷಯವೋ ?

ಸವಿಷಯ ಎನ್ನುವುದಾದರೆ, ಸ್ವವಿಷಯ ಎಂದು ಹೇಳುತ್ತೀರೋ ? ಅಥವಾ ಪರವಿಷಯ ಎಂದು ಹೇಳುತ್ತೀರೋ ?

ಆತ್ಮಸ್ವರೂಪವಾದ ಆ ಜ್ಞಾನವು ಸವಿಷಯವಾಗಿದೆ, ಸ್ವವಿಷಯವಾಗಿದೆ ಎಂಬ ಮೊದಲನೇ ಪಕ್ಷ ಸರಿಯಲ್ಲ. ಆತ್ಮಸ್ವರೂಪವಾದ ಆ ಜ್ಞಾನವು ಸ್ವವಿಷಯವಾಗಿದೆ ಎಂದು ಹೇಳಿದರೆ, ''ಆತ್ಮನು ತಾನೇ ಜ್ಞಾನ, ತಾನೇ ಅದಕ್ಕೆ ವಿಷಯ'' ಎಂದು ಹೇಳಿದಂತಾಗುತ್ತದೆ. ಆದರೆ ಕರ್ತೃಕರ್ಮಭಾವವಿರೋಧ ಬರುವ ಕಾರಣ 'ಆತ್ಮನೇ ಜ್ಞಾನ ಆತ್ಮನೇ ವಿಷಯ' ಎಂದು ಅಂಗೀಕರಿಸಿಲ್ಲ. ಹಾಗಾಗಿ 'ಆತ್ಮಸ್ವರೂಪವಾದ ಜ್ಞಾನವು ಸ್ವವಿಷಯವಾಗಿದೆ' ಎಂಬ ಮೊದಲನೇ ಪಕ್ಷ ಸರಿಯಲ್ಲ.

ಇನ್ನು ಆತ್ಮಸ್ವರೂಪವಾದ ಆ ಜ್ಞಾನವು ಸವಿಷಯವಾಗಿದೆ, ಪರವಿಷಯವಾಗಿದೆ ಎಂದು ಹೇಳುವ ಎರಡನೇ ಪಕ್ಷವೂ ಸರಿಯಾದದ್ದಲ್ಲ. ಏಕೆಂದರೆ - ಪರವಿಷಯವಾಗಿದೆ ಎಂದು ಯಾವಾಗ ಹೇಳಬಹುದಿತ್ತು ? ಪರನು ಇರುತ್ತಿದ್ದರೆ. ಆದರೆ ಸದದ್ವೈತವಾದಿಗಳಾದ ನೀವು ಆತ್ಮನಿಂದ ಭಿನ್ನವಾಗಿ ಪರವ್ಯಕ್ತಿಯನ್ನೇ ಒಪ್ಪಿಲ್ಲ. ಪರನೇ ಇಲ್ಲದೇ ಹೋದರೆ ಪರವಿಷಯತ್ವವನ್ನು ಹೇಳಲು ಸಾಧ್ಯವಿಲ್ಲ. ಹಾಗಾಗಿ ಆತ್ಮಸ್ವರೂಪವಾದ ಆ ಜ್ಞಾನವು ಸವಿಷಯವಾಗಿದೆ, ಪರವಿಷಯವಾಗಿದೆ ಎಂದು ಹೇಳುವ ಎರಡನೇ ಪಕ್ಷವೂ ಸರಿಯಾದದ್ದಲ್ಲ.

**ಅವತಾರಿಕೆ :–** ''ಆತ್ಮನಃ ಸ್ವವಿಷಯಪ್ರಕಾಶತ್ವಾಭಾವಾತ್ ಪರವಿಷಯ-ಪ್ರಕಾಶತ್ವಾಭಾವಾಚ್ಚ'' ಎಂಬುದಾಗಿ ಆಚಾರ್ಯರು ಹೇಳಿದ್ದರಮೇಲೆ ಶಿಷ್ಯರ ಶಂಕೆ, ಅದಕ್ಕೆ ಆಚಾರ್ಯರು ಸಮಾಧಾನ ಹೇಳುತ್ತಾರೆ-

**ಕರ್ತೃಕರ್ಮಭಾವವಿರೋಧ ಬರುವ ಕಾರಣ ಪರರು ಆತ್ಮನಿಗೆ ಸ್ವವಿಷಯಪ್ರಕಾಶತ್ವವನ್ನು ಒಪ್ಪುವುದಿಲ್ಲ ಎಂದು ಸಮರ್ಥನೆ**

**ಟೀಕಾಃ ನನು ಕಥಮಾತ್ಮನಃ ಸ್ವವಿಷಯಪ್ರಕಾಶತ್ವಾಭಾವಃ । ಯಾವತಾ ವಾದಿಪ್ರತಿವಾದಿಭ್ಯಾಂ ಸ್ವಪ್ರಕಾಶಜ್ಞಾನರೂಪ ಆತ್ಮೇತ್ಯಂಗೀಕೃತ-ಮಿತ್ಯತ ಆಹ -**

**ಮೂಲ - ಸ್ವವಿಷಯತ್ವಂ ಹಿ ಕರ್ತೃಕರ್ಮವಿರೋಧಾತ್ತೈರ್ನಾಂಗೀಕ್ರಿಯತೇ ।**

**ಆತ್ಮಪ್ರಕಾಶಸ್ಯೇತಿ ಶೇಷಃ । ಸತ್ಯಮಸ್ಮಾಭಿಃ ಸ್ವವಿಷಯಪ್ರಕಾಶತ್ವ-ಮಾತ್ಮನೋಽಂಗೀಕ್ರಿಯತೇ । ಪರೈಸ್ತು ನಾಂಗೀಕ್ರಿಯತೇ । ಏಕಸ್ಯಾಂ ಕ್ರಿಯಾಯಾಂ ಹಿ ಕರ್ತೃಕರ್ಮಣೋರೇಕತ್ವಂ ವಿರುದ್ಧಮ್ । [1]ಪರಸಮವೇತಕ್ರಿಯಾಫಲಶಾಲಿತ್ವಸ್ಯ ಕರ್ಮ-ಲಕ್ಷಣತ್ವಾತ್ । ಅತೋ ನ ಸ್ವವಿಷಯಮಾತ್ಮಜ್ಞಾನಮ್ । ಸ್ವಪ್ರಕಾಶತ್ವಂ ತು ಪರಪ್ರಕಾಶ್ಯತಾಭಾವಮಾತ್ರಮಿತಿ [2]ಪರೇಷಾಂ ಪ್ರವಾದಃ । ತದಭಿಪ್ರಾಯೇಣ ಚ 'ಆತ್ಮನಃ ಸ್ವವಿಷಯ-ಪ್ರಕಾಶತ್ವಾಭಾವಾತ್' ಇತ್ಯುಕ್ತಮಿತ್ಯದೋಷಃ।**

**ಅನುವಾದ :-** ಹೌದು, ಆತ್ಮನಿಗೆ ಸ್ವವಿಷಯಪ್ರಕಾಶತ್ವ ಇಲ್ಲ ಏಕೆ ? ಕಾರಣ ವಾದಿ-ಪ್ರತಿವಾದಿ ಇಬ್ಬರೂ 'ಆತ್ಮನು ಸ್ವಪ್ರಕಾಶಜ್ಞಾನರೂಪನಾಗಿದ್ದಾನೆ' ಎಂಬುದಾಗಿ ಅಂಗೀಕರಿಸಿದ್ದೀರಿ. ಅಂದಮೇಲೆ 'ಆತ್ಮನಃ ಸ್ವವಿಷಯಪ್ರಕಾಶತ್ವಾ-ಭಾವಾತ್' ಎಂಬುದಾಗಿ ಹೇಗೆ ಹೇಳಿದಿರಿ ?

ಈ ರೀತಿಯಾಗಿ ಶಿಷ್ಯರು ಶಂಕಿಸಿದರೆ, ಅದಕ್ಕೆ ಆಚಾರ್ಯರು ಹೇಳುತ್ತಾರೆ -

**ಮೂಲ :-ಸ್ವವಿಷಯತ್ವಂ ಹಿ ಕರ್ತೃಕರ್ಮವಿರೋಧಾತ್ತೈರ್ನಾಂಗೀಕ್ರಿಯತೇ।**

**ಮೂಲಾರ್ಥ :-** ಕರ್ತೃಕರ್ಮವಿರೋಧ ಬರುವ ಕಾರಣ ಆತ್ಮಸ್ವರೂಪಜ್ಞಾನಕ್ಕೆ ಸ್ವವಿಷಯತ್ವವನ್ನು ಪರರು ಅಂಗೀಕರಿಸುವುದಿಲ್ಲ.

ಮೂಲದಲ್ಲಿ 'ಸ್ವವಿಷಯತ್ವವನ್ನು ಅಂಗೀಕರಿಸುವುದಿಲ್ಲ' ಎಂದಿದೆ. ಯಾವುದಕ್ಕೆ ಸ್ವವಿಷಯತ್ವವನ್ನು ಅಂಗೀಕರಿಸುವುದಿಲ್ಲ ? ಎಂದು ಹೇಳಿಲ್ಲ. ಅದಕ್ಕಾಗಿ ಮೂಲದಲ್ಲಿ 'ಆತ್ಮಪ್ರಕಾಶಸ್ಯ' ಎಂದು ಶೇಷ ಮಾಡಿಕೊಳ್ಳಬೇಕು. ಹಾಗಾದರೆ ''ಆತ್ಮಪ್ರಕಾಶಸ್ಯ ಸ್ವವಿಷಯತ್ವಂ ತೈಃ ನಾಂಗೀಕ್ರಿಯತೇ'' ಎಂಬುದಾಗಿ ಅನ್ವಯ ಮಾಡಿಕೊಳ್ಳಬೇಕು.

---

೧ 'ಸ್ವಭಿನ್ನಕರ್ತೃಸಮವೇತೇತ್ಯರ್ಥಃ।' (ಶ್ರೀವೇದೇಶತೀರ್ಥರ ಟಿಪ್ಪಣೀ)

''ಕರ್ಮಣಃ ಸಕಾಶಾತ್ ಯಃ ಪರಃ ಕರ್ತಾ ತತ್ರ ಸಮವೇತಕ್ರಿಯಾ ತಸ್ಯಾಃ ಯತ್ ಫಲಂ ತಚ್ಛಾಲಿತ್ವಂ ತತ್ಸ್ವರೂಪತ್ವಂ ತಸ್ಯೈವ ಕರ್ಮಲಕ್ಷಣತ್ವಾದಿತ್ಯರ್ಥಃ।''

(ಶ್ರೀಗೋವಿಂದಭಟ್ಟರ ಟಿಪ್ಪಣೀ)

೨ ತಥಾ ಸತಿ ಪರಾಪ್ರಕಾಶ್ಯತಯಾ ಶಶವಿಷಾಣಾದೇರಪಿ ಸ್ವಪ್ರಕಾಶತಾಪ್ರಸಂಗಾದಿತಿ ಭಾವೇನ ಪರೇಷಾಂ ಪ್ರವಾದ ಇತ್ಯುಕ್ತಮ್ । (ಶ್ರೀಪಾಂಡುರಂಗೀ ಕೇಶವಾಚಾರ್ಯರ ಟಿಪ್ಪಣೀ)

''ಆತ್ಮನು ಸ್ವಪ್ರಕಾಶಜ್ಞಾನರೂಪನಾಗಿದ್ದಾನೆ' ಎಂಬುದಾಗಿ ವಾದಿ-ಪ್ರತಿವಾದಿ ಇಬ್ಬರೂ ಅಂಗೀಕರಿಸಿದ್ದೀರಿ'' ಎಂದು ಹೇಳಿದಿರಿ. ಸತ್ಯವೇ, ವಾದಿ-ಪ್ರತಿವಾದಿ ಇಬ್ಬರಲ್ಲಿ ವಾದಿಗಳಾದ ನಾವು 'ಆತ್ಮನು ಸ್ವವಿಷಯಪ್ರಕಾಶನಾಗಿದ್ದಾನೆ' ಎಂದು ಅಂಗೀಕರಿಸಿದ್ದೇವೆ ಎನ್ನುವುದು ನಿಜವೇ.

ಆದರೆ ಪ್ರತಿವಾದಿಗಳಾದ ಪರರು ಮಾತ್ರ ಹಾಗೆ ಅಂಗಿಕರಿಸುವುದಿಲ್ಲ. ಏಕೆಂದರೆ - ಒಂದೇ ಕ್ರಿಯೆಯಲ್ಲಿ ಕರ್ತೃ-ಕರ್ಮ ಎರಡೂ ಒಂದೇ ಆಗುವುದು ವಿರುದ್ಧವಾಗಿದೆ.

**ಪರಸಮವೇತಕ್ರಿಯಾಫಲಶಾಲಿತ್ವಂ ಕರ್ಮಣಃ ಲಕ್ಷಣಮ್ ।**

'ತನ್ನಿಂದ ಭಿನ್ನನಾದ ಕರ್ತೃವಿನಲ್ಲಿ ಸಮವೇತವಾದ ಕ್ರಿಯಾದಿಂದ ಜನ್ಯವಾದ ಫಲ ಉಳ್ಳದ್ದು ಕರ್ಮ' ಎಂಬುದಾಗಿ ಕರ್ಮದ ಲಕ್ಷಣ. ಉದಾ - 'ದೇವದತ್ತಃ ಗ್ರಾಮಂ ಗಚ್ಛತಿ' ಎನ್ನುವಲ್ಲಿ ಗ್ರಾಮವು ಕರ್ಮವಾಗಿದೆ. ಗ್ರಾಮದಿಂದ ಭಿನ್ನನಾಗಿದ್ದಾನೆ ದೇವದತ್ತ ಕರ್ತೃ. ಹಾಗಾಗಿ ತನ್ನಿಂದ (ಗ್ರಾಮದಿಂದ) ಭಿನ್ನನಾದ ದೇವದತ್ತನಲ್ಲಿ ಗಮನಕ್ರಿಯಾ ಸಮವೇತವಾಗಿದೆ, ಅಂತಹ ಗಮನಕ್ರಿಯಾದಿಂದ ಜನ್ಯವಾದ ಫಲ ಗ್ರಾಮಪ್ರಾಪ್ತಿ, ಆ ಫಲ ಉಳ್ಳದ್ದು (ಪ್ರಾಪ್ಯವಾದದ್ದು) ಗ್ರಾಮ. ಆದ್ದರಿಂದ ಗ್ರಾಮವು ಕರ್ಮವಾಗಿದೆ.

ಹೀಗೆ ಕ್ರಿಯೆಗೆ ಆಶ್ರಯನಾದ ಕರ್ತೃವೇ ಬೇರೆ, ಆ ಕರ್ತೃಸಮವೇತ-ಕ್ರಿಯಾಫಲಶಾಲಿಯಾದ ಕರ್ಮವೇ ಬೇರೆಯಾಗಿರುವುದರಿಂದ ''ಕರ್ಮವೇ ಬೇರೆ, ಕರ್ತೃವೇ ಬೇರೆ'' ಎಂಬ ಅಂಶ ಸ್ಪಷ್ಟವಾಗುತ್ತದೆ. ಅಂದಮೇಲೆ ಒಂದೇ ಜ್ಞಾನರೂಪಕ್ರಿಯೆಯಲ್ಲಿ ಆತ್ಮನೇ ಕರ್ತೃ, ಆತ್ಮನೇ ಕರ್ಮ ಎಂದು ಹೇಳಲು ಬರುವುದಿಲ್ಲ. ಆದ್ದರಿಂದ ಆತ್ಮಸ್ವರೂಪವಾದ ಜ್ಞಾನವು ಸ್ವವಿಷಯವಾಗಿದೆ ಎಂದು ಪರರು ಅಂಗೀಕರಿಸುವುದಿಲ್ಲ.

ಹಾಗಾದರೆ (ಪರರು ಸ್ವವಿಷಯಪ್ರಕಾಶತ್ವವನ್ನು ಅಂಗೀಕರಿಸುವುದಿಲ್ಲವಾದರೆ) ಆತ್ಮನು ಸ್ವಪ್ರಕಾಶನಾಗಿದ್ದಾನೆ ಎಂದು ಹೇಗೆ ವ್ಯವಹರಿಸುತ್ತಾರೆ ? ಎಂದರೆ, ಆತ್ಮನು ಸ್ವಪ್ರಕಾಶನಾಗಿದ್ದಾನೆ ಎಂದರೆ ಪರಪ್ರಕಾಶ್ಯನಲ್ಲ ಎನ್ನುವುದಷ್ಟೇ ಅದರ ಅಭಿಪ್ರಾಯ. ಹೀಗೆ ಪರರು ಆತ್ಮಸ್ವರೂಪಜ್ಞಾನಕ್ಕೆ ಸ್ವವಿಷಯತ್ವವನ್ನು ಅಂಗೀಕರಿಸುವುದಿಲ್ಲ ಎಂಬ ಅಭಿಪ್ರಾಯದಿಂದಲೇ ಆಚಾರ್ಯರು ''ಆತ್ಮನಃ ಸ್ವವಿಷಯಪ್ರಕಾಶತ್ವಾಭಾವಾತ್'' ಎಂದು ಹೇಳಿದರು.

ನಮ್ಮ ಮತದಲ್ಲಿ ಒಬ್ಬನೇ ಆತ್ಮನಿಗೆ ಕರ್ತೃತ್ವ-ಕರ್ಮತ್ವ ಎರಡನ್ನೂ ವಿಶೇಷಬಲದಿಂದ ಕೂಡಿಸಲಾಗುತ್ತದೆ. ಆದರೆ ನಿರ್ವಿಶೇಷವಾದಿಗಳಾದ ಪರರ ಮತದಲ್ಲಿ ಒಬ್ಬನೇ ಆತ್ಮನಿಗೆ ಕರ್ತೃತ್ವ-ಕರ್ಮತ್ವ ಎರಡನ್ನೂ ಒಪ್ಪುವುದಿಲ್ಲ. ಈ ಅಭಿಪ್ರಾಯದಲ್ಲಿ 'ಆತ್ಮನಃ ಸ್ವವಿಷಯಪ್ರಕಾಶತ್ವಾಭಾವಾತ್' ಎಂದು ಆಚಾರ್ಯರು ಹೇಳಿದ್ದು. ಹಾಗಾಗಿ ಅಪಸಿದ್ಧಾಂತ ಮೊದಲಾದ ದೋಷಗಳಿಗೆ ಅವಕಾಶವಿಲ್ಲ ಎಂದು ಅಭಿಪ್ರಾಯ.

### ಮೂಲದಲ್ಲಿ 'ಕರ್ತೃಕರ್ಮಭಾವವಿರೋಧಾತ್' ಎಂದು ಹೇಳಿದ್ದು ಅಯುಕ್ತ ಎಂದು ಶಂಕೆ, ಅದರ ನಿರಾಕರಣೆ

**ಟೀಕಾ: ನನು ಜ್ಞಾನಸ್ಯ ಸ್ವವಿಷಯತ್ವೇ ಕರ್ತೃಕರ್ಮಭಾವ ಏವ ನಾಸ್ತಿ ಯೋ ವಿರುದ್ಧ್ಯೇತ । ನ ಹಿ ಜ್ಞಾನಂ ಜ್ಞಾನಸ್ಯ ಕರ್ತೃ । ನ ಚ ಕರ್ತುರಭಾವೇ ಕರ್ಮಾಪಿ ಸಂಭವತಿ । ತಸ್ಯ ತದುಪಹಿತಲಕ್ಷಣತ್ವಾತ್ । ಅತೋ 'ವಿಷಯವಿಷಯಿಭಾವಸ್ಯ ಪರಾಕ್‌ಪ್ರತ್ಯಗ್ಭಾವರೂಪತ್ವಾತ್ ಏಕಸ್ಯ ಯುಗಪದ್ವಿರೋಧಾತ್ ಸ್ವವಿಷಯತ್ವಂ ಜ್ಞಾನಸ್ಯ ತೈರ್ನಾಂಗೀಕ್ರಿಯತೇ' ಇತಿ ವಕ್ತವ್ಯಮ್ । ಕರ್ತೃಕರ್ಮವಿರೋಧಾದಿತಿ ತು ಕಥಮ್ ?**

**ಮೈವಮ್ । ಜ್ಞಾನಸ್ಯಾಪಿ ವಿಷಯೀಕರಣಲಕ್ಷಣವ್ಯಾಪಾರಂ ಪ್ರತಿ ಕರ್ತೃತ್ವೇನ ಸ್ವವಿಷಯತ್ವೇ ಕರ್ತೃಕರ್ಮಭಾವಾಪರಿಹಾರಾತ್ । ಇತರಥಾ ಜ್ಞಾನಮರ್ಥಂ ವಿಷಯೀಕರೋತೀತಿ ನ ಸ್ಯಾತ್ ।**

**ಅನುವಾದ :-** ''ಕರ್ತೃಕರ್ಮಭಾವವಿರೋಧ ಬರುವ ಕಾರಣ 'ಆತ್ಮಸ್ವರೂಪವಾದ ಜ್ಞಾನವು ಸ್ವವಿಷಯವಾಗಿದೆ' ಎಂಬ ಮೊದಲನೇ ಪಕ್ಷ ಸರಿಯಲ್ಲ'' ಎಂಬುದಾಗಿ ಆಚಾರ್ಯರು ಹಿಂದೆ ಹೇಳಿದರು. ಆದರೆ ಅದು ಸರಿಯಲ್ಲ. ಯಾಕೆಂದರೆ- ಜ್ಞಾನವು ಸ್ವವಿಷಯವಾಗಿದೆ ಎಂದು ಹೇಳಿದಾಗ ಅಲ್ಲಿ ಕರ್ತೃಕರ್ಮಭಾವ ಇರುತ್ತಿದ್ದರೆ ಆಗ ಕರ್ತೃಕರ್ಮಭಾವವಿರೋಧ ಬರುವ ಅವಕಾಶವಿರುತ್ತಿತ್ತು. ಜ್ಞಾನವು ಸ್ವವಿಷಯವಾಗಿದೆ ಎಂದು ಹೇಳಲು ಬರುತ್ತಿರಲಿಲ್ಲ. ಆದರೆ ಜ್ಞಾನವು ಸ್ವವಿಷಯವಾಗಿದೆ ಎಂದು ಹೇಳಿದಾಗ ಅಲ್ಲಿ ಕರ್ತೃಕರ್ಮಭಾವವೇ ಇಲ್ಲ. ಅಂದಮೇಲೆ ಯಾವುದರ ವಿರೋಧ ಬರುತ್ತದೆ ?

ಕರ್ತೃಕರ್ಮಭಾವ ಯಾಕೆ ಇಲ್ಲ ? ಎಂದರೆ, ಜ್ಞಾನವನ್ನು ಕುರಿತು ಜ್ಞಾನವೇ ಕರ್ತೃವಾಗಲು ಸಾಧ್ಯವಿಲ್ಲ. ಜ್ಞಾನವು ಕ್ರಿಯಾರೂಪವಾಗಿದೆ, ಕರ್ತೃತ್ವವು ಕಾರಕವಿಶೇಷವಾಗಿದೆ. ಹೀಗಾಗಿ ಕ್ರಿಯಾಕಾರಕಭಾವವು ಭೇದನಿಯತವಾದ್ದರಿಂದ ಕ್ರಿಯಾರೂಪವಾಗಿರುವ ಜ್ಞಾನಕ್ಕೆ ಕಾರಕವಿಶೇಷರೂಪಕರ್ತೃತ್ವವು ಉಪಪನ್ನ-ವಾಗುವುದಿಲ್ಲ. ಆದ್ದರಿಂದ ಜ್ಞಾನವನ್ನು ಕುರಿತು ಜ್ಞಾನವೇ ಕರ್ತೃವಾಗಲು ೧ಸಾಧ್ಯವಿಲ್ಲ.

ಕರ್ತೃವೇ ಇಲ್ಲದಿದ್ದರೆ ಕರ್ಮವೂ ಇರಲು ಸಾಧ್ಯವಿಲ್ಲ. ಯಾಕೆ ? ಕರ್ತೃಘಟಿತವಾದ ಲಕ್ಷಣ ಉಳ್ಳದ್ದಾಗಿದೆ ಕರ್ಮ.

**ಕರ್ತೃಸಮವೇತಕ್ರಿಯಾಜನ್ಯಫಲಶಾಲಿತ್ವಂ ಕರ್ಮಣಃ ಲಕ್ಷಣಮ್ ।**

ಎಂಬುದಾಗಿ ಈ ಹಿಂದೆ ಹೇಳಿದಂತೆ ಕರ್ಮದ ಲಕ್ಷಣದಲ್ಲಿ ಕರ್ತೃವು ಸೇರಿದ್ದಾನೆ. ಹೀಗಾಗಿ ಕರ್ತೃವೇ ಇಲ್ಲದಿದ್ದರೆ ಕರ್ತೃಘಟಿತವಾದ ಕರ್ಮಲಕ್ಷಣವೂ ಸಂಭವಿಸುವುದಿಲ್ಲ. ಆದ್ದರಿಂದ ಕರ್ತೃಕರ್ಮಭಾವವು ಇಲ್ಲದ ಕಾರಣ ವಿಷಯವಿಷಯಿಭಾವವನ್ನು ಹೇಳಬೇಕು. ಹಾಗಾದರೆ -

**''ಸ್ವವಿಷಯತ್ವಂ ಹಿ ವಿಷಯವಿಷಯಿಭಾವವಿರೋಧಾತ್ ತೈರ್ನಾಂಗೀಕ್ರಿಯತೇ''**

''ವಿಷಯವಿಷಯಿಭಾವವು ಪರಾಕ್‌ಪ್ರತ್ಯಗ್‌ಭಾವರೂಪವಾಗಿದೆ. (ವಿಷಯತ್ವವು ಪರಾಕ್ತ್ವ ಬಾಹ್ಯತ್ವರೂಪವಾಗಿದೆ, ವಿಷಯಿತ್ವವು ಪ್ರತ್ಯಕ್ತ್ವ ಆಂತರತ್ವರೂಪವಾಗಿದೆ.) ಹಾಗಾಗಿ ಒಂದೇ ವಸ್ತುವಿಗೆ ವಿಷಯತ್ವ-ವಿಷಯಿತ್ವಗಳು ವಿರುದ್ಧವಾದ್ದರಿಂದ ಆತ್ಮಸ್ವರೂಪಜ್ಞಾನಕ್ಕೆ ಸ್ವವಿಷಯತ್ವವನ್ನು ಪರರು ಅಂಗೀಕರಿಸುವುದಿಲ್ಲ''

ಎಂಬುದಾಗಿ ಹೇಳಬೇಕು. ಅದನ್ನು ಬಿಟ್ಟು ''ಕರ್ತೃಕರ್ಮಭಾವವಿರೋಧಾತ್ ಕರ್ತೃಕರ್ಮಭಾವವಿರೋಧ ಬರುವುದರಿಂದ'' ಎಂದು ಆಚಾರ್ಯರು ಹೇಗೆ ಹೇಳಿದರು ?

---

೧ ಯದ್ಯಪಿ ಜ್ಞಾನವನ್ನು ಕುರಿತು ಜ್ಞಾನವೇ ಕರ್ತೃವಾಗಲು ಸಾಧ್ಯವಿಲ್ಲದಿದ್ದರೂ ಸಹ ಬೇರೆ ಕರ್ತೃವನ್ನು ತೆಗೆದುಕೊಂಡು ಕರ್ತೃಘಟಿತಕರ್ಮತ್ವವನ್ನು ಹೇಳಲು ಬರುತ್ತದೆ. ಆದರೂ ಸಹ ಆತ್ಮರೂಪವಾದ ಜ್ಞಾನವನ್ನು ಕುರಿತು ಬೇರೆ ಕರ್ತೃವೂ ಪರಮತದಲ್ಲಿ ಸಂಭವಿಸದ ಕಾರಣ ಕರ್ತೃಘಟಿತಕರ್ಮತ್ವವೂ ಕೂಡುವುದಿಲ್ಲ ಎಂದು ಅಭಿಪ್ರಾಯ.

(ಶ್ರೀವೇದೇಶತೀರ್ಥರ ಟಿಪ್ಪಣೀ)

ಈ ರೀತಿಯಾಗಿ ಶಂಕಿಸುವುದು ಸರಿಯಲ್ಲ. ಯಾಕೆಂದರೆ :- ಜ್ಞಾನವು ಸ್ವಯಂ ಕ್ರಿಯಾರೂಪವಾಗಿದ್ದರೂ ಸಹ (ಮತ್ತೊಂದು ಕ್ರಿಯೆಯನ್ನು ಕುರಿತು ಕರ್ತೃವಾಗಬಹುದಾಗಿದೆ) ವಿಷಯೀಕರಣ ಎಂಬ ವ್ಯಾಪಾರವನ್ನು ಕುರಿತು ಕರ್ತೃವಾಗಬಹುದಾಗಿದೆ. ಅಂತೆಯೇ ''ಜ್ಞಾನಂ ಅರ್ಥಂ ವಿಷಯೀಕರೋತಿ'' ಎಂಬ ಕರ್ತೃಪ್ರಯೋಗವು ಕೂಡುತ್ತದೆ. ಜ್ಞಾನಕ್ಕೆ ಕರ್ತೃತ್ವವನ್ನೇ ಒಪ್ಪದೇ ಹೋದರೆ ''ಜ್ಞಾನಂ ಅರ್ಥಂ ವಿಷಯೀಕರೋತಿ'' ಎಂಬ ಕರ್ತೃಪ್ರಯೋಗವು ಅನುಪಪನ್ನವಾಗಬೇಕಾದೀತು. ಆದ್ದರಿಂದ ಜ್ಞಾನಕ್ಕೆ ಕರ್ತೃತ್ವವು ಸಂಭಾವಿತ-ವಾಗಿದೆ. ಕರ್ತೃಕರ್ಮಭಾವವು ದುಷ್ಪರಿಹರವಾಗಿದೆ. ಪ್ರಕೃತ ಜ್ಞಾನವು ಸ್ವವಿಷಯವಾಗಿದೆ ಎಂದು ಹೇಳಿದರೆ, ಒಂದೇ ವಸ್ತುವಿಗೆ ಕರ್ತೃತ್ವ-ಕರ್ಮತ್ವಗಳು ವಿರುದ್ಧವಾದ್ದರಿಂದ ಕರ್ತೃಕರ್ಮಭಾವವಿರೋಧ ಬಂದೇ ಬರುತ್ತದೆ. ಹಾಗಾಗಿ

**ಕರ್ತೃಕರ್ಮವಿರೋಧಾತ್ ಸ್ವವಿಷಯತ್ವಂ ಹಿ ತೈಃ ನಾಂಗೀಕ್ರಿಯತೇ ।**

ಎಂದು ಆಚಾರ್ಯರು ಹೇಳಿದ್ದು ಸಮಂಜಸವೇ ಆಗಿದೆ ಎಂದು ಭಾವ.

**ಟೀಕಾಃ ಅಥವಾ ಸ್ವಮತೇ ಜ್ಞಾನಸ್ವರೂಪಸ್ಯಾಪ್ಯಾತ್ಮನೋ ಜ್ಞಾನಂ ಪ್ರತಿ ಕರ್ತೃತಾऽಸ್ತೀತಿ ಜ್ಞಾಪನಾಯೇದಮುದಿತಮ್ । ಕಥಮೇತದಿತಿ ಚೇತ್ । ಇತ್ಥಮ್ । ಅಸ್ಮಾಭಿರ್ವಿಜ್ಞಾನಂ ಸವಿಶೇಷಮಂಗೀಕೃತಮ್ । ವಿಶೇಷಶ್ಚ ಭೇದಕಾರ್ಯಂ ಕರೋತಿ । ಏವಂ ತರ್ಹ್ಯತಿಪ್ರಸಂಗಃ ಸ್ಯಾದಿತಿ ಚೇನ್ನ । ಸತಿ ಪ್ರಮಾಣೇ ತನ್ನಿರ್ವಾಹಹೇತುಭೂತ-ಭೇದಾಭಾವೇ ಚ ತತ್ಪ್ರತಿನಿಧಿನಾ ತತ ಏವ ಸಿದ್ಧೇನ ವಿಶೇಷೇಣ ತನ್ನಿರ್ವಾಹಾಭ್ಯುಪಗಮಾತ್ । ಪ್ರಪಂಚಿತಂ ಚೈತದನ್ಯತ್ರಾ-ಚಾರ್ಯೈಃ ।**

**ಅನುವಾದ :-** ಅಥವಾ, ಕರ್ತೃಕರ್ಮವಿರೋಧಾತ್ ಎಂದರೆ ಪ್ರತ್ಯಕ್ ಪರಾಕ್‌ಭಾವವಿರೋಧಾತ್ ಎಂದು ಅರ್ಥ. ಹಾಗಾದರೆ -

**''ಸ್ವವಿಷಯತ್ವಂ ಹಿ ಪ್ರತ್ಯಕ್‌ಪರಾಕ್‌ಭಾವವಿರೋಧಾತ್ ತೈರ್ನಾಂಗೀಕ್ರಿಯತೇ''**

ಎಂಬುದಾಗಿಯೇ ಆಚಾರ್ಯರ ವಾಕ್ಯಪ್ರಯೋಗ ಇರಬೇಕಿತ್ತು ? ''ಕರ್ತೃಕರ್ಮಭಾವವಿರೋಧಾತ್'' ಎಂದು ಏಕೆ ಹೇಳಿದರು ? ಎಂಬ ಶಂಕೆ ಬೇಡ. ಕಾರಣ- ಸ್ವಮತದಲ್ಲಿ ಆತ್ಮನು ಜ್ಞಾನರೂಪನಾದರೂ ಸಹ ಜ್ಞಾನವನ್ನು

ಕುರಿತು ಆತ್ಮನಿಗೆ ಕರ್ತೃತ್ವವೂ ಇದೆ ಎನ್ನುವುದನ್ನು ತಿಳಿಸುವುದಕ್ಕಾಗಿ ''ಕರ್ತೃಕರ್ಮಭಾವವಿರೋಧಾತ್'' ಎಂಬುದಾಗಿ ಆಚಾರ್ಯರು ಹೇಳಿದ್ದಾರೆ.

ಹೌದು, ಆತ್ಮನು ಜ್ಞಾನರೂಪನಾಗಿದ್ದರೆ ಜ್ಞಾನವನ್ನು ಕುರಿತು ಕರ್ತೃ ಹೇಗೆ ಆಗಲು ಸಾಧ್ಯ ? ಅಂದರೆ :- ಆತ್ಮನು ಜ್ಞಾನರೂಪನಾಗಿದ್ದಾನೆ ಎಂದರೆ ಆತ್ಮ - ಜ್ಞಾನರೂಪವಾದ ಕ್ರಿಯೆ ಎರಡೂ ಒಂದೇ ಆಯಿತು. ಕ್ರಿಯೆಯಿಂದ ಭಿನ್ನವಾದದ್ದು ಕರ್ತೃವಾಗಬೇಕು ಎಂದು ನಿಯಮವಿರುವುದರಿಂದ ಪ್ರಕೃತ ಜ್ಞಾನರೂಪವಾದ ಕ್ರಿಯೆಯಿಂದ ಅಭಿನ್ನನಾದ ಆತ್ಮನು ಹೇಗೆ ಕರ್ತೃವಾಗಲು ಸಾಧ್ಯ ?

ಈ ವಿಧವಾದ ಶಂಕೆಗೆ ಆಸ್ಪದವಿಲ್ಲ. ಕಾರಣ ನಾವು ಜ್ಞಾನವನ್ನು ಸವಿಶೇಷ ಎಂದು ಅಂಗೀಕರಿಸಿದ್ದೇವೆ. (ಆತ್ಮನಿಗೂ ಜ್ಞಾನಕ್ಕೂ ಅಭೇದ ಒಪ್ಪಿದರೂ ಸವಿಶೇಷಾಭೇದ ಒಪ್ಪಿರುತ್ತೇವೆ.) ವಿಶೇಷವು ಭೇದಪ್ರತಿನಿಧಿಯಾಗಿದೆ. ಹೀಗಾಗಿ ಸೋಮಪ್ರತಿನಿಧಿಯಾದ ಪೂತೀಕವು ಯಾವ ರೀತಿಯಾಗಿ ಸೋಮಕಾರ್ಯವನ್ನು ಮಾಡುತ್ತದೆಯೋ ಅದೇ ರೀತಿಯಾಗಿ ಭೇದಪ್ರತಿನಿಧಿಯಾದ ವಿಶೇಷವು ಭೇದಕಾರ್ಯವನ್ನು ಮಾಡುತ್ತದೆ. ಆದ್ದರಿಂದ ಜ್ಞಾನ-ಆತ್ಮರಲ್ಲಿ ಅಭೇದವಿದ್ದರೂ ಭೇದಪ್ರತಿನಿಧಿಯಾದ ವಿಶೇಷವೂ ಇರುವುದರಿಂದ, ಜ್ಞಾನದಿಂದ ಅಭಿನ್ನನಾದ ಆತ್ಮನಿಗೆ ಜ್ಞಾನವನ್ನು ಕುರಿತು ಕರ್ತೃತ್ವವು ಉಪಪನ್ನವಾಗುತ್ತದೆ ಎಂದು ಭಾವ.

ಹಾಗಾದರೆ, ಭೇರಪ್ರತಿನಿಧಿಯಾದ ವಿಶೇಷದಿಂದ ಭೇದಕಾರ್ಯಗಳನ್ನು ಮಾಡುವುದಾದರೆ, ಭೇದವಾದಿಗಳಾದ ನೀವು ಎಲ್ಲೆಲ್ಲಿ ಭೇದವನ್ನು ಅಂಗೀ-ಕರಿಸುತ್ತೀರಿ ಅಲ್ಲೆಲ್ಲ ಕಡೆ (ಜೀವ-ಈಶ್ವರ, ಜೀವ-ಜೀವ ಮುಂತಾದ ಸ್ಥಳಗಳಲ್ಲಿಯೂ ಸಹ) ಭೇದವನ್ನು ಒಪ್ಪುವುದೇ ಬೇಡ. ಕಿಂತು ಅಭೇದವನ್ನು ಅಂಗೀಕರಿಸಿ, ಜೊತೆಗೆ ಭೇದಪ್ರತಿನಿಧಿಯಾದ ವಿಶೇಷವನ್ನೂ ಅಂಗೀಕರಿಸಿ, ವಿಶೇಷದಿಂದಲೇ ಭೇದಕಾರ್ಯಗಳನ್ನು ನಿರ್ವಹಿಸಿರಿ. ಭೇದವನ್ನು ಏಕೆ ಹೇಳುತ್ತೀರಿ ? ಅರ್ಥಾತ್ ಜಗತ್ತಿನಲ್ಲಿ ಭೇದವೇ ಉಚ್ಛಿನ್ನವಾಗಬೇಕಾದ ಅತಿಪ್ರಸಂಗ ಬರುತ್ತದೆಯಲ್ಲವೇ ? ಎಂಬುದಾಗಿ ಶಂಕೆ ಬಂದರೆ, ಅದು ಸರಿಯಲ್ಲ.

ಎಲ್ಲಿ ಅಭೇದ ಹಾಗೂ ಭೇದಕಾರ್ಯಗಳು ಪ್ರಮಾಣಸಿದ್ಧವಾಗಿದ್ದು, ಆದರೆ ಅದನ್ನು ನಿರ್ವಾಹ ಮಾಡಬೇಕಾದ ಭೇದವು ಇಲ್ಲದಿರುವಾಗ, ಅಂತಹ ಸ್ಥಳದಲ್ಲಿ

ಭೇದಕಾರ್ಯ-ತನ್ನಿರ್ವಾಹಕಭೇದಾಭಾವಾನ್ಯಥಾನುಪಪತ್ತಿಯಿಂದಲೇ ಸಿದ್ಧವಾದ ಭೇದಪ್ರತಿನಿಧಿಯಾದ ವಿಶೇಷವನ್ನು ಅಂಗೀಕರಿಸಿ, ಆ ವಿಶೇಷದಿಂದ ಅದರ ನಿರ್ವಹಣೆಯನ್ನು ಮಾಡಲಾಗುತ್ತದೆ. ಹೀಗಾಗಿ ''ಎಲ್ಲಕಡೆ ವಿಶೇಷವನ್ನೇ ಅಂಗೀಕರಿಸಿರಿ, ಭೇದವನ್ನೇ ಒಪ್ಪುವುದು ಬೇಡ'' ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

ಎಲ್ಲಿ ಭೇದವನ್ನು ಒಬ್ಬಬೇಕು, ಎಲ್ಲಿ ಭೇದಪ್ರತಿನಿಧಿಯಾದ ವಿಶೇಷವನ್ನು ಒಪ್ಪಬೇಕು ಇತ್ಯಾದಿ ಈ ಎಲ್ಲ ವಿಚಾರಗಳನ್ನು

**ಭೇದಹೀನೇ ತ್ವಪರ್ಯಾಯಶಬ್ದಾಂತರನಿಯಾಮಕಃ ।**
**ವಿಶೇಷೋ ನಾಮ ಕಥಿತಃ ಸೋಽಸ್ತಿ ವಸ್ತುಷ್ವಶೇಷತಃ ॥**

ಎಂಬುದಾಗಿ ಅನುವ್ಯಾಖ್ಯಾನ ಮೊದಲಾದ ಗ್ರಂಥಗಳಲ್ಲಿ ಶ್ರೀಮದಾಚಾರ್ಯರು ವಿಸ್ತಾರವಾಗಿ ತಿಳಿಸಿಕೊಟ್ಟಿದ್ದಾರೆ.

**ಆತ್ಮಸ್ವರೂಪವಾದ ಜ್ಞಾನವು ಪರವಿಷಯವಾಗಿದೆ ಎಂದು ಶಂಕೆ, ಅದರ ನಿರಾಕರಣೆ**

**ಟೀಕಾ: ಮಾ ಭೂದಾತ್ಮಪ್ರಕಾಶಃ ಸ್ವವಿಷಯಃ । ಪರವಿಷಯಸ್ತು ಭವಿಷ್ಯತಿ । ನ ಚ ಪರಾಭಾವೋ ದೋಷಃ । ಮಿಥ್ಯಾಭೂತಸ್ಯ ಪರಸ್ಯಾಂಗೀಕೃತತ್ವಾತ್ । ನ ಚೈವಂ ಸತಿ ತದ್ವಿಷಯತ್ವಸ್ಯಾಪಿ ಮಿಥ್ಯಾತ್ವಪ್ರಸಂಗೋ ದೋಷಃ । ಇಷ್ಟತ್ವಾತ್ । ಅತೋ ಮಿಥ್ಯಾರೂಪಸ್ಯ ಪರವಿಷಯತ್ವಸ್ಯ ಸದ್ಭಾವಾದ್ಭವೇದಾತ್ಮಾ ಪ್ರಕಾಶ ಇತ್ಯತ ಆಹ-**

**ಮೂಲಃ- ಮಿಥ್ಯಾಭೂತಂ ಪರವಿಷಯತ್ವಂ ಚಾನಿರ್ವಚನೀಯ-ನಿರಾಸಾದೇವ ನಿರಸ್ತಮ್ ।**

**ವ್ಯಾಖ್ಯಾತಪ್ರಾಯಮೇತತ್ । ಮುಕ್ತಾತ್ಮನ್ಯನೈಕಾಂತ್ಯತಾದವಸ್ಥ್ಯಂ ಚ ದ್ರಷ್ಟವ್ಯಮ್ ।**

**ಅನುವಾದಃ-** ಕರ್ತೃಕರ್ಮಭಾವವಿರೋಧ ಬರುವ ಕಾರಣ ಆತ್ಮಸ್ವರೂಪವಾದ ಜ್ಞಾನವು ಸ್ವವಿಷಯವಾಗುವುದು ಬೇಡ. ಆದರೆ ಪರವಿಷಯವಾಗಬಹುದು.

ಹೌದು, ''ಪರವಿಷಯವಾಗಿದೆ ಎಂದು ಯಾವಾಗ ಹೇಳಬಹುದಿತ್ತು ? ಪರನು ಇರುತ್ತಿದ್ದರೆ. ಆದರೆ ಸದದ್ವೈತವಾದಿಗಳಾದ ನೀವು ಆತ್ಮನಿಂದ ಭಿನ್ನವಾಗಿ ಪರವ್ಯಕ್ತಿಯನ್ನೇ ಒಪ್ಪಿಲ್ಲ. ಪರನೇ ಇಲ್ಲದೇ ಹೋದರೆ ಪರವಿಷಯತ್ವ-ವನ್ನು ಹೇಳಲು ಸಾಧ್ಯವಿಲ್ಲ. ಹಾಗಾಗಿ ಆತ್ಮಸ್ವರೂಪವಾದ ಆ ಜ್ಞಾನವು ಪರವಿಷಯವಾಗಿದೆ ಎಂದು ಹೇಳುವ ಎರಡನೇ ಪಕ್ಷವೂ ಸರಿಯಾದದ್ದಲ್ಲ'' ಎಂಬುದಾಗಿ ಈ ಹಿಂದೆ ಪರವಿಷಯತ್ವಪಕ್ಷವನ್ನು ನಿರಾಕರಿಸಿದ್ದೇವೆಯಲ್ಲ ? ಎಂದರೆ,

ಅದು ಸರಿಯಲ್ಲ. ಆತ್ಮನಿಂದ ಭಿನ್ನವಾಗಿ ಸತ್ಯಭೂತನಾದ ಪರವ್ಯಕ್ತಿಯನ್ನು ನಾವು ಒಪ್ಪದಿದ್ದರೂ ಮಿಥ್ಯಾಭೂತನಾದ ಪರವ್ಯಕ್ತಿಯನ್ನು ಅಂಗೀಕರಿಸುತ್ತೇವೆ. ಮಿಥ್ಯಾಭೂತನಾದ ಪರವ್ಯಕ್ತಿಯನ್ನು ಅಂಗೀಕರಿಸುವುದು ಸದದ್ವೈತವಾದಕ್ಕೆ ಬಾಧಕವೂ ಅಲ್ಲ. ಮಿಥ್ಯಾಭೂತನಾದ ಪರವ್ಯಕ್ತಿಯನ್ನು ಒಪ್ಪಿದ್ದರಿಂದ ಆತ್ಮಸ್ವರೂಪವಾದ ಜ್ಞಾನವು ಪರವಿಷಯಕವೂ ಆಗಬಹುದು.

ಈ ರೀತಿಯಾಗಿ ಮಿಥ್ಯಾಭೂತಪರವ್ಯಕ್ತಿಯನ್ನು ಅಂಗೀಕರಿಸಿ ಪರವಿಷಯ-ಕತ್ವವನ್ನು ಹೇಳುವುದಾದರೆ, ಮಿಥ್ಯಾಭೂತಪರವಿಷಯತ್ವವೂ ಮಿಥ್ಯಾ ಆಗಬೇಕಾದ ಪ್ರಸಂಗ ಬರುವುದಲ್ಲ ? ಎಂಬ ಆಕ್ಷೇಪ ಬೇಡ. ಕಾರಣ ಮಿಥ್ಯಾತ್ವವಾದಿಗಳಾದ ನಮಗೆ ಮಿಥ್ಯಾಭೂತಪರವಿಷಯತ್ವವು ಮಿಥ್ಯಾ ಆಗುವುದೂ ಇಷ್ಟವೇ ಆಗಿದೆ.

ಆದ್ದರಿಂದ ಆತ್ಮಸ್ವರೂಪವಾದ ಜ್ಞಾನಕ್ಕೆ ಮಿಥ್ಯಾರೂಪವಾದ ಪರವಿಷಯತ್ವ ಇರುವುದರಿಂದ ಆತ್ಮನು ಜ್ಞಾನಸ್ವರೂಪನಾಗಬಹುದು ಎಂಬುದಾಗಿ ಪರರು ಅಭಿಪ್ರಾಯಪಟ್ಟರೆ ಅದಕ್ಕೆ ಆಚಾರ್ಯರು ಉತ್ತರಿಸುತ್ತಾರೆ -

ಮೂಲಃ-ಮಿಥ್ಯಾಭೂತಂ ಪರವಿಷಯತ್ವಂ ಚಾನಿರ್ವಚನೀಯನಿರಾಸಾದೇವ ನಿರಸ್ತಮ್ ।

**ಮೂಲಾರ್ಥ :-** ಈ ಹಿಂದೆ ಅನಿರ್ವಚನೀಯವಸ್ತುವನ್ನು ನಿರಾಕರಿಸಿದ್ದ-ರಿಂದಲೇನೇ ಮಿಥ್ಯಾಭೂತವಾದ ಪರವಿಷಯತ್ವವೂ ನಿರಾಕರಿಸಲ್ಪಟ್ಟಂತಾಯಿತು.

ಈ ವಾಕ್ಯಕ್ಕೆ ಹಿಂದೆಯೇ ವ್ಯಾಖ್ಯಾನ ಮಾಡಿಯಾಗಿದೆ.

ಅದರ ಅಭಿಪ್ರಾಯ :- ಪರನೂ ಮಿಥ್ಯೆಯಾಗಿದ್ದಾನೆ, ಪರವಿಷಯತ್ವವೂ ಮಿಥ್ಯೆಯಾಗಿದೆ ಎಂದು ಹೇಳುತ್ತಿದ್ದೀರಿ. ಇಲ್ಲಿ ಮಿಥ್ಯೆ ಎಂದರೆ ಅನಿರ್ವಚನೀಯ

ಎಂದು ಅರ್ಥ ಹೇಳಲು ಬರುವುದಿಲ್ಲ. ಕಾರಣ ''ನ ಚಾನಿರ್ವಚನೀಯೇ ಕಿಂಚಿನ್ಮಾನಮ್'' ''ಅನಿರ್ವಚನೀಯಪದಾರ್ಥವು ಅಪ್ರಾಮಾಣಿಕವಾಗಿದೆ'' ಎಂಬುದಾಗಿ ಹಿಂದೆ ಅನಿರ್ವಚನೀಯವಸ್ತುವನ್ನು ನಿರಾಕರಿಸಿಯಾಗಿದೆ. ಹಾಗಾಗಿ ಮಿಥ್ಯೆ ಎಂದರೆ ಅನಿರ್ವಚನೀಯ ಎಂದು ಅರ್ಥ ಹೇಳಲು ಬಾರದ ಕಾರಣ ಮಿಥ್ಯೆ ಎಂದರೆ ಅಸತ್ ಎಂದೇ ಅರ್ಥ ಹೇಳಬೇಕು. ಹಾಗಾದರೆ ಪರನು ಮಿಥ್ಯಾಭೂತನಾಗಿದ್ದಾನೆ ಎಂದರೆ ಪರನು ಇಲ್ಲ ಎಂದೇ ಹೇಳಿದಂತಾಗುತ್ತದೆ. ಪರವಿಷಯತ್ವವು ಮಿಥ್ಯೆಯಾಗಿದೆ ಎಂದರೆ ಪರವಿಷಯತ್ವವು ಇಲ್ಲ ಎಂದೇ ಹೇಳಿದಂತಾಗುತ್ತದೆ. ಆದ್ದರಿಂದ ಆತ್ಮಸ್ವರೂಪವಾದ ಜ್ಞಾನಕ್ಕೆ ಸ್ವವಿಷಯತ್ವ-ಪರವಿಷಯತ್ವ ಎರಡೂ ಇಲ್ಲದ ಕಾರಣ ಆತ್ಮನು ಜ್ಞಾನಸ್ವರೂಪನಾಗಲು ಸಾಧ್ಯವಿಲ್ಲ ಎಂಬುದಾಗಿ

**''ಮಿಥ್ಯಾಪ್ರಮಾತೃತ್ವಂ ಚಾನಿರ್ವಚನೀಯನಿರಾಸಾದೇವ ನಿರಸ್ತಮ್ ।''**

ಎಂಬ ವಾಕ್ಯವ್ಯಾಖ್ಯಾನರೀತಿಯಿಂದ ಈ ವಾಕ್ಯಕ್ಕೆ ವ್ಯಾಖ್ಯಾನ ಮಾಡಿಯಾಗಿದೆ ಎಂದು ಭಾವ.

ಜೊತೆಗೆ, ಮುಕ್ತಾತ್ಮಸ್ವರೂಪವಾದ ಜ್ಞಾನವು ಸ್ವವಿಷಯಕ ಎಂದು ಹೇಳಿದರೆ ಕರ್ತೃಕರ್ಮಭಾವವಿರೋಧ ಬರುತ್ತದೆ. ಪರವಿಷಯಕ ಎಂದು ಹೇಳಿದರೆ ಸಂಸಾರಾಪತ್ತಿದೋಷ ಬರುತ್ತದೆ. ಹೀಗಾಗಿ ಮುಕ್ತಾತ್ಮಸ್ವರೂಪವಾದ ಜ್ಞಾನವು ಸ್ವವಿಷಯಕ-ಪರವಿಷಯಕ ಎರಡೂ ಆಗದ ಕಾರಣ ಮುಕ್ತಾತ್ಮನು ಅಪ್ರಕಾಶರೂಪನಾಗಿದ್ದಾನೆ. ಅಂದಮೇಲೆ ಮುಕ್ತಾತ್ಮನಲ್ಲಿ ಮಿಥ್ಯಾತ್ವಸಾಧ್ಯ ಇಲ್ಲ. ಆದರೆ ಅಪ್ರಕಾಶತ್ವರೂಪವಾದ ಜಡತ್ವಹೇತು ಬರುವುದರಿಂದ ಜಡತ್ವಹೇತುವಿಗೆ ಮುಕ್ತಾತ್ಮನಲ್ಲಿ ವ್ಯಭಿಚಾರ ಬರುತ್ತದೆ ಎಂಬ ದೋಷವನ್ನೂ ತಿಳಿಯಬೇಕು.

**ಅವತಾರಿಕೆ :-** ''ಪರರು ಆತ್ಮನಿಂದ ಭಿನ್ನವಾಗಿ ಪರವ್ಯಕ್ತಿಯನ್ನೇ ಒಪ್ಪಿಲ್ಲ. ಪರನೇ ಇಲ್ಲದೇ ಹೋದರೆ ಪರವಿಷಯತ್ವವನ್ನು ಹೇಳಲು ಸಾಧ್ಯವಿಲ್ಲ. ಮತ್ತು ಮಿಥ್ಯಾಭೂತಪರವ್ಯಕ್ತಿಯನ್ನು ಅಂಗೀಕರಿಸಿ ಪರವಿಷಯಕತ್ವವನ್ನು ಹೇಳು-ವುದಾದರೆ ಪರವಿಷಯತ್ವವೂ ಮಿಥ್ಯಾ ಆಗಬೇಕಾದ ಪ್ರಸಂಗ ಬರುತ್ತದೆ'' ಎಂಬುದಾಗಿ ಹೇಳಿದಿರಿ. ಆದರೆ ಅದು ಸರಿಯಲ್ಲ ಎಂಬುದಾಗಿ ಶಿಷ್ಯರು ಶಂಕಿಸುತ್ತಾರೆ-

**ಟೀಕಾಃ** ನನು ಶುಕ್ತಿರಜತಾದ್ಯಭಾವೇಽಪಿ ಪರಮಾರ್ಥತ ಏವ ವಿಜ್ಞಾನಂ ತದ್ವಿಷಯಮಸ್ತಿ । ತಥಾ ಪರಾಭಾವೇಽಪಿ ಪರವಿಷಯತ್ವಂ ಸತ್ಯಮೇವ ಕಸ್ಮಾನ್ನ ಸ್ಯಾತ್ । ಸ್ಯಾತ್ತತ್ । ನ ತ್ವೇವಂ ಪರೋಽಂಗೀಕರೋತಿ । ತೇನ ಪರೋಪಾಧಿಕಾನಾಂ ಮಿಥ್ಯಾತ್ವಸ್ಯಾಂಗೀಕೃತತ್ವಾತ್ । ಪರರೀತ್ಯಾ ಚೇದಮನೈಕಾಂತ್ಯ-ವ್ಯುತ್ಪಾದನಮ್ ।

**ಅನುವಾದ :-** ಪರರು (ಮಿಥ್ಯಾ ಆದ ಕಾರಣ) ಇಲ್ಲದ ಕಾರಣ ಪರವಿಷಯತ್ವವೂ (ಮಿಥ್ಯಾ) ಇಲ್ಲ ಎಂದೇಕೆ ಹೇಳಬೇಕು ? ಯಾಕೆಂದರೆ - ಶುಕ್ತಿರಜತಾದಿಗಳು ನಮ್ಮ ಮತದಲ್ಲಿ ಅಸತ್ ಆಗಿವೆ. ಶುಕ್ತಿರಜತಾದಿಗಳು (ಇಲ್ಲದಿದ್ದರೂ ಸಹ) ಅಸತ್ ಆದರೂ ಸಹ ಶುಕ್ತಿರಜತಾದಿಜ್ಞಾನದಲ್ಲಿ ಸತ್ಯವಾದ ಶುಕ್ತಿರಜತಾದಿವಿಷಯತ್ವ ಇರುವಂತೆ, ಪರಮತದಲ್ಲಿ ಪರರು (ಇಲ್ಲದಿದ್ದರೂ ಸಹ) ಅಸತ್ ಆದರೂ ಸಹ ಆತ್ಮಸ್ವರೂಪಜ್ಞಾನದಲ್ಲಿ ಸತ್ಯವಾದ ಪರವಿಷಯತ್ವ ಏಕೆ ಇರಬಾರದು ?

ಈ ರೀತಿಯಾಗಿ ಶಿಷ್ಯರು ಶಂಕಿಸಿದರೆ, ಅದು ಸರಿಯಲ್ಲ. ನೀವು ಹೇಳಿದಂತೆ ನಾವು ಹೇಳುತ್ತೇವೆ ನಿಜ. (ಶುಕ್ತಿರಜತಾದಿಗಳು ಅಸತ್ ಆದರೂ ಸಹ ಶುಕ್ತಿರಜತಾದಿಜ್ಞಾನದಲ್ಲಿ ಸತ್ಯವಾದ ಶುಕ್ತಿರಜತಾದಿವಿಷಯತ್ವವನ್ನು ನಾವು ಒಪ್ಪುತ್ತೇವೆ ನಿಜ.) ಆದರೆ ಹಾಗೆ ಪರರು ಅಂಗೀಕರಿಸುವುದಿಲ್ಲ. ಪರರು ಪರೋಪಾಧಿಕವಾದ ಪರನಿಮಿತ್ತಕವಾದ ವಸ್ತುಗಳಿಗೆ [೧]ಮಿಥ್ಯಾತ್ವವನ್ನು ಅಂಗೀಕರಿಸುತ್ತಾರೆ. ಪ್ರಕೃತ ಪರವಿಷಯತ್ವವೂ ಪರೋಪಾಧಿಕವಾದ ಕಾರಣ ಪರವಿಷಯತ್ವವೂ ಮಿಥ್ಯಾ ಎಂದೇ ಅಂಗೀಕರಿಸುತ್ತಾರೆ. ಹಾಗಾಗಿ ಪರರು ಅಸತ್ ಆದರೂ ಪರವಿಷಯತ್ವ ಸತ್ಯವಾಗಲಿ ಎಂಬ ಶಂಕೆಗೆ ಅವಕಾಶವಿಲ್ಲ.

ಮತ್ತು ಮುಕ್ತಾತ್ಮನಲ್ಲಿ ಜಡತ್ವಹೇತುವಿಗೆ ವ್ಯಭಿಚಾರ ಕೊಟ್ಟಿದ್ದೂ ಪರಮತಾನುಸಾರವಾಗಿಯೇ.

ಪರಮತದಲ್ಲಿ ಕರ್ತೃಕರ್ಮಭಾವವಿರೋಧ ಬರುವ ಕಾರಣ ಮುಕ್ತಾತ್ಮ-ಸ್ವರೂಪವಾದ ಜ್ಞಾನಕ್ಕೆ ಸ್ವವಿಷಯಕತ್ವ ಹೇಳಲು ಬರುವುದಿಲ್ಲ. ಮತ್ತು ಆತ್ಮನಿಂದ

---

೧ ಇಲ್ಲದಿದ್ದರೆ ಪರೋಪಾಧಿಕವಾದ ಸಾರ್ವಜ್ಞಾದಿಗಳಿಗೂ ಸತ್ಯತ್ವ ಹೇಳಬೇಕಾದ ಅತಿಪ್ರಸಂಗ ಬರುವುದರಿಂದ ಪರರು ಪರೋಪಾಧಿಕವಾದ ಪರನಿಮಿತ್ತಕವಾದ ವಸ್ತುಗಳಿಗೆ ಮಿಥ್ಯಾತ್ವವನ್ನು ಅಂಗೀಕರಿಸುತ್ತಾರೆ ಎಂದು ಭಾವ.

ಭಿನ್ನವಾಗಿ ಪರವ್ಯಕ್ತಿಯನ್ನು ಒಪ್ಪಿಲ್ಲವಾದ್ದರಿಂದ ಪರವಿಷಯಕತ್ವವನ್ನೂ ಹೇಳಲು ಬರುವುದಿಲ್ಲ. ಹೀಗೆ ಮುಕ್ತಾತ್ಮಸ್ವರೂಪವಾದ ಜ್ಞಾನವು ಸ್ವವಿಷಯಕ-ಪರವಿಷಯಕ ಎರಡೂ ಆಗದ ಕಾರಣ ಮುಕ್ತಾತ್ಮನಲ್ಲಿ ಅಪ್ರಕಾಶತ್ವರೂಪಜಡತ್ವ ಹೇತು ಬರುವುದರಿಂದ ವ್ಯಭಿಚಾರವನ್ನು ಪರಮತಾನುಸಾರವಾಗಿ ಹೇಳಿದ್ದು.

ಸ್ವಮತದಲ್ಲಿಯಾದರೂ ಭೇದಪ್ರತಿನಿಧಿಯಾದ ವಿಶೇಷವನ್ನು ಒಪ್ಪುವುದರಿಂದ ಆತ್ಮಸ್ವರೂಪಜ್ಞಾನಕ್ಕೆ ಸ್ವವಿಷಯಕತ್ವ ಉಪಪನ್ನವಾಗುತ್ತದೆ, ಮತ್ತು ಆತ್ಮನಿಂದ ಭಿನ್ನವಾಗಿ ಪರವ್ಯಕ್ತಿಗಳನ್ನು ಒಪ್ಪುವುದರಿಂದ ಪರವಿಷಯಕತ್ವವೂ ಉಪಪನ್ನವಾಗುತ್ತದೆ. ಹೀಗಾಗಿ ಆತ್ಮನಲ್ಲಿ ಪ್ರಕಾಶತ್ವವೇ ಇರುವ ಕಾರಣ (ಅಪ್ರಕಾಶತ್ವರೂಪಜಡತ್ವಹೇತು ಬಾರದ ಕಾರಣ) ಸ್ವಮತಾನುಸಾರವಾಗಿ ವ್ಯಭಿಚಾರ (ಬರುವುದಿಲ್ಲ) ಹೇಳಿದ್ದಲ್ಲ ಎಂದು ಭಾವ.

**ಅವತಾರಿಕೆ :-** ಹಿಂದೆ -

'ಆತ್ಮನು ಜ್ಞಾನಸ್ವರೂಪನಾಗಿದ್ದಾನೆ' ಎಂಬುದಾಗಿ ಆತ್ಮಸ್ವರೂಪವಾದ ಯಾವ ಜ್ಞಾನವನ್ನು ಅಂಗೀಕರಿಸುತ್ತಿದ್ದೀರೋ ಆ ಜ್ಞಾನವು ಸವಿಷಯವೋ ? ನಿರ್ವಿಷಯವೋ ? ಸವಿಷಯ ಎನ್ನುವುದಾದರೆ, ಸ್ವವಿಷಯ ಎಂದು ಹೇಳುತ್ತೀರೋ ? ಅಥವಾ ಪರವಿಷಯ ಎಂದು ಹೇಳುತ್ತೀರೋ ?

ಎಂಬುದಾಗಿ ವಿಕಲ್ಪಗಳನ್ನು ಮಾಡಿ, ಅದರಲ್ಲಿ ಸವಿಷಯ ಎಂಬ ಪಕ್ಷದಲ್ಲಿ ಸ್ವವಿಷಯ ಹಾಗೂ ಪರವಿಷಯ ಎಂಬ ಎರಡೂ ಪಕ್ಷಗಳನ್ನು ಈವರೆಗೆ ವಿಸ್ತಾರವಾಗಿ ನಿರಾಕರಿಸಿದರು. ಈಗ ಆತ್ಮಸ್ವರೂಪವಾದ ಆ ಜ್ಞಾನವು ನಿರ್ವಿಷಯವಾಗಿದೆ ಎಂಬ ಪಕ್ಷವನ್ನು ನಿರಾಕರಿಸುತ್ತಾರೆ -

### ಆತ್ಮಸ್ವರೂಪವಾದ ಜ್ಞಾನವು ನಿರ್ವಿಷಯ ಎಂಬ ಪಕ್ಷನಿರಾಕರಣೆ

**ಟೀಕಾ : ನನು ಮಾ ಭೂದಾತ್ಮಪ್ರಕಾಶಃ ಸ್ವವಿಷಯಃ । ಮಾ ಚ ಭೂತ್ ಪರವಿಷಯಃ । ನಿರ್ವಿಷಯ ಏವಾಯಂ ಕಿನ್ನ ಸ್ಯಾದಿತಿ ತೃತೀಯಂ ಪಕ್ಷಂ ನಿರಾಕರೋತಿ-**

**ಮೂಲ :- ವಿಷಯವರ್ಜಿತಃ ಪ್ರಕಾಶ ಏವ ನ ಭವತಿ ಘಟವತ್ ।**

**ಆತ್ಮಾ ನ ಪ್ರಕಾಶಃ ಪ್ರಕಾಶ್ಯಶೂನ್ಯತ್ವಾತ್ ಘಟವತ್ । ಅನ್ಯಥಾ ಘಟೋಽಪಿ ಪ್ರಕಾಶಃ ಸ್ಯಾದ್ ಇತಿ ಜಡತ್ವಾಸಿದ್ಧಿಃ । ನನು**

ವಿಷಯಶೂನ್ಯಸ್ಯ ಘಟಸ್ಯ ಪ್ರಕಾಶತ್ವಾಭಾವೇऽಪ್ಯಾತ್ಮಾ ವಿಷಯ-ವರ್ಜಿತಃ ಪ್ರಕಾಶೋऽಸ್ತು ಕೋ ದೋಷಃ । ನ ಹಿ ಸರ್ವೈರ್ಭಾವೈರೇಕವಿಧೈರ್ಭಾವ್ಯಮಿತಿ ನಿಯಮೋऽಸ್ತಿ । ಯಥಾ ಅನ್ಯೋ ಜ್ಞಾತಾ ಅನ್ಯಶ್ಚ ಜ್ಞೇಯ ಇತ್ಯನ್ಯತ್ರ ದರ್ಶನೇऽಪ್ಯಾತ್ಮನ್ಯೈಕ್ಯಂ ಗೃಹ್ಯತೇ ತಥೇತಿ ಚೇತ್ । ಸ್ಯಾದಪ್ಯೇವಂ ಯದ್ಯೇವಂ ಪ್ರಮಾಣಂ ಸ್ಯಾತ್ । ನ ಚೈತದಸ್ತೀತ್ಯಾಹ -

**ಮೂಲ :- ತತ್ರಮಾಣಾಭಾವಾತ್ ।**

ಪ್ರಕಾಶತ್ವಸ್ಯೈವಾನುಪಪತ್ತಾವಾತ್ಮನಃ ಸ್ವಪ್ರಕಾಶತ್ವಂ ಸುತರಾಂ ಪರೇಷಾಮಶಕ್ಯೋಪಪಾದನಮಿತಿ ಮನ್ವಾನೋ ಭಗವಾನ್ ಆಚಾರ್ಯಃ ಅಸ್ವಪ್ರಕಾಶತ್ವಂ ಜಡತ್ವಮಿತಿ ಪರೋಕ್ತಮಪಿ ನಿರಾಕರ್ತುಂ ನ ಪೃಥಕ್ ಪ್ರಕ್ರಾಂತವಾನಿತಿ ।

**ಅನುವಾದ :-** ಆತ್ಮಸ್ವರೂಪವಾದ ಜ್ಞಾನವು ಸ್ವವಿಷಯವಾಗುವುದು ಬೇಡ. ಪರವಿಷಯವಾಗುವುದೂ ಬೇಡ. ಕಿಂತು ನಿರ್ವಿಷಯವೇ ಏಕೆ ಆಗಬಾರದು ? ಎಂಬುದಾಗಿ ಪರರು ಶಂಕಿಸಿದರೆ ಆ ನಿರ್ವಿಷಯತ್ವಪಕ್ಷವನ್ನೂ ಆಚಾರ್ಯರು ನಿರಾಕರಿಸುತ್ತಾರೆ -

ಮೂಲ :- ವಿಷಯವರ್ಜಿತಃ ಪ್ರಕಾಶ ಏವ ನ ಭವತಿ ಘಟವತ್ ।

**ಮೂಲಾರ್ಥ :-** ಆತ್ಮಸ್ವರೂಪವಾದ ಜ್ಞಾನವು ವಿಷಯಶೂನ್ಯವಾಗುವುದಾದರೆ ಘಟದಂತೆ ಪ್ರಕಾಶರೂಪವೇ (ಜ್ಞಾನವೇ) ಆಗದೇ ಹೋಗಬೇಕಾಗುತ್ತದೆ.

ಆತ್ಮನು ಪ್ರಕಾಶರೂಪನಲ್ಲ, ವಿಷಯಶೂನ್ಯನಾದ್ದರಿಂದ. ಘಟದಂತೆ.

ಘಟವು ವಿಷಯಶೂನ್ಯವಾದ್ದರಿಂದ ಹೇಗೆ ಪ್ರಕಾಶರೂಪವಾಗಿಲ್ಲವೋ ಅದರಂತೆ ಆತ್ಮನೂ ವಿಷಯಶೂನ್ಯನಾದ್ದರಿಂದ ಪ್ರಕಾಶರೂಪನಲ್ಲ. ಒಂದುವೇಳೆ ಆತ್ಮನು ನಿರ್ವಿಷಯನಾದರೂ ಪ್ರಕಾಶರೂಪನಾಗಲಿ ಎನ್ನುವುದಾದರೆ ಘಟವೂ ನಿರ್ವಿಷಯವಾದರೂ ಪ್ರಕಾಶರೂಪವಾಗಲಿ ಎಂಬ ಅತಿಪ್ರಸಂಗ ಬರುವುದರಿಂದ, (ಘಟಕ್ಕೂ ಪ್ರಕಾಶರೂಪತ್ವ ಬರುವುದರಿಂದ)

**ವಿವಾದಪದಂ ಮಿಥ್ಯಾ ಜಡತ್ವಾತ್ ಅಪ್ರಕಾಶತ್ವಾತ್**

ಎಂಬ ಮೂಲಅನುಮಾನದಲ್ಲಿ ಪಕ್ಷವಾದ ಘಟದಲ್ಲಿ ಅಪ್ರಕಾಶತ್ವಹೇತು ಬಾರದ ಕಾರಣ ಅನುಮಾನಕ್ಕೆ ಅಸಿದ್ಧಿದೋಷ ಬರುತ್ತದೆ.

ಹೌದು, ವಿಷಯಶೂನ್ಯವಾದ ಘಟಕ್ಕೆ ಪ್ರಕಾಶತ್ವ (ಪ್ರಕಾಶರೂಪತ್ವ) ಇಲ್ಲದೇ ಹೋದರೂ ಸಹ ವಿಷಯವರ್ಜಿತನಾದ ಆತ್ಮನು ಪ್ರಕಾಶರೂಪನಾಗಲಿ. ಏನು ದೋಷ ? ಯಾಕೆಂದರೆ- ಎಲ್ಲ ವಸ್ತುಗಳೂ ಒಂದೇವಿಧವಾಗಿ ಇರಬೇಕು ಎಂದು ನಿಯಮವೇನಿಲ್ಲ. ಯಾವ ರೀತಿಯಾಗಿ ಜ್ಞಾತೃವೇ ಬೇರೆ ಜ್ಞೇಯವೇ ಬೇರೆ ಎಂಬುದಾಗಿ ಜ್ಞಾತೃ-ಜ್ಞೇಯಗಳಲ್ಲಿ ಭೇದವು ಘಟಾದಿವಿಷಯದಲ್ಲಿ ಕಂಡಿದ್ದರೂ ಸಹ, ಆತ್ಮನ ವಿಷಯದಲ್ಲಿ ಮಾತ್ರ ಆತ್ಮನೇ ಜ್ಞಾತಾ ಆತ್ಮನೇ ಜ್ಞೇಯ ಎಂಬುದಾಗಿ ಜ್ಞಾತೃ-ಜ್ಞೇಯಗಳಲ್ಲಿ ಅಭೇದವೇ ಕಂಡಿದೆಯೋ ಅದೇ ರೀತಿಯಾಗಿ ವಿಷಯಶೂನ್ಯವಾದದ್ದು ಪ್ರಕಾಶರೂಪವಾಗುವುದಿಲ್ಲ ಎನ್ನುವುದು ಘಟಾದಿವಿಷಯದಲ್ಲಿ ಕಂಡಿದ್ದರೂ ಸಹ ಆತ್ಮನ ವಿಷಯದಲ್ಲಿ ಆ ನಿಯಮ ಅನ್ವಯವಾಗುವುದಿಲ್ಲ. ಅರ್ಥಾತ್ ಆತ್ಮನು ವಿಷಯಶೂನ್ಯನಾದರೂ ಪ್ರಕಾಶರೂಪನಾಗಬಹುದು ಎಂದು ಶಂಕಿಸಿದರೆ,

ಈ ರೀತಿಯಾಗಿ ಯಾವಾಗ ಶಂಕಿಸಬಹುದಿತ್ತು ? ''ಆತ್ಮನು ವಿಷಯ-ಶೂನ್ಯನಾದರೂ ಪ್ರಕಾಶರೂಪನಾಗಬಹುದು'' ಎಂಬ ವಿಷಯದಲ್ಲಿ ಪ್ರಮಾಣ ಇರುತ್ತಿದ್ದರೆ ನಿಮ್ಮ ಶಂಕೆ ಸೂಕ್ತವಾಗುತ್ತಿತ್ತು. ಆದರೆ ''ಆತ್ಮನು ವಿಷಯ-ಶೂನ್ಯನಾದರೂ ಪ್ರಕಾಶರೂಪನಾಗಬಹುದು'' ಎಂಬ ವಿಷಯದಲ್ಲಿ ಯಾವುದೇ ಸಾಧಕ ಪ್ರಮಾಣ ಇಲ್ಲ ಎಂದು ಆಚಾರ್ಯರು ಹೇಳುತ್ತಾರೆ -

**ಮೂಲ :-** ತತ್ಪ್ರಮಾಣಾಭಾವಾತ್ ।

**ಮೂಲಾರ್ಥ:-** ''ಆತ್ಮನು ವಿಷಯಶೂನ್ಯನಾದರೂ ಪ್ರಕಾಶರೂಪನಾಗ-ಬಹುದು'' ಎಂಬ ವಿಷಯದಲ್ಲಿ ಯಾವುದೇ ಪ್ರಮಾಣ ಇಲ್ಲವಾದ್ದರಿಂದ ಈ ರೀತಿ ಶಂಕೆ ಸರಿಯಲ್ಲ.

ಹೌದು, ''ಅಪ್ರಮಾತೃತ್ವಂ ಜಡತ್ವಂ'' ''ಅಪ್ರಕಾಶತ್ವಂ ಜಡತ್ವಂ'' ಎಂಬ ಪಕ್ಷಗಳನ್ನು ಹೇಗೆ ನಿರಾಕರಿಸಿದಿರಿ ಹಾಗೆಯೇ (ಆತ್ಮನು ಸ್ವಪ್ರಕಾಶನಾಗಿದ್ದಾನೆ, ಜಡಪ್ರಪಂಚವು ಸ್ವಪ್ರಕಾಶವಾಗಿಲ್ಲ ಎಂದು ಪರರು ಹೇಳುವುದರಿಂದ) ''ಅಸ್ವಪ್ರಕಾಶತ್ವಂ ಜಡತ್ವಂ'' ಎಂದೂ ಪರರು ಅಂಗೀಕರಿಸುವುದರಿಂದ ಆಚಾರ್ಯರು ಆ ಪಕ್ಷವನ್ನು ಏಕೆ ನಿರಾಕರಿಸಲಿಲ್ಲ ? ಎಂದರೆ, ಈ ಹಿಂದೆ

ನಿರೂಪಿಸಿದಂತೆ ಆತ್ಮನಿಗೆ ಪ್ರಕಾಶರೂಪತ್ವವೇ ಅನುಪಪನ್ನವಾಗುವಾಗ ಇನ್ನು ಸ್ವಪ್ರಕಾಶತ್ವವನ್ನು ಉಪಪಾದಿಸುವುದು ಪರರಿಗೆ ಅತ್ಯಂತ ಅಶಕ್ಯವಾಗಿದೆ ಎಂಬ ಅಭಿಪ್ರಾಯದಿಂದ ಪೂಜ್ಯ ಆಚಾರ್ಯರು ''ಅಸ್ವಪ್ರಕಾಶತ್ವಂ ಜಡತ್ವಂ'' ಎಂಬುದಾಗಿ ಪರರು ಜಡತ್ವದ ಲಕ್ಷಣ ಹೇಳಿದರೂ ಆ ಲಕ್ಷಣವನ್ನು ನಿರಾಕರಿಸಲು ಪ್ರತ್ಯೇಕವಾಗಿ ಪ್ರವೃತ್ತರಾಗಲಿಲ್ಲ.

''ಅಸ್ವಪ್ರಕಾಶತ್ವಂ ಜಡತ್ವಂ'' ಎಂದು ಲಕ್ಷಣ ಹೇಳಿದರೆ, ಆತ್ಮನಿಗೆ ಸ್ವಪ್ರಕಾಶತ್ವವನ್ನು ಉಪಪಾದಿಸಲು ಪರರಿಗೆ ಅತ್ಯಂತ ಅಶಕ್ಯವಾದ್ದರಿಂದ ಆತ್ಮನಲ್ಲಿ ಅಸ್ವಪ್ರಕಾಶತ್ವರೂಪವಾದ ಜಡತ್ವವೇ ಬರುತ್ತದೆ. ಆತ್ಮನಲ್ಲಿ ಮಿಥ್ಯಾತ್ವ ಸಾಧ್ಯ ಇಲ್ಲ, ಅಸ್ವಪ್ರಕಾಶತ್ವರೂಪವಾದ ಜಡತ್ವಹೇತು ಬರುವುದರಿಂದ ಜಡತ್ವಹೇತುವಿಗೆ ಆತ್ಮನಲ್ಲಿ ವ್ಯಭಿಚಾರ ಬರುತ್ತದೆ ಎಂದು ಭಾವ.

ಆದ್ದರಿಂದ ''ಅಪ್ರಮಾತೃತ್ವಂ ಜಡತ್ವಂ'' ''ಅಪ್ರಕಾಶತ್ವಂ ಜಡತ್ವಂ'' ''ಅಸ್ವಪ್ರಕಾಶತ್ವಂ ಜಡತ್ವಂ'' ಎಂಬುದಾಗಿ ಯಾವ ರೀತಿಯಿಂದಲೂ ಜಡತ್ವದ ಪರಿಷ್ಕಾರ ಸಮಂಜಸವಾಗುವುದಿಲ್ಲವಾದ್ದರಿಂದ 'ಜಡಪ್ರಪಂಚವು ಮಿಥ್ಯೆಯಾಗಿದೆ (ಸ್ವರೂಪತಃ ಅವಿದ್ಯೋಪಾದಾನಕವಾಗಿದೆ ಬ್ರಹ್ಮನಲ್ಲಿ ಆರೋಪಿತವಾಗಿದೆ)' ಎಂಬ ವಿಷಯದಲ್ಲಿ

**''ವಿವಾದಪದಂ ಮಿಥ್ಯಾ ಜಡತ್ವಾತ್ ಶುಕ್ತಿರಜತವತ್''**

ಎಂಬ ಎರಡನೇ ಅನುಮಾನವೂ (ಜಡತ್ವಹೇತುವೂ) ಪ್ರಮಾಣವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

**ಅವತಾರಿಕೆ :-** 'ಜಡಪ್ರಪಂಚವು ಮಿಥ್ಯೆಯಾಗಿದೆ' ಎಂಬ ವಿಷಯದಲ್ಲಿ ಪರರು ಉದಾಹರಿಸಿದ **''ವಿವಾದಪದಂ ಮಿಥ್ಯಾ ದೃಶ್ಯತ್ವಾತ್, ಜಡತ್ವಾತ್, ಪರಿಚ್ಛಿನ್ನತ್ವಾತ್, ಶುಕ್ತಿರಜತವತ್ ।''** ಎಂಬ ಮೂರು ಅನುಮಾನಗಳಲ್ಲಿ ಈವರೆಗೆ ದೃಶ್ಯತ್ವ-ಜಡತ್ವಹೇತುಗಳನ್ನು ವಿಸ್ತಾರವಾಗಿ ನಿರಾಕರಿಸಿ, ಪ್ರಕೃತ ಪರಿಚ್ಛಿನ್ನತ್ವ-ಹೇತುವನ್ನೂ ('ವಿವಾದಪದಂ ಮಿಥ್ಯಾ ಪರಿಚ್ಛಿನ್ನತ್ವಾತ್' ಎಂಬ ಅನುಮಾನವನ್ನೂ) ನಿರಾಕರಿಸುತ್ತಾರೆ -

## ಪರಿಚ್ಛಿನ್ನತ್ವಹೇತುನಿರಾಕರಣೆ

**ಟೀಕಾ:** ಅಥ ಪರಿಚ್ಛಿನ್ನತ್ವಹೇತುಮಪಿ ವಿಶೇಷತಃ ಪ್ರತ್ಯಾಚಿಖ್ಯಾಸುಸ್ತತ್ಕಿಂ ದೇಶತಃ ಕಿಂ ವಾ ಕಾಲತಃ ಅಥವಾ ವಸ್ತುತ ಇತಿ ವಿಕಲ್ಪಂ ಹೃದಿ ನಿಧಾಯಾದ್ಯದ್ವಿತೀಯೌ ನಿರಾಕರೋತಿ -

**ಮೂಲ:-** ದೇಶತಃ ಕಾಲತಃ ಪರಿಚ್ಛಿನ್ನತ್ವಂ ಪ್ರಕೃತಿಕಾಲಾದಿಷ್ವ-ಭಾವಾದ್ಭಾಗಾಸಿದ್ಧಮ್ ।

ಪ್ರಕೃತಿಕಾಲಾಕಾಶಾದೀನಾಂ ಪಕ್ಷೈಕದೇಶಾನಾಂ ಸರ್ವಗತತ್ವಾ-ನ್ನಿತ್ಯತ್ವಾಚ್ಚ ದೇಶತಃ ಕಾಲತಃ ಪರಿಚ್ಛಿನ್ನತ್ವಂ ನಾಸ್ತೀತಿ ಭಾಗಾಸಿದ್ಧಂ ಭವತಿ । ನ ಚ ಜಡತ್ವಾದಿನಾ ತಸ್ಯಾಪಿ ಪರಿಚ್ಛಿನ್ನತ್ವಸಿದ್ಧಿಃ । ಉಕ್ತವಿಧಯಾ ಅನೈಕಾಂತ್ಯಾತ್ ಆಗಮವಿರೋಧಾಚ್ಚ । ನ ಚ ಪ್ರಕೃತ್ಯಾದಿವ್ಯತಿರಿಕ್ತಸ್ಯೈವ ಪಕ್ಷತ್ವಮ್ । ತನ್ಮಿಥ್ಯಾತ್ವಸ್ಯ ನಿರ್ನಿಬಂಧನತ್ವಾಪತ್ತೇಃ। ದೃಶ್ಯತ್ವಾದೇರ್ದುಷ್ಟತ್ವಾತ್। ಆಗಮಾನಾಂ ಚ ನಿರಸಿಷ್ಯಮಾಣತ್ವಾತ್ । ಉಕ್ತವಕ್ಷ್ಯಮಾಣದೂಷಣ-ಗಣಾನಿಸ್ತಾರಾಚ್ಚ।

**ಅನುವಾದ :-** ದೃಶ್ಯತ್ವ-ಜಡತ್ವಹೇತುಗಳ ನಿರಾಕರಣೆ ಮಾಡಿದ ಅನಂತರ ಆಚಾರ್ಯರು ಪರಿಚ್ಛಿನ್ನತ್ವಹೇತುವನ್ನೂ ವಿಶೇಷವಾಗಿ ನಿರಾಕರಿಸಲು ಇಚ್ಛಿಸಿದವರಾಗಿ, ಪರಿಚ್ಛಿನ್ನತ್ವವನ್ನು ಹೇತುವನ್ನಾಗಿ ಉದಾಹರಿಸುವುದಾದರೆ ದೇಶತಃ ಪರಿಚ್ಛಿನ್ನತ್ವವನ್ನು ಹೇತುವನ್ನಾಗಿ ವಿವಕ್ಷಿಸುತ್ತೀರೋ ? ಅಥವಾ ಕಾಲತಃ ಪರಿಚ್ಛಿನ್ನತ್ವವನ್ನು ಹೇತುವನ್ನಾಗಿ ವಿವಕ್ಷಿಸುತ್ತೀರೋ ? ಅಥವಾ ವಸ್ತುತಃ ಪರಿಚ್ಛಿನ್ನತ್ವವನ್ನು ಹೇತುವನ್ನಾಗಿ ವಿವಕ್ಷಿಸುತ್ತೀರೋ ? ಎಂಬುದಾಗಿ ವಿಕಲ್ಪಗಳನ್ನು ಮನಸ್ಸಿನಲ್ಲಿ ಮಾಡಿಕೊಂಡು, ಅವುಗಳಲ್ಲಿ ದೇಶತಃ ಪರಿಚ್ಛಿನ್ನತ್ವ- ಕಾಲತಃ ಪರಿಚ್ಛಿನ್ನತ್ವ ಎಂಬ ಎರಡು ಪಕ್ಷಗಳನ್ನು (ಮೊದಲನೇ ಪಕ್ಷ ಹಾಗೂ ಎರಡನೇ ಪಕ್ಷಗಳನ್ನು) ನಿರಾಕರಿಸುತ್ತಾರೆ -

ಮೂಲ :-ದೇಶತಃ ಕಾಲತಃ ಪರಿಚ್ಛಿನ್ನತ್ವಂ ಪ್ರಕೃತಿಕಾಲಾದಿಷ್ವಭಾವಾತ್ ಭಾಗಾಸಿದ್ಧಮ್ ।

**ಮೂಲಾರ್ಥ :-** ದೇಶತಃ ಪರಿಚ್ಛಿನ್ನತ್ವ ಹಾಗೂ ಕಾಲತಃ ಪರಿಚ್ಛಿನ್ನತ್ವವು ಪಕ್ಷೈಕದೇಶವಾದ ಪ್ರಕೃತಿಕಾಲಾದಿಗಳಲ್ಲಿ ಇಲ್ಲವಾದ್ದರಿಂದ ಅನುಮಾನಕ್ಕೆ ಭಾಗಾಸಿದ್ಧಿದೋಷ ಬರುತ್ತದೆ.

'ವಿವಾದಪದಂ' ಎಂಬುದಾಗಿ ಸಮಸ್ತಜಗತ್ತನ್ನು ಪಕ್ಷ ಮಾಡಿದ್ದೀರಿ. ಅದರಲ್ಲಿ ಪ್ರಕೃತಿ-ಕಾಲ-ಆಕಾಶಾದಿಗಳೂ ಸೇರಿವೆ. ಈ ಪ್ರಕೃತಿ-ಕಾಲ-ಆಕಾಶಾದಿಗಳು ಸರ್ವಗತ(ವ್ಯಾಪ್ತ)ವಾಗಿವೆ ಮತ್ತು ನಿತ್ಯವಾಗಿವೆ. ಹೀಗಾಗಿ ಪಕ್ಷದ ಏಕದೇಶವಾದ ಪ್ರಕೃತಿ-ಕಾಲ-ಆಕಾಶಾದಿಗಳಲ್ಲಿ ದೇಶತಃ ಪರಿಚ್ಛಿನ್ನತ್ವ -ಕಾಲತಃ ಪರಿಚ್ಛಿನ್ನತ್ವಗಳು (ಹೇತು) ಬರುವುದಿಲ್ಲವಾದ್ದರಿಂದ ಅನುಮಾನಕ್ಕೆ[೧] ಭಾಗಾಸಿದ್ಧಿದೋಷ ಬರುತ್ತದೆ.

ಹೌದು, ಪ್ರಕೃತಿ-ಕಾಲಾದಿಗಳಲ್ಲಿ ದೇಶತಃ ಪರಿಚ್ಛಿನ್ನತ್ವ-ಕಾಲತಃ ಪರಿಚ್ಛಿನ್ನತ್ವಗಳು ಇಲ್ಲ ಎಂದು ಏಕೆ ಹೇಳುತ್ತೀರಿ ?

**ಪ್ರಕೃತ್ಯಾದಿಕಂ, ದೇಶತಃ ಕಾಲತಶ್ಚ ಪರಿಚ್ಛಿನ್ನಂ, ದೃಶ್ಯತ್ವಾತ್ ಜಡತ್ವಾತ್ ।**

ಎಂಬುದಾಗಿ ದೃಶ್ಯತ್ವ-ಜಡತ್ವಹೇತುಗಳಿಂದ ಪ್ರಕೃತಿ-ಕಾಲಾದಿಗಳಿಗೆ ದೇಶತಃ ಪರಿಚ್ಛಿನ್ನತ್ವ-ಕಾಲತಃ ಪರಿಚ್ಛಿನ್ನತ್ವಗಳನ್ನು ಸಾಧಿಸುತ್ತೇವೆ ? ಎಂದು ಶಂಕಿಸಿದರೆ,

ಅದು ಸರಿಯಲ್ಲ. ಏಕೆಂದರೆ - ಆತ್ಮನು ವ್ಯಾಪ್ತನಾಗಿದ್ದಾನೆ ಮತ್ತು ನಿತ್ಯನಾಗಿದ್ದಾನೆ. ಅಂದರೆ ದೇಶತಃ ಕಾಲತಃ ಪರಿಚ್ಛಿನ್ನನಾಗಿಲ್ಲ. ಹೀಗಾಗಿ ಆತ್ಮನಲ್ಲಿ ದೇಶತಃ ಕಾಲತಶ್ಚ ಪರಿಚ್ಛಿನ್ನತ್ವ ಸಾಧ್ಯ ಇಲ್ಲ. ಆದರೆ -

**ಆತ್ಮನೋಽಪಿ ದೃಶ್ಯತ್ವಾದನೈಕಾಂತಿಕತಾ ಚ ।**

ಎಂಬುದಾಗಿ ಹಿಂದೆ ಹೇಳಿದ ಪ್ರಕಾರ ಆತ್ಮನಿಗೂ ದೃಶ್ಯತ್ವವನ್ನು ಸಮರ್ಥಿಸಿದ್ದರಿಂದ ಹಾಗೂ

---

೧ ದೇಶತಃ ಪರಿಚ್ಛಿನ್ನತ್ವ ಎಂದರೆ ಸೀಮಿತವಾದ ದೇಶದಲ್ಲಿ ಇರುವುದು (ವ್ಯಾಪ್ತವಾಗದೇ ಇರುವುದು) ಎಂದರ್ಥ. ಕಾಲತಃ ಪರಿಚ್ಛಿನ್ನತ್ವ ಎಂದರೆ ಸೀಮಿತವಾದ ಕಾಲದಲ್ಲಿ ಇರುವುದು (ಅನಿತ್ಯವಾಗಿರುವುದು) ಎಂದರ್ಥ. ಪ್ರಕೃತ ಸಮಸ್ತ ಜಗತ್ತು ಪಕ್ಷವಾಗಿದೆ. ಅದರಲ್ಲಿ ಘಟ-ಪಟಾದಿಗಳೂ ಸೇರಿವೆ. ಪ್ರಕೃತಿ-ಕಾಲ-ಆಕಾಶಾದಿಗಳೂ ಸೇರಿವೆ. ಘಟ-ಪಟಾದಿಗಳು ಸೀಮಿತವಾದ ದೇಶದಲ್ಲಿ ಸೀಮಿತವಾದ ಕಾಲದಲ್ಲಿ ಇರುವ ಪದಾರ್ಥಗಳಾದ್ದರಿಂದ (ಅವ್ಯಾಪ್ತವಾದ್ದರಿಂದ ಅನಿತ್ಯವಾದ್ದರಿಂದ) ಪಕ್ಷದ ಏಕದೇಶವಾದ ಘಟ-ಪಟಾದಿಗಳಲ್ಲಿ ದೇಶತಃ ಪರಿಚ್ಛಿನ್ನತ್ವ - ಕಾಲತಃ ಪರಿಚ್ಛಿನ್ನತ್ವಗಳು ಬರುತ್ತವೆ. ಯಾವ ಸಮಸ್ಯೆ ಇಲ್ಲ. ಆದರೆ ಪ್ರಕೃತಿ-ಕಾಲ-ಆಕಾಶಾದಿಗಳು ಸೀಮಿತವಾದ ದೇಶದಲ್ಲಿ ಸೀಮಿತವಾದ ಕಾಲದಲ್ಲಿ ಇರುವ ಪದಾರ್ಥಗಳಾಗಿಲ್ಲ ಅರ್ಥಾತ್ ವ್ಯಾಪ್ತವಾಗಿವೆ ಮತ್ತು ನಿತ್ಯವಾಗಿವೆ. ಹೀಗಾಗಿ ಪಕ್ಷದ ಏಕದೇಶವಾದ ಪ್ರಕೃತಿ-ಕಾಲ-ಆಕಾಶಾದಿಗಳಲ್ಲಿ ದೇಶತಃ ಪರಿಚ್ಛಿನ್ನತ್ವ-ಕಾಲತಃ ಪರಿಚ್ಛಿನ್ನತ್ವಗಳು (ಹೇತು) ಬರುವುದಿಲ್ಲವಾದ್ದರಿಂದ ಅನುಮಾನಕ್ಕೆ ಭಾಗಾಸಿದ್ಧಿದೋಷ ಬರುತ್ತದೆ ಎಂದು ಅಭಿಪ್ರಾಯ.

**ಜಡತ್ವಂ ಚಾಪ್ರಮಾತೃತ್ವಮೇವ । ನ ಚ ಪ್ರಮಾತೃತ್ವಮಾತ್ಮನಸ್ತೈರಂಗೀಕ್ರಿಯತೇ । ಅತಸ್ತದಪ್ಯನೈಕಾಂತಿಕಮೇವ ।**

ಎಂಬುದಾಗಿ ಹಿಂದೆ ಹೇಳಿದ ಪ್ರಕಾರ (ಆತ್ಮನಿಗೆ ಪ್ರಮಾತೃತ್ವವನ್ನು ಪರರು ಒಪ್ಪುವುದಿಲ್ಲವಾದ್ದರಿಂದ) ಆತ್ಮನಲ್ಲಿ ಅಪ್ರಮಾತೃತ್ವ ರೂಪವಾದ ಜಡತ್ವಹೇತುವೂ ಬರುವುದರಿಂದ ನಿಮ್ಮ ಈ ಅನುಮಾನಗಳಿಗೆ ಆತ್ಮನಲ್ಲಿ ವ್ಯಭಿಚಾರ ಬರುತ್ತದೆ.

ಮತ್ತು , ಪ್ರಕೃತಿ-ಕಾಲಾದಿಗಳಿಗೆ ದೇಶತಃ ಪರಿಚ್ಛಿನ್ನತ್ವ - ಕಾಲತಃ ಪರಿಚ್ಛಿನ್ನತ್ವ-ಗಳನ್ನು ಸಾಧಿಸಲು ಹೋದರೆ, ಪ್ರಕೃತಿಕಾಲಾದಿಗಳಿಗೆ ವ್ಯಾಪ್ತಿ-ನಿತ್ಯತ್ವಾದಿಗಳನ್ನು ಹೇಳುವ

**''ಗೌರನಾದ್ಯಂತವತೀ'' ''ಆಕಾಶವತ್ ಸರ್ವಗತಶ್ಚ ನಿತ್ಯಃ'' ''ಪ್ರಕೃತಿಃ ಪುರುಷಶ್ಚೈವ ನಿತ್ಯೌ ಕಾಲಶ್ಚ ಸತ್ತಮ'' ''ಸದೇವ ಸೋಮ್ಯೇದಮಗ್ರೇ'' ''ನಿತ್ಯಾ ಹಿ ಜೀವಾಃ ಪ್ರಕೃತಿಶ್ಚ ನಿತ್ಯಾ ಕಾಲಶ್ಚ ನಿತ್ಯಃ'' ''ಯಾವದ್ ಬ್ರಹ್ಮ ವಿಷ್ಠಿತಂ ತಾವತೀ ವಾಕ್''**

ಇತ್ಯಾದಿ ಆಗಮಗಳ ವಿರೋಧವೂ ಬರುತ್ತದೆ. ಆದ್ದರಿಂದ ದೃಶ್ಯತ್ವ-ಜಡತ್ವ-ಗಳಿಂದ ಪ್ರಕೃತ್ಯಾದಿಗಳಿಗೂ ದೇಶತಃ ಕಾಲತಶ್ಚ ಪರಿಚ್ಛಿನ್ನತ್ವವನ್ನು ಸಾಧಿಸಲು ಬರುವುದಿಲ್ಲ. ಹಾಗಾಗಿ ಪಕ್ಷದ ಏಕದೇಶವಾದ ಪ್ರಕೃತಿ-ಕಾಲ-ಆಕಾಶಾದಿಗಳಲ್ಲಿ ದೇಶತಃ ಪರಿಚ್ಛಿನ್ನತ್ವ - ಕಾಲತಃ ಪರಿಚ್ಛಿನ್ನತ್ವಗಳು (ಹೇತು) ಬರುವುದಿಲ್ಲವಾದ್ದರಿಂದ ಅನುಮಾನಕ್ಕೆ ಭಾಗಾಸಿದ್ಧಿದೋಷ ಬಂದೇ ಬರುತ್ತದೆ.

ಹೌದು, ನಾವು ಪ್ರಕೃತ್ಯಾದಿಗಳನ್ನೂ ಪಕ್ಷಕೋಟಿಯಲ್ಲಿ ಸೇರಿಸಿದರೆ ಆಗ ಭಾಗಾಸಿದ್ಧಿ ಬರುತ್ತದೆ. ಆದರೆ ಪ್ರಕೃತ್ಯಾದಿಗಳನ್ನು ಪಕ್ಷಕೋಟಿಯಲ್ಲಿ ಸೇರಿಸುವುದಿಲ್ಲ. ಕಿಂತು ಪ್ರಕೃತ್ಯಾದಿಗಳಿಂದ ಭಿನ್ನವಾದ ಘಟಪಟಾದಿಗಳನ್ನು ಮಾತ್ರ ಪಕ್ಷವನ್ನಾಗಿ ಮಾಡುತ್ತೇವೆ. ಆ ಘಟಪಟಾದಿಗಳಲ್ಲಿ ದೇಶತಃ ಪರಿಚ್ಛಿನ್ನತ್ವ -ಕಾಲತಃ ಪರಿಚ್ಛಿನ್ನತ್ವಗಳು ಇದ್ದೇ ಇವೆಯಾದ್ದರಿಂದ ಭಾಗಾಸಿದ್ಧಿ ಬರುವುದಿಲ್ಲ ಎಂದು ಪರರು ಶಂಕಿಸಿದರೆ,

ಅದು ಸರಿಯಲ್ಲ. ಏಕೆಂದರೆ - ಭಾಗಾಸಿದ್ಧಿಪರಿಹಾರಕ್ಕಾಗಿ ಆ ರೀತಿಯಾಗಿ ಪ್ರಕೃತ್ಯಾದಿಗಳನ್ನು ಹೊರತುಪಡಿಸಿ ಕೇವಲ ಘಟಪಟಾದಿಗಳನ್ನು ಮಾತ್ರ ಪಕ್ಷ ಮಾಡುವುದಾದರೆ, ಇದರಿಂದ ಘಟಪಟಾದಿಗಳಿಗೆ ಮಾತ್ರ ಮಿಥ್ಯಾತ್ವ ಸಿದ್ಧಿಸುವುದೇ ಹೊರತು ಪ್ರಕೃತ್ಯಾದಿಗಳಿಗೆ ಮಿಥ್ಯಾತ್ವ ಸಿದ್ಧಿಸುವುದಿಲ್ಲ.

''**ವಿಮತಂ ಮಿಥ್ಯಾ ದೃಶ್ಯತ್ವಾತ್**'' ಇತ್ಯಾದಿ ಅನುಮಾನಗಳಿಂದ ಪ್ರಕೃತ್ಯಾದಿಗಳಿಗೆ ಮಿಥ್ಯಾತ್ವಸಿದ್ಧಿಸುತ್ತದೆ ಎಂದು ಹೇಳಲು ಬರುವುದಿಲ್ಲ. ಕಾರಣ-ವ್ಯಭಿಚಾರ ಮೊದಲಾದ ದೋಷಗಳನ್ನು ಹೇಳಿ ದೃಶ್ಯತ್ವಾದಿ ಅನುಮಾನಗಳನ್ನು ಹಿಂದೆಯೇ ನಿರಾಕರಿಸಿಯಾಗಿದೆ.

''**ನೇಹ ನಾನಾಽಸ್ತಿ ಕಿಂಚನ**'' ''**ಏಕಮೇವಾದ್ವಿತೀಯಮ್**'' ''**ವಾಚಾರಂಭಣಂ ವಿಕಾರೋ ನಾಮಧೇಯಮ್**'' ಇತ್ಯಾದಿ ಆಗಮಗಳಿಂದ ಪ್ರಕೃತ್ಯಾದಿಗಳಿಗೆ ಮಿಥ್ಯಾತ್ವ ಸಿದ್ಧಿಸುತ್ತದೆ ಎಂದು ಹೇಳಲೂ ಬರುವುದಿಲ್ಲ. ಏಕೆಂದರೆ - ಮೇಲ್ನೋಟಕ್ಕೆ ಐಕ್ಯಪರವಾಗಿ ತೋರುವ ಈ ಆಗಮಗಳಿಗೆ ''**ವಿಶ್ವಂ ಸತ್ಯಂ ಮಘವಾನಾ... ..**'' ಇತ್ಯಾದಿ ಪ್ರಪಂಚಸತ್ಯತ್ವಪ್ರತಿಪಾದಕವಾದ ಪ್ರಬಲವಾದ ಅನೇಕ ಆಗಮಗಳ ವಿರೋಧ ಬರುವುದರಿಂದ ಅವು ಪ್ರಪಂಚಮಿಥ್ಯಾತ್ವಪರವಲ್ಲ ಎಂಬುದಾಗಿ ಮುಂದೆ ನಿರಾಕರಣೆ ಮಾಡುವವರಿದ್ದೇವೆ. (ಈ ಎಲ್ಲ ಆಗಮಗಳಿಗೆ ಅರ್ಥಾಂತರಪರತ್ವವನ್ನು ಸಮರ್ಥಿಸುವವರಿದ್ದೇವೆ.) ಮತ್ತು ಮಿಥ್ಯಾತ್ವಾದಿ-ವಿಕಲ್ಪಾದಿಗಳಿಂದ ಹಿಂದೆ ಹೇಳಿದ ದೋಷಗಳು ಹಾಗೂ ಬಾಧ ಮೊದಲಾದ ಮುಂದೆ ಹೇಳಲಿರುವ ದೋಷಗಳೂ ಅಪರಿಹಾರ್ಯವಾಗಿ ಬಂದೇ ಬರುತ್ತವೆ.

ಆದ್ದರಿಂದ ಪಕ್ಷದ ಏಕದೇಶವಾದ ಪ್ರಕೃತಿ-ಕಾಲ-ಆಕಾಶಾದಿಗಳಲ್ಲಿ ದೇಶತಃ ಪರಿಚ್ಛಿನ್ನತ್ವ-ಕಾಲತಃ ಪರಿಚ್ಛಿನ್ನತ್ವಗಳು (ಹೇತು) ಬರುವುದಿಲ್ಲವಾದ್ದರಿಂದ ಅನುಮಾನಕ್ಕೆ ಭಾಗಾಸಿದ್ಧಿದೋಷ ಬಂದೇ ಬರುತ್ತದೆ. ಹೀಗಾಗಿ ಪರಿಚ್ಛಿನ್ನತ್ವ ಎಂದರೆ ದೇಶತಃ ಪರಿಚ್ಛಿನ್ನತ್ವ-ಕಾಲತಃ ಪರಿಚ್ಛಿನ್ನತ್ವ ಎಂಬ ಎರಡು ಪಕ್ಷಗಳು ಸರಿಯಲ್ಲ ಎಂದು ಸಿದ್ಧವಾಗುತ್ತದೆ.

**ಟೀಕಾ : ತೃತೀಯಂ ನಿರಾಚಷ್ಟೇ -**

**ಮೂಲಃ- ವಸ್ತುತಃ ಪರಿಚ್ಛಿನ್ನತ್ವಮಾತ್ಮನೋಽಪಿ ಭೇದಾಂಗೀ-ಕಾರಾದನೈಕಾಂತಿಕಮ್ ।**

**ವಸ್ತುತಃ ಪರಿಚ್ಛಿನ್ನತ್ವಂ ಹಿ ವಸ್ತ್ವಂತರಾದ್ವ್ಯವಚ್ಛೇದೋ ಭೇದ ಇತಿ ಯಾವತ್ । ವಿಪಕ್ಷಭೂತಸ್ಯಾತ್ಮನಸ್ತತ್ತ್ವವಾದಿನಾ ಭೇದೋಽಂಗೀಕ್ರಿಯತ ಇತಿ ಮಿಥ್ಯಾತ್ವೇ ಸಾಧ್ಯೇ ವಸ್ತುತಃ ಪರಿಚ್ಛಿನ್ನತ್ವಮನೈಕಾಂತಿಕಂ ಭವತಿ ।**

**ನ ಚ ಪ್ರತಿಯೋಗಿಭೂತಪ್ರಪಂಚಸ್ಯ ಮಿಥ್ಯಾತ್ವಾದಾತ್ಮನೋ ಭೇದಾನುಪಪತ್ತಿರಿತಿ ವಾಚ್ಯಮ್ । ಪ್ರಪಂಚಮಿಥ್ಯಾತ್ವಸಿದ್ಧೌ ವಸ್ತುತಃ ಪರಿಚ್ಛಿನ್ನತ್ವಸ್ಯ ಹೇತುತ್ವಸಿದ್ಧಿಃ । ತತ್ಸಿದ್ಧೌ ಚ ಪ್ರಪಂಚ-ಮಿಥ್ಯಾತ್ವಸಿದ್ಧಿರಿತೀತರೇತರಾಶ್ರಯಪ್ರಸಂಗಾತ್ । ಭೇದಮಿಥ್ಯಾ-ತ್ವಾನುಮಾನಾದೀನಾಂ ಚೋಕ್ತವಕ್ಷ್ಯಮಾಣದೋಷಗ್ರಸ್ತತ್ವಾತ್ ।**

**ಅನುವಾದ :-** ಪರಿಚ್ಛಿನ್ನತ್ವ ಎಂದರೆ ದೇಶತಃ ಪರಿಚ್ಛಿನ್ನತ್ವ- ಕಾಲತಃ ಪರಿಚ್ಛಿನ್ನತ್ವ ಎಂಬ ಎರಡು ಪಕ್ಷಗಳನ್ನು (ಮೊದಲನೇ ಪಕ್ಷ ಹಾಗೂ ಎರಡನೇ ಪಕ್ಷಗಳನ್ನು) ಈವರೆಗೆ ನಿರಾಕರಿಸಿ, ಪ್ರಕೃತ ಪರಿಚ್ಛಿನ್ನತ್ವ ಎಂದರೆ ವಸ್ತುತಃ ಪರಿಚ್ಛಿನ್ನತ್ವ ಎಂಬ ಮೂರನೇ ಪಕ್ಷವನ್ನು ಆಚಾರ್ಯರು ನಿರಾಕರಿಸುತ್ತಾರೆ -

**ಮೂಲಃ-** ವಸ್ತುತಃ ಪರಿಚ್ಛಿನ್ನತ್ವಮಾತ್ಮನೋಽಪಿ ಭೇದಾಂಗೀಕಾರಾದ-ನೈಕಾಂತಿಕಮ್ ।

**ಮೂಲಾರ್ಥ :-** ಆತ್ಮನಲ್ಲಿ ಪ್ರಪಂಚದಿಂದ ಭೇದವನ್ನು ಅಂಗೀಕರಿಸಿದ್ದರಿಂದ, ವಸ್ತುತಃ ಪರಿಚ್ಛಿನ್ನತ್ವವು ವಿಪಕ್ಷನಾದ ಆತ್ಮನಲ್ಲಿಯೂ ಬರುವುದರಿಂದ ವ್ಯಭಿಚಾರ ಬರುತ್ತದೆ.

ಪರಿಚ್ಛಿನ್ನತ್ವ ಎಂದರೆ ವಸ್ತುತಃ ಪರಿಚ್ಛಿನ್ನತ್ವ ಎಂದು ಹೇಳುವ ಮೂರನೇ ಪಕ್ಷವೂ ಸರಿಯಲ್ಲ. ಏಕೆಂದರೆ - ವಸ್ತುತಃ ಪರಿಚ್ಛಿನ್ನತ್ವ ಎಂದರೆ ವಸ್ತ್ವಂತರದಿಂದ ವ್ಯವಚ್ಛೇದ ಭೇದ ಎಂದು ಅರ್ಥ. ಪ್ರಕೃತ ಆತ್ಮನಲ್ಲಿ ಮಿಥ್ಯಾತ್ವ ಸಾಧ್ಯ ಇಲ್ಲ. ಆದರೆ ಆತ್ಮನಲ್ಲಿ ಪ್ರಪಂಚದಿಂದ ಭೇದವನ್ನು ತತ್ತ್ವವಾದಿಗಳಾದ ನಾವು ಅಂಗೀಕರಿಸಿದ್ದರಿಂದ

**ವಿವಾದಪದಂ ಮಿಥ್ಯಾ ವಸ್ತುತಃ ಪರಿಚ್ಛಿನ್ನತ್ವಾತ್ ।**

ಎಂಬ ನಿಮ್ಮ ಅನುಮಾನಕ್ಕೆ ಆತ್ಮನಲ್ಲಿ ವ್ಯಭಿಚಾರ ಬರುತ್ತದೆ.

ಹೌದು, ''ಆತ್ಮನಲ್ಲಿ ಪ್ರಪಂಚದಿಂದ ಭೇದ ಇದೆ'' ಎಂದು ಹೇಳುವುದು ಸರಿಯಲ್ಲ. ಕಾರಣ - ಪ್ರಪಂಚಪ್ರತಿಯೋಗಿಕವಾದ ಭೇದಕ್ಕೆ ಪ್ರತಿಯೋಗಿಯಾದ ಪ್ರಪಂಚವು ಮಿಥ್ಯಾ ಆದ್ದರಿಂದ ಆತ್ಮನಲ್ಲಿ ಪ್ರಪಂಚಪ್ರತಿಯೋಗಿಕಭೇದವನ್ನು ಹೇಳಲು ಬರುವುದಿಲ್ಲ ? ಎಂದರೆ,

ಈ ವಿಧವಾದ ಶಂಕೆ ಸರಿಯಲ್ಲ. ಏಕೆಂದರೆ- ಹೀಗೆ ಹೇಳುವುದಾದರೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಹೇಗೆಂದರೆ- ಪ್ರಪಂಚಕ್ಕೆ ಮಿಥ್ಯಾತ್ವವು ಸಿದ್ಧವಾದರೆ (ಮಿಥ್ಯಾಭೂತಪ್ರಪಂಚಪ್ರತಿಯೋಗಿಕಭೇದವನ್ನು ಆತ್ಮನಲ್ಲಿ ಹೇಳಲು ಬರುವುದಿಲ್ಲವಾದ್ದರಿಂದ ವ್ಯಭಿಚಾರ ಬಾರದ ಕಾರಣ) ವಸ್ತುತಃ ಪರಿಚ್ಛಿನ್ನತ್ವವು ಸದ್ಧೇತುವಾಗುತ್ತದೆ. ವಸ್ತುತಃ ಪರಿಚ್ಛಿನ್ನತ್ವವು ಸದ್ಧೇತುವಾದರೆ ಇದರಿಂದ ಪ್ರಪಂಚಕ್ಕೆ ಮಿಥ್ಯಾತ್ವವು ಸಿದ್ಧಿಸುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುತ್ತದೆ. ಹಾಗಾಗಿ ''ಪ್ರಪಂಚವು ಮಿಥ್ಯಾ ಆದ್ದರಿಂದ ಆತ್ಮನಲ್ಲಿ ಪ್ರಪಂಚಪ್ರತಿಯೋಗಿಕಭೇದವನ್ನು ಹೇಳಲು ಬರುವುದಿಲ್ಲ'' ಎಂದು ಶಂಕಿಸುವುದು ಸರಿಯಲ್ಲ.

ಹಾಗಲ್ಲ, ಆತ್ಮನಲ್ಲಿ (ವಸ್ತುತಃ ಪರಿಚ್ಛಿನ್ನತ್ವವು) ಭೇದವು ಇದೆ ನಿಜ. ಆದರೆ ಆತ್ಮನಲ್ಲಿರುವ ಆ ಭೇದವೂ ಮಿಥ್ಯೆಯೇ ಆಗಿದೆ. ಭೇದವು ಮಿಥ್ಯೆಯಾಗಿದೆ ಎಂಬ ವಿಷಯದಲ್ಲಿ ಏನು ಪ್ರಮಾಣ ? ಎಂದರೆ,

**ವಿಮತೋ ಭೇದೋ ಮಿಥ್ಯಾ ಭೇದತ್ವಾತ್ ಚಂದ್ರಭೇದವತ್ ।**

ಇತ್ಯಾದಿ ಅನುಮಾನಗಳು ಹಾಗೂ ''**ನಾನ್ಯೋಽತೋಽಸ್ತಿ ದ್ರಷ್ಟಾ**'' ಇತ್ಯಾದಿ ಆಗಮಗಳು ಪ್ರಮಾಣವಾಗಿವೆ. ಹೀಗಾಗಿ ಭೇದವು ಆತ್ಮನಲ್ಲಿರುವುದಾದರೂ ಅದು ಮಿಥ್ಯೆಯಾದ್ದರಿಂದ ವ್ಯಭಿಚಾರ ಬರುವುದಿಲ್ಲ ಎಂದು ಶಂಕೆ ಬಂದರೆ,

ಅದು ಸರಿಯಲ್ಲ. ಕಾರಣ- ''ಭೇದೋ ಮಿಥ್ಯಾ...'' ಎಂಬುದಾಗಿ ಭೇದಕ್ಕೆ ಮಿಥ್ಯಾತ್ವವನ್ನು ಹೇಳುತ್ತಿದ್ದೀರಿ. ಭೇದವು ಮಿಥ್ಯೆಯಾಗಿದೆ ಎಂದರೆ ಅಸತ್ ಆಗಿದೆ ಎಂದು ಅರ್ಥ ವಿವಕ್ಷಿತವಾಗಿಲ್ಲ. (ಹಾಗೆ ಹೇಳಿದರೆ ಅಪಸಿದ್ಧಾಂತ ಬರುತ್ತದೆ.) ಕಿಂತು ಭೇದವು ಅನಿರ್ವಚನೀಯವಾಗಿದೆ ಎಂದು ಅರ್ಥ ವಿವಕ್ಷಿತವಾಗಿದೆ. ಹಾಗೆ ಭೇದವು ಅನಿರ್ವಚನೀಯವಾಗಿದೆ ಎಂದು ಹೇಳುವುದಾದರೆ- **ನ ಚಾನಿರ್ವಚನೀಯೇ ಕಿಂಚಿನ್ಮಾನಮ್ ।** ಇತ್ಯಾದಿಯಾಗಿ ಹಿಂದೆ ಹೇಳಿದ ಅಪ್ರಾಮಾಣಿಕತ್ವಾದಿ ದೋಷಗಳು ಬರುತ್ತವೆ. ಮತ್ತು ''**ಪ್ರತ್ಯಕ್ಷಬಾಧಿತಂ ಚ...**'' ''**ಅನಿರ್ವಚನೀಯಾಸಿದ್ಧೇರೇವ ಅನುಮಾನಸ್ಯಾಪಿ ಅಸಿದ್ಧಿಃ**'' ''**ಈಶ್ವರೇಣಾಪಿ ಭೇದಸ್ಯೈವ ಅನುಭೂಯಮಾನತ್ವಾತ್**'' ಇತ್ಯಾದಿಯಾಗಿ ಮುಂದೆ ಹೇಳಲಿರುವ ಬಾಧ-ಅಸಿದ್ಧಿ ಮೊದಲಾದ ದೋಷಗಳೂ ಬರುತ್ತವೆ. ಆದ್ದರಿಂದ ಭೇದಮಿಥ್ಯಾತ್ವ ಹೇಳುವುದು ಸರಿಯಲ್ಲ.

ಅಂದಮೇಲೆ ಆತ್ಮನಲ್ಲಿ ಮಿಥ್ಯಾತ್ವ ಸಾಧ್ಯ ಇಲ್ಲ. ಆದರೆ ಪ್ರಪಂಚ-ಪ್ರತಿಯೋಗಿಕಭೇದವು (ವಸ್ತುತಃ ಪರಿಚ್ಛಿನ್ನತ್ವಹೇತುವು) ಇದೆಯಾದ್ದರಿಂದ ವ್ಯಭಿಚಾರ ಬಂದೇ ಬರುತ್ತದೆ. ಹೀಗಾಗಿ ಪರಿಚ್ಛಿನ್ನತ್ವ ಎಂದರೆ ವಸ್ತುತಃ ಪರಿಚ್ಛಿನ್ನತ್ವ ಎಂಬ ಮೂರನೇ ಪಕ್ಷವೂ ಸರಿಯಾದದ್ದಲ್ಲ.

ಆದ್ದರಿಂದ ಪರಿಚ್ಛಿನ್ನತ್ವ ಎಂದರೆ ದೇಶತಃ ಪರಿಚ್ಛಿನ್ನತ್ವ- ಕಾಲತಃ ಪರಿಚ್ಛಿನ್ನತ್ವ-ವಸ್ತುತಃ ಪರಿಚ್ಛಿನ್ನತ್ವ ಎಂಬ ಮೂರು ಪಕ್ಷಗಳೂ (ದುಷ್ಟವಾದ್ದರಿಂದ) ಸಮಂಜಸವಾಗುವುದಿಲ್ಲವಾದ್ದರಿಂದ ಜಡಪ್ರಪಂಚವು ಮಿಥ್ಯೆಯಾಗಿದೆ ಎಂಬ ವಿಷಯದಲ್ಲಿ- **ವಿವಾದಪದಂ ಮಿಥ್ಯಾ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್ ।** ಎಂಬ ಮೂರನೇ ಅನುಮಾನವೂ ಪ್ರಮಾಣವಾಗುವುದಿಲ್ಲ ಎಂದು ಸಿದ್ಧವಾಗುತ್ತದೆ.

ಹೀಗೆ ಪ್ರಪಂಚಮಿಥ್ಯಾತ್ವವಿಷಯದಲ್ಲಿ -

**ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಶುಕ್ತಿರಜತವತ್ ।**
**ವಿವಾದಪದಂ ಮಿಥ್ಯಾ ಜಡತ್ವಾತ್ ಶುಕ್ತಿರಜತವತ್ ।**
**ವಿವಾದಪದಂ ಮಿಥ್ಯಾ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್ ।**

ಎಂಬ ಮೂರು ಅನುಮಾನಗಳೂ ಪ್ರಮಾಣವಾಗದ ಕಾರಣ -

''ಜಡಪ್ರಪಂಚವಾದರೂ ಸ್ವರೂಪದಿಂದಲೇ ಅವಿದ್ಯೋಪಾದಾನಕವಾಗಿದೆ, ಬ್ರಹ್ಮವಿವರ್ತವಾಗಿದೆ ಬ್ರಹ್ಮನಲ್ಲಿ ಆರೋಪಿತವಾಗಿದೆ. ಶುಕ್ತಿಯಲ್ಲಿ ರಜತವು ಆರೋಪಿತವಾದಂತೆ (ಶುಕ್ತಿಯಿಂದ ಭಿನ್ನವಾಗಿ ರಜತವು ಹೇಗೆ ಇಲ್ಲವೋ ಅದರಂತೆ) ಬ್ರಹ್ಮನಲ್ಲಿ ಜಡಪ್ರಪಂಚವು ಆರೋಪಿತವಾಗಿದೆ (ಬ್ರಹ್ಮನಿಂದ ಭಿನ್ನವಾಗಿ ಜಡಪ್ರಪಂಚವು ಇಲ್ಲ) ಎಂದು ಭಾವ. ಈ ವಿಷಯದಲ್ಲಿ (ಜಡಪ್ರಪಂಚವು ಬ್ರಹ್ಮನಲ್ಲಿ ಆರೋಪಿತವಾಗಿದೆ, ಮಿಥ್ಯೆಯಾಗಿದೆ ಎಂಬ ವಿಷಯದಲ್ಲಿ)

**'ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್ ಶುಕ್ತಿರಜತವತ್'**

ಎಂಬ ಅನುಮಾನ ಹಾಗೂ '**ವಾಚಾರಂಭಣಂ ವಿಕಾರೋ ನಾಮಧೇಯಮ್**' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿವೆ''

ಎಂಬುದಾಗಿ ಹಿಂದೆ (ಪುಟ. ೨೬೨) ಹೇಳಿದ್ದು ಸರಿಯಲ್ಲ ಎಂದು ಸ್ಫುಟವಾಗಿ ಸಿದ್ಧವಾಗುತ್ತದೆ.

**ಅವತಾರಿಕೆ :-** ಹಿಂದೆ ಪರವಾದಿಗಳು ನಮ್ಮ ಮುಕ್ತತ್ವಹೇತುವಿಗೆ ಅಸಿದ್ಧಿಯನ್ನು ಹೇಳುವ ಸಂದರ್ಭದಲ್ಲಿ

''ಜೀವ-ಈಶ್ವರ-ಜಡರೂಪವಾದ ಪ್ರಪಂಚವು ಪಾರಮಾರ್ಥಿಕವಾಗಿಲ್ಲ'' ಎಂದು ಮುಖ್ಯಪ್ರಮೇಯ ತಿಳಿಸಿ, ''ಜಡಪ್ರಪಂಚವು ಬ್ರಹ್ಮನಲ್ಲಿ ಆರೋಪಿತವಾಗಿದೆ. ಈ ವಿಷಯದಲ್ಲಿ 'ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್' ಎಂಬ ಅನುಮಾನವು ಪ್ರಮಾಣವಾಗಿದೆ'' ಎಂದು ಹೇಳಿದ್ದರು. ಮತ್ತು ''ಬ್ರಹ್ಮನೇ ಅವಿದ್ಯಾದಿಪ್ರತಿಬಿಂಬಿತನಾದಾಗ ಜೀವ ಎಂದು ಈಶ್ವರ ಎಂದು ಕರೆಯಲ್ಪಡುತ್ತಾನೆ. ಅರ್ಥಾತ್ ಜೀವ-ಬ್ರಹ್ಮರಲ್ಲಿ ಭೇದವೇ ಇಲ್ಲ. ಐಕ್ಯವೇ ಇರುವುದು. ಈ ವಿಷಯದಲ್ಲಿ 'ವಿಮತಾಃ ಆತ್ಮಾನಃ ಪರಮಾತ್ಮನಸ್ತತ್ತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್' ಇತ್ಯಾದಿ ಅನುಮಾನ ಹಾಗೂ 'ವಾಚಾರಂಭಣಂ ವಿಕಾರೋ ನಾಮಧೇಯಮ್' ಇತ್ಯಾದಿ ಆಗಮವು ಪ್ರಮಾಣವಾಗಿದೆ.'' ಎಂದೂ ಹೇಳಿದ್ದರು.

ಅದರಲ್ಲಿ ಈವರೆಗೆ 'ವಿವಾದಪದಂ ಮಿಥ್ಯಾ ದೃಶ್ಯತ್ವಾತ್ ಜಡತ್ವಾತ್ ಪರಿಚ್ಛಿನ್ನತ್ವಾತ್' ಎಂಬ ಅನುಮಾನವನ್ನು ವಿಸ್ತಾರವಾಗಿ ನಿರಾಕರಿಸುವ ಮೂಲಕ ''ಜಡಪ್ರಪಂಚವು ಬ್ರಹ್ಮನಲ್ಲಿ ಆರೋಪಿತವಾಗಿದೆ'' ಎಂಬ ವಿಚಾರವನ್ನು (ಅಂಶವನ್ನು) ನಿರಾಕರಿಸಿದರು. ಪ್ರಕೃತ ''ಜೀವ-ಬ್ರಹ್ಮರಲ್ಲಿ ಭೇದವಿಲ್ಲ'' ಎಂಬ ವಿಚಾರವನ್ನು ನಿರಾಕರಿಸುವುದಕ್ಕಾಗಿ ಆ ವಿಷಯದಲ್ಲಿ ಅವರು ಉದಾಹರಿಸಿದ 'ವಿಮತಾಃ ಆತ್ಮಾನಃ ಪರಮಾತ್ಮನಸ್ತತ್ತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್' ಎಂಬ ಅನುಮಾನವನ್ನು ನಿರಾಕರಿಸುತ್ತಾರೆ -

## ಜೀವಬ್ರಹ್ಮರ ಅಭೇದವಿಷಯದಲ್ಲಿ ಪರರು ಉದಾಹರಿಸಿದ ಆತ್ಮತ್ವಾನುಮಾನನಿರಾಕರಣೆ

**ಟೀಕಾ: ಏತೇನಾತ್ಮತ್ವಹೇತುರಪಿ ಪರಾಸ್ತಃ । ತತ್ ಖಲ್ವದೃಶ್ಯತ್ವಂ ವಾ ಪ್ರಮಾತೃತ್ವಂ ವಾ ಪ್ರಕಾಶತ್ವಂ ವಾ ಸ್ವಪ್ರಕಾಶತ್ವಂ ವಾ ಅಪರಿಚ್ಛಿನ್ನತ್ವಂ ವಾ ವಕ್ತವ್ಯಮ್ । ತತ್ಸರ್ವಮುಕ್ತರೀತ್ಯಾಽಸಿದ್ಧಮ್ । ದೃಷ್ಟಾಂತಶ್ಚ ಸಾಧನವಿಕಲಃ । ಜಾತಿವಿಶೇಷ ಆತ್ಮತ್ವಮಿತಿ ಚೇತ್ । ನ । ತಸ್ಯಾಪ್ಯಾತ್ಮನಿ ಪರೇಣ ವಸ್ತುತೋಽನಭ್ಯುಪಗಮಾತ್। ಮಿಥ್ಯಾಭೂತಸ್ಯ ನಿರಸ್ತತ್ವಾತ್। ಆರೋಪಿತಸ್ಯಾತಿಪ್ರಸಂಜಕತ್ವಾತ್।**

**ಅನುವಾದ :-** ಈ ಹಿಂದೆ ಅಸಿದ್ಧಿ ಮೊದಲಾದ ದೋಷಗಳನ್ನು ಹೇಳಿ ದೃಶ್ಯತ್ವಾದಿಅನುಮಾನಗಳನ್ನು ನಿರಾಕರಿಸಿದ್ದರಿಂದಲೇ ಆತ್ಮೈಕ್ಯವಿಷಯದಲ್ಲಿ ಉದಹೃತವಾದ ಆತ್ಮತ್ವಹೇತುವೂ [೧]ನಿರಾಕೃತವಾದಂತಾಯಿತು.

ಮತ್ತು, ಆತ್ಮತ್ವಹೇತುವಿನಿಂದ ಆತ್ಮೈಕ್ಯವನ್ನು ಸಾಧಿಸಬೇಕಾದರೆ ಮೊದಲು ಆತ್ಮತ್ವದ ನಿರ್ವಚನ ಮಾಡಬೇಕು. ಹಾಗಾಗಿ ಆತ್ಮತ್ವ ಎಂದರೆ

೧) ಅದೃಶ್ಯತ್ವ ಎಂದು ಹೇಳುತ್ತೀರೋ ? ೨) ಪ್ರಮಾತೃತ್ವ ಎಂದು ಹೇಳುತ್ತೀರೋ ? ೩) ಪ್ರಕಾಶತ್ವ ಎಂದು ಹೇಳುತ್ತೀರೋ ? ೪) ಸ್ವಪ್ರಕಾಶತ್ವ ಎಂದು ಹೇಳುತ್ತೀರೋ ? ೫) ಅಪರಿಚ್ಛಿನ್ನತ್ವ ಎಂದು ಹೇಳುತ್ತೀರೋ ?

ಈ ಹಿಂದೆ ಹೇಳಿದಂತೆ ಈ ಯಾವ ಪಕ್ಷಗಳೂ ಉಪಪನ್ನವಾಗುವುದಿಲ್ಲ. ಅಂದರೆ :-

೧) ವೇದಾಂತವಾಕ್ಯಜನಿತವಿಜ್ಞಾನವನ್ನು ಆತ್ಮಜ್ಞಾನವನ್ನಾಗಿ ಹೇಳುವುದಕ್ಕಾಗಿ (ವೇದಾಂತಗಳಿಗೆ ನಿರ್ವಿಷಯತ್ವವನ್ನು ಪರಿಹರಿಸುವುದಕ್ಕಾಗಿ) ಆತ್ಮನಿಗೆ ದೃಶ್ಯತ್ವವನ್ನು ಅಂಗೀಕರಿಸಲೇಬೇಕಾದ್ದರಿಂದ, ಪಕ್ಷರಾದ ಆತ್ಮರಲ್ಲಿ ಅದೃಶ್ಯತ್ವ-ರೂಪಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಅದೃಶ್ಯತ್ವ ಎಂದು ಹೇಳಲು ಬರುವುದಿಲ್ಲ.

೨) **''ನ ಚ ಪ್ರಮಾತೃತ್ವಮಾತ್ಮನಸ್ವೈರಂಗೀಕ್ರಿಯತೇ''** ಎಂಬುದಾಗಿ ಹಿಂದೆ ಹೇಳಿದಂತೆ ಆತ್ಮನಿಗೆ ಪ್ರಮಾತೃತ್ವವನ್ನು ಪರರೇ ಅಂಗೀಕರಿಸಿಲ್ಲವಾದ್ದರಿಂದ

---

೧ ಕಿಂಚ ದೃಶ್ಯತ್ವಾದಯಃ ಸತ್ಯಾಶ್ಚೇತ್ ಮಾಯಾವಾದಿನೋಽಸಿದ್ಧಾಃ । ಯದ್ಯಸಂತೋಽ-ನಿರ್ವಾಚ್ಯಾ ವಾ ತದಾ ತತ್ತ್ವವಾದಿನೋಽಸಿದ್ಧಾಃ ।

''ದೃಶ್ಯತ್ವಾದಿ ಹೇತುಗಳು ಸತ್ಯವೋ ? ಅಸತ್ಯವೋ ? ಸತ್ಯ ಎಂದರೆ ಮಾಯಾವಾದಿಗಳಿಗೆ ಅಸಿದ್ಧ. ಅಸತ್ಯ ಎಂದರೆ ತತ್ತ್ವವಾದಿಗಳಾದ ನಮಗೆ ಅಸಿದ್ಧ''

ಎಂಬುದಾಗಿ ಹಿಂದೆ ದೃಶ್ಯತ್ವಾದಿಹೇತುಗಳನ್ನು ನಿರಾಕರಿಸಿದರು. ಅದೇ ನ್ಯಾಯದಿಂದ ಪ್ರಕೃತ ಆತ್ಮತ್ವಹೇತುವನ್ನೂ ನಿರಾಕರಿಸುತ್ತಿದ್ದಾರೆ. ಅಂದರೆ - ಯಾವ ಆತ್ಮತ್ವಹೇತುವಿನಿಂದ ಆತ್ಮೈಕ್ಯವನ್ನು ಸಾಧಿಸುತ್ತಿದ್ದೀರಿ ಆ ಆತ್ಮತ್ವವು ಸತ್ಯವೋ ? ಮಿಥ್ಯೆಯೋ ? ಸತ್ಯ ಎಂದರೆ ಮಾಯಾವಾದಿಗಳಾದ ನಿಮಗೆ ಅಸಿದ್ಧ. ಮಿಥ್ಯೆಯೆಂದರೆ ತತ್ತ್ವವಾದಿಗಳಾದ ನಮಗೆ ಅಸಿದ್ಧ ಎಂಬುದಾಗಿ ಹಿಂದೆ ಹೇಳಿದಂತೆ ಅಸಿದ್ಧಿದೋಷ ಹಾಗೂ ಮುಂದೆ ಹೇಳಲಿರುವ ಬಾಧ ಮೊದಲಾದ ದೋಷಗಳು ಬರುವುದರಿಂದ ಆತ್ಮತ್ವಹೇತುವಿನಿಂದ ಆತ್ಮೈಕ್ಯವನ್ನು ಸಾಧಿಸಲು ಬರುವುದಿಲ್ಲ ಎಂದು ಭಾವ.

ಪಕ್ಷರಾದ ಆತ್ಮರಲ್ಲಿ ಪ್ರಮಾತೃತ್ವರೂಪಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಪ್ರಮಾತೃತ್ವ ಎಂದು ಹೇಳಲೂ ಬರುವುದಿಲ್ಲ.

೩-೪) ಜ್ಞಾತೃ-ಜ್ಞೇಯಗಳು ಇಲ್ಲದ ಕಾರಣ ಆತ್ಮನಿಗೆ ಪ್ರಕಾಶತ್ವ-ಸ್ವಪ್ರಕಾಶತ್ವ-ಗಳು ಕೂಡುವುದಿಲ್ಲವಾದ್ದರಿಂದ, ಪಕ್ಷರಾದ ಆತ್ಮರಲ್ಲಿ ಪ್ರಕಾಶತ್ವ-ಸ್ವಪ್ರಕಾಶತ್ವ-ರೂಪ ಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಪ್ರಕಾಶತ್ವ-ಸ್ವಪ್ರಕಾಶತ್ವ ಎಂದು ಹೇಳಲೂ ಬರುವುದಿಲ್ಲ.

೫) **''ವಸ್ತುತಃ ಪರಿಚ್ಛಿನ್ನತ್ವಮಾತ್ಮನೋಽಪಿ ಭೇದಾಂಗೀಕಾರಾದನೈಕಾಂತಿಕಮ್''** ಎಂದು ಹಿಂದೆ ಹೇಳಿದಂತೆ ಆತ್ಮನಿಗೆ ಪ್ರಪಂಚದಿಂದ ಭೇದವನ್ನು (ವಸ್ತುತಃ ಪರಿಚ್ಛಿನ್ನತ್ವವನ್ನು) ಅಂಗೀಕರಿಸಿದ್ದರಿಂದ, ಪಕ್ಷರಾದ ಆತ್ಮರಲ್ಲಿ ಅಪರಿಚ್ಛಿನ್ನತ್ವರೂಪ-ಆತ್ಮತ್ವ ಬಾರದ ಕಾರಣ ಅಸಿದ್ಧಿ ಬರುತ್ತದೆ. ಆದ್ದರಿಂದ ಆತ್ಮತ್ವ ಎಂದರೆ ಅಪರಿಚ್ಛಿನ್ನತ್ವ ಎಂದು ಹೇಳಲೂ ಬರುವುದಿಲ್ಲ.

ಮತ್ತು, ಪರಮಾತ್ಮನನ್ನು ನೀವು ದೃಷ್ಟಾಂತ ಮಾಡಿದ್ದೀರಿ. ಪಕ್ಷರಾದ ಆತ್ಮರಲ್ಲಿ ಅದೃಶ್ಯತ್ವಾದಿರೂಪಆತ್ಮತ್ವ ಹೇಗೆ ಬರುವುದಿಲ್ಲವೋ ಅದರಂತೆ ಪರಮಾತ್ಮ-ನಲ್ಲಿಯೂ ಅದೃಶ್ಯತ್ವಾದಿರೂಪಆತ್ಮತ್ವ (ಹೇತು) ಬರುವುದಿಲ್ಲವಾದ್ದರಿಂದ ಸಾಧನವೈಕಲ್ಯದೋಷವೂ ಬರುತ್ತದೆ.

ಆತ್ಮತ್ವ ಎಂದರೆ ಅದೃಶ್ಯತ್ವ-ಪ್ರಮಾತೃತ್ವ ಇತ್ಯಾದಿಯಾಗಿ ಹೇಳುವುದಿಲ್ಲ. ಕಿಂತು ಜಾತಿವಿಶೇಷ (ಆತ್ಮನಲ್ಲಿರುವ ಒಂದು ಜಾತಿ) ಎಂದು ಹೇಳುತ್ತೇವೆ. ಹಾಗಾಗಿ ಅಸಿದ್ಧಿ-ಸಾಧನವೈಕಲ್ಯ ಬರುವುದಿಲ್ಲ ಎಂದು ಶಂಕಿಸಿದರೆ, ಅದೂ ಸರಿಯಲ್ಲ.

ಯಾಕೆಂದರೆ- ಜಾತಿವಿಶೇಷರೂಪವಾದ ಆ ಆತ್ಮತ್ವವು ಪಾರಮಾರ್ಥಿಕ-ವಾದದ್ದೋ ? ಮಿಥ್ಯಾಭೂತವಾದದ್ದೋ ?

ಪಾರಮಾರ್ಥಿಕವಾದ ಆತ್ಮತ್ವಜಾತಿಯನ್ನು ನೀವು (ಪರರು) [೧]ಅಂಗೀಕರಿಸಿಲ್ಲ.

---

೧ ಲಕ್ಷಣವ್ಯಾಘಾತ ಬರುವುದರಿಂದ ಮತ್ತು ಒಂದು ವಸ್ತುವಿನಲ್ಲಿ ಉಪದೇಶಾದಿಗಳನ್ನು ಮಾಡುವುದರಿಂದಲೇ ವ್ಯತ್ಪತ್ತ್ಯಾದಿಗಳು ಉಪಪನ್ನವಾಗುವುದರಿಂದ ಜಾತಿವಾದಿಗಳು ಜಾತಿಗೆ ಅನೇಕಾಶ್ರಿತತ್ವವನ್ನು ಅಂಗೀಕರಿಸಿದ್ದಾರೆ. ಪ್ರಕೃತ ಆತ್ಮತ್ವವನ್ನು ಜಾತಿ ಎಂದು ಅಂಗೀಕರಿಸಿದರೆ ಅನೇಕಆತ್ಮರನ್ನು ಅಂಗೀಕರಿಸಬೇಕಾದ ಪ್ರಸಂಗ ಇರುವುದರಿಂದ ಆತ್ಮೈಕ್ಯವಾದಿಗಳಾದ ಮಾಯಾವಾದಿಗಳು ಆತ್ಮತ್ವವನ್ನು ಜಾತಿ ಎಂದು ಅಂಗೀಕರಿಸಿಲ್ಲ ಎಂದು ಭಾವ.

ಆತ್ಮತ್ವವು ಮಿಥ್ಯಾಭೂತವಾಗಿದೆ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ - ಮಿಥ್ಯಾ ಎಂದರೆ ಅನಿರ್ವಚನೀಯ ಎಂದು ಅರ್ಥ ನಿಮಗೆ ವಿವಕ್ಷಿತ. ಆದರೆ ''ನ ಚಾನಿರ್ವಚನೀಯೇ ಕಿಂಚಿನ್ಮಾನಮ್'' ಇತ್ಯಾದಿಯಾಗಿ ಪ್ರಮಾಣಾಭಾವದಿಂದ ಅನಿರ್ವಚನೀಯವಸ್ತುವನ್ನು ನಿರಾಕರಿಸಿದ್ದರಿಂದ ಮಿಥ್ಯಾ ಎನ್ನುವುದಕ್ಕೆ ಅನಿರ್ವಚನೀಯ ಎಂದು ಅರ್ಥ ಹೇಳಲು ಬರುವುದಿಲ್ಲ. ಕಿಂತು ಮಿಥ್ಯಾ ಎಂದರೆ ಅಸತ್ ಎಂದೇ ಅರ್ಥ ಹೇಳಬೇಕು. ''ಆತ್ಮನಲ್ಲಿರುವ ಆತ್ಮತ್ವವು ಮಿಥ್ಯಾ ಅಸತ್ ಆಗಿದೆ'' ಎಂದರೆ ''ಆತ್ಮನಲ್ಲಿ ಆತ್ಮತ್ವ ಇಲ್ಲ'' ಎಂದೇ ಹೇಳಿದಂತಾಗುತ್ತದೆ. ಹಾಗಾಗಿ ಪಕ್ಷರಾದ ಆತ್ಮರಲ್ಲಿ ಹಾಗೂ ದೃಷ್ಟಾಂತನಾದ ಪರಮಾತ್ಮನಲ್ಲಿ ಆತ್ಮತ್ವಹೇತು ಬಾರದ ಕಾರಣ ಅಸಿದ್ಧಿ-ಸಾಧನವೈಕಲ್ಯದೋಷಗಳು ಬರುತ್ತವೆ. ಆದ್ದರಿಂದ ಜಾತಿವಿಶೇಷರೂಪವಾದ ಆತ್ಮತ್ವವು ಮಿಥ್ಯಾಭೂತವಾಗಿದೆ ಎಂಬ ಎರಡನೇ ಪಕ್ಷವೂ ಸರಿಯಾದದ್ದಲ್ಲ.

ಆತ್ಮನಲ್ಲಿ ವಾಸ್ತವಿಕವಾದ ಆತ್ಮತ್ವ ಇಲ್ಲದೇ ಹೋದರೂ ಆರೋಪಿತವಾದ ಆತ್ಮತ್ವ ಇದೆ. ಅಂತಹ ಆರೋಪಿತವಾದ ಆತ್ಮತ್ವವನ್ನು ಹೇತುವನ್ನಾಗಿ ಮಾಡುತ್ತೇವೆ. ಹಾಗಾಗಿ ಅಸಿದ್ಧಿ-ಸಾಧನವೈಕಲ್ಯಗಳಿಗೆ ಅವಕಾಶವಿಲ್ಲ ಎಂದರೆ, ಅದೂ ಸರಿಯಲ್ಲ. ಕಾರಣ - ಆರೋಪಿತವಾದದ್ದನ್ನು ಹೇತುವನ್ನಾಗಿ ಮಾಡಿ ಸಾಧಿಸುವುದಾದರೆ, ಬಾಷ್ಪಾರೋಪಿತವಾದ ಧೂಮವೂ ವಹ್ನಿಗೆ ಸಾಧಕವಾಗಬೇಕಾದ ಅತಿಪ್ರಸಂಗ ಬರುತ್ತದೆ.

ಅಥವಾ, ಆರೋಪಿತವಾದ ಆತ್ಮತ್ವವು ದೇಹಾದಿಗಳಲ್ಲಿಯೂ ಇದೆ. ಆ ಜಡವಾದ ದೇಹಾದಿಗಳು ಪರಮಾತ್ಮನಿಂದ ಭಿನ್ನವೂ ಆಗಿವೆ. ಪ್ರಕೃತ ಪರಮಾತ್ಮಪ್ರತಿಯೋಗಿಕಭೇದಾಭಾವ ಸಾಧ್ಯವಾಗಿದೆ. ಜಡವಾದ ದೇಹಾದಿಗಳಲ್ಲಿ ಪರಮಾತ್ಮಪ್ರತಿಯೋಗಿಕಭೇದಾಭಾವ ಸಾಧ್ಯ ಇಲ್ಲ. ಆದರೆ ಆರೋಪಿತವಾದ ಆತ್ಮತ್ವಹೇತು ಇರುವುದರಿಂದ ಆತ್ಮತ್ವಹೇತುವಿಗೆ ದೇಹಾದಿಗಳಲ್ಲಿ ವ್ಯಭಿಚಾರ ಬರುತ್ತದೆ. ಆದ್ದರಿಂದ ಆರೋಪಿತವಾದ ಆತ್ಮತ್ವವನ್ನು ಹೇತು ಮಾಡಲೂ ಬರುವುದಿಲ್ಲ.

ಹೀಗಾಗಿ ಆತ್ಮತ್ವ ಎಂದರೆ ಅದೃಶ್ಯತ್ವ-ಪ್ರಮಾತೃತ್ವ-ಪ್ರಕಾಶತ್ವ-ಸ್ವಪ್ರಕಾಶತ್ವ-ಅಪರಿಚ್ಛಿನ್ನತ್ವ-ಜಾತಿವಿಶೇಷ ಇತ್ಯಾದಿಯಾಗಿ ನಿರ್ವಚನ ಮಾಡಲು ಬರುವುದಿಲ್ಲವಾದ್ದರಿಂದ ಆತ್ಮತ್ವಹೇತುವಿನಿಂದ ಆತ್ಮೈಕ್ಯವನ್ನು ಸಾಧಿಸಲು ಬರುವುದಿಲ್ಲ.

ಆದ್ದರಿಂದ -

''ಬ್ರಹ್ಮನೇ ಅವಿದ್ಯಾದಿಪ್ರತಿಬಿಂಬಿತನಾದಾಗ ಜೀವ ಎಂದು ಈಶ್ವರ ಎಂದು ಕರೆಯಲ್ಪಡುತ್ತಾನೆ. ಅರ್ಥಾತ್ ಜೀವ-ಬ್ರಹ್ಮರಲ್ಲಿ ಭೇದವೇ ಇಲ್ಲ. ಐಕ್ಯವೇ ಇರುವುದು. ಈ ವಿಷಯದಲ್ಲಿ 'ವಿಮತಾಃ ಆತ್ಮಾನಃ ಪರಮಾತ್ಮನಸ್ತತ್ವತೋ ನ ಭಿದ್ಯಂತೇ ಆತ್ಮತ್ವಾತ್ ಪರಮಾತ್ಮವತ್' ಇತ್ಯಾದಿ ಅನುಮಾನವು ಪ್ರಮಾಣ-ವಾಗಿದೆ.''

ಎಂಬುದಾಗಿ ಹಿಂದೆ ನೀವು ಹೇಳಿದ್ದು ಸರಿಯಲ್ಲ. ಅಂದಮೇಲೆ ಜಗತ್ತಿನ ಮಿಥ್ಯಾತ್ವವಾಗಲೀ, ಆತ್ಮೈಕ್ಯವಾಗಲೀ ಪ್ರಾಮಾಣಿಕವಲ್ಲ ಎಂದು ಸ್ಫುಟವಾಗಿ ಸಿದ್ಧವಾಗುತ್ತದೆ.

★★★

**॥ ಇತಿ ಪ್ರಥಮೋ ಭಾಗಃ ॥**

